ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫–೪

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

ಐದನೆಯ ಸ್ಕಂಧ



ಅನುವಾದಕ

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೩

# ಮೊದಲಮಾತು

॥ ಶ್ರೀಗಣೇಶಶಾರದಾಗುರುಭ್ಯೋನಮಃ ॥

ಪುರಾಣಗಳನ್ನು ಓದುವುದು, ಕೇಳುವುದು ಇವುಗಳಿಂದ ಜನಸಾಮಾನ್ಯಕ್ಕೆ ದೊರೆಯುವ ಪ್ರಯೋಜನಗಳನ್ನು ಪದ್ಮಪುರಾಣದಲ್ಲಿ ಹೀಗೆ ಹೇಳಿದೆ :--

**ನಿಸ್ತಾರಾಯ ತು ಲೋಕಾನಾಂ ಸ್ವಯಂ ನಾರಾಯಣಃ ಪ್ರಭುಃ ।**
**ವ್ಯಾಸರೂಪೇಣಕೃತವಾನ್ ಪುರಾಣಾನಿ ಮಹೀತಲೇ ॥**
**ಪಠನಾತ್ ಶ್ರವಣಾದ್ಯೇಷಾಂ ನೃಣಾಂ ಪಾಪಕ್ಷಯೋ ಭವೇತ್ ।**
**ಧರ್ಮಾಧರ್ಮಪರಿಜ್ಞಾನಂ ಸದಾಚಾರಪ್ರವರ್ತನಂ ॥**
**ಗತಿಶ್ಚ ಪರಮಾ ತದ್ವತ್ ಭಕ್ತಿರ್ಭಗವತಿ ಪ್ರಭೌ ।**

ಜನರೆಲ್ಲರ ಉದ್ಧಾರಕ್ಕೋಸ್ಕರ ಶ್ರೀಮನ್ನಾರಾಯಣನು ತಾನೇ ವ್ಯಾಸರೂಪದಿಂದ ಅವತರಿಸಿ ಈ ಭೂಲೋಕದಲ್ಲಿ ಪುರಾಣಗಳನ್ನು ರಚಿಸಿ ಪ್ರಚಾರ ಪಡಿಸಿದನು. ಇವುಗಳನ್ನು ಓದುವುದರಿಂದಲೂ ಕೇಳುವುದರಿಂದಲೂ ಮಾನವರಲ್ಲಿರುವ ಪಾಪಗಳು ನಾಶವಾಗಿ, ಧರ್ಮಾಧರ್ಮಗಳ ವಿವೇಕವುಂಟಾಗಿ ಒಳ್ಳೆಯ ನಡತೆಯು ರೂಢಿಗೆ ಬರುವಂತೆ ಆಗುತ್ತದೆ. ಸರ್ವಶಕ್ತನಾದ ದೇವರಲ್ಲಿ ಭಕ್ತಿಯೂ, ಐಹಿಕ ಮತ್ತು ಆಮುಷ್ಮಿಕಗಳಾದ ಸದ್ಗತಿಗಳ ಅಭ್ಯುದಯಗಳ ಪ್ರಾಪ್ತಿಯೂ, ಕಡೆಗೆ ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮೋಕ್ಷದ ನಿತ್ಯಾನಂದಾನುಭವವೂ ಎಲ್ಲರಿಗೂ ಉಂಟಾಗುತ್ತದೆ. ಹೀಗೆ ಈ ಮಹಾಪುರಾಣಗಳ ಪಠನ, ಶ್ರವಣ, ಪ್ರಚಾರಗಳು ಮಹಾಜನರ ದಿನಗಟ್ಟಲೆಯ ಜೀವನಕ್ರಮದ ರೀತಿನೀತಿಗಳನ್ನು ಮೇಲ್ಪಡಿಸಿ, ಸಕಾಮಕರ್ಮಾಚರಣೆಯಲ್ಲಿ ಆದರ ಉಳ್ಳವರಿಗೆ ಅಭ್ಯುದಯಗಳನ್ನೂ, ವಿವೇಕ ವೈರಾಗ್ಯಗಳಿಂದ ನಿಷ್ಕಾಮಕರ್ಮಾಚರಣೆಯಲ್ಲಿ ಆಸಕ್ತರಾದವರಿಗೆ ಮೋಕ್ಷವನ್ನೂ, ಉಂಟುಮಾಡಿಕೊಡುತ್ತವೆ. ಎಲ್ಲ ದೇಶಗಳಲ್ಲಿರುವ, ಎಲ್ಲ ಮತ, ಜಾತಿ, ಕುಲಗಳನ್ನು ಅವಲಂಬಿಸಿರುವ ಎಲ್ಲರನ್ನೂ ಅವರವರ ಅಂತಸ್ತಿನಿಂದ ಮುಂದುವರಿದು ಕೃತಾರ್ಥರಾಗಲು ಸಹಾಯ ಮಾಡುವುದೇ ಈ ಮಹಾಪುರಾಣಗಳಲ್ಲಿ ಸಮಾನ

ವಾಗಿರುವ, ಮುಖ್ಯವಾದ ಉಪದೇಶವೂ ಉದ್ದೇಶವೂ ಆಗಿದೆ. ಇದರಿಂದ ಜನರ ಮನಸ್ಸಿನಲ್ಲಿ (International mind) ವಿಶ್ವಪ್ರಜಾಭಾವವು ಬೇರೂರಿ ಬೆಳೆಯಲು ತುಂಬ ಅನುಕೂಲವಾಗುತ್ತದೆ.

ದೇಶಾಭಿಮಾನ(Partiotism)ವೂ, ಕುಲಾಭಿಮಾನ(Nationalism)ವೂ "ಜನನೀಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬ ನೀತಿಯಂತೆ ಗುಣಗಳೇ ಹೌದು. ಅಲ್ಲದೆ ವಿಜ್ಞಾನಶಾಸ್ತ್ರಗಳಲ್ಲಿ ತಿಳಿವಳಿಕೆಯು ಮುಂದುವರಿದ ಹಾಗೆಲ್ಲ ಮಾನವನ ಇಹಜೀವನದ ಸುಖಸಾಧನಗಳು ಹೆಚ್ಚುತ್ತಲೂ, ಮೇಲ್ಪಡುತ್ತಲೂ ಇರುತ್ತವೆ. ಆದರೆ ವೈಜ್ಞಾನಿಕಶಕ್ತಿಯಿಂದ ನಾಶಕಸಾಧನಗಳೂ ಹೆಚ್ಚಾಗಿಯೇ ಬೆಳೆಯುತ್ತಿವೆ. ಆಮುದರಿಂದ ಶಕ್ತಿಯ ಬೆಳವಳಿಗೆಯ ಜೊತೆಗೆ ಧಾರ್ಮಿಕಮನೋವೃತ್ತಿಯೂ ಬೆಳೆಯುವಂತಾಗಬೇಕು. ಆದರೂ ಅವು ಮಿತಿಯಲ್ಲಿರಬೇಕು. ಹಾಗಿಲ್ಲದೆ ಅವು ಮಿತಿಮೀರಿ ಮುಂದುವರಿದರೆ, ಅವು ದೋಷವಾಗಿ ಪರೋತ್ಕರ್ಷಾಸಹನೆ ಎಂಬ ಅಸೂಯೆ, ಅನುಚಿತವಾಗಿ ಸ್ವಾರ್ಥಸಾಧನೆ, ಅಧಾರ್ಮಿಕವಾದ ಸ್ಪರ್ಧೆ, ಇತರರಲ್ಲಿ ಹೃದಯಕಾಠಿಣ್ಯದಿಂದ ಅಪನಂಬಿಕೆ, ಇವುಗಳಲ್ಲಿ ಪರಿಣಮಿಸುತ್ತವೆ. ಇದರಿಂದ "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂಬ ಎಲ್ಲ ಪುರಾಣಗಳಲ್ಲೂ, ಸಾಹಿತ್ಯಗಳಲ್ಲೂ ಉಪದೇಶಿಸಿರುವ ಸೂಕ್ತಿಯಂತೆ ಈ ವಿಶ್ವಧರ್ಮದ ಅರಿವು ಆಚರಣೆಗಳಿಗೆ ಅಡ್ಡಿಯಾಗುತ್ತದೆ. ವಿಶ್ವಧರ್ಮದ ಆಚರಣೆಯು ಜನಸಾಮಾನ್ಯದ ದಿನಗಟ್ಟಲೆಯ ಜೀವನಕ್ರಮದಲ್ಲಿ ಸೇರಿಕೊಳ್ಳುವವರೆಗೂ ವಿಶ್ವಪ್ರಜಾಭಾವವು ತಲೆಯೆತ್ತಲೂ, ಕಾರ್ಯಕಾರಿಯಾಗಲೂ ಅವಕಾಶವು ಏರ್ಪಡುವುದಿಲ್ಲವು. ಈಗಿನ ವಿದ್ಯಾಭ್ಯಾಸಕ್ರಮದಲ್ಲಿ ಆಧ್ಯಾತ್ಮಿಕ ಮತ್ತು ಧಾರ್ಮಿಕಶಿಕ್ಷಣ (Religious and moral instruction) ವನ್ನು ಕೈಬಿಟ್ಟು, ಕೇವಲವಾಗಿ ಲೌಕಿಕಶಿಕ್ಷಣ (Secular education)ವನ್ನು ಕೊಡುತ್ತಾ, ಅದರಲ್ಲೂ ವೈಜ್ಞಾನಿಕ ಶಿಕ್ಷಣ (Instruction in Physical, Chemical and Mathmatical Sciences) ಎಂದರೆ ಭೌತ, ರಸಾಯನ, ಮತ್ತು ಗಣಿತಶಾಸ್ತ್ರಗಳಲ್ಲಿ ತಿಳಿವಳಿಕೆಯನ್ನು ಕೊಡುವುದಕ್ಕೆ ಹೆಚ್ಚು ಪ್ರಾಮುಖ್ಯವನ್ನೂ ಪ್ರೋತ್ಸಾಹವನ್ನೂ ಕೊಡುತ್ತಿರುವುದರಿಂದ ಈ ವಿಶ್ವಪ್ರಜಾಭಾವವು ವಿದ್ಯಾರ್ಥಿಗಳ ಹೃದಯದಲ್ಲಿ ಬೇರೂರದೆ, ಅವರೇ ದೊಡ್ಡವರಾಗಿ ಪ್ರಜೆಗಳ ಮುಂದಾಳುಗಳೂ, ಅಧಿಕಾರಿಗಳೂ ಆಗುತ್ತಿರುವುದರಿಂದ, ಅವರಲ್ಲೂ ಅದು ಬೆಳೆಯದೆ ಇರುವಂತಾಗಿದೆ. ಗಿಡವಾಗಿದ್ದಾಗ ಬೊಗ್ಗದಿದ್ದುದು ಮರವಾದಮೇಲೆ ಬೊಗ್ಗದು, ಎಂಬ ಗಾದೆಯಂತಾಗಿದೆ.

ಹಿಂದಿನ ದೊಡ್ಡ ಯುದ್ಧದಲ್ಲಿ ಎಲ್ಲರಿಗೂ ಸಂಭವಿಸಿದ ಸಾವು, ನೋವು ಸಂಕಟ, ಕಷ್ಟ, ನಷ್ಟಗಳಿಂದ ನೊಂದವರು ಪುನಃ ಯುದ್ಧವೇ ಸಂಭವಿಸದಂತೆ ಮಾಡಬೇಕೆಂದು ಪ್ರಚಾರ ಮಾಡಿದುದರ ಫಲವಾಗಿ ಜನಾಂಗಗಳ ನ್ಯಾಯಸ್ಥಾನ (The League of Nations) ವು ಏರ್ಪಟ್ಟರೂ, ಅದು ಪ್ರಬಲಿಸಲು ತಕ್ಕಷ್ಟು ಬೆಂಬಲವು ಎಲ್ಲ ಜನರಿಂದ ದೊರೆಯದೆ, ಉದ್ದೇಶವು ನೆರವೇರದೆ ಇದೆ. ಆದುದ ರಿಂದ ಹಿಂದಿನದಕ್ಕಿಂತ ಹೆಚ್ಚು ದೊಡ್ಡದಾದ ಯುದ್ಧವು ಈಗ ಪ್ರಪಂಚಕ್ಕೆಲ್ಲಕ್ಕೂ ಹರಡಿ ಎಲ್ಲ ಜನಾಂಗಗಳನ್ನೂ ಸಂಕಟನಷ್ಟಗಳಿಗೆ ಗುರಿಮಾಡುತ್ತಿದೆ. ಇದು ತಪ್ಪ ಬೇಕಾದರೆ ವಿಶ್ವಪ್ರಜಾಭಾವವು ಜನರಲ್ಲಿ ಬೇರೂರಿ ಬೆಳೆಯಬೇಕು. ನಮ್ಮಂತೆಯೇ ಇತರರೂ ದುಃಖಕ್ಕೆ ಗುರಿಯಾಗದೆ ಸುಖವನ್ನು ಪಡೆಯುವಂತೆ ಸಹಾಯ ಮಾಡ ಬೇಕೆಂಬ ಭಾವವು ಕಾರ್ಯಕಾರಿಯಾಗುವಂತೆ ಮಾಡಬೇಕು. ಇದನ್ನು ಜನರಲ್ಲಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ಶಿಕ್ಷಣವನ್ನು ವೈಜ್ಞಾನಿಕಶಿಕ್ಷಣದೊಂದಿಗೆ ಸಮ ಪ್ರಾಧಾನ್ಯದಿಂದ ಕೊಟ್ಟು ಬೆಳೆಸಬೇಕಾಗಿದೆ. ಇಂತಹ ಮಹಾಪುರಾಣಗಳ ವ್ಯಾಸಂಗವೂ, ಅದರಿಂದ ವಿಶ್ವಧರ್ಮದ ಅರಿವು ಆಚರಣೆಗಳೂ, ಜನರಲ್ಲಿ ಬೇರೂರಿ ಬೆಳೆಯಲು ಅನುಕೂಲವಾಗುತ್ತದೆ. ವಿದ್ಯಾಭ್ಯಾಸಕ್ರಮದಲ್ಲೂ ಇದು ತಕ್ಕ ಸ್ಥಾನವನ್ನು ಪಡೆದರೆ, ಆಗ ಮೊದಲಿನ ಉದ್ದೇಶವು ಎಂದರೆ, ಜನರೆಲ್ಲರೂ ಪರೋಪಕಾರ ಶಾಂತಿಸುಖ ಗಳನ್ನು ಪಡೆಯುವುದು, ಸಾಧ್ಯವಾಗುತ್ತದೆ.

ಆಗ "ಧರ್ಮೋವಿಶ್ವಸ್ಯಜಗತಃ ಪ್ರತಿಷ್ಠಾ," "ಸತ್ಯಂವದ ಧರ್ಮಂಚರ" ಎಂದು ಮುಂತಾದ ಶ್ರುತಿವಾಕ್ಯಗಳೂ, "ವಿದ್ವದ್ಭಿಸ್ಸೇವಿತಸ್ಸದ್ಭಿಃ ನಿತ್ಯಮದ್ವೇಷರಾಗಿಭಿಃ। ಹೃದಯೇನಾಭ್ಯನುಜ್ಞಾತಃಯೋ ಧರ್ಮಸ್ತಂ ನಿ ಬೋಧತ ॥" ಎಂದು ಮುಂತಾದ ಸ್ಮೃತಿವಾಕ್ಯಗಳೂ, ಸಾರ್ಥಕವಾಗಿ ಇಡಿಯ ಜಗತ್ತಿನಲ್ಲಿ ಕಲ್ಯಾಣವೂ ಶಾಂತಿಸುಖ ಗಳೂ ನೆಲಸುವಂತಾಗುತ್ತದೆ. ಅದುವರೆಗೆ ವ್ಯಾಸರೇ ಹೇಳಿರುವಂತೆ, "ಊರ್ಧ್ವ ಬಾಹುಃ ವಿರೌಮ್ಯೇಷಃ ನ ಚ ಕಶ್ಚಿಚ್ಛೃಣೋತಿ ಮೇ । ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ॥" ಎಂಬಂತೆ ತಿಳಿದವರೂ ನಿಟ್ಟುಸಿರು ಬಿಡುತ್ತಿರ ಬೇಕಾಗಿದೆ. ಆದರೂ ಅಭ್ಯುದಯನಿಶ್ರೇಯಸಗಳಿಗಾಗಿ ದುಡಿಯಬೇಕಾದುದು ಮಾನವಧರ್ಮವಾದುದರಿಂದ ಇಂತಹ ಮಹಾಪುರಾಣಗಳಲ್ಲಿನ ಉಪದೇಶಗಳಾದರೂ ಜನರಲ್ಲಿ ಪ್ರಚಾರವನ್ನು ಪಡೆಯುತ್ತಿರಲಿ. ಮುಂದಿನ ಪ್ರಪಂಚದ ಶಾಂತಿಸುಖಗಳಿಗೆ ತಳಹದಿಯು, ಮೊದಲ ಮೆಟ್ಟಿಲು ಏರ್ಪಡಲಿ. ಎಂಬ ಉದ್ದೇಶದಿಂದ ಇಂತಹ ಉತ್ತಮಗ್ರಂಥಗಳನ್ನು ಪ್ರಚಾರಕ್ಕೆ ತರಬೇಕೆಂದು ನಮ್ಮನ್ನಾಳುತ್ತಿರುವ ಮಹಾಪ್ರಭು

ಗಳಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್** ಮಹಾಸ್ವಾಮಿಯವರ ಆಜ್ಞೆಯನ್ನು ಶಿರಸಾವಹಿಸಿ ಈ ಗ್ರಂಥವನ್ನು ಮುದ್ರಿಸಿ ಪ್ರಕಟಿಸಲಾಗಿದೆ. ಈ ಘನತಮವಾದ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದು ಜಗನ್ಮಾತೆಯಾದ ಮಹಿಷಮರ್ದಿನೀ ಚಾಮುಂಡೇಶ್ವರೀದೇವಿಯನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತಿರುತ್ತೇನೆ.

ಸ್ವಭಾನು ಸಂವತ್ಸರದ
ಕಾರ್ತಿಕ ಶುಕ್ಲ ಪಂಚಮೀ 4—11—43.

**ಎಡತೊರೆ ದೇವಯ್ಯದೀಕ್ಷಿತರ ಮಗ**
**ಚಂದ್ರಶೇಖರಶಾಸ್ತ್ರೀ.**

# ದೇವೀಭಾಗವತಮಹಾಪುರಾಣದಲ್ಲಿನ ಐದನೆಯ ಸ್ಕಂಧದ ವಿಷಯಸೂಚಿಕೆ

| ಅಧ್ಯಾಯ | ವಿಷಯ | ಪುಟಸಂಖ್ಯೆ |
|---|---|---|

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಪ್ರಥಮೋಽಧ್ಯಾಯಃ ||

### ಮೊದಲನೆಯ ಅಧ್ಯಾಯವು

|| ಋಷಯ ಊಚುಃ ||

**ಭವತಾ ಕಥಿತಂ ಸೂತ ಮಹದಾಖ್ಯಾನಮುತ್ತಮಂ ।**
**ಕೃಷ್ಣಸ್ಯ ಚರಿತಂ ದಿವ್ಯಂ ಸರ್ವಪಾತಕನಾಶನಂ ॥೧॥**

---

**ಲೋಕೇ ಪಾರಮ್ಯಹೇತೋಃ ವಿವದಿಷು ಜನತೋದ್ಧಾರಕಾರ್ಯೇ ಪ್ರವೃತ್ತಾಂ**
**ಹಸ್ತಾಭ್ಯಾಂ ಧಾರಯಂತೀಂ ಸಪದಿ ಹರಿಹರೌ ಸಾಮರಸ್ಯೋಪದೇಷ್ಟ್ರೀಂ ।**
**ಸೌಮ್ಯಾಂ ಕ್ರೂರಾಂ ಚ ದೃಷ್ಟಿಂ ಕಲಯತಿ ಸುಜನೇ ದುರ್ಜನೇ ಯಾಽನುರಾಗಾತ್ ।**
**ಶಾಂತಾದುರ್ಗಾಂ ನಮಾಮಿ ತ್ರಿಭುವನಜನನೀಂ ಹ್ರೀಂಕಲಾತತ್ತ್ವರೂಪಾಂ ॥**

ಈ ಪ್ರಪಂಚದಲ್ಲಿ ಜನರು ಅನೇಕ ಬಗೆಯ ಮತಧರ್ಮಗಳನ್ನು ನಂಬಿ ಆಚರಿಸುತ್ತಿದಾರೆ. ಆದರೆ ಅಜ್ಞಾನದಿಂದ ಮತಾಚಾರಗಳಲ್ಲಿ ಅಭಿಮಾನವು ಮುಂದಾಗಿ, ತಮ್ಮ ಮತವೇ ಹೆಚ್ಚೆಂಬ ನಂಬಿಕೆಯು ಮಿತಿಮೀರಿ, ಹರಿಯೇ ಸರ್ವೋತ್ತಮನೆಂದು ವೈಷ್ಣವರೂ, ಹರನೇ ಹೆಚ್ಚೆಂದು ಶೈವರೂ, ವಾದಿಸುತ್ತಾ, ಆಗ್ರಹದಿಂದ ಜಗಳವಾಡುತ್ತಾ, ಕಡೆಗೆ ಕೆಡಕಿನಲ್ಲಿ ಪರಿಣಮಿಸುವುದುಂಟು. ಇಂಥವರನ್ನೂ ಉದ್ಧರಿಸಲು ತೊಡಗಿರುವ ದೇವಿಯು ಪರಾಶಕ್ತಿ, ಮಹಾಮಾಯೆ, ಶಾಂತಾದುರ್ಗಾ ಮುಂತಾದ ಹೆಸರುಗಳಿಂದ ಪ್ರಸಿದ್ಧಳಾಗಿದಾಳೆ. ಆ ದೇವಿಯು ತನ್ನ ಎಡಬಲ ಭಾಗಗಳಲ್ಲಿ ತನ್ನ ಹಸ್ತಗಳಿಂದ ಹರಿಹರರನ್ನು ಸ್ವೀಕರಿಸಿ ಸಮಾಧಾನಭಾವದಿಂದ, ಅವರಿಬ್ಬರೂ ಒಂದೇ ಶಕ್ತಿ ತತ್ವದ ಎರಡು ರೂಪಗಳೆಂದೂ, ಅವರಿಬ್ಬರಿಗೂ ವಾಸ್ತವವಾಗಿ ಭೇದವಾಗಲಿ, ಹೆಚ್ಚು ಕಡಮೆ ಎಂಬ ಭಾವವಾಗಲಿ ಇಲ್ಲವೆಂದೂ, ಉಪಾಸಕರ ಮನಸ್ಸಿನಲ್ಲಿ ಅದು ಇರಲೂ ಬಾರದೆಂದೂ, ಎಲ್ಲ ಮತಗಳಲ್ಲೂ ಸಮರಸಭಾವದ ಸಹನೆ

**ಸಂದೇಹೋऽತ್ರ ಮಹಾಭಾಗ ವಾಸುದೇವಕಥಾನಕೇ ।**
**ಜಾಯತೇ ನಃ ಪ್ರೋಚ್ಯಮಾನೇऽವಿಸ್ತರೇಣ ಮಹಾಮತೇ ॥೨॥**

**ವನೇ ಗತ್ವಾ ತಪಸ್ತಪ್ತಂ ವಾಸುದೇವೇನ ದುಷ್ಕರಂ ।**
**ವಿಷ್ಣೋರಂಶಾವತಾರೇಣ ಶಿವಸ್ಯಾರಾಧನಂ ಕೃತಂ ॥೩॥**

---

ಯನ್ನೂ ಗೌರವಬುದ್ಧಿಯನ್ನೂ ಸೂಚಿಸುತ್ತಿದಾಳೆ. ಈ ಆದಿಶಕ್ತಿದೇವಿಯು ಎಲ್ಲ ಪ್ರಪಂಚಕ್ಕೂ ತಾಯಿಯಾಗಿರುವುದರಿಂದ ಸಜ್ಜನರನ್ನು ಅಭಿನಂದನೆಯ ಸೌಮ್ಯದೃಷ್ಟಿಯಿಂದ ಪ್ರೋತ್ಸಾಹಿಸುತ್ತಲೂ, ದುಷ್ಟರನ್ನು ಕ್ರೂರದೃಷ್ಟಿಯಿಂದ ಶಿಕ್ಷಿಸುತ್ತಾ ಸರಿಯಾದ ದಾರಿಗೆ ಬರುವಂತೆ ಮಾಡುತ್ತಲೂ, ಇಬ್ಬರಲ್ಲೂ ವಾತ್ಸಲ್ಯವನ್ನು ತೋರಿಸುತ್ತಾ ಅನುಗ್ರಹಿಸುತ್ತಿರುತ್ತಾಳೆ. ಈ ದೇವಿಯು ಹರಿಹರಮಾಯಾಶಕ್ತಿತತ್ವಗಳನ್ನು ಒಳಗೊಂಡಿರುವ 'ಹ್ರೀಂ' ಎಂಬ ಮಂತ್ರಬೀಜಾಕ್ಷರದಿಂದ ಬೋಧ್ಯಳಾಗಿ, ಕಲೆಯ ಎಂದರೆ ಪರಪ್ರಕೃತಿಯ, ತತ್ವವೇ ಸ್ವರೂಪವಾಗಿ ಉಳ್ಳವಳಾಗಿದಾಳೆ. ಇಂತಹ ಶಾಂತಾದುರ್ಗಾದೇವಿಯನ್ನು ನಮಸ್ಕರಿಸುತ್ತೇನೆ. ಈ ಭಕ್ತಿಭಾವದಿಂದ ಕೂಡಿ ಪ್ರಗತಿಮಾರ್ಗದಲ್ಲಿ ಮುಂದುವರಿಯುತ್ತಿರುವ ನನ್ನ ಮನಸ್ಸು ಕ್ರಮವಾಗಿ ಈ ಮತ ಸಾಮರಸ್ಯಜ್ಞಾನದಿಂದ ಆಯಾ ಅಂತಸ್ತುಗಳಲ್ಲಿ ಲಭಿಸುವ ಐಹಿಕ ಮತ್ತು ಆಮುಷ್ಮಿಕಗಳಾದ ಅಭ್ಯುದಯಗಳನ್ನು ಪಡೆದರೂ, ಅವುಗಳಲ್ಲಿಯೇ ಲೋಲುಪವಾಗಿ ಬಳಸುತ್ತಾ ನಿಲ್ಲುವಂತೆ ಆಗದೆ, ಕಡೆಗೆ ಪರಮಪುರುಷಾರ್ಥವಾದ ನಿಶ್ರೇಯಸವನ್ನೂ ಪಡೆಯುವಂತೆ ಆ ದೇವಿಯು ಅನುಗ್ರಹಿಸಲಿ.

ಋಷಿಗಳು ಸೂತಪೌರಾಣಿಕನನ್ನು ಹೀಗೆ ಪ್ರಶ್ನೆಮಾಡಿದರು—ಎಲೈ ಸೂತನೇ, ದೊಡ್ಡದಾಗಿಯೂ ಶ್ರೇಷ್ಠವಾಗಿಯೂ ಇರುವ ಕೃಷ್ಣನ ಚರಿತ್ರೆಯನ್ನು ನಿನ್ನಿಂದ ಕೇಳಿದೆವು. ಆ ಚರಿತೆಯು ದಿವ್ಯವಾಗಿಯೂ ಸಮಸ್ತಪಾಪಗಳನ್ನು ನಾಶಮಾಡತಕ್ಕದ್ದಾಗಿಯೂ ಇರುವುದು. ॥೧॥

ಎಲೈ ಭಾಗ್ಯಶಾಲಿಯಾದ ಸೂತನೇ, ಈ ಕೃಷ್ಣನ ಚರಿತ್ರೆಯನ್ನು ವಿವರಗಳ ವಿಸ್ತಾರವಿಲ್ಲದೆ ಸಂಗ್ರಹವಾಗಿ ನೀನು ಹೇಳುತ್ತಿರುವಲ್ಲಿ ನಮಗೆ ಸಂದೇಹವು ಉಂಟಾಗುತ್ತದೆ. ॥೨॥

ವಿಷ್ಣುವಿನ ಅಂಶದಿಂದ ಅವತರಿಸಿರುವ ಶ್ರೀಕೃಷ್ಣನಿಂದ ಇತರರು ಯಾರೂ ಮಾಡಲಸಾಧ್ಯವಾದ ತಪಸ್ಸು ವನದಲ್ಲಿ ಮಾಡಲ್ಪಟ್ಟಿತು ಮತ್ತು ಈಶ್ವರನ ಸೇವೆಯು ನಡೆಸಲ್ಪಟ್ಟಿತು. ವಿಷ್ಣುವು ಶಿವನನ್ನು ಸರ್ವೋತ್ತಮನೆಂದು ಹೇಗೆ ಪೂಜಿಸಿದನು ?॥೩॥

ವರಪ್ರದಾನಂ ದೇವ್ಯಾ ಚ ಪಾರ್ವತ್ಯಾ ಯತ್ಕೃತಂ ಪುನಃ ।
ಜಗನ್ಮಾತುಶ್ಚ ಪೂರ್ಣಾಯಾಃ ಶ್ರೀದೇವ್ಯಾ ಅಂಶಭೂತಯಾ ॥೪॥

ಈಶ್ವರೇಣಾಪಿ ಕೃಷ್ಣೇನ ಕುತಸ್ತೌ ಸಂಪ್ರಪೂಜಿತೌ ।
ನ್ಯೂನತಾ ವಾ ಕಿಮಸ್ತ್ಯಸ್ಯ ತದೇವಂ ಸಂಶಯೋ ಮಮ ॥೫॥

॥ ಸೂತ ಉವಾಚ ॥

ಶೃಣುಧ್ವಂ ಕಾರಣಂ ತತ್ರ ಮಯಾ ವ್ಯಾಸಶ್ರುತಂ ಚ ಯತ್ ।
ಪ್ರಬ್ರವೀಮಿ ಮಹಾಭಾಗಾಃ ಕಥಾಂ ಕೃಷ್ಣಗುಣಾನ್ವಿತಾಂ ॥೬॥

ವೃತ್ತಾಂತಂ ವ್ಯಾಸತಃ ಶ್ರುತ್ವಾ ವೈರಾಟೇಸುತಜಸ್ತದಾ ।
ಪುನಃ ಪಪ್ರಚ್ಛ ಮೇಧಾವೀ ಸಂದೇಹಂ ಪರಮಂ ಗತಃ ॥೭॥

---

ಅಲ್ಲದೆ ಜಗತ್ತಿಗೆ ತಾಯಿಯಾದ, ಸಮಸ್ತಕಲ್ಯಾಣಗುಣಪರಿಪೂರ್ಣಳಾದ, ಶ್ರೀ ಮಹಾಲಕ್ಷ್ಮಿಯ ಅಂಶಭೂತಳಾದ ಬ್ರಹ್ಮತತ್ವದ ತೇಜಶ್ಶಕ್ತಿರೂಪಳಾದ ಪಾರ್ವತಿಯಿಂದ ಕೃಷ್ಣನಿಗೆ ಯಾವ ವರವು ಏಕೆ ಹೇಗೆ ಕೊಡಲ್ಪಟ್ಟಿತು ? ॥೪॥

ಕೃಷ್ಣನು ತಾನು ಜಗತ್ತಿಗೆ ಅಧಿಪತಿಯಾಗಿದ್ದುಕೊಂಡು ಈ ಪಾರ್ವತೀ ಪರಮೇಶ್ವರರನ್ನು ಏತಕ್ಕಾಗಿ ಹೇಗೆ ತನಗಿಂತಲೂ ಶ್ರೇಷ್ಠರೆಂಬ ಭಾವನೆಯಿಂದ ಪೂಜೆಮಾಡಿದನು ? ಪಾರ್ವತೀಪರಮೇಶ್ವರರಲ್ಲಿ ಕೃಷ್ಣನಿಗಿಂತಲೂ ಆಧಿಕ್ಯವು ಏನು ? ಕೃಷ್ಣನಲ್ಲಿ ಅವರಿಗಿಂತ ನ್ಯೂನತೆಯು ಏನು ? ಹೀಗೆ ಶಕ್ತಿಶಿವರನ್ನು ಪೂಜಿಸುವುದರ ಪ್ರಯೋಜನವಾದರೂ ಏನು ? ಈ ವಿಷಯದಲ್ಲಿ ನಮಗೆ ಸಂದೇಹವಿರುತ್ತದೆ. ಆದುದರಿಂದ ಇದನ್ನು ನಮಗೆ ತಿಳಿಯಹೇಳು. ॥೫॥

ಸೂತಮುನಿಯು ಹೇಳಿದನು—ನಾನು ಹಿಂದೆ ಜನಮೇಜಯರಾಜನ ಪ್ರಶ್ನೆಗೆ ಉತ್ತರವಾಗಿ ವ್ಯಾಸಋಷಿಯಿಂದ ಹೇಳಲ್ಪಟ್ಟ ಕೃಷ್ಣನ ಯಾವ ಚರಿತ್ರೆಯನ್ನು ಕೇಳಿದ್ದೆನೋ, ಕೃಷ್ಣನ ಗುಣವರ್ಣನದಿಂದ ಕೂಡಿದ ಆ ಕಥೆಯನ್ನು ಕಾರಣವಿವರಣ ಪೂರ್ವಕವಾಗಿ ಹೇಳುತ್ತೇನೆ, ಕೇಳಿರಿ. ॥೬॥

ವಿರಾಟರಾಯನ ಮಗಳಾದ ಉತ್ತರೆಯ ಮಗನಾದ ಪರೀಕ್ಷಿದ್ರಾಯನ ಮಗನಾದ ಮತ್ತು ಬುದ್ಧಿಶಾಲಿಯಾದ ಜನಮೇಜಯರಾಜನೂ ಆಗ ವ್ಯಾಸಋಷಿ ಯಿಂದ ಕೃಷ್ಣನ ವೃತ್ತಾಂತವನ್ನು ಕೇಳಿದವನಾಗಿ, ಹೆಚ್ಚಾದ ಸಂದೇಹವುಳ್ಳವನಾಗಿ

|| ಜನಮೇಜಯ ಉವಾಚ ||

ಸಮ್ಯಕ್ ಸತ್ಯವತೀಸೂನೋಃ ಶ್ರುತಂ ಪರಮಕಾರಣಂ |
ತಥಾಪಿ ಮನಸೋವೃತ್ತಿಃ ಸಂಶಯಂ ನ ವಿಮುಂಚತಿ ||೮||

ಕೃಷ್ಣೇನಾರಾಧಿತಃ ಶಂಭುಸ್ತಪಸ್ತಪ್ತ್ವಾತಿದಾರುಣಂ |
ವಿಸ್ಮಯೋಽಯಂ ಮಹಾಭಾಗ ದೇವದೇವೇನ ವಿಷ್ಣುನಾ ||೯||

ಯಃ ಸರ್ವಾತ್ಮಾಪಿ ಸರ್ವೇಶಃ ಸರ್ವಸಿದ್ಧಿಪ್ರದಃ ಪ್ರಭುಃ |
ಸ ಕಥಂ ಕೃತವಾನ್ ಘೋರಂ ತಪಃ ಪ್ರಾಕೃತವದ್ಧರಿಃ ||೧೦||

ಜಗತ್ಕರ್ತುಂ ಕ್ಷಮಃ ಕೃಷ್ಣಃ ತಥಾ ಪಾಲಯಿತುಂ ಕ್ಷಮಃ |
ಸಂಹರ್ತುಮಪಿ ಕಸ್ಮಾತ್ಸ ದಾರುಣಂ ತಪ ಆಚರತ್ ||೧೧||

---

ವ್ಯಾಸನನ್ನು ಕುರಿತು ಹೀಗೆಯೇ ಪುನಃ ಪ್ರಶ್ನೆ ಮಾಡಿದ್ದನು. ಆ ಉತ್ತರವೇ ನಿಮ್ಮ ಪ್ರಶ್ನೆಗೂ ಉತ್ತರವಾಗುತ್ತದೆ. ಅದನ್ನು ಹೇಳುವೆನು ಕೇಳಿರಿ. ||೭||

ಜನಮೇಜಯರಾಜನು ಹೇಳಿದನು—ಎಲೈ ಸತ್ಯವತೀಪುತ್ರನಾದ ವ್ಯಾಸ ಋಷಿಯೇ ನೀನು ಹೇಳಿದ, ದೇವಿಯೇ ಮಾಯಾವಿಶಿಷ್ಟವಾದ ಬ್ರಹ್ಮಸ್ವರೂಪಿಣಿ ಯಾದ ಭಗವತಿಯೇ ಎಲ್ಲಕ್ಕೂ ಮೂಲಕಾರಣವು ಎಂಬ ರಹಸ್ಯವು ಚನ್ನಾಗಿ ತಿಳಿ ಯಿತು. ಆದರೂ ನನ್ನ ಮನಸ್ಸಿಗೆ ಸಂಶಯವು ತಪ್ಪಿರುವುದಿಲ್ಲ. ||೮||

ದೇವತೆಗಳಿಗೂ ಒಡೆಯನಾಗಿರುವ ವಿಷ್ಣುವಿನ ಅಂಶದಿಂದ ಅವತರಿಸಿದ ಶ್ರೀ ಕೃಷ್ಣನೂ ಅತಿಕ್ರೂರವಾದ ತಪಸ್ಸನ್ನು ಮಾಡಿ ಶಿವನನ್ನು ಮೆಚ್ಚಿಸಿದನು. ಇದು ಏಕೆ ಸಂಭವಿಸಿತು ? ಎಂಬ ವಿಷಯವು ಆಶ್ಚರ್ಯಕರವಾಗಿದೆ. ||೯||

ತನ್ನನ್ನು ಪೂಜಿಸಿದವರಿಗೆ ಸರ್ವವಿಧವಾದ ಸಿದ್ಧಿಯನ್ನು ಕೊಡುವ ಶ್ರೀ ಕೃಷ್ಣನು ತಾನು ಸರ್ವರಿಗೂ ಈಶ್ವರನಾಗಿದ್ದುಕೊಂಡು ಸರ್ವಾತ್ಮನಾಗಿರುವಾಗ ಪ್ರಾಕೃತಮನುಷ್ಯನಂತೆ ಘೋರವಾದ ತಪಸ್ಸನ್ನು ಹೇಗೆ ಏತಕ್ಕೆ ಮಾಡಿದನು ? ವಿಷ್ಣುವು ತಾನೇ ಸರ್ವೇಶ್ವರನಾದರೂ ಶಿವನನ್ನು ಹೇಗೆ ಉತ್ತಮನೆಂಬ ಬುದ್ಧಿ ಯಿಂದ ಪೂಜಿಸಿದನು ? ||೧೦||

ಲೋಕವನ್ನು ನಿರ್ಮಿಸುವುದಕ್ಕೂ, ರಕ್ಷಿಸುವುದಕ್ಕೂ, ನಾಶಮಾಡುವುದಕ್ಕೂ ಸಹ ಸಮರ್ಥನಾಗಿರುವ ಕೃಷ್ಣನು ಕ್ರೂರವಾದ ತಪಸ್ಸನ್ನು ಏತಕ್ಕೆ ಮಾಡಿದನು ? ||೧೧||

|| ವ್ಯಾಸ ಉವಾಚ ||

**ಸತ್ಯಮುಕ್ತಂ ತ್ವಯಾ ರಾಜನ್ ವಾಸುದೇವೋ ಜನಾರ್ದನಃ ।**
**ಕ್ಷಮಸ್ಸರ್ವೇಷು ಕಾರ್ಯೇಷು ದೇವಾನಾಂ ದೈತ್ಯಸೂದನಃ ॥೧೨॥**

**ತಥಾಪಿ ಮಾನುಷಂ ದೇಹಮಾಶ್ರಿತ್ಯ ಪರಮೇಶ್ವರಃ ।**
**ಕೃತವಾನ್ ಮಾನುಷಾನ್ಭಾವಾನ್ ವರ್ಣಾಶ್ರಮಸಮಾಶ್ರಿತಾನ್॥೧೩॥**

**ವೃದ್ಧಾನಾಂ ಪೂಜನಂ ಚೈವ ಗುರುಪಾದಾಭಿವಂದನಂ ।**
**ಬ್ರಾಹ್ಮಣಾನಾಂ ತಥಾ ಸೇವಾ ದೇವತಾರಾಧನಂ ತಥಾ ॥೧೪॥**

**ಶೋಕೇ ಶೋಕಾಭಿಯೋಗಶ್ಚ ಹರ್ಷೇ ಹರ್ಷಸಮುನ್ನತಿಃ ।**
**ದೈನ್ಯಂ ನಾನಾಪವಾದಾಶ್ಚ ಸ್ತ್ರೀಷು ಕಾಮೋಪಸೇವನಂ ॥೧೫॥**

---

ಎಲೈ ರಾಜನೇ ಕೇಳು. ನೀನು ನಿಜವಾದ ಮಾತನ್ನೇ ಹೇಳಿದೆ. ವಿಷ್ಣುವಿನ ಅಂಶಾವತಾರನಾದ ಕೃಷ್ಣನು ರಾಕ್ಷಸರನ್ನು ನಾಶಪಡಿಸುವವನು ಮತ್ತು ದೇವತೆಗಳ ಎಲ್ಲ ಕಾರ್ಯಗಳನ್ನು ಮಾಡುವುದರಲ್ಲಿ ಸಮರ್ಥನು. ||೧೨||

ಆದಾಗ್ಯೂ, ಸರ್ವರಿಗೂ ಅಧಿಪತಿಯಾದ ಆ ವಿಷ್ಣುವು ಮನುಷ್ಯಶರೀರವನ್ನು ಹೊಂದಿರುವಾಗ, ಮನುಷ್ಯರಿಗೆ ಸಂಬಂಧಪಟ್ಟ ವರ್ಣಾಶ್ರಮಧರ್ಮಾಚರಣೆಯೇ ಮೊದಲಾದ, ಮನುಷ್ಯರ ಪುರುಷಾರ್ಥಸಾಧನೆಯ ಸಂಬಂಧವಾದ, ಕರ್ಮಗಳೆಲ್ಲವನ್ನೂ ಲೋಕಸಂಗ್ರಹಕ್ಕಾಗಿಯೂ ಆಚರಿಸಿದನು. ಅಲ್ಲದೆ ಕೃಷ್ಣನು ಮಾನವ ದೇಹದಲ್ಲಿರುವಾಗ ಅದಕ್ಕಿಂತ ಶ್ರೇಷ್ಠವಾದ ಶಿವಾದಿ ಮೂರ್ತಿಗಳ ಪೂಜೆಯು ಉಚಿತವಾದುದೂ ಹೌದು. ||೧೩||

ವೃದ್ಧರಾದ ಗುರುಹಿರಿಯರನ್ನು ಪೂಜಿಸುವುದು, ಗುರುಗಳ ಪಾದಸೇವನೆಯು, ಬ್ರಾಹ್ಮಣರ ಸೇವೆಯು, ದೇವತೆಗಳ ಪೂಜೆಯೂ, ಹಾಗೆಯೇ ||೧೪||

ದುಃಖಪಡುವಸಮಯದಲ್ಲಿ ದುಃಖವನ್ನು ಹೊಂದುವುದು, ಹರ್ಷಕಾಲದಲ್ಲಿ ಸಂತೋಷಪಡುವುದು, ವ್ಯಸನದಲ್ಲಿ ಸಿಕ್ಕಿರುವಾಗ ದೀನನಾಗಿರುವುದು, ನಾನಾವಿಧವಾದ ನಿಂದೆಯನ್ನು ಹೊಂದುವುದು, ಸ್ತ್ರೀಯರಲ್ಲಿ ಕಾಮಾಭಿಲಾಷೆಯಿಂದ ಭೋಗಪಡುವುದು, ||೧೫||

ಕಾಮಃಕ್ರೋಧಸ್ತಥಾ ಲೋಭಃ ಕಾಲೇ ಕಾಲೇ ಭವಂತಿ ಹಿ ।
ತಥಾ ಗುಣಮಯೇ ದೇಹೇ ನಿರ್ಗುಣತ್ವಂ ಕಥಂ ಭವೇತ್ ॥೧೬॥

ಗಾಂಧಾರೀಶಾಪಜಾದ್ದೋಷಾತ್ತಥಾ ಬ್ರಾಹ್ಮಣಶಾಪಜಾತ್ ।
ನಿಧನಂ ಯಾದವಾನಾಂ ತು ಕೃಷ್ಣದೇಹಸ್ಯ ಮೋಚನಂ ॥೧೭॥

ಹರಣಂ ಲುಂಠನಂ ತದ್ವತ್ತತ್ಪತ್ನೀನಾಂ ನರಾಧಿಪ ।
ಅರ್ಜುನಸ್ಯಾಸ್ತ್ರಮೋಕ್ಷೇ ಚ ಕ್ಲೀಬತ್ವಂ ತಸ್ಕರೇಷು ಚ ॥೧೮॥

ಅಜ್ಞತ್ವಂ ಹರಣೇ ಗೇಹಾತ್ ತತ್ಪ್ರದ್ಯುಮ್ನಾನಿರುದ್ಧಯೋಃ ।
ಏವಂ ಮಾನುಷದೇಹೇಽಸ್ಮಿನ್ ಮಾನುಷಂ ಖಲು ಚೇಷ್ಟಿತಂ ॥೧೯॥

---

ಕಾಮ, ಕ್ರೋಧ, ಲೋಭ ಇವೇ ಮೊದಲಾದ ದೇಹಸಂಬಂಧಿಯಾದ ಗುಣಗಳೆಲ್ಲವೂ ಪ್ರಾಣಿಗಳಿಗೆ ಆಯಾಯ ಕಾಲದಲ್ಲಿ ಉಂಟಾಗುತ್ತವೆ. ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವ ದೇಹವನ್ನು ಹೊಂದಿರುವ ಮನುಷ್ಯನು ನಿರ್ಗುಣನು ಹೇಗೆ ಆದಾನು ? ಆದುದರಿಂದ ಕೃಷ್ಣನೂ ಸಹ ಗುಣಮಯವಾದ ಶರೀರವನ್ನು ಹೊಂದಿರುವಾಗ, ಅದಕ್ಕೆ ವಶನಾಗದೆ ಇರಲು ಹೇಗೆ ತಾನೇ ಸಾಧ್ಯವು ? ಏಕೆಂದರೆ ಗುಣಗಳ ವಿಕಾರವಾದ ದೇಹದಲ್ಲಿರುವಾಗ ಗುಣಪರಿಣಾಮಗಳಾದ ವೃತ್ತಿಗಳು ಉಂಟಾಗುವುದು ಸ್ವಾಭಾವಿಕವೂ ಅನಿವಾರ್ಯವೂ ಆಗಿದೆ ಎಂದು ಭಾವವು. ॥೧೬॥

ಗಾಂಧಾರಿಯ ಶಾಪದಿಂದುಂಟಾದ ದೋಷದಿಂದಲೂ, ಅಷ್ಟಾವಕ್ರಮುನಿಯೇ ಮುಂತಾದ ಬ್ರಾಹ್ಮಣರ ಶಾಪದಿಂದಲೂ ಯಾದವರ ನಾಶವೂ ಕೃಷ್ಣನ ಶರೀರ ತ್ಯಾಗವೂ ಉಂಟಾದುವು. ॥೧೭॥

ಎಲೈ ಜನಮೇಜಯರಾಜನೇ ಕೇಳು—ಕೃಷ್ಣನ ಪತ್ನಿಯರನ್ನು ಅಪಹರಿಸುವುದು ಎಳೆದುಕೊಂಡು ಹೋಗುವುದು, ಕಳ್ಳರ ವಿಷಯದಲ್ಲಿ ಅರ್ಜುನನು ಅಸ್ತ್ರಗಳನ್ನು ಪ್ರಯೋಗಿಸಲಸಮರ್ಥನಾಗಿ ಹೇಡಿಯಾಗುವುದು, ॥೧೮॥

ಪ್ರದ್ಯುಮ್ನ, ಅನಿರುದ್ಧ ಇವರನ್ನು ತನ್ನ ಮನೆಯಿಂದ ಅಪಹರಿಸುವಾಗ ಅದರ ತಿಳಿವಳಿಕೆಯೇ ಇಲ್ಲದಿರುವುದು, ಇವೆಲ್ಲವೂ ಮನುಷ್ಯಶರೀರದಲ್ಲಿರುವಾಗ ಮನುಷ್ಯಜನ್ಮಕ್ಕೆ ಅನುಸಾರವಾದ ಅನಿವಾರ್ಯವಾದ ಸ್ವಭಾವವಲ್ಲವೇ ? ಹೀಗೆ ಸಾಮಾನ್ಯಜನರ ಪ್ರಾಕೃತದೃಷ್ಟಿಯಿಂದ ನೋಡಿದರೂ ಕೃಷ್ಣನು ಶಿವನನ್ನು ಕುರಿತು ತಪಸ್ಸು ಮಾಡಿದುದೂ, ಪೂಜಿಸಿದುದೂ ಸಂಗತವಾಗಿಯೇ ಇದೆ ಎಂದು ತಿಳಿಯಬೇಕು. ॥೧೯॥

**ವಿಷ್ಣೋರಂಶಾವತಾರೇಽಸ್ಮಿನ್ನಾರಾಯಣಮುನೇಸ್ತಥಾ ।**
**ಅಂಶಜೇ ವಾಸುದೇವೇಽತ್ರ ಕಿಂ ಚಿತ್ರಂ ಶಿವಸೇವನೇ ॥೨೦॥**

**ಸ ಹಿ ಸರ್ವೇಶ್ವರೋ ದೇವೋ ವಿಷ್ಣೋರಪಿ ಚ ಕಾರಣಂ ।**
**ಸುಷುಪ್ತಸ್ಥಾನನಾಥಸ್ಸ ವಿಷ್ಣುನಾ ಚ ಪ್ರಪೂಜಿತಃ ॥೨೧॥**

**ತದಂಶಭೂತಾಃ ಕೃಷ್ಣಾದ್ಯಾಸ್ತೈಃ ಕಥಂ ನ ಸ ಪೂಜ್ಯತೇ ।**
**ಅಕಾರೋ ಭಗವಾನ್ ಬ್ರಹ್ಮಾಽಪ್ಯುಕಾರಸ್ಸ್ಯಾದ್ಧರಿಃ ಸ್ವಯಂ ॥೨೨॥**

---

ಇನ್ನು ಪರಮಾರ್ಥ ದೃಷ್ಟಿಯಿಂದಲೂ ಕೃಷ್ಣನ ಶಿವಾರಾಧನೆಯು ಉಚಿತ ವಾಗಿದೆ. ಏಕೆಂದರೆ ನಾರಾಯಣಋಷಿಯು ವಿಷ್ಣುವಿನ ಅಂಶರೂಪನಾದ ಧರ್ಮ ದೇವನ ಅವತಾರಸ್ವರೂಪನು. ಅಂತಹ ನಾರಾಯಣಋಷಿಯ ಅಂಶವಾಗಿರುವ ಶ್ರೀಕೃಷ್ಣನು ಶಿವನನ್ನು ಕುರಿತು ತಪಸ್ಸು ಮಾಡಿ ಅವನನ್ನು ಆರಾಧಿಸಿದನೆಂಬ ವಿಷಯದಲ್ಲಿ ಆಶ್ಚರ್ಯಪಡಬೇಕಾದುದೇನು ? ॥೨೦॥

ಆ ಶಿವನು ಶಕ್ತ್ಯಭಿನ್ನನೂ, ಮಾಯಾವಿಶಿಷ್ಟಬ್ರಹ್ಮರೂಪನೂ ಆಗಿರುವುದ ರಿಂದ ಸರ್ವರಿಗೂ ಒಡೆಯನಾದವನು, ಮತ್ತು ವಿಷ್ಣುವಿಗೂ ಕಾರಣಭೂತನಾದವನು. ಅವನು ಸೂಕ್ಷ್ಮಶರೀರ ಅಥವಾ ಲಿಂಗದೇಹಕ್ಕೂ ಕಾರಣವಾದವನು. ಏಕೆಂದರೆ ಶಿವನು ಸುಷುಪ್ತಸ್ಥಾನದಲ್ಲಿನ ಅಜ್ಞಾನರೂಪವಾದ ಕಾರಣದೇಹಕ್ಕೆ ಅಧಿಪತಿಯೂ ಅಭಿಮಾನಿಯೂ ಆಗಿರುವನು. ವಿಷ್ಣುವು ಕಾರ್ಯವಾದ ಈ ಲಿಂಗದೇಹಕ್ಕೆ ಅಭಿಮಾನಿಯಾಗಿರುವನು. ಕಾರಣಶರೀರಕ್ಕೆ ಶಿವನು ಅಭಿಮಾನಿಯಾಗಿರುವುದ ರಿಂದ, ಸೂಕ್ಷ್ಮಶರೀರಾಭಿಮಾನಿಯಾದ ವಿಷ್ಣುವಿಗೂ ಪೂಜ್ಯನು. ಆದುದರಿಂದ ವಿಷ್ಣುವಿನಿಂದ ಪೂಜಿಸಲ್ಪಟ್ಟನು.

ರಾಮ, ಕೃಷ್ಣ ಮೊದಲಾದವರು ಆ ವಿಷ್ಣುವಿನ ಅಂಶದಿಂದ ಹುಟ್ಟಿದವರು. ಆದುದರಿಂದ ಶಿವನು ಇವರಿಂದ ಪೂಜಿಸಲ್ಪಡುವುದು ಉಚಿತವೂ ಆವಶ್ಯಕವೂ ಆದುದ ರಿಂದ ಅದು ಏನೂ ಆಶ್ಚರ್ಯಕರವಲ್ಲವು. ಅಲ್ಲದೆ ಪ್ರಣವದಲ್ಲಿರುವ ನಾಲ್ಕು ಭಾಗ ಗಳಲ್ಲಿ ಮೊದಲನೆಯದಾದ ಅಕಾರಕ್ಕೆ ಬ್ರಹ್ಮನು ವಾಚ್ಯನು, ಉಕಾರಕ್ಕೆ ವಿಷ್ಣುವು ವಾಚ್ಯನು, ಮಕಾರಕ್ಕೆ ಈಶ್ವರನು ವಾಚ್ಯನು. ಮಕಾರಕ್ಕಿಂತಲೂ ಮುಂದೆ ಇರುವ ಅರ್ಧ ಮಾತ್ರೆಗೆ ಮಾಯಾವಿಶಿಷ್ಟಬ್ರಹ್ಮಶಕ್ತಿರೂಪಳಾದ ದೇವಿಯು ವಾಚ್ಯಳಾಗಿರು ವಳು. ಈ ದೇವಿಯೂ ಶಿವನೂ ಅಭಿನ್ನರು. ॥೨೧॥

**ಮಕಾರೋ ಭಗವಾನ್ರುದ್ರೋಽಪ್ಯರ್ಧಮಾತ್ರಾ ಮಹೇಶ್ವರೀ ।**
**ಉತ್ತರೋತ್ತರಭಾವೇನಾಽಪ್ಯುತ್ತಮತ್ವಂ ಸ್ಮೃತಂ ಬುಧೈಃ ॥೨೩॥**

---

ಹೀಗೆಯೇ ಶರೀರದ ವಿಷಯದಲ್ಲಿಯೂ ಸ್ಥೂಲ, ಸೂಕ್ಷ್ಮ, ಕಾರಣ, ತುರೀಯ ಎಂಬುದಾಗಿ ನಾಲ್ಕು ವಿಧವಾಗಿರುವುದು. ಅಲ್ಲದೆ ಇವುಗಳಲ್ಲಿ ಹಿಂದಿನದಕ್ಕಿಂತ ಮುಂದುಮುಂದಿನ ದೇಹವು ಕಾರಣವಾಗಿ ಉತ್ತಮಸ್ಥಾನವೆನಿಸಿಕೊಂಡಿದೆ. ಇವುಗಳಲ್ಲಿ ಸ್ಥೂಲಶರೀರಾಭಿಮಾನಿಯು ಬ್ರಹ್ಮನು ; ಸೂಕ್ಷ್ಮಶರೀರಾಭಿಮಾನಿಯು ವಿಷ್ಣುವು, ||೨೨||

ಕಾರಣಶರೀರಾಭಿಮಾನಿಯು ರುದ್ರನು ; ತುರೀಯಶರೀರಕ್ಕೆ ಪರಬ್ರಹ್ಮನು ಅಧಿಪತಿಯು. ಪ್ರಣವದ ಅಕಾರ, ಉಕಾರ, ಮಕಾರ ಅರ್ಧಮಾತ್ರಾರೂಪವಾದ ನಾಲ್ಕು ಭಾಗಗಳಿಗೂ ಸ್ಥೂಲ, ಸೂಕ್ಷ್ಮ, ಕಾರಣ, ತುರೀಯವೆಂಬ ನಾಲ್ಕು ವಿಧವಾದ ಶರೀರಕ್ಕೂ ಅಧಿಪತಿಗಳು ಒಂದೇ ತತ್ತ್ವದ ಅಂಶರೂಪರೇ ಆಗಿರುವುದರಿಂದ ಎಲ್ಲ ದೇವತೆಗಳಿಗಿಂತಲೂ ದೇವಿಯು ಉತ್ತಮಳೆಂಬುವುದು ಸ್ಪಷ್ಟವಾಗಿರುತ್ತದೆ.

ಮೊದಲು ದೇವಿಗೆ ಮಾಯಾವಿಶಿಷ್ಟಬ್ರಹ್ಮವೇ ಸ್ವರೂಪವೆಂದು ಹೇಳಿದೆ. ತುರೀಯಶರೀರದಲ್ಲಿ ಅಂತರ್ಮುಖವಾಗಿ ಮಾಯೆಯು ಕಾರ್ಯಪರಿಣಾಮಕಾರಿಯಾಗದೆ ತನ್ನಲ್ಲಿ ಅಭೇದದಿಂದಿರುವುದೆಂದು ನೃಸಿಂಹತಾಪಿನೀ ಮುಂತಾದ ಉಪನಿಷತ್ತುಗಳಲ್ಲಿ ಹೇಳಿರುವ ಕಾರಣ ಮಾಯೆಯೆಂಬುದು ಬೇರೆ ಇಲ್ಲವು. ತುರೀಯಸ್ವರೂಪವು ಮಾಯಾವಿಶಿಷ್ಟವಾದರೂ, ಮಾಯಾಕಾರ್ಯವಲ್ಲವು. ಮಾಯಾಪ್ರಾಬಲ್ಯರಹಿತವಾದ, ಮಾಯೆಯೇ ಅಧೀನವಾಗಿರುವ, ಆ ಸ್ವರೂಪವು ತುರೀಯಾತೀತವೆಂದು ನೃಸಿಂಹತಾಪನೀಯಾದಿಗಳಲ್ಲಿ ಹೇಳಲ್ಪಟ್ಟಿರುತ್ತದೆ.

ಈ ನಾಲ್ಕು ವಿಧವಾದ ವಿಭಾಗಗಳಲ್ಲಿ ಉತ್ತರೋತ್ತರವಾಗಿ ಬ್ರಹ್ಮನಿಗಿಂತ ವಿಷ್ಣುವೂ, ವಿಷ್ಣುವಿಗಿಂತ ಶಿವನೂ, ಶಿವನಿಗಿಂತ ಮಾಯಾವಿಶಿಷ್ಟಬ್ರಹ್ಮಶಕ್ತಿರೂಪಳಾದ ಚಿದ್ರೂಪಿಣಿಯಾದ ಭಗವತೀದೇವಿಯೂ ಉತ್ತಮರೆಂದು ಹೇಳಿರುವುದರಿಂದ ವಿಷ್ಣುವಿನ ಅಂಶವಾದ ಕೃಷ್ಣನು ಶಿವಪೂಜೆಯನ್ನು ಮಾಡಿರುವ ವಿಷಯದಲ್ಲಿ ತತ್ತ್ವದೃಷ್ಟಿಯಿಂದ ಶಾಸ್ತ್ರಸಂಬಂಧವಾದ ಆಕ್ಷೇಪಣೆಯೂ ದೋಷವೂ ಯಾವುದೂ ಇಲ್ಲವು. ಅಲ್ಲದೆ ಔಚಿತ್ಯವೂ ಆವಶ್ಯಕತೆಯೂ ಇದೆ ಎಂದು ತಿಳಿಯಬೇಕು. ||೨೩||

ಅತಃ ಸರ್ವೇಷು ಶಾಸ್ತ್ರೇಷು ದೇವೀ ಸರ್ವೋತ್ತಮಾ ಸ್ಮೃತಾ ।
ಅರ್ಧಮಾತ್ರಾ ಸ್ಥಿತಾ ನಿತ್ಯಾ ಯಾಽನುಚ್ಚಾರ್ಯಾ ವಿಶೇಷತಃ ॥೨೪॥

ವಿಷ್ಣೋರಪ್ಯಧಿಕೋ ರುದ್ರೋ ವಿಷ್ಣುಸ್ತು ಬ್ರಹ್ಮಣೋಽಧಿಕಃ ।
ತಸ್ಮಾನ್ನ ಸಂಶಯಃ ಕಾರ್ಯಃ ಕೃಷ್ಣೇನ ಶಿವಪೂಜನೇ ॥೨೫॥

ಇಚ್ಛಯಾ ಬ್ರಹ್ಮಣೋ ವಕ್ತ್ರಾತ್ ವರದಾನಾರ್ಥಮುದ್ಭವೌ ।
ಮೂಲರುದ್ರಸ್ಯಾಂಶಭೂತೋ ರುದ್ರನಾಮಾ ದ್ವಿತೀಯಕಃ ॥೨೬॥

ಸೋಽಪಿ ಪೂಜ್ಯೋಽಸ್ತಿ ಸರ್ವೇಷಾಂ ಮೂಲರುದ್ರಸ್ಯ ಕಾ ಕಥಾ ।
ದೇವೀತತ್ತ್ವಸ್ಯ ಸಾನ್ನಿಧ್ಯಾದುತ್ತಮತ್ವಂ ಶಿವೇ ಸ್ಮೃತಂ ॥೨೭॥

---

ಈ ಕಾರಣದಿಂದಲೂ, ಯಾವಾಗಲೂ ಪ್ರಣವದ ಅರ್ಧಮಾತ್ರೆಯ ಸ್ವರೂಪ ದಿಂದ ಇದ್ದುಕೊಂಡು ಯಾರಿಂದಲೂ ಉಚ್ಚರಿಸಲೂ ಸಹ ಆಗದಿರುವ ನಿತ್ಯವಾದ ಸ್ವರೂಪವುಳ್ಳ ದೇವಿಯು ಸರ್ವೋತ್ತಮಳೆಂಬುದು ಎಲ್ಲ ಶಾಸ್ತ್ರಗಳಲ್ಲಿಯೂ ಹೇಳಿರು ವುದರಿಂದ ಗೊತ್ತಾಗಿರುತ್ತದೆ. ||೨೪||

ರುದ್ರನು ವಿಷ್ಣುವಿಗಿಂತಲೂ ಹೆಚ್ಚಾದವನು. ವಿಷ್ಣುವು ಬ್ರಹ್ಮನಿಗಿಂತಲೂ ಹೆಚ್ಚಾದವನು. ಆದುದರಿಂದ ಕೃಷ್ಣನು ಶಿವಪೂಜೆಯನ್ನು ಮಾಡಿದ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲವು. ||೨೫||

ಬ್ರಹ್ಮನ ಮುಖದಿಂದ ತನ್ನ ಇಚ್ಛಾನುಸಾರವಾಗಿ ಸೃಷ್ಟಿಕಾರ್ಯವನ್ನು ನೆರ ವೇರಿಸಲು ಶಿವನನ್ನು ಆರಾಧಿಸಿದ ಬ್ರಹ್ಮನ ಇಚ್ಛೆಯನ್ನು ಪೂರ್ತಿಗೊಳಿಸುವುದಕ್ಕಾಗಿ ಮೂಲರುದ್ರನ ಅಂಶದಿಂದ ರುದ್ರನೆಂಬ ಹೆಸರಿನಿಂದ ಇನ್ನೊಬ್ಬ ರುದ್ರನು ಹುಟ್ಟಿ ದನು. ||೨೬||

ಬ್ರಹ್ಮನ ಲಲಾಟದಿಂದ ಹುಟ್ಟಿದ ರುದ್ರನೇ ವಿಷ್ಣ್ವಾದಿಗಳಿಗೂ ಪೂಜ್ಯನಾಗಿರು ವಾಗ ಮೂಲರುದ್ರನಿಗೆ ಸರ್ವಪೂಜ್ಯತ್ವವು ಸ್ಪಷ್ಟವಾಗಿ ಸ್ವತಸ್ಸಿದ್ಧವಾಗಿದೆ ಎಂಬ ವಿಷಯದಲ್ಲಿ ಹೇಳಬೇಕಾದುದೇನು? ಕಾರಣಶರೀರಕ್ಕಿಂತಲೂ ಲಿಂಗಶರೀರವೂ, ಅದಕ್ಕಿಂತಲೂ ಸ್ಥೂಲಶರೀರವೂ ಸಹ ನಿಕೃಷ್ಟವಾಗಿರುತ್ತದೆ. ಹೀಗೆಯೇ ಇವಕ್ಕೆ ಅಭಿಮಾನಿಗಳಾದವರೂ ಕ್ರಮವಾಗಿ ಮೇಲುಮೇಲಾದ ಸ್ಥಾನದಲ್ಲಿರುವ ಅವರ ವಿಷಯದಲ್ಲಿಯೂ ಸಹ ನ್ಯೂನಾಧಿಕ್ಯಭಾವವು ಇರುವುದು. ವಿಷ್ಣುವು ಸೂಕ್ಷ್ಮ

ಅವತಾರಾ ಹರೇರೇವಂ ಪ್ರಭವಂತಿ ಯುಗೇ ಯುಗೇ ।
ಯೋಗಮಾಯಾಪ್ರಭಾವೇನ ನಾತ್ರ ಕಾರ್ಯಾ ವಿಚಾರಣಾ ॥೨೮॥

ಯಾ ನೇತ್ರಪಕ್ಷ್ಮಪರಿಸಂಚಲನೇನ ಸಮ್ಯ
ಗ್ವಿಶ್ವಂ ಸೃಜತ್ಯವತಿ ಹಂತಿ ನಿಗೂಢಭಾವಾ ।
ಸೈಷಾ ಕರೋತಿ ಸತತಂ ದ್ರುಹಿಣಾಽಚ್ಯುತೇಶಾನ್
ನಾನಾವತಾರಕಲನೇ ಪರಿಭೂಯಮಾನಾನ್ ॥೨೯॥

ಸೂತೀಗೃಹಾದ್ವ್ರಜಮುಪ್ಯನಯಾ ನಿಯುಕ್ತಂ
ಸಂಗೋಪಿತಶ್ಚ ಭವನೇ ಪಶುಪಾಲರಾಜ್ಞಃ ।
ಸಂಪ್ರಾಪಿತಶ್ಚ ಮಥುರಾಂ ವಿನಿಯೋಜಿತಶ್ಚ
ಶ್ರೀದ್ವಾರಕಾಪ್ರಣಯನೇ ನನು ಭೀತಚಿತ್ತಃ ॥೩೦॥

---

ಶರೀರಾಭಿಮಾನಿಯು. ಲಿಂಗದೇಹಕ್ಕೆ ಕಾರಣಶರೀರವು ಕಾರಣವಾಗಿ ತದಭಿಮಾನಿಗೆ ಉತ್ತಮತ್ವವಿಲ್ಲದಿರಲು ವಿಷ್ಣುವಿಗೆ ಸರ್ವೋತ್ತಮತ್ವವು ಬರಲಾರದು. ಅಲ್ಲದೆ ಆ ಶಿವನಿಗೆ ದೇವಿಯ ಸಾನ್ನಿಧ್ಯದಿಂದಲೂ ಉತ್ತಮತ್ವವು ಇರುವುದು. ॥೨೭॥

ಪ್ರತಿ ಯುಗದಲ್ಲಿಯೂ ಹೀಗೆಯೇ ವಿಷ್ಣುವಿನ ಅವತಾರಗಳು ಯೋಗ ಮಾಯೆಯ ಮಹಿಮೆಯಿಂದ ಉಂಟಾಗುತ್ತವೆ. ಈ ವಿಷಯದಲ್ಲಿ ವಿಚಾರವನ್ನು ಮಾಡಬೇಕಾದುದಿಲ್ಲವು. ॥೨೮॥

ಯಾವ ದೇವಿಯು ಬಹಳ ಗೂಢವಾದ ಸ್ಥಿತಿಯುಳ್ಳವಳಾಗಿ ಕಣ್ಣಿನ ರೆಪ್ಪೆ ಯನ್ನು ಮುಚ್ಚಿ ಬಿಡುವುದರ ಒಳಗಾಗಿ ಪ್ರಪಂಚವನ್ನು ಸೃಷ್ಟಿಮಾಡಿ, ರಕ್ಷಿಸಿ ನಾಶ ಪಡಿಸಲು ಸಮರ್ಥಳೋ ಆ ದೇವಿಯೇ ಬ್ರಹ್ಮ ವಿಷ್ಣು ಈಶ್ವರನನ್ನು ಆಯಾಯ ಅವತಾರಗಳಲ್ಲಿ ಯಾವಾಗಲೂ ಸಿಕ್ಕಿ ತೊಳಲುವಂತೆ ಮಾಡುತ್ತಾಳೆ. ॥೨೯॥

ಈ ದೇವಿಯಿಂದ ಪ್ರೇರಿಸಲ್ಪಟ್ಟವನಾಗಿ ಶ್ರೀಕೃಷ್ಣನು ಸೂತಿಕಾಗೃಹದಿಂದ ಹೊರಕ್ಕೆ ಒಯ್ಯಲ್ಪಟ್ಟು, ಗೋಕುಲಕ್ಕೆ ಅಧಿಪತಿಯಾದ ನಂದನ ಮನೆಯಲ್ಲಿ ಗೂಢ ವಾಗಿಡಲ್ಪಟ್ಟನು. ಅನಂತರ ಮಥುರೆಯನ್ನು ಸೇರಿ ಅಲ್ಲಿ ಕಾಲಯವನನ ಭಯದಿಂದ ಹೆದರಿದ ಮನಸ್ಸುಳ್ಳವನಾಗಿ ದ್ವಾರಕಾಪಟ್ಟಣವನ್ನು ಹೊಸದಾಗಿ ಕಟ್ಟುವುದರಲ್ಲಿ ನಿಯಮಿಸಲ್ಪಟ್ಟನು. ಇವೆಲ್ಲವೂ ದೇವಿಯ ಪ್ರೇರಣೆಯಿಲ್ಲದೆ ನಡೆದುದಲ್ಲವು. ॥೩೦॥

ನಿರ್ಮಾಯ ಷೋಡಶಸಹಸ್ರಶತಾರ್ಧಕಾಸ್ತಾ
ನಾರ್ಯೋಽಷ್ಟ ಸಂಮತತರಾಸ್ತ್ವಕಲಾಸಮುತ್ಥಾಃ ।
ತಾಸಾಂ ವಿಲಾಸವಶಗಂ ತು ವಿಧಾಯ ಕಾಮಂ
ದಾಸೀಕೃತೋ ಹಿ ಭಗವಾನನಯಾಽಪ್ಯನಂತಃ ॥೩೦॥

ಏಕಾಪಿ ಬಂಧನವಿಧೌ ಯುವತೀ ಸಮರ್ಥಾ
ಪುಂಸೋ ಯಥಾ ಸುದೃಢಲೋಹಮಯಂ ತು ದಾಮ ।
ಕಿಂ ನಾಮ ಷೋಡಶಸಹಸ್ರಶತಾರ್ಧಕಾಶ್ಚ
ತಂ ಸ್ವೀಕೃತಂ ಶುಕಮಿವಾಶು ನಿಬಂಧಯಂತಿ ॥೩೨॥

ಸಾತ್ರಾಜಿತೀವಶಗತೇನ ಮುದಾನ್ವಿತೇನ
ಪ್ರಾಪ್ತಂ ಸುರೇಂದ್ರಭವನಂ ಹರಿಣಾ ತದಾನೀಂ ।
ಕೃತ್ವಾ ಮೃಧಂ ಮಘವತಾ ವಿಹೃತಸ್ತರೂಣಾ
ಮೀಶಃ ಪ್ರಿಯಾಸದನಭೂಷಣತಾಂ ಯ ಆಪ ॥೩೩॥

---

ಈ ದೇವಿಯು ತನ್ನ ಕಲೆಗಳಿಂದ ಹದಿನಾರುಸಾವಿರದ ಐವತ್ತು ಜನ ಹೆಂಗಸರನ್ನು ನಿರ್ಮಿಸಿದಳು. ಅವರಲ್ಲಿ ಎಂಟು ಜನ ಹೆಂಗಸರು ಮಾತ್ರ ಕೃಷ್ಣನಿಗೆ ತುಂಬ ಪ್ರೀತಿಪಾತ್ರರಾಗಿದ್ದರು. ಷಡ್ಗುಣೈಶ್ವರ್ಯಸಂಪನ್ನನಾಗಿದ್ದಾಗ್ಯೂ ಶ್ರೀಕೃಷ್ಣನು ಈ ಸ್ತ್ರೀಯರ ವಿಲಾಸಕ್ಕೆ ಮನಸ್ಸೋತು ಬಹಳ ಅಧೀನನಾಗಿದ್ದನು. ಇಷ್ಟರಮಟ್ಟಿಗೆ ನಿತ್ಯನಾದ ಕೃಷ್ಣನೂ ಸ್ತ್ರೀಯರಿಗೆ ದಾಸನಾಗಿರುವಂತೆ ಮಾಡಿದ್ದುದೂ ಈ ದೇವಿಯು ಮಾಡಿರುವ ಕೆಲಸವಲ್ಲವೇ ? ॥೩೧॥

ಆನೆಯನ್ನು ಕಟ್ಟಲು ಘಟ್ಟಿಯಾದ ಲೋಹದ ಸರಪಣಿಯಂತೆ, ಗಂಡಸನ್ನು ಕಟ್ಟಿಹಾಕುವುದಕ್ಕೆ ಒಬ್ಬ ಹೆಂಗಸೇ ಸಾಕಾಗಿರುವಾಗ, ಹದಿನಾರುಸಾವಿರದ ಐವತ್ತು ಜನ ಹೆಂಗಸರು ಒಬ್ಬ ಕೃಷ್ಣನನ್ನು ಸಾಕಿದ ಗಿಣಿಯನ್ನು ಕಟ್ಟಿಹಾಕಿದಂತೆ ಇರಿಸಿದ್ದುದೂ ಆ ದೇವಿಯ ಪ್ರಭಾವದಿಂದಲೇ ಸಾಧ್ಯವಾಯಿತೆಂಬದನ್ನು ಪ್ರತ್ಯೇಕವಾಗಿ ಹೇಳ ಬೇಕಾದುದಿಲ್ಲವು. ॥೩೨॥

ಸತ್ರಾಜಿತನ ಮಗಳಾದ ಸತ್ಯಭಾಮೆಯನ್ನು ಶ್ರೀಕೃಷ್ಣನು ಮದುವೆಮಾಡಿ ಕೊಂಡು ಸಂತೋಷದಿಂದ ಅವಳ ಇಷ್ಟಾನುಸಾರವಾಗಿ ಇದ್ದು ಸ್ವರ್ಗಲೋಕಕ್ಕೆ

ಯೋ ಭೀಮಜಾಂ ಹಿ ಹೃತವಾಞ್ಶಿಶುಪಾಲಕಾದೀ
ಞ್ಜಿತ್ವಾ ವಿಧಿಂ ನಿಖಿಲಧರ್ಮಕೃತಂ ವಿಧಿತ್ಸುಃ ।
ಜಗ್ರಾಹ ತಾಂ ನಿಜಬಲೇನ ಚ ಧರ್ಮಪತ್ನೀಂ
ಕೋಽಸೌ ವಿಧಿಃ ಪರಕಲತ್ರ ಹೃತೌ ವಿಜಾತಃ ॥೩೪॥

ಅಹಂಕಾರವಶಃ ಪ್ರಾಣೀ ಕರೋತಿ ಚ ಶುಭಾಶುಭಂ ।
ವಿಮೂಢೋ ಮೋಹಜಾಲೇನ ತತ್ಕೃತೇನಾಽತಿಪಾತಿನಾ ॥೩೫॥

---

ಹೋದನು. ಅಲ್ಲಿ ನಂದನವನದಲ್ಲಿ ಆ ಸತ್ಯಭಾಮೆಯೊಡನೆ ವಿಹಾರಮಾಡುತ್ತಾ ಇದ್ದು, ಸತ್ಯಭಾಮೆಯ ಮನೆಯಲ್ಲಿ ಆಭರಣಪ್ರಾಯವಾಗಿದ್ದ ಕಲ್ಪವೃಕ್ಷವನ್ನು ಕೃಷ್ಣನು ಇಂದ್ರನೊಡನೆ ಯುದ್ಧಮಾಡಿ ಅಪಹರಿಸಿ ತಂದನು. ||೩೩||

ಯಾವ ಕೃಷ್ಣನು, ಭೀಮಭೂಪಾಲನ ಮಗಳಾದ ರುಕ್ಮಿಣಿಯು ಶಿಶುಪಾಲನನ್ನು ಸ್ವಯಂವರಮಾಡಬೇಕಾಗಿರುವಾಗ ಆ ಶಿಶುಪಾಲನನ್ನೂ ಅವನ ಸಂಬಂಧಿಗಳಾದ ಇತರ ರಾಜರನ್ನೂ ಸಹ ಪರಾಕ್ರಮದಿಂದ ಗೆದ್ದು ತೆಗೆದುಕೊಂಡು ಬಂದನು. ಆ ರುಕ್ಮಿಣಿಯನ್ನು ತನ್ನ ಸಾಮರ್ಥ್ಯದಿಂದ ತಂದನಂತರ ತಾನು ಅವಳನ್ನು ಧರ್ಮಪತ್ನಿಯನ್ನಾಗಿ ಮಾಡಿಕೊಂಡನು. ಶಿಶುಪಾಲನಿಗೆ ಮದುವೆಯಾಗಬೇಕಾದ ನಿಯಮವು ಇದ್ದಿತು. ಲೋಕದ ಜನರೆಲ್ಲರಿಗೂ ಧರ್ಮಪ್ರವರ್ತಕನಾಗಿರುವ ಶ್ರೀಕೃಷ್ಣನು ಶಿಶುಪಾಲನಿಂದ ವರಿಸಲ್ಪಟ್ಟ ರುಕ್ಮಿಣಿಯನ್ನು ಹರಣಮಾಡಿದ್ದು, ಆ ನಿಯಮವನ್ನು ನಾಶಪಡಿಸಿದ ಪ್ರಯುಕ್ತ ಅಧರ್ಮವಾಯಿತು. ಈ ಅಧರ್ಮಾಚರಣೆಯನ್ನು ಮಾಡಿ ಸ್ತ್ರೀಜಿತನಾಗಿ ಭೋಗಪಡುವುದರಲ್ಲಿ, ಸ್ವತಂತ್ರನಾಗಿ ಧೀರನಾಗಿರುವ ಯಾವ ಮನುಷ್ಯನೂ ಪ್ರವರ್ತಿಸುವುದಿಲ್ಲ. ಆದುದರಿಂದ ದೇವಿಯ ಅಧೀನರಾಗಿ ರಾಮಕೃಷ್ಣಾದಿಗಳು ಇರುವುದರಿಂದ ಈ ಕೆಲಸಗಳು ದೇವಿಯ ಪ್ರೇರಣೆಯಿಂದ ನಡೆದುವು. ||೩೪||

ಪ್ರಾಣಿ ಸಾಮಾನ್ಯವೂ ಅಹಂಕಾರಕ್ಕೆ ಅಧೀನವಾಗಿ ಒಳ್ಳೆಯದನ್ನೂ ಕೆಟ್ಟದ್ದನ್ನೂ ಸಹ ಮಾಡುವುದು ಸ್ವಾಭಾವಿಕವಾದುದು. ಹೀಗಿರುವಾಗ ಮಾಧವನೂ ಅಹಂಕಾರದಿಂದ ಅಜ್ಞಾನವುಳ್ಳವನಾಗಿ ದಾರಿತಪ್ಪಿ ನಡೆಯುವವನಾಗಿ ಮೂಢನಾಗಿರುವನು. ||೩೫||

**ಅಹಂಕಾರಾದ್ಧಿ ಸಂಜಾತಮಿದಂ ಸ್ಥಾವರಜಂಗಮಮ್ ।**
**ಮೂಲಾದ್ಧರಿಹರಾದೀನಾಮುಗ್ರಾತ್ಪ್ರಕೃತಿಸಂಭವಾತ್ ॥೩೬॥**

**ಅಹಂಕಾರಪರಿತ್ಯಕ್ತೋ ಯದಾ ಭವತಿ ಪದ್ಮಜಃ ।**
**ತದಾ ವಿಮುಕ್ತೋ ಭವತಿ ನೋ ಚೇತ್ಸಂಸಾರಕರ್ಮಕೃತ್ ॥೩೭॥**

**ತನ್ಮುಕ್ತಸ್ತು ವಿಮುಕ್ತೋ ಹಿ ಬದ್ಧಸ್ತದ್ವಶತಾಂ ಗತಃ ।**
**ನ ನಾರೀ ನ ಧನಂ ಗೇಹಂ ನ ಪುತ್ರಾ ನ ಸಹೋದರಾಃ ॥೩೮॥**

**ಬಂಧನಂ ಪ್ರಾಣಿನಾಂ ರಾಜನ್ ಅಹಂಕಾರಸ್ತು ಬಂಧಕಃ ।**
**ಅಹಂ ಕರ್ತಾ ಮಯಾ ಚೇದಂ ಕೃತಂ ಕಾರ್ಯಂ ಬಲೀಯಸಾ ॥೩೯॥**

**ಕರಿಷ್ಯಾಮಿ ಕರೋಮ್ಯೇವಂ ಸ್ವಯಂ ಬಧ್ನಾತಿ ಪ್ರಾಣಭೃತ್ ।**
**ಕಾರಣೇನ ವಿನಾ ಕಾರ್ಯಂ ನ ಸಂಭವತಿ ಕರ್ಹಿಚಿತ್ ॥೪೦॥**

---

ವಿಷ್ಣು, ಶಿವ ಇವರೇ ಮೊದಲಾದ ದೇವತೆಗಳಿಗೂ ಕಾರಣವಾದ ಪ್ರಕೃತಿಯಿಂದ ಹುಟ್ಟಿದ ವಿರುದ್ಧಕಾರ್ಯಕರವಾದ ಅಹಂಕಾರದಿಂದ ಈ ಸ್ಥಿರಚರರೂಪವಾದ ಜಗತ್ತೆಲ್ಲವೂ ಹುಟ್ಟಿರುತ್ತದೆ. ॥೩೬॥

ಬ್ರಹ್ಮನು ಯಾವಾಗ ಅಹಂಕಾರದಿಂದ ಬಿಡಲ್ಪಡುವನೋ ಆಗ ಅವನು ಮುಕ್ತನಾಗುವನು. ಇಲ್ಲದಿದ್ದರೆ ಅವನೂ ಈ ಸಂಸಾರದ ಕೆಲಸಗಳನ್ನು ಮಾಡುವವನಾಗಿರುತ್ತಾನೆ. ॥೩೭॥

ಅಹಂಕಾರದಿಂದ ಬಿಡುಗಡೆಯನ್ನು ಹೊಂದಿದವನು ಮುಕ್ತನು. ಅಹಂಕಾರಕ್ಕೆ ಅಧೀನನಾದವನು ಬದ್ಧನು. ಹೆಂಗಸರು, ಧನವು, ಮನೆಯು, ಮಕ್ಕಳು, ಅಣ್ಣ ತಮ್ಮಂದಿರು ಇವರುಗಳಿಂದ ಬಂಧನವೂ ಮೋಕ್ಷವೂ ಉಂಟಾಗುವುದಿಲ್ಲವು. ॥೩೮॥

ಎಲೈ ರಾಜನೇ, ಮತ್ತೇನೆಂದರೆ ಪ್ರಾಣಿಗಳಿಗೆ ಅಹಂಕಾರವು ಬಂಧನವನ್ನುಂಟು ಮಾಡುವುದು. ನಾನೇ ಕರ್ತೃವು; ಬಲಶಾಲಿಯಾದ ನನ್ನಿಂದ ಈ ಕಾರ್ಯವು ಮಾಡಲ್ಪಟ್ಟಿತು. ಈ ಕೆಲಸವನ್ನು ನಾನು ಮಾಡುವೆನು; ಮತ್ತು ಹೀಗೆಯೇ ಮಾಡುತ್ತೇನೆ ಎಂದು ಮುಂತಾದ ಅಹಂಭಾವದಿಂದಲೇ ಪ್ರಾಣಿಯು ಬಂಧನದಲ್ಲಿ ತಾನಾಗಿಯೇ ಸಿಕ್ಕಿಕೊಳ್ಳುತ್ತಾನೆ. ॥೩೯॥

ಏಕೆಂದರೆ ಕಾರಣವಿಲ್ಲದೆ ಕಾರ್ಯವು ಎಂದಿಗೂ ಉಂಟಾಗುವುದಿಲ್ಲವು. ಹೇಗೆಂದರೆ ಮಣ್ಣಿನ ಉಂಡೆಯಿಲ್ಲದೆ ಘಟವು ಉಂಟಾಗುವುದಿಲ್ಲವು. ॥೪೦॥

ಯಥಾ ನ ದೃಶ್ಯತೇ ಜಾತೋ ಮೃತ್ಪಿಂಡೇನ ವಿನಾಘಟಃ ।
ವಿಷ್ಣುಃ ಪಾಲಯಿತಾ ವಿಶ್ವಸ್ಯಾಹಂಕಾರಸಮನ್ವಿತಃ ॥೪೧॥

ಅನ್ಯಥಾ ಸರ್ವದಾ ಚಿಂತಾಂಬುಧೌ ಮಗ್ನಃ ಕಥಂ ಭವೇತ್ ।
ಅಹಂಕಾರವಿಮುಕ್ತಸ್ತು ಯದಾ ಭವತಿ ಮಾನವಃ ॥೪೨॥

ಅವತಾರಪ್ರವಾಹೇಷು ಕಥಂ ಮಜ್ಜೇಚ್ಛುಭಾಶಯಃ ।
ಮೋಹಮೂಲಮಹಂಕಾರಃ ಸಂಸಾರಸ್ತತ್ಸಮುದ್ಭವಃ ॥೪೩॥

ಅಹಂಕಾರವಿಹೀನಾನಾಂ ನ ಮೋಹೋ ನ ಚ ಸಂಸೃತಿಃ ।
ತ್ರಿವಿಧಃ ಪುರುಷಃ ಪ್ರೋಕ್ತಃ ಸಾತ್ತ್ವಿಕೋ ರಾಜಸಸ್ತಥಾ ॥೪೪॥

ತಾಮಸಸ್ತು ಮಹಾರಾಜ ಬ್ರಹ್ಮವಿಷ್ಣುಶಿವಾದಿಷು ।
ತ್ರಿವಿಧಸ್ತ್ರಿಷು ರಾಜೇಂದ್ರ ಕಾಜೇಶಾದಿಷು ಸರ್ವದಾ ॥೪೫॥

---

ಆದುದರಿಂದ ವಿಷ್ಣುವೂ ಅಹಂಕಾರದಿಂದ ಕೂಡಿದವನಾಗಿ ಪ್ರಪಂಚವನ್ನು ರಕ್ಷಿಸುವನು. ವಿಷ್ಣುವಿಗೆ ಅಹಂಕಾರವಿಲ್ಲದಿದ್ದರೆ ಯಾವಾಗಲೂ ಚಿಂತೆಯೆಂಬ ಸಮುದ್ರ ದಲ್ಲಿ ಹೇಗೆತಾನೇ ಮುಳುಗಿರುವನು ? ॥೪೧॥

ಮನುಷ್ಯನು ಅಹಂಕಾರದಿಂದ ಯಾವಾಗ ಬಿಡಲ್ಪಡುವನೋ ಆಗ, ಅವನು ನಿಃಶ್ರೇಯಸಮಾರ್ಗದಲ್ಲಿ ತೊಡಗಿರುವ ಮನಸ್ಸುಳ್ಳವನಾಗಿರುವುದರಿಂದ ಅಂಥವನು ಒಂದಾಗುತ್ತಲೊಂದರಂತೆ ಪ್ರಾಪ್ತವಾಗುವ ಜನ್ಮಪರಂಪರೆಯಲ್ಲಿ ಹೇಗೆತಾನೇ ಮುಳಿಗಿದ್ದಾನು ? ॥೪೨॥

ಅಹಂಕಾರಕ್ಕೆ ಅಜ್ಞಾನವು ಕಾರಣವಾಗಿರುವುದು. ಸಂಸಾರವೂ ಅಹಂಕಾರ ದಿಂದ ಹುಟ್ಟತಕ್ಕದ್ದು. ಆದುದರಿಂದ ಅಹಂಕಾರದಿಂದ ಬಿಡಲ್ಪಟ್ಟವರಿಗೆ ಅಜ್ಞಾನವೂ ಇರುವುದಿಲ್ಲವು, ಸಂಸಾರವೂ ಇರುವುದಿಲ್ಲವು. ॥೪೩॥

ಎಲೈ ಜನಮೇಜಯರಾಜನೇ, ಸಾತ್ತ್ವಿಕ, ರಾಜಸ, ತಾಮಸ, ಎಂಬ ಮೂರು ವಿಧವಾದ ಭೇದಗಳಿಂದ ಕೂಡಿದ ಅಹಂಕಾರಕ್ಕೆ ಅನುಸಾರವಾಗಿ ಬ್ರಹ್ಮ-ವಿಷ್ಣು-ಶಿವನೇ ಮೊದಲಾದ ಪ್ರಾಣಿಗಳು ತಮ್ಮಲ್ಲಿರುವ ಆಯಾಯ ಗುಣಗಳಿಗೆ ತಕ್ಕಂತೆ ಸಾತ್ತ್ವಿಕ ರಾಜಸ ತಾಮಸರೆಂದು ಮೂರು ವಿಧವಾಗಿರುವರು. ॥೪೪॥

ಅಹಂಕಾರಃ ಸದಾ ಪ್ರೋಕ್ತೋ ಮುನಿಭಿಸ್ತತ್ತ್ವದರ್ಶಿಭಿಃ ।
ಅಹಂಕಾರೇಣ ತೇನೈವ ಬದ್ಧಾ ಏತೇ ನ ಸಂಶಯಃ ॥೪೬॥

ಮಾಯಾವಿಮೋಹಿತಾ ಮಂದಾಃ ಪ್ರವದಂತಿ ಮನೀಷಿಣಃ ।
ಕರೋತಿ ಸ್ವೇಚ್ಛಯಾ ವಿಷ್ಣುರವತಾರಾನನೇಕಶಃ ॥೪೭॥

ಮಂದೋಽಪಿ ದುಃಖಗಹನೇ ಗರ್ಭವಾಸೇಽತಿ ಸಂಕಟೇ ।
ನ ಕರೋತಿ ಮತಿಂ ವಿದ್ವಾನ್ಕಥಂ ಕುರ್ಯಾತ್ಸ ಚಕ್ರಭೃತ್ ॥೪೮॥

ಕೌಸಲ್ಯಾದೇವಕೀಗರ್ಭೇ ವಿಣ್ಮೂತ್ರಮಲಸಮಾಕುಲೇ ।
ಸ್ವೇಚ್ಛಯಾ ಪ್ರವದಂತ್ಯದ್ಧಾ ಗತೋ ಹಿ ಮಧುಸೂದನಃ ॥೪೯॥

ವೈಕುಂಠಸದನಂ ತ್ಯಕ್ತ್ವಾ ಗರ್ಭವಾಸೇ ಸುಖಂ ನು ಕಿಂ ।
ಚಿಂತಾಕೋಟಿಸಮುತ್ಥಾನೇ ದುಃಖದೇ ವಿಷಸಂಮಿತೇ ॥೫೦॥

---

ಎಲೈ ರಾಜೋತ್ತಮನೇ ಕೇಳು, ಬ್ರಹ್ಮ ವಿಷ್ಣು ಶಿವನೇ ಮೊದಲಾದವರಲ್ಲಿಯೂ ಅಹಂಕಾರವು ಮೂರು ಬಗೆಯಾಗಿದೆ ಎಂದು ತತ್ತ್ವಜ್ಞಾನಿಗಳಿಂದ ಹೇಳಲ್ಪಟ್ಟಿರುತ್ತದೆ. ಆ ಅಹಂಕಾರಕ್ಕೆ ಅಧೀನರಾಗಿ ಅದರಿಂದಲೇ ಅವರೂ ಬದ್ಧರಾಗಿರುತ್ತಾರೆ. ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲವು. ॥೪೫-೪೬॥

ಬುದ್ಧಿವಂತರಾದವರೂ ಸಹ ಮಾಯೆಯಿಂದ ಮೋಹಿತರಾಗಿ–ದಡ್ಡರಾಗಿರುತ್ತಾರೆ. ಹಾಗಿದ್ದರೂ ವಿಷ್ಣುವು, ಅನೇಕ ಅವತಾರಗಳನ್ನು ತನ್ನ ಸ್ವಂತ ಇಚ್ಛೆಯಿಂದ ಮಾಡುತ್ತಾನೆಂದು ಹೇಳುವರು. ಇದು ಸರಿಯಲ್ಲ. ॥೪೭॥

ದಡ್ಡನೂ ಕೂಡ ದುಃಖದಿಂದ ತುಂಬಿ ಅತಿ ಸಂಕಟಕರವಾದ ಗರ್ಭವಾಸದಲ್ಲಿ ಇರಲು ಇಷ್ಟಪಡದಿರುವಾಗ, ಬುದ್ಧಿಶಾಲಿಯಾದ ಆ ಚಕ್ರಪ್ರಾಣಿಯು ಎಂದರೆ ವಿಷ್ಣುವು ಹೇಗೆತಾನೆ ಆ ದುಃಖವನ್ನನುಭವಿಸಲು ಇಷ್ಟಪಡುವನು ? ಆದುದರಿಂದ ವಿಷ್ಣುವು ಸ್ವೇಚ್ಛೆಯಿಂದ ಅವತಾರಗಳನ್ನು ಮಾಡುತ್ತಾನೆಂಬುವುದು ನಿಜವಲ್ಲವು. ॥೪೮॥

ಕೌಸಲ್ಯಾ ಮತ್ತು ದೇವಕೀದೇವಿಯರ, ಮಲಮೂತ್ರಾದಿಗಳಿಂದ ಕೂಡಿ ಅಸಹ್ಯವಾಗಿರುವ ಗರ್ಭವಾಸದಲ್ಲಿ ವಿಷ್ಣುವು ತನ್ನ ಇಚ್ಛೆಯಿಂದ ಇದ್ದನೆಂದು ಹೇಳುವರು. ಇದು ಆಶ್ಚರ್ಯಕರವು. ॥೪೯॥

ಅನೇಕ ವ್ಯಸನಗಳಿಗೆ ಉತ್ಪತ್ತಿಸ್ಥಾನವಾಗಿಯೂ, ವಿಷಕ್ಕೆ ಸಮಾನವಾಗಿಯೂ,

**ತಪಸ್ತಪ್ತ್ವಾ ಕ್ರತೂನ್ಕೃತ್ವಾ ದತ್ವಾ ದಾನಾನ್ಯನೇಕಶಃ ।**
**ನ ವಾಂಛಂತಿ ಯತೋ ಲೋಕಾ ಗರ್ಭವಾಸಂ ಸುದುಃಖದಂ ॥೫೧॥**

**ಸ ಕಥಂ ಭಗವಾನ್ವಿಷ್ಣುಃ ಸ್ವವಶಶ್ಚೇಜ್ಜನಾರ್ದನಃ ।**
**ಗರ್ಭವಾಸರುಚಿರ್ಭೂಯಾದ್ಭವೇತ್ಸ್ವವಶತಾ ಯದಿ ॥೫೨॥**

**ಜಾನೀಹಿ ತ್ವಂ ಮಹಾರಾಜ ಯೋಗಮಾಯಾವಶೇ ಜಗತ್ ।**
**ಬ್ರಹ್ಮಾದಿಸ್ತಂಬಪರ್ಯಂತಂ ದೇವಮಾನುಷತಿರ್ಯಗಂ ॥೫೩॥**

**ಮಾಯಾತಂತ್ರೀನಿಬದ್ಧಾ ಯೇ ಬ್ರಹ್ಮವಿಷ್ಣುಹರಾದಯಃ ।**
**ಭ್ರಮಂತಿ ಬಂಧಮಾಯಾಂತಿ ಲೀಲಯಾ ಚೋರ್ಣನಾಭಿವತ್ ॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ಪ್ರಥಮೋಽಧ್ಯಾಯಃ**

---

ದುಃಖವನ್ನು ಉಂಟುಮಾಡುವುದಾಗಿಯೂ ಇರುವ ಗರ್ಭಕೋಶದಲ್ಲಿ ವೈಕುಂಠವೆಂಬ ತನ್ನ ಸುಖಸ್ಥಾನವನ್ನು ಬಿಟ್ಟು, ವಾಸಿಸುವಷ್ಟು ಸುಖವುಂಟೇ ? ॥೫೦॥

ಜನಗಳು, ಅತಿ ದುಃಖಕರವಾದ ಗರ್ಭವಾಸವು ತಮಗೆ ಉಂಟಾಗದಿರಲೆಂದೇ ಅಪೇಕ್ಷಿಸಿ ಅದಕ್ಕಾಗಿ ತಪಸ್ಸನ್ನು ಮಾಡುವರು, ಯಜ್ಞಗಳನ್ನು ಮತ್ತು ಯಾಗಗಳನ್ನು ಮಾಡುವರು ಮತ್ತು ಅನೇಕ ದಾನಗಳನ್ನೂ ಕೊಡುವರು. ॥೫೧॥

ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಸ್ವತಂತ್ರನಾಗಿದ್ದಲ್ಲಿ ಇಷ್ಟರಮಟ್ಟಿಗೆ ದುಃಖದಿಂದ ಕೂಡಿರುವ ಗರ್ಭವಾಸವನ್ನು ಹೇಗೆತಾನೇ ಅಪೇಕ್ಷಿಸಿಯಾನು ? ॥೫೨॥

ಎಲೈ ಮಹಾರಾಜನೇ, ಬ್ರಹ್ಮನಿಂದ ಹುಲ್ಲುಕಡ್ಡಿಯವರೆಗೂ ಇರುವ, ದೇವತೆಗಳು, ಮನುಷ್ಯರು, ತಿರ್ಯಕ್ಪ್ರಾಣಿಗಳು ಇವರಿಂದ ಕೂಡಿದ ಈ ಜಗತ್ತು ಯೋಗಮಾಯೆಯ ವಶದಲ್ಲಿ ಇದೆಯೆಂದು ನೀನು ತಿಳಿಯುವವನಾಗು. ॥೫೩॥

ಜೇಡರ ಹುಳುವು ಲೀಲೆಯಿಂದ ತನ್ನಷ್ಟಕ್ಕೆ ತಾನೇ ಬಂಧವನ್ನು ಹೊಂದುವಂತೆ ಬ್ರಹ್ಮವಿಷ್ಣುಮಹೇಶ್ವರರೇ ಮೊದಲಾದವರು ಆ ಮಹಾಮಾಯೆಯ ತಂತಿಯಿಂದ ಪೋಣಿಸಿ ಕಟ್ಟಲ್ಪಟ್ಟಿರುವವರಾಗಿ ಈ ಸಂಸಾರದಲ್ಲಿ ಸುತ್ತುತ್ತಿರುತ್ತಾರೆ. ಮತ್ತು ಬಂಧವನ್ನು ಹೊಂದುತ್ತಾರೆ. ॥೫೪॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

|| ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ರಾಜೋವಾಚ ||

**ಯೋಗೇಶ್ವರ್ಯಾಃ ಪ್ರಭಾವೋಽಯಂ ಕಥಿತಶ್ಚಾತಿವಿಸ್ತರಾತ್ ।**
**ಬ್ರೂಹಿ ತಚ್ಚರಿತಂ ಸ್ವಾಮಿಞ್ಛ್ರೋತುಂ ಕೌತೂಹಲಂ ಮಮ ॥೧॥**

**ಮಹಾದೇವೀಪ್ರಭಾವಂ ವೈ ಶ್ರೋತುಂ ಕೋ ನಾಭಿವಾಂಛತಿ ।**
**ಯೋ ಜಾನಾತಿ ಜಗತ್ಸರ್ವಂ ತದುತ್ಪನ್ನಂ ಚರಾಚರಂ ॥೨॥**

|| ವ್ಯಾಸ ಉವಾಚ ||

**ಶೃಣು ರಾಜನ್ಪ್ರವಕ್ಷ್ಯಾಮಿ ವಿಸ್ತರೇಣ ಮಹಾಮತೇ ।**
**ಶ್ರದ್ಧಧಾನಾಯ ಶಾಂತಾಯ ನ ಬ್ರೂಯಾತ್ಸ ತು ಮಂದಧೀಃ ॥೩॥**

---

ಜನಮೇಜಯರಾಜನು ಹೇಳಿದನು—ಓ ಸ್ವಾಮಿಯೇ, ಯೋಗೇಶ್ವರಿಯಾದ ದೇವಿಯ ಮಹಿಮೆಯು ನಿನ್ನಿಂದ ವಿಸ್ತಾರವಾಗಿ ಹೇಳಲ್ಪಟ್ಟಿತು. ಈಗ ಆ ದೇವಿಯ ಚರಿತ್ರೆಯನ್ನು ವಿಸ್ತಾರವಾಗಿ ಹೇಳು. ಕೇಳುವುದಕ್ಕೆ ನನಗೆ ತುಂಬ ಕುತೂಹಲ ವಿರುತ್ತದೆ. ||೧||

ಮಹಾದೇವಿಯ ಮಹಿಮೆಯನ್ನು ಕೇಳಲು ಯಾರಿಗೆ ತಾನೇ ಆಸೆಯುಂಟಾಗುವುದಿಲ್ಲವು? ಸ್ಥಾವರಜಂಗಮಪ್ರಾಣಿಗಳಿಂದ ಕೂಡಿರುವ ಈ ಜಗತ್ತೆಲ್ಲವೂ ಆ ದೇವಿಯಿಂದ ಉತ್ಪನ್ನವಾಗಿರುವುದೆಂದು ತಿಳಿದಿರುವವನು ಯಾವ ಪುರುಷನುತಾನೇ ಆ ದೇವಿಯ ಮಹಿಮೆಯನ್ನು ಕೇಳಲು ಇಷ್ಟಪಡುವುದಿಲ್ಲ? ||೨||

ವ್ಯಾಸಋಷಿಯು ಹೇಳಿದನು—ಬುದ್ಧಿಶಾಲಿಯಾದ ಎಲೈ ರಾಜನೇ, ಕೇಳು.

ಪುರಾಯುದ್ಧಮಭೂದ್ಘೋರಂ ದೇವದಾನವಸೇನಯೋಃ ।
ಪೃಥಿವ್ಯಾಂ ಪೃಥಿವೀಪಾಲ ಮಹಿಷಾಖ್ಯೇ ಮಹೀಪತೌ ॥೪॥

ಮಹಿಷೋ ನಾಮ ರಾಜೇಂದ್ರ ಚಕಾರ ತಪ ಉತ್ತಮಂ ।
ಗತ್ವಾ ಹೇಮಗಿರೌ ಘೋರಂ ದೇವವಿಸ್ಮಯಕಾರಕಂ ॥೫॥

ವರ್ಷಾಣಾಮಯುತಂ ಪೂರ್ಣಂ ಚಿಂತಯನ್ ಹೃದಿ ದೇವತಾಂ ।
ತಸ್ಯ ತುಷ್ಟೋ ಮಹಾರಾಜ ಬ್ರಹ್ಮಾ ಲೋಕಪಿತಾಮಹಃ ॥೬॥

ತತ್ರಾಽಽಗತ್ಯಾಽಬ್ರವೀದ್ವಾಕ್ಯಂ ಹಂಸಾರೂಢಶ್ಚತುರ್ಮುಖಃ ।
ವರಂ ವರಯ ಧರ್ಮಾತ್ಮನ್ದದಾಮಿ ತವ ವಾಂಛಿತಂ ॥೭॥

---

ವಿಸ್ತಾರವಾಗಿ ದೇವಿಯ ಚರಿತ್ರೆಯನ್ನು ಹೇಳುತ್ತೇನೆ. ಶ್ರದ್ಧೆಯುಳ್ಳವನಿಗೂ ಶಾಂತ ಮನಸ್ಕನಿಗೂ ಯಾವ ಪುರುಷನು ಅದನ್ನು ಹೇಳುವುದಿಲ್ಲವೋ ಅವನು ಮಂದ ಬುದ್ಧಿಯುಳ್ಳವನೇ ಸರಿ. ||೩||

ಎಲೈ ರಾಜನೇ, ಪೂರ್ವದಲ್ಲಿ ಮಹಿಷನೆಂಬ ದೊರೆಯು ಭೂಮಿಯನ್ನು ಆಳುತ್ತಿರುವಾಗ ದೇವತೆಗಳ ಸೇನೆಗೂ ರಾಕ್ಷಸರ ಸೇನೆಗೂ ಭಯಂಕರವಾದ ಯುದ್ಧವು ಭೂಲೋಕದಲ್ಲಿ ನಡೆಯಿತು. ||೪||

ಎಲೈ ರಾಜಶ್ರೇಷ್ಠನೇ, ಮಹಿಷನೆಂಬುವನು ಮೇರುಪರ್ವತಕ್ಕೆ ಹೋಗಿ ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡುವ ಉಗ್ರವಾದ ತಪಸ್ಸನ್ನು ಮಾಡಿದನು. ||೫||

ಎಲೈ ಮಹಾರಾಜನೇ ಕೇಳು—ಮಹಿಷಾಸುರನು ಮನಸ್ಸಿನಲ್ಲಿ ಇಷ್ಟದೇವತೆಯ ಧ್ಯಾನವನ್ನು ಮಾಡುತ್ತಾ ಹತ್ತು ಸಾವಿರ ವರ್ಷಗಳು ಪೂರ್ತಿಯಾಗುವವರೆಗೂ ತಪಸ್ಸನ್ನು ಮಾಡಿದನು. ಲೋಕಪಿತಾಮಹನೆನಿಸಿದ ಬ್ರಹ್ಮನು ಅವನ ತಪಸ್ಸಿನಿಂದ ಸಂತುಷ್ಟನಾದನು. ||೬||

ಆದುದರಿಂದ ಆ ಬ್ರಹ್ಮನು ತನ್ನ ವಾಹನವಾದ ಹಂಸದ ಮೇಲೆ ಕುಳಿತುಕೊಂಡು ಮಹಿಷಾಸುರನ ಸಮೀಪಕ್ಕೆ ಬಂದು ಅವನನ್ನು ಕುರಿತು—ಎಲೈ ಧರ್ಮಾತ್ಮನೇ, ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಬೇಡು, ಕೊಡುವೆನು, ಎಂದು ಹೇಳಿದನು. ||೭||

|| ಮಹಿಷ ಉವಾಚ ||

**ಅಮರತ್ವಂ ದೇವದೇವ ವಾಂಛಾಮಿ ದ್ರುಹಿಣ ಪ್ರಭೋ ।**
**ಯಥಾ ಮೃತ್ಯುಭಯಂ ನ ಸ್ಯಾತ್ತಥಾ ಕುರು ಪಿತಾಮಹ ||೮||**

|| ಬ್ರಹ್ಮೋವಾಚ ||

**ಉತ್ಪನ್ನಸ್ಯ ಧ್ರುವಂ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।**
**ಸರ್ವಥಾ ಮರಣೋತ್ಪತ್ತೀ ಸರ್ವೇಷಾಂ ಪ್ರಾಣಿನಾಂ ಕಿಲ ||೯||**

**ನಾಶಃ ಕಾಲೇನ ಸರ್ವೇಷಾಂ ಪ್ರಾಣಿನಾಂ ದೈತ್ಯಪುಂಗವ ।**
**ಮಹಾಮಹೀಧರಾಣಾಂ ಚ ಸಮುದ್ರಾಣಾಂ ಚ ಸರ್ವಥಾ ||೧೦||**

**ಏಕಂ ಸ್ಥಾನಂ ಪರಿತ್ಯಜ್ಯ ಮರಣಸ್ಯ ಮಹೀಪತೇ ।**
**ಪ್ರಬ್ರೂಹಿ ತಂ ವರಂ ಸಾಧೋ ಯಸ್ತೇ ಮನಸಿ ವರ್ತತೇ ||೧೧||**

---

ಮಹಿಷಾಸುರನು ಹೇಳಿದನು—ದೇವತೆಗಳಿಗೆ ದೇವನಾಗಿರುವ ಓ ಸ್ವಾಮಿಯೇ, ನಾನು ದೇವತೆಯಾಗಿರಬೇಕು ಎಂದು ಅಪೇಕ್ಷಿಸುತ್ತೇನೆ. ಓ ಪಿತಾಮಹನೇ ನನಗೆ ಮರಣಭಯವು ಉಂಟಾಗದಿರುವಂತೆ ತಕ್ಕ ಅನುಗ್ರಹವನ್ನು ಮಾಡು. ಇದೇ ನಾನು ಕೇಳುವ ವರವು. ||೮||

ಬ್ರಹ್ಮನು ಹೇಳಿದನು—ಓ ಮಹಿಷಾಸುರನೇ, ಹುಟ್ಟಿದವರಿಗೆ ಮರಣವೂ, ಮೃತರಾದವರಿಗೆ ಪುನಃ ಜನ್ಮವೂ ಸಹ ನಿಶ್ಚಯವಾಗಿಯೂ ಅನಿವಾರ್ಯವಾಗಿಯೂ ಸಂಭವಿಸುವುದು. ಎಲ್ಲ ಪ್ರಾಣಿಗಳಿಗೂ ಜನನ ಮರಣಗಳು ತಪ್ಪದೆ ಉಂಟಾಗಿಯೇ ಆಗುತ್ತವೆ. ಇದು ಪ್ರಕೃತಿನಿಯಮವು. ||೯||

ಎಲೈ ರಾಕ್ಷಸಶ್ರೇಷ್ಠನೇ ಕೇಳು—ಸಮಸ್ತ ಪ್ರಾಣಿಗಳೂ, ಮಹಾಮಹಾ ಪರ್ವತಗಳೂ, ಸಮುದ್ರಗಳೂ ಸಹ ಆಯಾಯ ಕಾಲಗಳಲ್ಲಿ ನಾಶವನ್ನೈದುವುವು. ಆದುದರಿಂದ ನಾಶವೆಂಬುದು ಅಪರಿಹಾರ್ಯವಾದುದು. ||೧೦||

ಆದುದರಿಂದ ಮರಣವುಂಟಾಗದಿರಲೆಂಬ ಒಂದು ವರವನ್ನು ಬಿಟ್ಟು ಬೇರೆ ವರವನ್ನು ಕೇಳು. ಎಲೈ ಸತ್ಪುರುಷನೇ, ನಿನ್ನ ಮನಸ್ಸಿನಲ್ಲಿ ಇರುವ ಇಷ್ಟವನ್ನು ತಿಳಿಸು. ||೧೧||

|| ಮಹಿಷ ಉವಾಚ ||

**ನ ದೇವಾನ್ಮಾನುಷಾದ್ದೈತ್ಯಾನ್ಮರಣಂ ಮೇ ಪಿತಾಮಹ ।**
**ಪುರುಷಾನ್ನ ಚ ಮೇಮೃತ್ಯು ರ್ಯೋಷಾ ಮಾಂ ಕಾ ಹನಿಷ್ಯತಿ ॥೧೨॥**

**ತಸ್ಮಾನ್ಮೇ ಮರಣಂ ನೂನಂ ಕಾಮಿನ್ಯಾಃ ಕುರು ಪದ್ಮಜ ।**
**ಅಬಲಾ ಹಂತ ಮಾಂ ಹಂತುಂ ಕಥಂ ಶಕ್ತಾ ಭವಿಷ್ಯತಿ ॥೧೩॥**

|| ಬ್ರಹ್ಮೋವಾಚ ||

**ಯದಾ ಕದಾಪಿ ದೈತ್ಯೇಂದ್ರ ನಾರ್ಯಾಸ್ತೇ ಮರಣಂ ಧ್ರುವಂ ।**
**ನ ನರೇಭ್ಯೋ ಮಹಾಭಾಗ ಮೃತಿಸ್ತೇ ಮಹಿಷಾಸುರ ॥೧೪॥**

|| ವ್ಯಾಸ ಉವಾಚ ||

**ಏವಂ ದತ್ವಾ ವರಂ ತಸ್ಮೈ ಯಯೌ ಬ್ರಹ್ಮಾ ನಿಜಾಲಯಂ ।**
**ಸೋಽಪಿ ದೈತ್ಯವರಃ ಪ್ರಾಪ ನಿಜಂ ಸ್ಥಾನಂ ಮುದಾನ್ವಿತಃ ॥೧೫॥**

---

ಮಹಿಷಾಸುರನು ಹೇಳಿದನು–ಓ ಬ್ರಹ್ಮನೇ, ನನಗೆ, ದೇವತೆಗಳು, ದೈತ್ಯರು, ಮನುಷ್ಯರು ಇವರುಗಳಿಂದ ಮರಣವು ಉಂಟಾಗಬಾರದು. ಗಂಡಸರಿಂದ ನನಗೆ ಮರಣವಾಗದಿರಲಿ, ಸ್ತ್ರೀಯರು ದುರ್ಬಲರಾದ ಪ್ರಯುಕ್ತ, ಬಲಶಾಲಿಯಾದ ನನ್ನನ್ನು ಹೇಗೆ ಕೊಲ್ಲುವುದಕ್ಕೆ ಶಕ್ತರಾದಾರು? ಆದುದರಿಂದ ಸ್ತ್ರೀಯರಿಂದ ನನಗೆ ಮರಣವುಂಟಾಗುವಂತೆ ವರವನ್ನು ಕೊಡು. ||೧೨-೧೩||

ಬ್ರಹ್ಮನು ಹೇಳಿದನು- ನಿನಗೆ ಯಾವಾಗಲಾದರೂ ಹೆಂಗಸಿನಿಂದಲೇ ಮರಣವು ನಿಶ್ಚಯವಾಗಿಯೂ ಉಂಟಾಗುವುದು. ಎಲೈ ಶ್ರೇಷ್ಠನಾದ ಮಹಿಷಾಸುರನೇ, ನಿನಗೆ ಪುರುಷರಿಂದ ಮರಣವು ಉಂಟಾಗುವುದಿಲ್ಲವು. ||೧೪||

ವ್ಯಾಸಋಷಿಯು ಹೇಳಿದನು—ಬ್ರಹ್ಮನು ಆ ಮಹಿಷಾಸುರನಿಗೆ ಹೀಗೆ ವರವನ್ನು ಕೊಟ್ಟು ತನ್ನ ಸ್ಥಾನವಾದ ಸತ್ಯಲೋಕಕ್ಕೆ ಹೋದನು. ಆ ಮಹಿಷಾಸುರನೂ ಕೂಡ ಸಂತೋಷದಿಂದ ತನ್ನ ಮನೆಯನ್ನು ಸೇರಿದನು. ||೧೫||

|| ರಾಜೋವಾಚ ||

**ಮಹಿಷಃ ಕಸ್ಯ ಪುತ್ರೋಽಸೌ ಕಥಂ ಜಾತೋ ಮಹಾಬಲೀ ।**
**ಕಥಂ ಚ ಮಾಹಿಷಂ ರೂಪಂ ಪ್ರಾಪ್ತಂ ತೇನ ಮಹಾತ್ಮನಾ ||೧೬||**

|| ವ್ಯಾಸ ಉವಾಚ ||

**ದನೋಃ ಪುತ್ರೌ ಮಹಾರಾಜ ವಿಖ್ಯಾತೌ ಕ್ಷಿತಿಮಂಡಲೇ ।**
**ರಂಭಶ್ಚೈವ ಕರಂಭಶ್ಚ ದ್ವಾವಾಸ್ತಾಂ ದಾನವೋತ್ತಮೌ ||೧೭||**

**ತಾವಪುತ್ರೌ ಮಹಾರಾಜ ಪುತ್ರಾರ್ಥಂ ತೇಪತುಸ್ತಪಃ ।**
**ಬಹೂನ್ವರ್ಷಗಣಾನ್ಕಾಮಂ ಪುಣ್ಯೇಪಂಚನದೇ ಜಲೇ ||೧೮||**

**ಕರಂಭಸ್ತು ಜಲೇ ಮಗ್ನಶ್ಚಕಾರ ಪರಮಂ ತಪಃ ।**
**ವೃಕ್ಷಂ ರಸಾಲವಟಂ ಪ್ರಾಪ್ಯ ಸರಂಭೋಽಗ್ನಿಮಸೇವತ ||೧೯||**

---

ಜನಮೇಜಯರಾಜನು ಹೇಳಿದನು--ಆ ಮಹಿಷಾಸುರನು ಯಾರ ಮಗನು ? ಈ ಮಹಾಬಲಿಷ್ಠನು ಹೇಗೆ ಹುಟ್ಟಿದನು ? ಮಹಾಗಟ್ಟಿಗನಾದ ಇವನಿಗೆ ಮಹಿಷ ರೂಪವು ಹೇಗೆ ಬಂದಿತು ? ||೧೬||

ವ್ಯಾಸನು ಹೇಳಿದನು—ಎಲೈ ಜನಮೇಜಯರಾಜನೇ, ಕೇಳು. ಈ ಭೂಮಂಡಲದಲ್ಲಿ ದನುವಿನ ಮಕ್ಕಳಾದ ರಂಭ, ಕರಂಭ ಎಂಬ ಪ್ರಸಿದ್ಧರಾದ ಇಬ್ಬರು ರಾಕ್ಷಸಶ್ರೇಷ್ಠರು ಇದ್ದರು. ||೧೭||

ಅವರಿಬ್ಬರಿಗೂ ಬಹಳ ಕಾಲದವರೆಗೂ ಮಕ್ಕಳಿಲ್ಲದ್ದರಿಂದ, ಅವರು ಪಂಚ ನದವೆಂಬ ಕ್ಷೇತ್ರದಲ್ಲಿ ಮಕ್ಕಳಾಗಬೇಕೆಂದು ಬಹಳ ವರ್ಷಗಳು ತಪಸ್ಸನ್ನು ಮಾಡಿದರು. ||೧೮||

ಕರಂಭನು ನೀರಿನಲ್ಲಿ ಮುಳುಗಿಕೊಂಡು ಉತ್ತಮವಾದ ತಪಸ್ಸನ್ನು ಮಾಡಿ ದನು. ರಂಭನು ಆಲದ ಮರವನ್ನು ಆಶ್ರಯಿಸಿಕೊಂಡು ಅಗ್ನಿಮಧ್ಯದಲ್ಲಿ ನಿಂತು ಕೊಂಡು ತಪಸ್ಸನ್ನು ಮಾಡಿದನು. ||೧೯||

ಪಂಚಾಗ್ನಿಸಾಧನಾಸಕ್ತಃ ಸರಂಭಸ್ತು ಯದಾಽಭವತ್ ।
ಜ್ಞಾತ್ವಾ ಶಚೀಪತಿರ್ದುಃಖಮುದ್ಯಯೌ ದಾನವೌ ಪ್ರತಿ ॥೨೦॥

ಗತ್ವಾ ಪಂಚನದೇ ತತ್ರ ಗ್ರಾಹರೂಪಂ ಚಕಾರ ಹ ।
ವಾಸವಸ್ತು ಕರಂಭಂ ತಂ ತದಾ ಜಗ್ರಾಹ ಪಾದಯೋಃ ॥೨೧॥

ನಿಜಘಾನ ಚ ತಂ ದುಷ್ಟಂ ಕರಂಭಂ ವೃತ್ರಸೂದನಃ ।
ಭ್ರಾತರಂ ನಿಹತಂ ಶ್ರುತ್ವಾ ರಂಭಃ ಕೋಪಂ ಪರಂ ಗತಃ ॥೨೨॥

ಸ್ವಶೀರ್ಷಂ ಪಾವಕೇ ಹೋತುಮೈಚ್ಛಚ್ಛಿತ್ವಾ ಕರೇಣ ಹ ।
ಕೇಶಪಾಶೇ ಗೃಹೀತ್ವಾಽಽಶು ವಾಮೇನ ಕ್ರೋಧಸಂಯುತಃ ॥೨೩॥

ದಕ್ಷಿಣೇನ ಕರೇಣೋಗ್ರಂ ಗೃಹೀತ್ವಾ ಖಡ್ಗಮುತ್ತಮಂ ।
ಛಿನತ್ತಿ ಶೀರ್ಷಂ ತತ್ತಾವದ್ವಹ್ನಿನಾ ಪ್ರತಿಬೋಧಿತಃ ॥೨೪॥

---

ರಂಭನು ಯಾವಾಗ ಪಂಚಾಗ್ನಿಮಧ್ಯದಲ್ಲಿದ್ದುಕೊಂಡು ತಪಸ್ಸನ್ನು ಮಾಡಲುದ್ಯುಕ್ತನಾದನೋ ಆಗ ಇಂದ್ರನು ಇದನ್ನು ತಿಳಿದು ಈ ದಾನವರಿಬ್ಬರ ತಪಸ್ಸಿನ ವಿಷಯದಲ್ಲಿ ಆತಂಕದ ದುಃಖವನ್ನು ಹೊಂದಿದನು. ॥೨೦॥

ಆಗ ಇಂದ್ರನು ಪಂಚನದಕ್ಷೇತ್ರಕ್ಕೆ ಹೋಗಿ ಅಲ್ಲಿ ಮೊಸಳೆಯ ರೂಪವನ್ನು ಹೊಂದಿ, ನೀರಿನಲ್ಲಿ ಮುಳುಗಿ ತಪಸ್ಸನ್ನು ಮಾಡುತ್ತಿದ್ದ ಕರಂಭನ ಕಾಲುಗಳನ್ನು ಹಿಡಿದನು. ॥೨೧॥

ವೃತ್ರಾಸುರನನ್ನು ಕೊಂದ ಆ ಇಂದ್ರನು ಈ ದುಷ್ಟನಾದ ಕರಂಭನನ್ನೂ ಕೊಂದನು. ತನ್ನ ಅಣ್ಣನಾದ ಕರಂಭನು ಕೊಲ್ಲಲ್ಪಟ್ಟದ್ದನ್ನು ಕೇಳಿ ರಂಭನು ಬಹಳವಾಗಿ ಕೋಪಗೊಂಡನು. ॥೨೨॥

ರಂಭನು ಈರೀತಿಯಲ್ಲಿ ಕೋಪಗೊಂಡು ತನ್ನ ತಲೆಯನ್ನೇ ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡುವೆನೆಂದು ಬಗೆದು ತನ್ನ ಎಡಗೈಯ್ಯಿಂದ ತಲೆಯ ಕೂದಲನ್ನು ಹಿಡಿದೆತ್ತಿ ॥೨೩॥

ಬಲಗೈಯಿಂದ ಕಠೋರವಾದ ಕತ್ತಿಯನ್ನು ಹಿಡಿದುಕೊಂಡು ತಲೆಯನ್ನು ಇನ್ನೇನು ಕತ್ತರಿಸಬೇಕೆಂದಿರುವಲ್ಲಿ ಅಗ್ನಿಯು ಅವನನ್ನು ತಡೆದು ಎಚ್ಚರಿಸಿ ಹೇಳಿದನು. ॥೨೪॥

ಉಕ್ತಶ್ಚ ದೈತ್ಯ ಮೂರ್ಖೋಽಸಿ ಸ್ವಶೀರ್ಷಂ ಛೇತ್ತುಮಿಚ್ಛಸಿ ।
ಆತ್ಮಹತ್ಯಾಽತಿದುಸ್ಸಾಧ್ಯಾ ಕಥಂ ತ್ವಂ ಕರ್ತುಮುದ್ಯತಃ ॥೨೫॥

ವರಂ ವರಯ ಭದ್ರಂ ತೇ ಯಸ್ತೇ ಮನಸಿ ವರ್ತತೇ ।
ಮಾ ಮ್ರಿಯಸ್ವ ಮೃತೇನಾದ್ಯ ಕಿಂ ತೇ ಕಾರ್ಯಂ ಭವಿಷ್ಯತಿ ॥೨೬॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ರಂಭಃ ಪಾವಕಸ್ಯ ಸುಭಾಷಿತಂ ।
ತತೋಽಬ್ರವೀದ್ವಚೋ ರಂಭಸ್ತ್ಯಕ್ತ್ವಾ ಕೇಶಕಲಾಪಕಂ ॥೨೭॥

ಯದಿ ತುಷ್ಟೋಽಸಿ ದೇವೇಶ ದೇಹಿ ಮೇ ವಾಂಛಿತಂ ವರಂ ।
ತ್ರೈಲೋಕ್ಯವಿಜಯೀ ಪುತ್ರಃ ಸ್ಯಾನ್ಮಃ ಪರಬಲಾರ್ದನಃ ॥೨೮॥

---

ಅಗ್ನಿಯು ಈರೀತಿಯಲ್ಲಿ ಅವನನ್ನು ತಡೆದು ಹೀಗೆ ಹೇಳಿದನು—ಎಲೈ ದೈತ್ಯನೇ, ನೀನು ನಿನ್ನ ತಲೆಯನ್ನು ಕತ್ತರಿಸಲು ಇಚ್ಛಿಸುತ್ತಿರುವೆ. ಆದುದರಿಂದ ಶುದ್ಧಮೂರ್ಖನಾಗಿರುವೆ. ಆತ್ಮಹತ್ಯೆಯು ತುಂಬ ಪಾಪಕರವಾದುದು ಮತ್ತು ಆ ಪಾಪವನ್ನು ಪರಿಹರಿಸಿಕೊಳ್ಳುವುದು ಅಸಾಧ್ಯವಾಗಿರುವುದು. ಹೀಗಿರುವಲ್ಲಿ ನೀನು ಇಂತಹ ಹೇಯಕೃತ್ಯವನ್ನು ಮಾಡಲು ಹೇಗೆ ಉದ್ಯುಕ್ತನಾಗಿರುವೆ? ॥೨೫॥

ನೀನು ನಿನ್ನ ಮನಸ್ಸಿನಲ್ಲಿರುವ ಇಷ್ಟಸಿದ್ಧಿಗಾಗಿ ನಿನಗೆ ಬೇಕಾದ ವರವನ್ನು ಕೇಳಿಕೊ, ನೀನು ಮರಣವನ್ನು ಹೊಂದಬೇಡ, ನೀನು ಮೃತನಾದರೆ ನಿನಗೆ ಅದರಿಂದ ಏನು ಕಾರ್ಯಸಾಧನೆಯು, ಪ್ರಯೋಜನವುಂಟಾಗುವುದು? ॥೨೬॥

ವ್ಯಾಸಮುನಿಯು ಹೇಳಿದನು—ರಂಭನು, ಅಗ್ನಿಯು ಹೇಳಿದ ಹಿತಕರವಾದ ಈ ಮಾತನ್ನು ಕೇಳಿ ತನ್ನ ಜುಟ್ಟಿನ ಹಿಡಿತವನ್ನು ಬಿಟ್ಟು ಹೀಗೆ ಹೇಳಿದನು. ॥೨೭॥

ಎಲೈ ದೇವೇಶನೇ, ನೀನು ನನ್ನ ವಿಷಯದಲ್ಲಿ ಸಂತುಷ್ಟನಾಗಿರುವುದಾದರೆ, ನಾನು ಕೇಳುವ ವರವನ್ನು ಕೊಡು; ಶತ್ರುಸೇನೆಗಳನ್ನು ನಾಶಮಾಡಿ ಮೂರು ಲೋಕವನ್ನೂ ಜಯಿಸುವ ಪುತ್ರನು ನನಗೆ ಉಂಟಾಗುವಂತೆ ಅನುಗ್ರಹಿಸು. ॥೨೮॥

**ಅಜೇಯಃ ಸರ್ವಥಾ ಸ ಸ್ಯಾದ್ದೇವದಾನವಮಾನವೈಃ ।**
**ಕಾಮರೂಪೀ ಮಹಾವೀರ್ಯಃ ಸರ್ವಲೋಕಾಭಿವಂದಿತಃ ॥೨೯॥**

**ಪಾವಕಸ್ತಂ ತಥೇತ್ಯಾಹ ಭವಿಷ್ಯತಿ ತವೇಪ್ಸಿತಂ ।**
**ಪುತ್ರಸ್ತವ ಮಹಾಭಾಗ ಮರಣಾದ್ವಿರಮಾಧುನಾ ॥೩೦॥**

**ಯಸ್ಯಾಂ ಚಿತ್ತಂ ತು ರಂಭ ತ್ವಂ ಪ್ರಮದಾಯಾಂ ಕರಿಷ್ಯಸಿ ।**
**ತಸ್ಯಾಂ ಪುತ್ರೋ ಮಹಾಭಾಗ ಭವಿಷ್ಯತಿ ಬಲಾಧಿಕಃ ॥೩೧॥**

॥ ವ್ಯಾಸ ಉವಾಚ ॥

**ಇತ್ಯುಕ್ತೋ ವಹ್ನಿನಾ ರಂಭೋ ವಚನಂ ಚಿತ್ತರಂಜನಂ ।**
**ಶ್ರುತ್ವಾ ಪ್ರಣಮ್ಯ ಪ್ರಯಯೌ ವಹ್ನಿಂ ತಂ ದಾನವೋತ್ತಮಃ ॥೩೨॥**

**ಯಕ್ಷೈಃ ಪರಿವೃತಂ ಸ್ಥಾನಂ ರಮಣೀಯಂ ಶ್ರಿಯಾನ್ವಿತಂ ।**
**ದೃಷ್ಟ್ವಾ ಚಕ್ರೇ ತದಾ ಭಾವಂ ಮಹಿಷ್ಯಾಂ ದಾನವೋತ್ತಮಃ ॥೩೩॥**

---

ಆ ಮಗನು, ದೇವತೆಗಳು, ದಾನವರು, ಮನುಷ್ಯರು ಇವರಾರಿಂದಲೂ ಜಯಿಸಲು ಆಗದಿರುವವನಾಗಿರಬೇಕು. ಮತ್ತು ಅವನು ಕಾಮರೂಪಿಯಾಗಿಯೂ, ಮಹಾಶಕ್ತಿವಂತನಾಗಿಯೂ, ಸಮಸ್ತಜನರಿಂದಲೂ ಪೂಜಿಸಲ್ಪಡುವವನಾಗಿಯೂ ಇರಬೇಕು. ಇಂತಹ ಪುತ್ರನನ್ನು ಅನುಗ್ರಹಿಸು. ॥೨೯॥

ರಂಭನು ಈ ರೀತಿಯಲ್ಲಿ ಪ್ರಾರ್ಥಿಸಲು, ಅಗ್ನಿಯು—ಎಲೈ ರಂಭನೇ, ಹಾಗೆಯೇ ಆಗಲಿ. ನಿನ್ನ ಇಷ್ಟದಂತೆ ನಿನಗೆ ಮಗನು ಆಗುವನು. ಈಗ ನೀನು ಕೈಗೊಂಡಿರುವ ಮರಣೋದ್ಯೋಗವನ್ನು ನಿಲ್ಲಿಸು, ಎಂದು ಹೇಳಿದನು. ॥೩೦॥

ಮತ್ತು, ಎಲೈ ಪ್ರಭಾವಶಾಲಿಯಾದ ರಂಭನೇ, ನೀನು ಯಾವ ಹೆಂಗಸಿನಲ್ಲಿ ಮನಸ್ಸನ್ನು ಇಡುವೆಯೋ ಅವಳಲ್ಲಿ ನಿನಗೆ ತುಂಬ ಬಲಾಢ್ಯನಾದ ಮಗನು ಹುಟ್ಟುವನು ಎಂದು ಅಗ್ನಿಯು ಹೇಳಿದನು. ॥೩೧॥

ವ್ಯಾಸಋಷಿಯು ಹೇಳಿದನು—ಮನಸ್ಸಿಗೆ ಹಿತಕರವಾದ ಈ ಮಾತನ್ನು ಅಗ್ನಿಯು ಹೇಳಲು ದೈತ್ಯಶ್ರೇಷ್ಠನಾದ ಆ ರಂಭನು ಅಗ್ನಿಯನ್ನು ನಮಸ್ಕರಿಸಿ ಅಲ್ಲಿಂದ ಹೊರಟನು. ॥೩೨॥

ಮತ್ತಾಯಾಂ ರೂಪಪೂರ್ಣಾಯಾಂ ವಿಹಾಯಾನ್ಯಾಂ ಚ ಯೋಷಿತಂ ।
ಸಾ ಸಮಾಗಚ್ಛ ತ್ತರಸಾ ಕಾಮಯಂತೀ ಮುದಾನ್ವಿತಾ ॥೩೪॥

ರಂಭೋಽಪಿ ಗಮನಂ ಚಕ್ರೇ ಭವಿತವ್ಯಪ್ರಣೋದಿತಃ ।
ಸಾ ತು ಗರ್ಭವತೀ ಜಾತಾ ಮಹಿಷೀ ತಸ್ಯ ವೀರ್ಯತಃ ॥೩೫॥

ತಾಂ ಗೃಹೀತ್ವಾಥ ಪಾತಾಲಂ ಪ್ರವಿವೇಶ ಮನೋಹರಂ ।
ಮಹಿಷೇಭ್ಯಶ್ಚ ತಾಂ ರಕ್ಷನ್ಪ್ರಿಯಾಮನುಮತಾಂ ಕಿಲ ॥೩೬॥

ಕದಾಚಿನ್ಮಹಿಷಶ್ಚಾನ್ಯಃ ಕಾಮಾರ್ತಸ್ತಾಮುಪಾದ್ರವತ್ ।
ಸ್ವಯಮಾಗತ್ಯ ತಂ ಹಂತುಂ ದಾನವಃ ಸಮುಪಾದ್ರವತ್ ॥೩೭॥

---

ಅನಂತರದಲ್ಲಿ ಆ ದಾನವಶ್ರೇಷ್ಠನು ಅಲ್ಲಿಂದ ಹೊರಟು, ಯಕ್ಷರಿಂದ ನಿಬಿಡವಾಗಿಯೂ, ಮನೋಹರವಾಗಿಯೂ, ಪ್ರಕೃತಿಸೌಂದರ್ಯದಿಂದ ವಿರಾಜಿಸುತ್ತಿರುವ ಒಂದು ಪ್ರದೇಶಕ್ಕೆ ಬಂದು ಸೇರಿದನು. ಅಲ್ಲಿ ಅವನು ಬೇರೆ ಯಾವ ಹೆಂಗಸನ್ನೂ ಅಪೇಕ್ಷಿಸದೆ ಯೌವನದಿಂದಲೂ ರೂಪದಿಂದಲೂ ಮದಿಸಿರುವ ಮಹಿಷಿಯಲ್ಲಿ ತನ್ನ ಭೋಗೇಚ್ಛೆಯ ಮನಸ್ಸನ್ನು ಇಟ್ಟನು. ಕಾಮ್ಯತಪಸ್ಸಿನ ಪರಿಣಾಮವಿದು! ॥೩೩॥

ಆ ಮಹಿಷಿಯು ಸಂತೋಷದಿಂದ ಇವನನ್ನು ಕಾಮಿಸುವವಳಾಗಿ ಜಾಗ್ರತೆಯಾಗಿ ಅವನ ಸಮೀಪಕ್ಕೆ ಬಂದಳು. ರಂಭನೂ ಕೂಡ ಮುಂದೆ ನಡೆಯಬೇಕಾದ ವಿಧಿಯ ಪ್ರಾಬಲ್ಯದಿಂದ ಪ್ರೇರಿಸಲ್ಪಟ್ಟವನಾಗಿ ಆ ಮಹಿಷಿಯಲ್ಲಿ ಭೋಗಿಸಿದನು. ಆ ಮಹಿಷಿಯು ಅವನ ವೀರ್ಯದಿಂದ ಗರ್ಭವತಿಯಾದಳು. ॥೩೪-೩೫॥

ತನ್ನ ಪ್ರೀತಿಪಾತ್ರಳಾದ ಮತ್ತು ತನಗೆ ಇಷ್ಟಕರಳಾದ ಆ ಮಹಿಷಿಯನ್ನು ಇತರ ಮಹಿಷಗಳ ದೆಸೆಯಿಂದ ರಕ್ಷಿಸುವುದಕ್ಕಾಗಿ ಆ ರಂಭನು ಅವಳನ್ನು ಮನೋಹರವಾದ ಪಾತಾಳಲೋಕಕ್ಕೆ ಕರೆದುಕೊಂಡು ಹೋದನು. ॥೩೬॥

ಒಂದಾನೊಂದು ಕಾಲದಲ್ಲಿ ಇನ್ನೊಂದು ಕೋಣವು ಕಾಮವಾಸನೆಯಿಂದ ಕೂಡಿ ಆ ಮಹಿಷಿಯನ್ನು ಹಿಂಬಾಲಿಸಿಕೊಂಡು ಬಂದಿತು. ಆಗ ಆ ದಾನವಶ್ರೇಷ್ಠನಾದ ರಂಭನು ಆ ಮಹಿಷವನ್ನು ಕೊಲ್ಲಲು ತಾನೇ ಉದ್ಯುಕ್ತನಾಗಿ ಬಂದನು. ॥೩೭॥

ಸ್ವರಕ್ಷಾರ್ಥಂ ಸಮಾಗಮ್ಯ ಮಹಿಷಂ ಸಮತಾಡಯತ್ ।
ಸೋಽಪಿ ತಂ ನಿಜಘಾನಾಶು ಶೃಂಗಾಭ್ಯಾಂ ಕಾಮಮೋಹಿತಃ ॥೩೮॥

ತಾಡಿತಸ್ತೇನ ತೀಕ್ಷ್ಣಾಭ್ಯಾಂ ಶೃಂಗಾಭ್ಯಾಂ ಹೃದಯೇ ಭೃಶಂ ।
ಭೂಮೌ ಪಪಾತ ತರಸಾ ಮಮಾರ ಚ ವಿಮೂರ್ಛಿತಃ ॥೩೯॥

ಮೃತೇ ಭರ್ತರಿ ಸಾ ದೀನಾ ಭಯಾರ್ತಾ ವಿದ್ರುತಾ ಭೃಶಂ ।
ಸಾ ವೇಗಾತ್ತಂ ವಟಂ ಪ್ರಾಪ್ಯ ಯಕ್ಷಾಣಾಂ ಶರಣಂ ಗತಾ ॥೪೦॥

ಪೃಷ್ಠತಸ್ತು ಗತಸ್ತತ್ರ ಮಹಿಷಃ ಕಾಮಪೀಡಿತಃ ।
ಕಾಮಯಾನಸ್ತು ತಾಂ ಕಾಮೀ ಬಲವೀರ್ಯಮದೋದ್ಧತಃ ॥೪೧॥

ರುದತೀ ಸಾ ಭೃಶಂ ದೀನಾ ದೃಷ್ಟ್ವಾ ಯಕ್ಷೈರ್ಭಯಾತುರಾ ।
ಧಾವಮಾನಂ ಚ ತಂ ವೀಕ್ಷ್ಯ ಯಕ್ಷಾಸ್ತ್ರಾತುಂ ಸಮಾಯಯುಃ ॥

---

ರಂಭನು ಸ್ತ್ರೀಯಸಂರಕ್ಷಣೆಯ ಸಲುವಾಗಿ ಅಲ್ಲಿಗೆ ಬಂದು ಆ ಮಹಿಷನನ್ನು ಚನ್ನಾಗಿ ಹೊಡದನು. ಅದೂ ಕೂಡ ಮಹಿಷಿಯ ವಿಷಯದಲ್ಲಿ ತನಗೆ ಉಂಟಾದ ಕಾಮದಿಂದ ಮೋಹಿತವಾಗಿ ತನ್ನ ಕೊಂಬುಗಳಿಂದ ಇವನನ್ನು ತಿವಿಯಿತು. ||೩೮||

ಆ ಮಹಿಷದ ಮೊನಚಾದ ಕೊಂಬುಗಳಿಂದ ಎದೆಯಲ್ಲಿ ತಿವಿಯಲ್ಪಟ್ಟು ಆ ರಂಭನು ಮೂರ್ಛೆಯನ್ನು ಹೊಂದಿ ಭೂಮಿಯಲ್ಲಿ ಬಿದ್ದು ಬೇಗನೆ ಪ್ರಾಣವನ್ನು ಬಿಟ್ಟನು. ||೩೯||

ಪತಿಯು ಮೃತನಾಗಲು, ಆ ಮಹಿಷಿಯು ಭಯದಿಂದ ಕಳವಳಗೊಂಡು ಬೇಗನೆ ಓಡಿಹೋಗಿ ಒಂದು ಆಲದ ಮರವನ್ನು ಸೇರಿ ಅಲ್ಲಿದ್ದ ಯಕ್ಷರಿಗೆ ಶರಣು ಹೋದಳು. ||೪೦||

ಬಲ, ವೀರ್ಯ, ಕಾಮಗಳಿಂದ ದೇಹದ ಮೇಲೆ ಪ್ರಜ್ಞೆಯಿಲ್ಲದ ಆ ಮಹಿಷವು ಮಹಿಷಿಯನ್ನು ಕಾಮಿಸುವುದಾಗಿ ಆ ವಟವೃಕ್ಷದ ಸಮೀಪಕ್ಕೆ ಹಿಂಬಾಲಿಸಿಕೊಂಡು ಬಂದಿತು. ||೪೧||

ಆ ಮಹಿಷಿಯು ದೀನವಾಗಿ ಭಯದಿಂದ ಬಹಳವಾಗಿ ಅಳುತ್ತಿರುವುದನ್ನು ಆ ಯಕ್ಷರು ನೋಡಿದರು. ಮತ್ತು ಯಕ್ಷರು ಆ ಮಹಿಷಿಯನ್ನು ಹಿಂಬಾಲಿಸಿ

ಯುದ್ಧಂ ಸಮುಭವದ್ಘೋರಂ ಯಕ್ಷಾಣಾಂ ಚ ಹಯಾರಿಣಾ ।
ಶರೇಣ ತಾಡಿತಸ್ತೂರ್ಣಂ ಪಪಾತ ಧರಣೀತಲೇ ॥೪೩॥

ಮೃತಂ ರಂಭಂ ಸಮಾನೀಯ ಯಕ್ಷಾಸ್ತೇ ಪರಮಂ ಪ್ರಿಯಂ ।
ಚಿತಾಯಾಂ ರೋಪಯಾಮಾಸುಸ್ತಸ್ಯ ದೇಹಸ್ಯ ಶುದ್ಧಯೇ ॥೪೪॥

ಮಹಿಷೀ ಸಾ ಪತಿಂ ದೃಷ್ಟ್ವಾ ಚಿತಾಯಾಂ ರೋಪಿತಂ ತದಾ ।
ಪ್ರವೇಷ್ಟುಂ ಸಾ ಮತಿಂ ಚಕ್ರೇ ಪತಿನಾ ಸಹ ಪಾವಕಂ ॥೪೫॥

ವಾರ್ಯಮಾಣಾಽಪಿ ಯಕ್ಷೈಸ್ಸಾ ಪ್ರವಿವೇಶ ಹುತಾಶನಂ ।
ಜ್ವಾಲಾಮಾಲಾಕುಲಂ ಸಾಧ್ವೀ ಪತಿಮಾದಾಯ ವಲ್ಲಭಂ ॥೪೬॥

ಮಹಿಷಸ್ತು ಚಿತಾಮಧ್ಯಾತ್ಸಮುತ್ತಸ್ಥೌ ಮಹಾಬಲಃ ।
ರಂಭೋಽಪ್ಯನ್ಯದ್ವಪುಃ ಕೃತ್ವಾ ನಿಃಸೃತಃ ಪುತ್ರವತ್ಸಲಃ ॥೪೭॥

---

ಓಡಿಬರುತ್ತಿರುವ ಮಹಿಷನನ್ನು ನೋಡಿ, ಮಹಿಷಿಯನ್ನು ಕಾಪಾಡುವುದಕ್ಕಾಗಿ ಮುಂದೆ ಬಂದರು. ||೪೨||

ಯಕ್ಷರಿಗೂ ಈ ಮಹಿಷಕ್ಕೂ ಸಹ ಭಯಂಕರವಾದ ಯುದ್ಧವಾಯಿತು. ಆ ಮಹಿಷವು ಯಕ್ಷರ ಬಾಣದಿಂದ ಹೊಡೆಯಲ್ಪಟ್ಟು ಬೇಗನೆ ಭೂಮಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟಿತು. ||೪೩||

ಆಮೇಲೆ ಆ ಯಕ್ಷರು ಆ ಮಹಿಷಿಗೆ ಪ್ರೀತಿಪಾತ್ರನಾದ ರಂಭಾಸುರನ ಮೃತಶರೀರವನ್ನು ತಂದು ಅದರ ಶುದ್ಧ್ಯರ್ಥವಾಗಿ ಆ ಶರೀರವನ್ನು ಚಿತಿಯ ಮೇಲಿಟ್ಟರು. ||೪೪||

ಆ ಮಹಿಷಿಯು ತನ್ನ ಪತಿಯು ಚಿತಿಯಲ್ಲಿರುವುದನ್ನು ನೋಡಿ, ತಾನೂ ಪತಿಯ ಜೊತೆಯಲ್ಲಿ ಅಗ್ನಿಪ್ರವೇಶವನ್ನು ಮಾಡಲು ನಿಶ್ಚಯಿಸಿದಳು. ||೪೫||

ಯಕ್ಷರು ಬೇಡವೆಂದು ತಡೆದಾಗ್ಯೂ ಆ ಪತಿವ್ರತೆಯಾದ ಮಹಿಷಿಯು ತನಗೆ ಪ್ರೀತಿಪಾತ್ರನಾದ ಪತಿಯನ್ನು ಅನುಸರಿಸಿ, ಜ್ವಾಲೆಗಳಿಂದ ಧಗಧಗಿಸುತ್ತಿರುವ ಅಗ್ನಿಯನ್ನು ಪ್ರವೇಶಿಸಿದಳು. ||೪೬||

ಉರಿಯುತ್ತಿರುವ ಚಿತಿಯ ಮಧ್ಯದಿಂದ ಮಹಾಬಲಿಷ್ಠನಾದ ಮಹಿಷಾಸುರನು ಎದ್ದು ಹೊರಟನು. ಮಗನಲ್ಲಿ ಪ್ರೀತಿಯುಳ್ಳ ರಂಭಾಸುರನೂ, ಬೇರೆ ಶರೀರವನ್ನು ಧರಿಸಿ ಆ ಅಗ್ನಿಮಧ್ಯದಿಂದ ಹೊರಹೊರಟನು. ||೪೭||

ರಕ್ತಬೀಜೋಽಪ್ಯಸೌ ಜಾತೋ ಮಹಿಷೋಽಪಿ ಮಹಾಬಲಃ ।
ಅಭಿಷಿಕ್ತಸ್ತು ರಾಜ್ಯೇಽಸೌ ಹಯಾರಿರಸುರೋತ್ತಮೈಃ ॥೪೮॥

ಏವಂ ಸ ಮಾಹಿಷೋ ಜಾತೋ ರಕ್ತಬೀಜಶ್ಚ ವೀರ್ಯವಾನ್ ।
ಅವಧ್ಯಸ್ತು ಸುರೈರ್ದೈತ್ಯೈರ್ಮಾನವೈಶ್ಚ ನೃಪೋತ್ತಮ ॥೪೯॥

ಇತ್ಯೇತತ್ಕಥಿತಂ ರಾಜಞ್ಜನ್ಮ ತಸ್ಯ ಮಹಾತ್ಮನಃ ।
ವರಪ್ರದಾನಂ ಚ ತಥಾ ಪ್ರೋಕ್ತಂ ಸರ್ವಂ ಸವಿಸ್ತರಂ ॥೫೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ದ್ವಿತೀಯೋಽಧ್ಯಾಯಃ

---

ಮಹಾ ಬಲಿಷ್ಠನಾದ ಆ ಮಹಿಷನೂ ಕೂಡ ರಕ್ತಬೀಜಾಸುರನಾದನು. ಇವನಿಗೆ ರಾಕ್ಷಸರು ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿ ರಾಜನನ್ನಾಗಿ ಮಾಡಿದರು. ||೪೮||

ಎಲೈ ರಾಜೋತ್ತಮನೇ, ಈ ರೀತಿಯಾಗಿ ಮಹಿಷಾಸುರನು ಹುಟ್ಟಿದನು. ಮೃತನಾದ ರಂಭಾಸುರನೂ ಅಗ್ನಿಯಿಂದ ಹೊರಹೊರಟು ಬಹಳ ಪರಾಕ್ರಮಶಾಲಿಯಾದ ರಕ್ತಬೀಜಾಸುರನಾದನು. ಈ ಮಹಿಷಾಸುರನು ದೇವತೆಗಳು, ರಾಕ್ಷಸರು, ಮನುಷ್ಯರು ಇವರುಗಳಿಂದ ಕೊಲ್ಲಲ್ಪಡಲು ಅಸಾಧ್ಯನಾಗಿದ್ದನು. ||೪೯||

ಎಲೈ ರಾಜನೇ ಈ ರೀತಿಯಾಗಿ ಮಹಾತ್ಮನಾದ ಮಹಿಷಾಸುರನ ಜನ್ಮ ವೃತ್ತಾಂತವೂ, ಅವನು ವರವನ್ನು ಪಡೆದ ವಿವರವೂ ಸಹ ವಿಸ್ತಾರವಾಗಿ ಹೇಳಲ್ಪಟ್ಟಿತು. ||೫೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### || ತೃತಿಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಏವಂ ಸ ಮಹಿಷೋ ನಾಮ ದಾನವೋ ವರದರ್ಪಿತಃ ।**
**ಪ್ರಾಪ್ಯ ರಾಜ್ಯಂ ಜಗತ್ಸರ್ವಂ ವಶೇ ಚಕ್ರೇ ಮಹಾಬಲಃ ||೧||**

**ಪೃಥಿವೀಂ ಪಾಲಯಾಮಾಸ ಸಾಗರಾಂತಾಂ ಭುಜಾರ್ಜಿತಾಂ ।**
**ಏಕಚ್ಛತ್ರಾಂ ನಿರಾತಂಕಾಂ ವೈರಿವರ್ಗವಿವರ್ಜಿತಾಂ ||೨||**

**ಸೇನಾನೀಶ್ಚಿಕ್ಷುರಸ್ತಸ್ಯ ಮಹಾವೀರ್ಯೋ ಮದೋತ್ಕಟಃ ।**
**ಧನಾಧ್ಯಕ್ಷಸ್ತಥಾ ತಾಮ್ರಃ ಸೇನಾಽಯುತಸಮಾವೃತಃ ||೩||**

---

ವ್ಯಾಸಋಷಿಯು ಹೇಳಿದನು--ಹಿಂದೆ ಹೇಳಿದ ಪ್ರಕಾರ ಬಹಳ ಶಕ್ತಿವಂತನಾದ ಆ ಮಹಿಷಾಸುರನು ವರದಿಂದ ಕೊಬ್ಬಿ, ರಾಜ್ಯದಲ್ಲಿ ನೆಲಸಿ ಸಮಸ್ತ ಪ್ರಪಂಚವನ್ನೂ ತನ್ನ ಅಧೀನಕ್ಕೆ ಒಳಪಡುವಂತೆ ಮಾಡಿಕೊಂಡನು. ||೧||

ಆ ಮಹಿಷಾಸುರನು ತನ್ನ ಭುಜಬಲದಿಂದ ಸಾಗರದವರೆಗೂ ಇರುವ ಭೂಮಂಡಲವನ್ನು ಜಯಿಸಿ ಶತ್ರುಗಳ ಬಾಧೆಯಿಲ್ಲದೆ ನಿರಾತಂಕವಾಗಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಿ ರಾಜ್ಯಭಾರ ಮಾಡುತ್ತಿದ್ದನು. ||೨||

ಆ ಮಹಿಷಾಸುರನಿಗೆ ಮಹಾಪರಾಕ್ರಮದಿಂದ ಮದಿಸಿರುವ ಚಿಕ್ಷುರನೆಂಬುವನು ಸೇನಾಪತಿಯಾಗಿಯೂ, ಹತ್ತು ಸಾವಿರ ಸೇನೆಯಿಂದ ಕೂಡಿದ ತಾಮ್ರನೆಂಬುವನು ಕೋಶಾಧ್ಯಕ್ಷನಾಗಿಯೂ ಇದ್ದರು. ||೩||

ಅಸಿಲೋಮಾ ತಥೋದರ್ಕೋ ವಿಡಾಲಾಖ್ಯಶ್ಚ ಬಾಷ್ಕಲಃ ।
ತ್ರಿನೇತ್ರೋಽಥ ತಥಾ ಕಾಲಬಂಧಕೋ ಬಲದರ್ಪಿತಃ ॥೪॥

ಏತೇ ಸೈನ್ಯಯುತಾಸ್ಸರ್ವೇ ದಾನವಾ ಮೇದಿನೀಂ ತದಾ ।
ಆವೃತ್ಯ ಸಂಸ್ಥಿತಾಃ ಕಾಮಮೃದ್ಧಾಂ ಸಾಗರಮೇಖಲಾಂ ॥೫॥

ಕರದಾಶ್ಚ ಕೃತಾಸ್ಸರ್ವೇ ಭೂಮಿಪಾಲಾಃ ಪುರಾತನಾಃ ।
ನಿಹತಾ ಯೇ ಬಲೋದಗ್ರಾಃ ಕ್ಷಾತ್ರಧರ್ಮವ್ಯವಸ್ಥಿತಾಃ ॥೬॥

ಬ್ರಾಹ್ಮಣಾ ವಶಗಾ ಜಾತಾ ಯಜ್ಞಭಾಗಸಮರ್ಪಕಾಃ ।
ಮಹಿಷಸ್ಯ ಮಹಾರಾಜ ನಿಖಿಲೇ ಕ್ಷಿತಿಮಂಡಲೇ ॥೭॥

ಏಕಾತಪತ್ರಂ ತದ್ರಾಜ್ಯಂ ಕೃತ್ವಾ ಸ ಮಹಿಷಾಸುರಃ ।
ಸ್ವರ್ಗಂ ಜೇತುಂ ಮನಶ್ಚಕ್ರೇ ವರದಾನೇನ ಗರ್ವಿತಃ ॥೮॥

---

ಅಸಿಲೋಮನೆಂಬುವನೂ, ಹಾಗೆಯೇ ಉದರ್ಕನೆಂಬುವನೂ, ವಿಡಾಲನೆಂಬುವನೂ, ಬಾಷ್ಕಲನೆಂಬುವನೂ, ತ್ರಿಣೇತ್ರನೂ, ಮತ್ತು ಬಲದಿಂದ ಕೊಬ್ಬಿದ ಕಾಲಬಂಧಕನೆಂಬುವನೂ ॥೪॥

ಇವರೆಲ್ಲರೂ ಆ ಮಹಿಷಾಸುರನ ಕಡೆಯವರು. ಈ ದಾನವಮುಖಂಡರೆಲ್ಲರೂ ತಮ್ಮ ಸೈನ್ಯಗಳಿಂದ ಕೂಡಿದವರಾಗಿ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಧನಧಾನ್ಯಗಳಿಂದ ಸಮೃದ್ಧವಾಗಿರುವ ಭೂಮಿಯೆಲ್ಲವನ್ನೂ ತಮ್ಮ ತಮ್ಮ ಇಚ್ಛೆ ಬಂದಂತೆ ಆಕ್ರಮಿಸಿಕೊಂಡು ಇದ್ದರು. ॥೫॥

ಕ್ಷತ್ರಧರ್ಮದಲ್ಲಿರುವವರಾದ ಹಿಂದಿನ ರಾಜರು ತಮ್ಮ ಸೇನೆಯಿಂದ ಕೂಡಿ ಇವರೊಡನೆ ಕ್ರೂರವಾಗಿ ಯುದ್ಧಮಾಡಿ ಹತರಾದರು. ಉಳಿದ ಇತರ ರಾಜರು ಎಲ್ಲರೂ ಇವರಿಗೆ ಕಪ್ಪವನ್ನು ಕೊಡುವವರಾದರು. ॥೬॥

ಎಲೈ ಜನಮೇಜಯರಾಜನೇ ಕೇಳು—ಸಮಸ್ತವಾದ ಈ ಭೂಮಂಡಲದಲ್ಲಿ ಬ್ರಾಹ್ಮಣರೆಲ್ಲರೂ ಈ ಮಹಿಷಾಸುರನಿಗೆ ಅಧೀನರಾಗಿ ಯಜ್ಞಭಾಗವನ್ನೂ ಇವನಿಗೆ ಕೊಡುವವರಾಗಿದ್ದರು. ॥೭॥

ಆ ಮಹಿಷಾಸುರನು ಆ ರಾಜ್ಯವನ್ನು ಏಕಛತ್ರಾಧಿಪತ್ಯವನ್ನಾಗಿ ಮಾಡಿಕೊಂಡು ಬ್ರಹ್ಮನ ವರದಿಂದ ಅಹಂಕಾರವುಳ್ಳವನಾಗಿ ಸ್ವರ್ಗಲೋಕವನ್ನು ಜಯಿಸಲು ಮನಸ್ಸು ಮಾಡಿದನು. ॥೮॥

ಪ್ರಣಿಧಿಂ ಪ್ರೇಷಯಾಮಾಸ ಹಯಾರಿಸ್ತು ಶಚೀಪತಿಂ ।
ಸ ಸಂದೇಶಹರಂ ಶೀಘ್ರಮಾಹೂಯೋವಾಚ ದೈತ್ಯರಾಟ್ ॥೯॥

ಗಚ್ಛ ವೀರ ಮಹಾಬಾಹೋ ದೂತತ್ವಂ ಕುರು ಮೇಽನಘ ।
ಬ್ರೂಹಿ ಶಕ್ರಂ ದಿವಂ ಗತ್ವಾ ನಿಶ್ಶಂಕಾಂ ಸುರಸನ್ನಿಧೌ ॥೧೦॥

ಮುಂಚ ಸ್ವರ್ಗಂ ಸಹಸ್ರಾಕ್ಷ ಯಥೇಷ್ಟಂ ಗಚ್ಛಮಾಚಿರಂ ।
ಸೇವಾಂ ವಾ ಕುರು ದೇವೇಶ ಮಹಿಷಸ್ಯ ಮಹಾತ್ಮನಃ ॥೧೧॥

ಸ ತ್ವಾಂ ಸಂರಕ್ಷಯೇನ್ನೂನಂ ರಾಜಾ ಶರಣಮಾಗತಂ ।
ತಸ್ಮಾತ್ತ್ವಂ ಶರಣಂ ಯಾಹಿ ಮಹಿಷಸ್ಯ ಶಚೀಪತೇ ॥೧೨॥

ನೋ ಚೇದ್ವಜ್ರಂ ಗೃಹಾಣಾಶು ಯುದ್ಧಾಯ ಬಲಸೂದನ ।
ಪೂರ್ವೈರ್ಜಿತೋಽಸಿ ಚಾಸ್ಮಾಕಂ ಜಾನಾಮಿ ತವ ಪೌರುಷಂ ॥೧೩॥

---

ದೈತ್ಯರಿಗೆಲ್ಲ ರಾಜನಾದ ಆ ಮಹಿಷಾಸುರನು ಇಂದ್ರನ ಬಳಿಗೆ ಒಬ್ಬ ಚಾರನನ್ನು ಕಳುಹಿಸಬೇಕೆಂದು ಯೋಚಿಸಿ, ಒಬ್ಬ ದೂತನನ್ನು ಬರಹೇಳಿ ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೯॥

ಎಲೈ ಬಾಹುಬಲವುಳ್ಳ ವೀರನೇ, ನೀನು ಸ್ವರ್ಗಕ್ಕೆ ಹೋಗಿ ನನಗಾಗಿ ದೂತ್ಯವನ್ನು ಮಾಡು. ನೀನು ಸ್ವರ್ಗಕ್ಕೆ ಹೋದಮೇಲೆ ಅಲ್ಲಿ ದೇವತೆಗಳ ಸನ್ನಿಧಿಯಲ್ಲಿರುವ ಇಂದ್ರನಿಗೆ ನಾನು ಹೇಳುವ ಈ ಮಾತನ್ನು ನಿರ್ಭಯವಾಗಿ ಹೇಳು. ॥೧೦॥

ಎಲೈ ಇಂದ್ರನೇ, ನೀನು ಸ್ವರ್ಗವನ್ನು ಬಿಟ್ಟು ಜಾಗ್ರತೆಯಾಗಿ ನಿನಗೆ ಇಷ್ಟ ಬಂದಕಡೆ ಬೇರೆಲ್ಲಿಯಾದರೂ ಹೋಗು. ಇಲ್ಲದಿದ್ದರೆ ಮಹಾತ್ಮನಾದ ಮಹಿಷಾಸುರನ ಸೇವೆಯನ್ನಾದರೂ ಮಾಡು. ॥೧೧॥

ರಾಜನಾದ ಮಹಿಷಾಸುರನು ಶರಣಾಗತನಾದ ನಿನ್ನನ್ನು ಖಂಡಿತವಾಗಿಯೂ ಕಾಪಾಡುವನು. ಆದುದರಿಂದ ಎಲೈ ಇಂದ್ರನೇ, ನೀನು ಮಹಿಷಾಸುರನ ಶರಣವನ್ನು ಹೊಂದು. ॥೧೨॥

ಬಲಾಸುರನನ್ನು ಜಯಿಸಿದ ಎಲೈ ಇಂದ್ರನೇ, ನೀನು ಹಾಗೆ ಮಹಿಷಾಸುರನನ್ನು ಮರೆಹೊಗದಿದ್ದರೆ, ವಜ್ರಾಯುಧವನ್ನು ಹಿಡಿದು ಜಾಗ್ರತೆಯಾಗಿ ಯುದ್ಧಕ್ಕೆ

ಅಹಲ್ಯಾಜಾರ ವಿಜ್ಞಾತಂ ಬಲಂ ತೇ ಸುರಸಂಘಪ ।
ಯುಧ್ಯಸ್ವ ವ್ರಜ ವಾ ಕಾಮಂ ಯತ್ರ ತೇ ರಮತೇ ಮನಃ ॥೧೪॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಶಕ್ರಃ ಕ್ರೋಧಸಮನ್ವಿತಃ ।
ಉವಾಚ ತಂ ನೃಪಶ್ರೇಷ್ಠ ಸ್ಮಿತಪೂರ್ವಂ ವಚಸ್ತದಾ ॥೧೫॥

ನ ಜಾನೇಽಹಂ ಸುಮಂದಾತ್ಮನ್ ಯತಸ್ತ್ವಂ ಮದದರ್ಪಿತಃ ।
ಚಿಕಿತ್ಸಾಂ ಸಂಕರಿಷ್ಯಾಮಿ ರೋಗಸ್ಯಾಸ್ಯ ಪ್ರಭೋಸ್ತವ ॥೧೬॥

ಅತಃಪರಂ ಕರಿಷ್ಯಾಮಿ ಮೂಲಸ್ಯಾಸ್ಯ ನಿಮೂಲನಂ ।
ಗಚ್ಛ ದೂತ ತಥಾ ಬ್ರೂಹಿ ತಸ್ಯಾಗ್ರೇ ಮಮ ಭಾಷಿತಂ ॥೧೭॥

---

ಸಿದ್ಧನಾಗು. ನಮ್ಮ ಪೂರ್ವಿಕರಿಂದ ನೀನು ಹಿಂದೆ ಜಯಿಸಲ್ಪಟ್ಟಿರುತ್ತೀಯೆ. ಆದುದರಿಂದ ನಿನ್ನ ಪರಾಕ್ರಮವು ನನಗೆ ತಿಳಿದೇ ಇದೆ. ॥೧೩॥

ದೇವಸಮೂಹವನ್ನು ರಕ್ಷಿಸುವ ಎಲೈ ಇಂದ್ರನೇ, ನೀನು ಅಹಲ್ಯಾಜಾರ ಪುರುಷನಲ್ಲವೇ. ನಿನ್ನ ಶಕ್ತಿಯು ನಮಗೆ ಗೊತ್ತುಂಟು. ಕೈಲಾದರೆ ಯುದ್ಧ ವನ್ನು ಮಾಡು. ಇಲ್ಲದಿದ್ದರೆ ಸ್ವರ್ಗವನ್ನು ಬಿಟ್ಟು ನಿನ್ನ ಮನಬಂದಂತೆ ಎಲ್ಲಿ ಗಾದರೂ ಹೋಗು. ॥೧೪॥

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ, ಮಹಿಷಾ ಸುರನ ದೂತನು ಆಡಿದ ಈ ರೀತಿಯಾದ ಮಾತನ್ನು ಕೇಳಿ ಇಂದ್ರನು ಬಹಳ ಕೋಪಗೊಂಡರೂ ಮಂದಹಾಸದಿಂದ ಆ ದೂತನನ್ನು ಕುರಿತು ಮಾತನ್ನು ಹೀಗೆ ಹೇಳಿದನು. ॥೧೫॥

ಎಲೈ ಬುದ್ಧಿಯಿಲ್ಲದ ದಡ್ಡನೇ, ನಿನಗೆ ಏತಕ್ಕಾಗಿ ಈ ರೀತಿಯಲ್ಲಿ ಕೊಬ್ಬು ಹೆಚ್ಚಿದೆಯೋ ಅದಕ್ಕೆ ಕಾರಣವು ಗೊತ್ತಿಲ್ಲ. ಆದರೆ ಗಟ್ಟಿಗನಾದ ನಿನ್ನ ಈ ಅಹಂಕಾರವೆಂಬ ರೋಗಕ್ಕೆ ತಕ್ಕ ಚಿಕಿತ್ಸೆಯನ್ನು ಚನ್ನಾಗಿಯೇ ಮಾಡುವೆನು. ॥೧೬॥

ಇನ್ನು ಮುಂದೆ ಈ ಮಹಿಷಾಸುರನು ಇಷ್ಟುಮಟ್ಟಿಗೆ ಹೆಚ್ಚಿರುವುದಕ್ಕೆ ಕಾರಣ ವನ್ನು ನಿರ್ಮೂಲಮಾಡುವೆನು. ಎಲೈ ದೂತನೇ ನೀನು ಹೋಗಿ ಆ ಮಹಿಷಾ ಸುರನಿಗೆ ನಾನು ಹೇಳಿದ ಉತ್ತರವನ್ನು ಹೇಳು. ॥೧೭॥

**ಶಿಷ್ಟೈರ್ದೂತಾ ನ ಹಂತವ್ಯಾಸ್ತಸ್ಮಾತ್ತ್ವಾಂ ವಿಸೃಜಾಮ್ಯಹಂ ।**
**ಯುದ್ಧೇಚ್ಛಾ ಚೇತ್ಸಮಾಗಚ್ಛ ತ್ವರಿತೋ ಮಹಿಷೀಸುತ ॥೧೮॥**

**ಹಯಾರೇ ತ್ವದ್ಬಲಂ ಜ್ಞಾತಂ ತೃಣಾದಸ್ತ್ವಂ ಜಡಾಕೃತಿಃ ।**
**ಶೃಂಗಯೋಸ್ತೇ ಕರಿಷ್ಯಾಮಿ ಸುದೃಢಂ ಚ ಶರಾಸನಂ ॥೧೯॥**

**ದರ್ಪಃ ಶೃಂಗಬಲಾತ್ತೇಽಸ್ತಿ ವಿದಿತಂ ಕಾರಣಂ ಮಯಾ ।**
**ವಿಷಾಣೇ ಪರಿಚ್ಛಿತ್ವಾ ತೇ ಸಂಹರಿಷ್ಯಾಮಿ ತದ್ಬಲಂ ॥೨೦॥**

**ಯದ್ಬಲೇನಾತಿಪೂರ್ಣಸ್ತ್ವಂ ಜಾತೋಽಸಿ ಬಲದರ್ಪಿತಃ ।**
**ಕುಶಲಸ್ತ್ವಂ ತದಾಘಾತೇ ನ ಯುದ್ಧೇ ಮಹಿಷಾಧಮ ॥೨೧॥**

---

ಯೋಗ್ಯರಾದವರು ದೂತರನ್ನು ಕೊಲ್ಲುವುದು ಅಧರ್ಮವಾದುದರಿಂದ ವಾಡಿಕೆ ಯಲ್ಲಿಲ್ಲವು. ಆದುದರಿಂದ ನಾನು ನಿನ್ನನ್ನು ಕೊಲ್ಲದೆ ಇಲ್ಲಿಂದ ಹೋಗಲು ಬಿಟ್ಟಿರುತ್ತೇನೆ. ಎಲೈ ಮಹಿಷಿಯ ಮಗನಾದ ಮಹಿಷಾಸುರನೇ, ನಿನಗೆ ಯುದ್ಧಮಾಡಲು ಆಸೆಯಿದ್ದಲ್ಲಿ ಬೇಗನೆ ಯುದ್ಧಕ್ಕೆ ಬಾ. ॥೧೮॥

ಎಲೈ ಮಹಿಷಾಸುರನೇ ನೀನು ಜಾತಿಯಿಂದಲೂ ಕುದುರೆಗೆ ಶತ್ರುವು. ನೀನು ಹುಲ್ಲನ್ನು ತಿಂದು ಜೀವಿಸುವವನು; ನಿನ್ನ ಸಾಮರ್ಥ್ಯವು ನನಗೆ ಗೊತ್ತುಂಟು. ನೀನು ಮಂದವಾದ ಆಕಾರವುಳ್ಳವನು. ನಿನ್ನ ಕೊಂಬುಗಳಲ್ಲಿ ಬಲವಾದ ನನ್ನ ಬಾಣಪ್ರಯೋಗವನ್ನು ಮಾಡುವೆನು. ॥೧೯॥

ನಿನಗೆ ಕೊಂಬಿನ ಬಲದಿಂದ ಅಹಂಕಾರವಿರುವುದು ಎಂದು ನಿನ್ನ ಅಹಂಕಾರಕ್ಕೂ ಬಲಕ್ಕೂ ಕಾರಣವು ತಿಳಿದಿದೆ. ಆದುದರಿಂದ ನಿನ್ನ ಕೊಂಬನ್ನು ಕಿತ್ತು ಆ ನಿನ್ನ ಶಕ್ತಿಯನ್ನು ನಾಶಮಾಡುವೆನು. ॥೨೦॥

ಎಲೈ ನೀಚನಾದ ಮಹಿಷನೇ, ನೀನು ಕೊಂಬಿನ ಬಲದಿಂದ ಕೊಬ್ಬಿ ಶಕ್ತಿ ಯಿಂದ ಪೂರ್ಣನೆಂದು ಅಹಂಕಾರದಿಂದ ಮೆರೆಯುತ್ತಿರುವೆ. ನೀನು ನಿನ್ನ ಕೊಂಬು ಗಳಿಂದ ತಿವಿಯುವುದರಲ್ಲಿ ಜಾಣನೇ ಹೊರತು ಯುದ್ಧ ಮಾಡುವುದರಲ್ಲಿ ನಿನಗೆ ಕುಶಲತೆ ಇಲ್ಲವು. ॥೨೧॥

|| ವ್ಯಾಸ ಉವಾಚ ||

**ಇತ್ಯುಕ್ತೋಽಸೌ ಸುರೇಂದ್ರೇಣ ಸ ದೂತಸ್ತ್ವರಿತೋ ಗತಃ ।**
**ಜಗಾಮ ಮಹಿಷಂ ಮತ್ತಂ ಪ್ರಣಮ್ಯ ಪ್ರತ್ಯುವಾಚ ಹ ॥೨೨॥**

|| ದೂತ ಉವಾಚ ||

**ರಾಜನ್ ದೇವಾಧಿಪಃ ಕಾಮಂ ನ ತ್ವಾಂ ವಿಗಣಯತ್ಯಸೌ ।**
**ಮನ್ಯತೇ ಸ್ವಬಲಂ ಪೂರ್ಣಂ ದೇವಸೈನ್ಯಸಮಾವೃತಃ ॥೨೩॥**

**ಯದುಕ್ತಂ ತೇನ ಮೂರ್ಖೇಣ ಕಥಮನ್ಯದ್ಬ್ರವೀಮ್ಯಹಂ ।**
**ಪ್ರಿಯಂ ಸತ್ಯಂ ಚ ವಕ್ತವ್ಯಂ ಭೃತ್ಯೇನ ಪುರತಃ ಪ್ರಭೋಃ ॥೨೪॥**

**ಪ್ರಿಯಂ ಸತ್ಯಂ ಚ ವಕ್ತವ್ಯಂ ಪ್ರಭೋರಗ್ರೇ ಶುಭೇಚ್ಛುನಾ ।**
**ಇತಿ ನೀತಿರ್ಮಹಾರಾಜ ಜಾಗರ್ತಿ ಶುಭಕಾರಿಣೀ ॥೨೫॥**

---

ವ್ಯಾಸಋಷಿಯು ಹೇಳಿದನು—ಇಂದ್ರನು ಹೇಳಿದ ಈ ಮಾತನ್ನು ಕೇಳಿ ದೂತನು ಮದಿಸಿರುವ ಮಹಿಷಾಸುರನ ಹತ್ತಿರಕ್ಕೆ ಹೋಗಿ, ಅವನಿಗೆ ನಮಸ್ಕರಿಸಿ, ಹೀಗೆ ಹೇಳಿದನು. ||೨೨||

ದೂತನು ಹೇಳಿದನು—ಎಲೈ ರಾಜನೇ, ದೇವತೆಗಳಿಗೆ ಅಧಿಪತಿಯಾದ ಆ ಇಂದ್ರನು ದೇವಸೈನ್ಯಗಳಿಂದ ಪರಿವೃತನಾಗಿ, ತನಗೆ ಪೂರ್ಣವಾದ ಸಾಮರ್ಥ್ಯವಿರುವುದೆಂದು ತಿಳಿದುಕೊಂಡು, ನಿನ್ನನ್ನು ಲೆಕ್ಕಿಸುವುದೇ ಇಲ್ಲವು. ||೨೩||

ಆ ಮೂರ್ಖನಾದ ಇಂದ್ರನು ಏನನ್ನು ಹೇಳಿದನೋ ಅದನ್ನೇ ನಾನು ಹೇಳುತ್ತೇನೆ. ಭೃತ್ಯನಾದವನು ಪ್ರಭುವಿನ ಎದುರಿಗೆ ಹಿತವಾದುದನ್ನೂ ಸತ್ಯವನ್ನೂ ಸಹ ಹೇಳಬೇಕೇ ಹೊರತು ಬೇರೆ ಇಲ್ಲವು. ಆದುದರಿಂದ ಅವನು ಹೇಳಿದುದನ್ನೇ ನಾನು ಈಗ ಹೇಳುವೆನು. ||೨೪||

ಒಳ್ಳೆಯದನ್ನು ಅಪೇಕ್ಷಿಸುವವನು ತನ್ನ ಪ್ರಭುವಿನ ಮುಂದೆ ನಿಜವಾದ ಮತ್ತು ಹಿತಕರವಾದ ಮಾತನ್ನು ಹೇಳಬೇಕು ಎಂಬುದಾಗಿ ಶುಭಕರವಾದ ನೀತಿಯು ಪ್ರಸಿದ್ಧವಾಗಿ ಇರುತ್ತದೆ. ||೨೫||

ಕೇವಲಂ ಚೇತ್ಪ್ರಿಯಂ ಬ್ರೂಯಾನ್ನ ತೇ ಕಾರ್ಯಂ ಭವಿಷ್ಯತಿ ।
ಪರುಷಂ ಚ ನ ವಕ್ತವ್ಯಂ ಕದಾಚಿಚ್ಛುಭಮಿಚ್ಛತಾ ॥೨೬॥

ಯಥಾ ರಿಪುಮುಖಾದ್ವಾಚಃ ಪ್ರಸರಂತಿ ವಿಷೋಪಮಾಃ ।
ತಥಾ ಭೃತ್ಯಮುಖಾನ್ನಾಥ ನಿಃಸರಂತಿ ಕಥಂ ಗಿರಃ ॥೨೭॥

ಯಾದೃಶಾನೀಹ ವಾಕ್ಯಾನಿ ತೇನೋಕ್ತಾನಿ ಮಹೀಪತೇ ।
ತಾದೃಶಾನಿ ನ ಮೇ ಜಿಹ್ವಾ ವಕ್ತುಮರ್ಹತಿ ಕರ್ಹಿಚಿತ್ ॥೨೮॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಹೇತುಗರ್ಭಂ ತೃಣಾಶನಃ ।
ಭೃಶಂ ಕೋಪಪರೀತಾತ್ಮಾ ಬಭೂವ ಮಹಿಷಾಸುರಃ ॥೨೯॥

---

ಹಿತಕರವಾದ ಮಾತನ್ನು ಮಾತ್ರವೇ ಹೇಳಿದರೆ ನಿನ್ನ ಕಾರ್ಯವು ಸರಿಯಾಗಿ ನಡೆಯುವುದಿಲ್ಲ. ನನಗೆ ಒಳ್ಳೆಯದಾಗಬೇಕಾದರೆ ನಾನು ಕರ್ಣಕಠೋರವಾದ ಹಿತಕರವಲ್ಲದ ಮಾತುಗಳನ್ನು ಯಾವಾಗಲೂ ಆಡಬಾರದು. ॥೨೬॥

ಶತ್ರುವಿನ ಮುಖದಿಂದ ವಿಷಕ್ಕೆ ಸಮಾನವಾದ ಮಾತುಗಳು ಹೇಗೆ ಹೊರಡುತ್ತವೆಯೋ ಹಾಗೆ ಭೃತ್ಯನ ಮುಖದಿಂದ ಕಠೋರವಾಕ್ಯಗಳು ಓ ಪ್ರಭುವೇ, ಹೇಗೆ ತಾನೇ ಹೊರಟಾವು ? ॥೨೭॥

ಸ್ವಾಮಿಯಾದ ಎಲೈ ಮಹಿಷರಾಜನೇ, ಆ ಇಂದ್ರನು ಯಾವ ಕಠಿನವಾಕ್ಯಗಳನ್ನು ಹೇಳಿದನೋ ಅಂತಹ ಮಾತುಗಳನ್ನು ಹೇಳಲು ನನ್ನ ನಾಲಿಗೆಯು ಯಾವಾಗಲೂ ಉದ್ಯುಕ್ತವಾಗಲಾರದು. ॥೨೮॥

ವ್ಯಾಸಮುನಿಯು ಹೇಳಿದನು—ಹುಲ್ಲನ್ನು ತಿನ್ನುವ ಮಹಿಷಜಾತಿಗೆ ಸೇರಿದ ಆ ಮಹಿಷಾಸುರನು ದೂತನು ಹೇಳಿದ ಭಾವಗರ್ಭಿತವಾದ ಮಾತುಗಳನ್ನು ಕೇಳಿ ಬಹಳ ಕೋಪದ ಆವೇಶದಿಂದ ಕೂಡಿದ ಮನಸ್ಸುಳ್ಳವನಾದನು ॥೨೯॥

**ಸಮಾಹೂಯಾಬ್ರವೀದ್ದೈತ್ಯಾನ್ ಕ್ರೋಧಸಂರಕ್ತಲೋಚನಃ ।**
**ಲಾಂಗೂಲಂ ಪೃಷ್ಠದೇಶೇ ಚ ಕೃತ್ವಾ ಮೂತ್ರಂ ಪರಿತ್ಯಜನ್ ॥೩೦॥**

**ಭೋ ಭೋ ದೈತ್ಯಾಃ ಸುರೇಂದ್ರೋಽಸೌ ಯುದ್ಧಕಾಮೋಽಸ್ತಿ ಸರ್ವಥಾ ।**
**ಬಲೋದ್ಯೋಗಂ ಕುರುಧ್ವಂ ವೈ ಜೇತವ್ಯೋಽಸೌ ಸುರಾಧಮಃ ॥೩೧॥**

**ಮದಗ್ರೇ ಕೋ ಭವೇಚ್ಛೂರಃ ಕೋಟಿಶಶ್ಚೇತ್ತಥಾವಿಧಾಃ ।**
**ನ ಬಿಭೇಮ್ಯೇಕತಃ ಕಾಮಂ ಹನಿಷ್ಯಾಮ್ಯದ್ಯ ಸರ್ವಥಾ ॥೩೨॥**

**ಶೂರಃ ಶಾಂತೇಷ್ವಸೌ ನೂನಂ ತಪಸ್ವಿಷು ಬಲಾಧಿಕಃ ।**
**ಬಲಕರ್ತಾ ಹಿ ಕುಹಕೋ ಲಂಪಟಃ ಪರದಾರಹೃತ್ ॥೩೩॥**

**ಅಪ್ಸರೋಬಲಸಂಮತ್ತಸ್ತಪೋವಿಘ್ನಕರಃ ಖಲಃ ।**
**ಛಿದ್ರಪ್ರಹರಣಃ ಪಾಪೋ ನಿತ್ಯಂ ವಿಶ್ವಾಸಘಾತಕಃ ॥೩೪॥**

---

ಆ ಮಹಿಷಾಸುರನು, ಮಹಾ ಕೋಪದಿಂದ ತನ್ನ ಕಣ್ಣುಗಳಲ್ಲಿ ಕೆಂಪೇರುತ್ತಿರಲು, ತನ್ನ ಬಾಲವನ್ನು ಬೆನ್ನಿಗೆ ತಗಲುವಂತೆ ಮೇಲಕ್ಕೆತ್ತಿ, ಮೂತ್ರವಿಸರ್ಜನೆ ಮಾಡುತ್ತಾ, ರಾಕ್ಷಸರನ್ನು ಕರೆದು ಹೀಗೆ ಹೇಳಿದನು ॥೩೦॥

ಎಲೈ ರಾಕ್ಷಸಶ್ರೇಷ್ಠರಿರಾ, ಈ ಇಂದ್ರನು ಸರ್ವಪ್ರಕಾರದಿಂದಲೂ ಯುದ್ಧವನ್ನೇ ಮಾಡಲು ಬಯಸುತ್ತಿರುವನು. ಆದುದರಿಂದ ನೀವುಗಳು ಸೇನೆಯನ್ನು ಸೇರಿಸಿ ಆ ದೇವಾಧಮನಾದ ಇಂದ್ರನನ್ನು ಜಯಿಸಲೇಬೇಕು ॥೩೧॥

ನನ್ನ ಮುಂದೆ ಶೂರನಾವನಿರುವನು? ಅಂಥ ಶೂರರು ಕೋಟಿಗಟ್ಟಲೆಯಾಗಿ ಒಂದೆಡೆಯಲ್ಲಿದ್ದರೂ ನಾನು ಹೆದರುವುದಿಲ್ಲವು. ಈಗ ಅಂತಹ ಶೂರನನ್ನು ನಾನು ನಿಶ್ಚಯವಾಗಿಯೂ ಕೊಲ್ಲುವೆನು ॥೩೨॥

ಇಂದ್ರನು ಸೌಮ್ಯಸ್ವಭಾವದವರ ಮಧ್ಯದಲ್ಲಿ ಮಾತ್ರ ಶೂರನು; ನಿರ್ಬಲರಾದ ತಪಸ್ವಿಗಳಾದವರಲ್ಲಿ ಬಲಿಷ್ಠನು; ಕುಹಕೋಪಾಯದಲ್ಲಿ ನಿಪುಣನು; ವಿಷಯಾಸಕ್ತನಾದವನು. ಇನ್ನೊಬ್ಬರ ಹೆಂಡಿತಿಯನ್ನು ಅಪಹರಿಸುವವನು ॥೩೩॥

ಈ ಇಂದ್ರನು ಅಪ್ಸರಸ್ತ್ರೀಯರ ಗುಂಪಿನಿಂದ ಕೂಡಿ ಮದಿಸಿರುವವನು; ತಪಸ್ಸಿಗೆ ವಿಘ್ನಮಾಡುವವನು; ನೀಚನು, ಇನ್ನೊಬ್ಬರ ವಿಪತ್ತನ್ನೇ ನೋಡಿಕೊಂಡು

ನಮುಚಿರ್ನಿಹತೋ ಯೇನ ಕೃತ್ವಾ ಸಂಧಿಂ ದುರಾತ್ಮನಾ ।
ಶಪಥಾನ್ವಿವಿಧಾನಾದೌ ಕೃತ್ವಾ ಭೀತೇನ ಛದ್ಮನಾ ॥೩೫॥

ವಿಷ್ಣುಸ್ತು ಕಪಟಾಚಾರ್ಯಃ ಕುಹಕಃ ಶಪಥಾಕರಃ ।
ನಾನಾರೂಪಧರಃ ಕಾಮಂ ಬಲಕೃದ್ದಂಭಪಂಡಿತಃ ॥೩೬॥

ಕೃತ್ವಾ ಕೋಲಾಕೃತಿಂ ಯೇನ ಹಿರಣ್ಯಾಕ್ಷೋ ನಿಪಾತಿತಃ ।
ಹಿರಣ್ಯಕಶಿಪುರ್ಯೇನ ನೃಸಿಂಹೇನ ಚ ಘಾತಿತಃ ॥೩೭॥

ನಾಹಂ ತದ್ವಶಗೋ ನೂನಂ ಭವೇಯಂ ದನುನಂದನಃ ।
ವಿಶ್ವಾಸಂ ನೈವ ಗಚ್ಛಾಮಿ ದೇವಾನಾಂ ಕುತ್ರ ಕರ್ಹಿಚಿತ್ ॥೩೮॥

---

ಆಗ ಅವರನ್ನು ಹೊಡೆಯುವವನು; ಪಾಪಿಷ್ಠನು; ನಂಬಿದವರಿಗೆ ಯಾವಾಗಲೂ ದ್ರೋಹವನ್ನೆಣಿಸುವವನು ॥೩೪॥

ಈ ದುರಾತ್ಮನಾದ ಇಂದ್ರನು ಭಯದಿಂದ ಹೆದರಿ ಮೊದಲು ಅನೇಕ ವಿಧವಾದ ಪ್ರತಿಜ್ಞೆಗಳನ್ನೂ ಮಾಡಿಕೊಟ್ಟು ಸಂಧಿಯನ್ನು ಮಾಡಿಕೊಂಡು ನಂಬಿಕೆಯನ್ನು ಹುಟ್ಟಿಸಿ ಆ ಮೇಲೆ ಮಾತಿಗೆ ತಪ್ಪಿ ನಮುಚಿಯನ್ನು ಮೋಸದಿಂದ ಕೊಂದನು ॥೩೫॥

ವಿಷ್ಣುವೂ ಕೂಡ ಮೋಸ ಮಾಡುವುದರಲ್ಲಿ ಅಗ್ರಗಣ್ಯನು, ಕುತ್ಸಿತನು, ಸುಳ್ಳು ಪ್ರತಿಜ್ಞೆಗಳಿಗೆ ಗಣಿಯಂತಿರುವನು. ಅನೇಕವಾದ ಆಕಾರವನ್ನು ಧರಿಸುವವನು, ಡಂಭಾಚಾರ ಮಾಡುವುದರಲ್ಲಿ ಬಹಳವಾಗಿ ನಿಪುಣನು ॥೩೬॥

ಹಂದಿಯ ಆಕಾರವನ್ನು ಹೊಂದಿದ ವಿಷ್ಣುವಿನಿಂದ ಹಿರಣ್ಯಾಕ್ಷನು ಕೊಲ್ಲಲ್ಪಟ್ಟನು. ನರಸಿಂಹಾಕೃತಿಯನ್ನು ಹೊಂದಿ ವಿಷ್ಣುವು ಹಿರಣ್ಯಕಶಿಪುವನ್ನು ಕೊಂದನು ॥೩೭॥

ಎಲೈ ದಾನವಪುತ್ರರೇ ಕೇಳಿ—ನಾನು ಆ ವಿಷ್ಣುವಿನ ಅಧೀನಕ್ಕೆ ಸಿಕ್ಕುವವನಲ್ಲವು. ದೇವತೆಗಳ ವಿಷಯದಲ್ಲಿ ಎಲ್ಲಿಯೂ, ಯಾವಾಗಲೂ ವಿಶ್ವಾಸವನ್ನಿಡುವವನಲ್ಲವು ॥೩೮॥

ಕಿಂ ಕರಿಷ್ಯತಿ ಮೇ ವಿಷ್ಣುರಿಂದ್ರೋ ವಾ ಬಲವತ್ತರಃ ।
ರುದ್ರೋ ವಾಪಿ ನ ಮೇ ಶಕ್ತಃ ಪ್ರತಿಕರ್ತುಂ ರಣಾಂಗಣೇ ॥೩೯॥

ತ್ರಿವಿಷ್ಟಪಂ ಗ್ರಹೀಷ್ಯಾಮಿ ಜಿತ್ವೇಂದ್ರಂ ವರುಣಂ ಯಮಮ್ ।
ಧನದಂ ಪಾವಕಂ ಚೈವ ಚಂದ್ರಸೂರ್ಯೌ ವಿಜಿತ್ಯ ಚ ॥೪೦॥

ಯಜ್ಞಭಾಗಭುಜಃ ಸರ್ವೇ ಭವಿಷ್ಯಾಮೋಽದ್ಯ ಸೋಮಪಾಃ ।
ಜಿತ್ವಾ ದೇವಸಮೂಹಂ ಚ ವಿಹರಿಷ್ಯಾಮಿ ದಾನವೈಃ ॥೪೧॥

ನ ಮೇ ಭಯಂ ಸುರೇಭ್ಯಶ್ಚ ವರದಾನೇನ ದಾನವಾಃ ।
ಮರಣಂ ನ ನರೇಭ್ಯಶ್ಚ ನಾರೀ ಕಿಂ ಮೇ ಕರಿಷ್ಯತಿ ॥೪೨॥

ಪಾತಾಲಪರ್ವತೇಭ್ಯಶ್ಚ ಸಮಾಹೂಯ ವರಾನ್ವರಾನ್ ।
ದಾನವಾನ್ಮಮ ಸೈನ್ಯೇಶಾನ್ ಕುರ್ವಂತು ತ್ವರಿತಾಶ್ಚರಾಃ ॥೪೩॥

---

ವಿಷ್ಣುವು ನನಗೆ ಏನನ್ನು ಮಾಡಿಯಾನು? ಬಲಿಷ್ಠನಾದ ಇಂದ್ರನು ತಾನೇ ಏನನ್ನು ಮಾಡಬಲ್ಲನು? ಯುದ್ಧದಲ್ಲಿ ನನಗೆ ಪ್ರತೀಕಾರವನ್ನು ಮಾಡಲು ರುದ್ರನಿಗೂ ಸಾಧ್ಯವಿಲ್ಲವು ॥೩೯॥

ಇಂದ್ರ, ವರುಣ, ಯಮ, ಕುಬೇರ, ಅಗ್ನಿ, ಚಂದ್ರ, ಸೂರ್ಯ ಇವರೆಲ್ಲರನ್ನೂ ಜಯಿಸಿ ಸ್ವರ್ಗಲೋಕವನ್ನು ಹಿಡಿದುಕೊಳ್ಳುವೆನು ॥೪೦॥

ಈಗ ನಾವೆಲ್ಲರೂ ಯಜ್ಞ ಯಾಗಗಳಲ್ಲಿ ಹವಿಸ್ಸುಗಳ ಭಾಗವನ್ನು ಸ್ವೀಕರಿಸುವವರಾಗಿಯೂ ಸೋಮಪಾನವನ್ನು ಮಾಡುವವರಾಗಿಯೂ ಇರೋಣ. ದೇವತೆಗಳ ಸಮೂಹವನ್ನು ಗೆದ್ದು ಇನ್ನು ಮುಂದೆ ನಾನು ದಾನವರೊಡಗೂಡಿ ವಿಹಾರಮಾಡುವೆನು. ॥೪೧॥

ಎಲೈ ದಾನವರೇ ಕೇಳಿರಿ. ನನಗೆ ವರಪ್ರದಾನದ ಬಲವಿರುವುದರಿಂದ ದೇವತೆಗಳಿಂದಲೂ, ಮನುಷ್ಯರಿಂದಲೂ, ಭಯವಾಗಲಿ, ಮರಣವಾಗಲೀ ಇರುವುದಿಲ್ಲವು. ಹೀಗಿರುವಲ್ಲಿ ಅಬಲೆಯಾದ ಹೆಂಗಸು ನನಗೆ ಏನನ್ನು ಮಾಡುವಳು? ॥೪೨॥

ನನ್ನ ದೂತರು, ಪಾತಾಳಲೋಕದಿಂದಲೂ, ಪರ್ವತಗಳಿಂದಲೂ ಅಲ್ಲಿರುವ ಶ್ರೇಷ್ಠರಾದ ದಾನವರನ್ನು ಕರೆದುಕೊಂಡು ಬಂದು ಅವರೆಲ್ಲರನ್ನೂ ನನ್ನ ಸೈನ್ಯದಲ್ಲಿ ಸೇನಾಪತಿಗಳನ್ನಾಗಿ ಮಾಡಲಿ. ॥೪೩॥

ಏಕೋಽಹಂ ಸರ್ವದೇವೇಶಾನ್ವಿಜೇತುಂ ದಾನವಾಃ ಕ್ಷಮಃ ।
ಶೋಭಾರ್ಥಂ ವಃ ಸಮಾಹೂಯ ನಯಾಮಿ ಸುರಸಂಗಮೇ ॥೪೪॥

ಶೃಂಗಾಭ್ಯಾಂ ಚ ಖುರಾಭ್ಯಾಂ ಚ ಹನಿಷ್ಯೇಽಹಂ ಸುರಾನ್ಕಿಲ ।
ನ ಮೇ ಭಯಂ ಸುರೇಭ್ಯಶ್ಚ ವರದಾನಪ್ರಭಾವತಃ ॥೪೫॥

ಅವಧ್ಯೋಽಹಂ ಸುರಗಣೈರಸುರೈರ್ಮಾನವೈ ಸ್ತಥಾ ।
ತಸ್ಮಾತ್ಸಜ್ಜಾ ಭವಂತ್ವದ್ಯ ದೇವಲೋಕಜಯಾಯ ವೈ ॥೪೬॥

ಜಿತ್ವಾ ಸುರಾಲಯಂ ದೈತ್ಯಾ ವಿಹರಿಷ್ಯಾಮಿ ನಂದನೇ ।
ಮಂದಾರಕುಸುಮಾಪೀಡಾಃ ದೇವಯೋಷಿತ್ಸಮನ್ವಿತಾಃ ॥೪೭॥

ಕಾಮಧೇನುಪಯೋತ್ಸಿಕ್ತಾಃ ಸುಧಾಪಾನಪ್ರಮೋದಿತಾಃ ।
ದೇವಗಂಧರ್ವಗೀತಾದಿನೃತ್ಯಲಾಸ್ಯಸಮನ್ವಿತಾಃ ॥೪೮॥

---

ಎಲೈ ದಾನವರೇ ಕೇಳಿರಿ—ನಾನು ಒಬ್ಬನೇ ದೇವಾಧಿಪತಿಗಳೆಲ್ಲರನ್ನೂ ಗೆಲ್ಲಲು ಸಮರ್ಥನಾಗಿರುವೆನು. ದೇವತೆಗಳೊಡನೆ ಯುದ್ಧಮಾಡಲು ನಿಮ್ಮನ್ನು ಕೇವಲ ಅಲಂಕಾರಕ್ಕಾಗಿ ಕರೆದುಕೊಂಡು ಹೋಗುವೆನು. ॥೪೪॥

ನಾನು ನನ್ನ ಕೊಂಬುಗಳಿಂದಲೂ, ಗೊರಸುಗಳಿಂದಲೂ ಸಹ ದೇವತೆಗಳನ್ನು ಕೊಲ್ಲುವೆನು. ನನಗೆ ವರದ ಮಹಿಮೆಯಿಂದ ದೇವತೆಗಳ ಭಯವೇನೂ ಇಲ್ಲವು. ॥೪೫॥

ದೇವತೆಗಳು, ರಾಕ್ಷಸರು, ಮನುಷ್ಯರು ಇವರುಗಳಿಂದ ನಾನು ಅವಧ್ಯನಾಗಿರುವೆನು. ಎಂದರೆ ಅವರುಗಳು ನನ್ನನ್ನು ಕೊಲ್ಲಲು ಸಾಧ್ಯವಿಲ್ಲ. ಆದುದರಿಂದ ಈಗ ನೀವೆಲ್ಲರೂ ದೇವಲೋಕವನ್ನು ಜಯಿಸುವುದಕ್ಕಾಗಿ ಸಿದ್ಧತೆಯನ್ನು ಮಾಡಿಕೊಳ್ಳಿರಿ. ॥೪೬॥

ಎಲೈ ದೈತ್ಯರೇ ಕೇಳಿರಿ; ಸ್ವರ್ಗವನ್ನು ಜಯಿಸಿ ನಂದನವನದಲ್ಲಿ ನಾನು ವಿಹರಿಸುವೆನು. ಅಲ್ಲದೆ ನಾವೆಲ್ಲರೂ ಮಂದಾರಪುಷ್ಪಗಳಿಂದಲಂಕೃತರಾಗಿ ದೇವಸ್ತ್ರೀಯರೊಡಗೂಡಿ ವಿಹರಿಸೋಣ. ॥೪೭॥

ಕಾಮಧೇನುವಿನ ಹಾಲನ್ನು ಕುಡಿದು, ಅಮೃತಪಾನವನ್ನು ಮಾಡಿ ಸಂತೋಷದಿಂದಿರೋಣ. ದೇವತೆಗಳು ಮತ್ತು ಗಂಧರ್ವರು ಇವರುಗಳ ಸಂಗೀತ, ನರ್ತನ, ಹಾವಭಾವವಿಲಾಸಗಳಿಂದ ಕೂಡಿ ಸಂತೋಷಪಡೋಣ. ॥೪೮॥

ಊರ್ವಶೀ ಮೇನಕಾ ರಂಭಾ ಘೃತಾಚೀ ಚ ತಿಲೋತ್ತಮಾ ।
ಪ್ರಮದ್ವರಾ ಮಹಾಸೇನಾ ಮಿಶ್ರಕೇಶೀ ಮದೋತ್ಕಟಾ ॥೪೯॥

ವಿಪ್ರಚಿತ್ತಿಪ್ರಭೃತಯೋ ನೃತ್ಯಗೀತವಿಶಾರದಾಃ ।
ರಂಜಯಿಷ್ಯಂತಿ ವಃ ಸರ್ವಾನ್ನಾನಾಽಽಸವನಿಷೇವಣೈಃ ॥೫೦॥

ಸರ್ವೇ ಸಜ್ಜಾ ಭವಂತ್ವದ್ಯ ರೋಚತಾಂ ಗಮನಂ ದಿವಿ ।
ಸಂಗ್ರಾಮಾರ್ಥಂ ಸುರೈಃ ಸಾರ್ಧಂ ಕೃತ್ವಾ ಮಂಗಲಮುತ್ತಮಂ॥೫೧॥

ರಕ್ಷಣಾರ್ಥಂ ಚ ಸರ್ವೇಷಾಂ ಭಾರ್ಗವಂ ಮುನಿಸತ್ತಮಂ ।
ಸಮಾಹೂಯ ಚ ಸಂಪೂಜ್ಯ ಸ್ಥಾಪ್ಯ ಯಜ್ಞೇ ಗುರುಂ ಪರಂ ॥೫೨॥

---

ಊರ್ವಶೀ, ಮೇನಕೆ, ರಂಭೆ, ಘೃತಾಚೀ, ತಿಲೋತ್ತಮೆ, ಪ್ರಮದ್ವರಾ, ಮಹಾಸೇನಾ, ಮಿಶ್ರಕೇಶೀ, ಮದೋತ್ಕಟಾ ಮುಂತಾದ ಅಪ್ಸರ ರಮಣಿಯರೂ, ಮತ್ತು, ॥೪೯॥

ವಿಪ್ರಚಿತ್ತಿ ಇವರೇ ಮೊದಲಾದ ಅಪ್ಸರಸ್ತ್ರೀಯರು ನರ್ತನ ಮತ್ತು ಸಂಗೀತ ಗಳಲ್ಲಿ ನಿಪುಣರಾಗಿರುವರು. ಅವರೆಲ್ಲರೂ ನಿಮಗೆ ಅನೇಕವಿಧವಾದ ಮದ್ಯಗಳನ್ನು ಪಾನಮಾಡಲು ಸಿದ್ಧಪಡಿಸಿ ನಿಮ್ಮ ಮನೋರಂಜನೆಯನ್ನು ಮಾಡುವರು. ॥೫೦॥

ಈಗ ನೀವೆಲ್ಲರೂ ಯುದ್ಧಕ್ಕಾಗಿ ಸಿದ್ಧರಾಗಿರಿ. ಸ್ವರ್ಗಕ್ಕೆ ಹೋಗಲು ನೀವೆಲ್ಲರೂ ಇಚ್ಛೆಯುಳ್ಳವರಾಗಿರಿ. ದೇವತೆಗಳೊಡನೆ ಯುದ್ಧಮಾಡಲು ಹೊರಡು ವಾಗ ವಿಜಯ ಯಾತ್ರೆಯ ಪೂರ್ವಾಂಗವಾಗಿ ಶ್ರೇಷ್ಠವಾದ ಮಂಗಳ ಕರ್ಮಗಳನ್ನೂ ಆಚರಿಸಿರಿ. ॥೫೧॥

ಮುನಿಶ್ರೇಷ್ಠನಾದ ಶುಕ್ರಾಚಾರ್ಯನನ್ನು ಕರೆದುಕೊಂಡು ಬಂದು, ಯುದ್ಧ ವಿಜಯಕ್ಕಾಗಿ ನಾವು ಮಾಡುವ ಕಾಮ್ಯಯಜ್ಞದಲ್ಲಿ ಅವನನ್ನು ಪರಮ ಗುರುವನ್ನಾಗಿ ವರಣಮಾಡಿ, ಅವನನ್ನು ಸತ್ಕಾರಗಳಿಂದ ಪೂಜಿಸಿ, ಯುದ್ಧದಲ್ಲಿ ನಿಮಗೆಲ್ಲರಿಗೂ ಮಂಗಳವುಂಟಾಗುವಂತೆ ತಕ್ಕ ಧರ್ಮಾಚರಣೆಯಿಂದ ರಕ್ಷಣೆಯನ್ನೂ ಪಡೆಯಿರಿ. ॥೫೨॥

|| ವ್ಯಾಸ ಉವಾಚ ||

**ಇತಿ ಸಂದಿಶ್ಯ ದೈತ್ಯೇಂದ್ರಾನ್ಮಹಿಷಃ ಪಾಪಧೀಸ್ತದಾ ।**
**ಜಗಾಮ ತ್ವರಿತೋ ರಾಜನ್ ಭವನಂ ಸ್ವಂ ಮುದಾನ್ವಿತಃ   ||೫೩||**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ತೃತೀಯೋಽಧ್ಯಾಯಃ**

---

ವ್ಯಾಸಋಷಿಯು ಹೇಳಿದನು— ಎಲೈ ಜನಮೇಜಯರಾಜನೇ, ಪಾಪಕೆಲಸಗಳಲ್ಲಿಯೇ ಮನಸ್ಸುಳ್ಳ ಆ ಮಹಿಷಾಸುರನು ಈ ರೀತಿಯಲ್ಲಿ ದೈತ್ಯಶ್ರೇಷ್ಠರಿಗೆ ಆಜ್ಞಾಪಿಸಿ ಸಂತೋಷದಿಂದ ಬೇಗನೆ ತನ್ನ ಮನೆಯನ್ನು ಸೇರಿದನು. ||೫೩||

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### ॥ ಚತುರ್ಥೋಽಧ್ಯಾಯಃ ॥

### ನಾಲ್ಕನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಗತೇ ದೂತೇ ಸುರೇಂದ್ರೋಽಪಿ ಸಮಾಹೂಯ ಸುರಾನಥ ।**
**ಯಮವಾಯುಧನಾಧ್ಯಕ್ಷವರುಣಾನಿದಮೂಚಿವಾನ್ ॥೧॥**

**ಮಹಿಷೋ ನಾಮ ದೈತ್ಯೇಂದ್ರೋ ರಂಭಪುತ್ರೋ ಮಹಾಬಲಃ ।**
**ವರದರ್ಪಮದೋನ್ಮತ್ತೋ ಮಾಯಾಶತವಿಚಕ್ಷಣಃ ॥೨॥**

**ತಸ್ಯ ದೂತೋಽದ್ಯ ಸಂಪ್ರಾಪ್ತಃ ಪ್ರೇಷಿತಸ್ತೇನ ಭೋಃ ಸುರಾಃ ।**
**ಸ್ವರ್ಗಕಾಮೇನ ಲುಬ್ಧೇನ ಮಾಮುವಾಚೇದೃಶಂ ವಚಃ ॥೩॥**

---

ವ್ಯಾಸಋಷಿಯು ಹೇಳಿದನು — ಮಹಿಷಾಸುರನ ದೂತನು ಹೊರಟುಹೋದ ಮೇಲೆ, ಇಂದ್ರನೂ ಕೂಡ, ಯಮ, ವಾಯು, ಕುಬೇರ, ವರುಣ ಇವರೇ ಮೊದಲಾದ ದೇವತೆಗಳನ್ನು ಮಂತ್ರಾಲೋಚನೆಗಾಗಿ ಕರೆಯಿಸಿ ಅವರನ್ನು ಕುರಿತು ಹೀಗೆ ಹೇಳಿದನು. ॥೧॥

ಓ ದೇವಪ್ರಮುಖರೇ, ರಂಭನ ಮಗನಾದ ಮಹಿಷಾಸುರನೆಂಬ ಬಲಿಷ್ಠನಾದ ದೈತ್ಯನು ಅನೇಕವಿಧವಾದ ಮೋಸಗಳಲ್ಲಿ ನಿಪುಣನಾಗಿ ತನಗೆ ಬ್ರಹ್ಮನಿಂದ ದೊರೆತ ವರದಿಂದ ಕೊಬ್ಬಿಮೆರೆಯುತ್ತಿರುವನು. ॥೨॥

ಸ್ವರ್ಗಲೋಕವನ್ನು ಜಯಿಸಬೇಕೆಂಬ ಆಸೆಯಿಂದ ಲುಬ್ಧನಾದ ಆ ಮಹಿಷಾಸುರನು ಕಳುಹಿಸಿದ ದೂತನು ನನ್ನ ಬಳಿಗೆ ಬಂದು ನನ್ನನ್ನು ಕುರಿತು ಈ ಮಾತನ್ನು ಹೇಳಿದನು. ॥೩॥

ತ್ಯಜ ದೇವಾಲಯಂ ಶಕ್ರ ಯಥೇಚ್ಛಂ ವ್ರಜ ವಾಸವ ।
ಸೇವಾಂ ವಾ ಕುರು ದೈತ್ಯಸ್ಯ ಮಹಿಷಸ್ಯ ಮಹಾತ್ಮನಃ ॥೪॥

ದಯಾವಾನ್ದಾನವೇಂದ್ರೋಽಸೌ ಸ ತೇ ವೃತ್ತಿಂ ವಿಧಾಸ್ಯತಿ ।
ನತೇಷು ಭೃತ್ಯಭೂತೇಷು ನ ಕುಪ್ಯತಿ ಕದಾಚನ ॥೫॥

ನೋ ಚೇದ್ಯುದ್ಧಾಯ ದೇವೇಶ ಸೇನೋದ್ಯೋಗಂ ಕುರು ಸ್ವಯಂ ।
ಗತೇ ಮಯಿ ಸ ದೈತ್ಯೇಂದ್ರಸ್ತ್ವರಿತಃ ಸಮುಪೈಷ್ಯತಿ ॥೬॥

ಇತ್ಯುಕ್ತ್ವಾ ಸ ಗತೋ ದೂತೋ ದಾನವಸ್ಯ ದುರಾತ್ಮನಃ ।
ಕಿಂ ಕರ್ತವ್ಯಮತಃ ಕಾರ್ಯಂ ಚಿಂತಯಧ್ವಂ ಸುರೋತ್ತಮಾಃ ॥೭॥

ದುರ್ಬಲೋಽಪಿ ನ ಚೋಪೇಕ್ಷ್ಯಃ ಶತ್ರುರ್ಬಲವತಾ ಸುರಾಃ ।
ವಿಶೇಷೇಣ ಸದೋದ್ಯೋಗೀ ಬಲವಾನ್ ಬಲದರ್ಪಿತಃ ॥೮॥

---

ಎಲೈ ಇಂದ್ರನೇ, ನೀನು ಸ್ವರ್ಗಲೋಕವನ್ನು ನಮ್ಮ ರಾಜನಿಗಾಗಿ ಬಿಟ್ಟು, ಬೇರೆಲ್ಲಿಯಾದರೂ ನಿನ್ನ ಮನಬಂದಂತೆ ಹೊರಟುಹೋಗು. ಇಲ್ಲದಿದ್ದರೆ ಮಹಾತ್ಮನಾದ ನಮ್ಮ ದೈತ್ಯರಾಜನ ಸೇವೆಯನ್ನು ಮಾಡಿಕೊಂಡು ಅವನ ಅಧೀನದಲ್ಲಿರು. ॥೪॥

ದಾನವರಿಗೆ ದೊರೆಯಾದ ಈ ಮಹಿಷಾಸುರನು ತನಗೆ ನಮ್ರರಾದ ಭೃತ್ಯರಾದವರಲ್ಲಿ ಯಾವಾಗಲೂ ಕೋಪಗೊಳ್ಳದೆ ಬಹಳ ಕರುಣೆಯಿಂದ ವರ್ತಿಸುವನು. ಅವನು ನಿನಗೆ ತಕ್ಕ ಜೀವನೋಪಾಯವನ್ನು ಕಲ್ಪಿಸುವನು. ॥೫॥

ಎಲೈ ದೇವೇಂದ್ರನೇ, ನೀನು ಹೀಗೆ ಮಾಡದಿದ್ದರೆ ಯುದ್ಧಮಾಡುವುದಕ್ಕೆ ಸಿದ್ಧನಾಗಿ ನಿನ್ನ ಸೇನೆಯನ್ನು ಸಜ್ಜುಗೊಳಿಸು. ಏಕೆಂದರೆ ಅವನಲ್ಲಿಗೆ ಹೋಗಿ ನಿನ್ನ ಅಭಿಪ್ರಾಯವನ್ನು ನಾನು ತಿಳಿಸಿದಕೂಡಲೆ ಆ ದೈತ್ಯೇಂದ್ರನಾದ ಮಹಿಷಾಸುರನು ಜಾಗ್ರತೆಯಾಗಿ ನಿನ್ನೊಡನೆ ಯುದ್ಧಮಾಡಲು ಬರುವನು. ॥೬॥

ಆ ದುಷ್ಟರಾಕ್ಷಸನ ದೂತನು ಈ ರೀತಿಯಲ್ಲಿ ಹೇಳಿ ಹೊರಟುಹೋದನು. ಎಲೈ ದೇವಶ್ರೇಷ್ಠರೇ, ಇನ್ನು ಮುಂದೆ ನಾವು ಮಾಡಬೇಕಾದ ಕರ್ತವ್ಯವೇನೆಂಬುದನ್ನು ನೀವು ಆಲೋಚಿಸಿ ನಿಶ್ಚಯಿಸಿರಿ. ॥೭॥

ಎಲೈ ದೇವತೆಗಳಿರಾ, ಕೇಳಿರಿ. ಬಲಿಷ್ಠನಾದವನೂ ಕೂಡ ತನ್ನ ಶತ್ರುವು ದುರ್ಬಲನೆಂದು ಉಪೇಕ್ಷೆಮಾಡಲಾಗದು. ಹೀಗಿರುವಲ್ಲಿ ಯಾವಾಗಲೂ ಉದ್ಯೋಗ

**ಉದ್ಯಮಃ ಕಿಲ ಕರ್ತವ್ಯೋ ಯಥಾಬುದ್ಧಿ ಯಥಾಬಲಂ ।**
**ದೈವಾಧೀನೋ ಭವೇನ್ನೂನಂ ಜಯೋ ವಾಽಥ ಪರಾಜಯಃ ॥೯॥**

**ಸಂಧಿಯೋಗೋ ನ ಚಾತ್ರಾಸ್ತಿ ಖಲೇ ಸಂಧಿರ್ನಿರರ್ಥಕಃ ।**
**ಸರ್ವಥಾ ಸಾಧುಭಿಃ ಕಾರ್ಯಂ ವಿಚಾರ್ಯ ಚ ಪುನಃ ಪುನಃ ॥೧೦॥**

**ಯಾನಮಪ್ಯಧುನಾ ನೈವ ಕರ್ತವ್ಯಂ ಸಹಸಾ ಪುನಃ ।**
**ಪ್ರೇಕ್ಷಕಾಃ ಪ್ರೇಷಣೀಯಾಶ್ಚ ಶೀಘ್ರಗಾಃ ಸುಪ್ರವೇಶಕಾಃ ॥೧೧॥**

**ಇಂಗಿತಜ್ಞಾಶ್ಚ ನಿಃಸಂಗಾ ನಿಃಸ್ಪೃಹಾಃ ಸತ್ಯವಾದಿನಃ ।**
**ಸೇನಾಭಿಯೋಗಂ ಪ್ರಸ್ಥಾನಂ ಬಲಸಂಖ್ಯಾಂ ಯಥಾರ್ಥತಃ ॥೧೨॥**

---

ಪರನಾಗಿಯೂ ಬಲಿಷ್ಠನಾಗಿಯೂ, ಬಲದಿಂದ ಕೊಬ್ಬಿದವನಾಗಿಯೂ ಇರುವ ಈ ಮಹಿಷಾಸುರನ ವಿಷಯದಲ್ಲಿ ಖಂಡಿತವಾಗಿಯೂ ಉಪೇಕ್ಷೆಮಾಡಲಾಗದು. ||೮||

ನಮ್ಮ ಬುದ್ಧಿ ಇರುವಷ್ಟು ಮಟ್ಟಿಗೆ ನಮ್ಮ ಬಲಕ್ಕೆ ಅನುಸಾರವಾಗಿ ನಾವು ಪ್ರಯತ್ನವನ್ನು ಮಾಡಬೇಕು. ನಾವು ಆಲಸರಾಗಿರಬಾರದು. ಜಯಾಪಜಯಗಳು ದೈವಾಧೀನವು. ಇದು ನಿಶ್ಚಯವು. ||೯||

ಸಾಧುಗಳಾದವರೊಡನೆ ಚನ್ನಾಗಿ ವಿಚಾರಮಾಡಿ ಸಂಧಿಯನ್ನು ಮಾಡಿ ಕೊಳ್ಳಬಹುದು. ನೀಚನಾದ ಈ ಮಹಿಷಾಸುರನ ವಿಷಯದಲ್ಲಿ ಸಂಧಿಯು ನಿಷ್ಪ್ರಯೋಜನವಾದುದರಿಂದ ಅದರ ಪ್ರಸ್ತಾಪವೇ ಇರುವುದಿಲ್ಲ. ||೧೦||

ಆದರೂ ಶತ್ರುವಿನ ಮೇಲೆ ದಂಡೆತ್ತಿಕೊಂಡು ಈಗಲೇ ದುಡುಕಿ ಹೊರಡ ಕೂಡದು. ಮತ್ತೇನೆಂದರೆ, ಶತ್ರುಗಳ ಬರುವಿಕೆಯನ್ನು ಗುಟ್ಟಾಗಿ ನೋಡುವವರೂ, ಮತ್ತು ಜಾಗ್ರತೆಯಾಗಿ ಹೋಗಿ ಶತ್ರುಗಳ ಶಿಬಿರವನ್ನು ರಹಸ್ಯವಾಗಿ ಪ್ರವೇಶಿಸಬಲ್ಲವರೂ, ಆದ ದೂತರನ್ನು ಮುಂಚಿತವಾಗಿ ಕಳುಹಿಸಬೇಕು. ||೧೧||

ಶತ್ರುಗಳ ಮರ್ಮವನ್ನು ಎಂದರೆ ಅವರ ಉದ್ದೇಶ ಮತ್ತು ಅಭಿಪ್ರಾಯಗಳನ್ನೂ, ಬಲಗಳ ಪರಿಮಾಣವನ್ನೂ, ಅವರ ಸೇನೆಯಲ್ಲಿರುವ ಶೂರರು ಯಾರು ಯಾರು ಎಂಬುವುದನ್ನೂ ಯಥಾವತ್ತಾಗಿ ತಪ್ಪದೆ ತಿಳಿದುಕೊಂಡುಬರಲು, ಶತ್ರುಗಳು ತೋರಿಸುವ ಆಶೆ ಮೊದಲಾದವುಗಳಿಗೆ ಒಳಪಡದವರಾಗಿಯೂ, ಸತ್ಯವಾದಿಗಳಾ

ವೀರಣಾಂ ಚ ಪರಿಜ್ಞಾನಂ ಕೃತ್ವಾಽಽಯಾಂತು ತ್ವರಾನ್ವಿತಾಃ ॥
ಜ್ಞಾತ್ವಾ ದೈತ್ಯಪತೇಸ್ತಸ್ಯ ಸೈನ್ಯಸ್ಯ ಚ ಬಲಾಬಲಂ ।
ಕರಿಷ್ಯಾಮಿ ತತಸ್ತೂರ್ಣಂ ಯಾನಂ ವಾ ದುರ್ಗಸಂಗ್ರಹಂ ॥೧೩॥

ವಿಚಾರ್ಯಂ ಖಲು ಕರ್ತವ್ಯಂ ಕಾರ್ಯಂ ಬುದ್ಧಿಮತಾ ಸದಾ ।
ಸಹಸಾ ವಿಹಿತಂ ಕಾರ್ಯಂ ದುಃಖದಂ ಸರ್ವಥಾ ಭವೇತ್ ॥೧೪॥

ತಸ್ಮಾದ್ವಿಮೃಶ್ಯ ಕರ್ತವ್ಯಂ ಸುಖದಂ ಸರ್ವದಾ ಬುಧೈಃ ।
ನಾತ್ರ ಭೇದವಿಧಿರ್ನ್ಯಾಯ್ಯೋ ದಾನವೇಷು ಚ ಸರ್ವಥಾ ॥೧೫॥

ಏಕಚಿತ್ತೇಷು ಕಾರ್ಯೇಽಸ್ಮಿಂಸ್ತಸ್ಮಾಚ್ಚಾರಾ ವ್ರಜಂತು ವೈ ।
ಜ್ಞಾತ್ವಾ ಬಲಾಬಲಂ ತೇಷಾಂ ಪಶ್ಚಾನ್ನೀತಿರ್ವಿಚಾರ್ಯ ಚ ॥೧೬॥

---

ಗಿಯೂ ಇರುವ ದೂತರನ್ನು ಮೊದಲು ಕಳುಹಿಸಬೇಕು. ಅವರು ಜಾಗ್ರತೆಯಾಗಿ ಹೋಗಿ ಈ ವಿಷಯಗಳನ್ನು ಚನ್ನಾಗಿ ತಿಳಿದುಕೊಂಡು ಬರಲಿ. ॥೧೨॥

ದೈತ್ಯರಿಗೆ ಅಧಿಪತಿಯಾಗಿರುವ ಆ ಮಹಿಷಾಸುರನ ಸೇನೆಯ ಬಲಾಬಲವನ್ನು ತಿಳಿದುಕೊಂಡು ಅನಂತರದಲ್ಲಿ ಜಾಗ್ರತೆಯಾಗಿ ಸೇನಾಸಮೇತನಾಗಿ ಯುದ್ಧಕ್ಕೆ ದಂಡೆತ್ತಿ ಹೊರಡುವುದೋ ಅಥವಾ ಭದ್ರವಾದ ದುರ್ಗದಲ್ಲಿದ್ದು ಶತ್ರುವನ್ನು ಎದುರಿಸುವುದೋ ಎಂಬುದನ್ನು ಜಾಗ್ರತೆಯಾಗಿ ನಿಶ್ಚಯಿಸಿ ಮಾಡುವೆನು ॥೧೩॥

ಬುದ್ಧಿವಂತನಾದವನು ಯಾವಾಗಲೂ ಚನ್ನಾಗಿ ವಿಚಾರಮಾಡಿ ಕೆಲಸವನ್ನು ಮಾಡಬೇಕು. ವಿಚಾರಮಾಡದೆ ದುಡುಕಿ ಮಾಡಿದ ಕೆಲಸವು ಸರ್ವಪ್ರಕಾರದಿಂದಲೂ ಪಶ್ಚಾತ್ತಾಪ ದುಃಖವನ್ನುಂಟುಮಾಡುವುದು ॥೧೪॥

ಆದುದರಿಂದ ಬುದ್ಧಿವಂತರಾದವರು ಚನ್ನಾಗಿ ವಿಮರ್ಶೆಮಾಡಿ ಸುಖವನ್ನುಂಟುಮಾಡುವ ಕೆಲಸವನ್ನು ಮಾಡಬೇಕು. ದಾನವರ ವಿಷಯದಲ್ಲಿ ಭೇದೋಪಾಯವು ಖಂಡಿತವಾಗಿಯೂ ನ್ಯಾಯಸಮ್ಮತವಾಗಿರುವುದಿಲ್ಲವು. ಏಕೆಂದರೆ ॥೧೫॥

ದಾನವರೆಲ್ಲರೂ ಈ ಕಾರ್ಯದಲ್ಲಿ ಒಗ್ಗಟ್ಟಾಗಿ ಒಂದೇ ಅಭಿಪ್ರಾಯದಿಂದಿರುವಾಗ ಭೇದೋಪಾಯವು ನಡೆಯಲಾರದು. ಆದುದರಿಂದ ದೂತರು ಹೋಗಿ ಶತ್ರುಗಳ ಬಲಾಬಲಗಳ ವಿಚಾರವನ್ನು ತಿಳಿದುಕೊಂಡು ಬಂದಮೇಲೆ, ನೀತಿಶಾಸ್ತ್ರವನ್ನು

ವಿಧೇಯಾ ವಿಧಿವತ್ತಜ್ಜ್ಞೈಸ್ತೇಷು ಕಾರ್ಯಪರೇಷು ಚ ।
ಅನ್ಯಥಾ ವಿಹಿತಂ ಕಾರ್ಯಂ ವಿಪರೀತಫಲಪ್ರದಂ ॥೧೭॥
ಸರ್ವಥಾ ತದ್ಭವೇನ್ನೂನಮಜ್ಞಾತಮೌಷಧಂ ಯಥಾ ।

॥ ವ್ಯಾಸ ಉವಾಚ ॥

ಇತಿ ಸಂಚಿಂತ್ಯ ತೈಃಸರ್ವೈಃ ಪ್ರಣಿಧಿಂ ಕಾರ್ಯವೇದಿನಂ ॥೧೮॥

ಪ್ರೇಷಯಾಮಾಸ ದೇವೇಂದ್ರಃ ಪರಿಜ್ಞಾನಾಯ ಪಾರ್ಥಿವಃ ।
ದೂತಸ್ತು ತ್ವರಿತೋ ಗತ್ವಾ ಸಮಾಗಮ್ಯ ಸುರಾಧಿಪಂ ॥೧೯॥

ನಿವೇದಯಾಮಾಸ ತದಾ ಸರ್ವಸೈನ್ಯಬಲಾಬಲಂ ।
ಜ್ಞಾತ್ವಾ ತದ್ಬಲಮುದ್ಯೋಗಂ ತುರಾಷಾಡತಿವಿಸ್ಮಿತಃ ॥೨೦॥

---

ಚನ್ನಾಗಿ ಬಲ್ಲಂಥವರೊಡನೆ ವಿಚಾರಮಾಡಿ ತಿಳಿದುಕೊಂಡು, ಆ ದೈತ್ಯರು ಮಾಡ ತೊಡಗಿರುವ ಯುದ್ಧೋದ್ಯಮ ವಿಚಾರದಲ್ಲಿ ಪ್ರತೀಕಾರವನ್ನು ಮಾಡಲು ತಕ್ಕ ಕಾರ್ಯಕ್ರಮವನ್ನು ಕೈಗೊಳ್ಳಬೇಕು ॥೧೬॥

ಚನ್ನಾಗಿ ತಿಳಿಯದೆ ರೋಗಕ್ಕೆ ಅನುರೂಪವಲ್ಲದ ಔಷಧಿಯನ್ನು ಮಾಡಿದರೆ ಹೇಗೆ ವಿಪರೀತಪರಿಣಾಮವು ಉಂಟಾಗುವುದೋ ಹಾಗೆಯೇ ಚನ್ನಾಗಿ ವಿಮರ್ಶಿಸದೆ ಮಾಡಿದ ಕೆಲಸವು ವಿರುದ್ಧವಾದ ಫಲವನ್ನು ಕೊಡುವುದು ॥೧೭॥

ವ್ಯಾಸಋಷಿಯು ಹೇಳಿದನು — ದೊರೆಯಾದ ಇಂದ್ರನು ಆ ಎಲ್ಲ ದೇವತೆಗಳೊಡನೆ ಹೀಗೆ ಯೋಚನೆಯನ್ನು ಮಾಡಿ ದೂತಕೆಲಸದಲ್ಲಿ ಕುಶಲನಾದ ಮತ್ತು ಕಾರ್ಯದಕ್ಷನಾದ ಒಬ್ಬ ದೂತನನ್ನು ಶತ್ರುವಿನ ವಿಷಯವನ್ನು ತಿಳಿದುಕೊಂಡು ಬರುವುದಕ್ಕಾಗಿ ಕಳುಹಿಸಿದನು ॥೧೮॥

ದೂತನು ಜಾಗ್ರತೆಯಾಗಿ ಹೋಗಿ ಶತ್ರುವಾದ ಮಹಿಷಾಸುರನ ಸರ್ವವಿಧವಾದ ಸೇನೆಯ ಬಲಾಬಲವೆಲ್ಲವನ್ನೂ ತಿಳಿದುಕೊಂಡು ಹಿಂತಿರುಗಿ ಬಂದು ಇಂದ್ರನಿಗೆ ಎಲ್ಲವನ್ನೂ ತಿಳಿಸಿದನು ॥೧೯॥

ಇಂದ್ರನು ಆ ಮಹಿಷಾಸುರನ ಬಲವನ್ನೂ ಪ್ರಯತ್ನವನ್ನೂ ತಿಳಿದು ಬಹಳವಾಗಿ ಆಶ್ಚರ್ಯಪಟ್ಟು ದೇವತೆಗಳನ್ನು ಜಾಗ್ರತೆಯಾಗಿ ಪ್ರೇರಿಸಿದನು. ಮತ್ತು

ದೇವಾನಚೋದಯತ್ತೂರ್ಣಂ ಸಮಾಹೂಯ ಪುರೋಹಿತಂ ।
ಮಂತ್ರಂ ಮಂತ್ರವಿದಾಂ ಶ್ರೇಷ್ಠಂ ಚಕಾರ ತ್ರಿದಶೇಶ್ವರಃ ॥೨೦॥

॥ ಇಂದ್ರ ಉವಾಚ ॥

ಉವಾಚಾಂಗಿರಸಶ್ರೇಷ್ಠಂ ಸಮಾಸೀನಂ ವರಾಸನೇ ।
ಭೋ ಭೋ ದೇವಗುರೋ ವಿದ್ವನ್ಕಿಂ ಕರ್ತವ್ಯಂ ವದಸ್ವ ನಃ ॥೨೨॥

ಸರ್ವಜ್ಞೋಽಸಿ ಸಮುತ್ಪನ್ನೇ ಕಾರ್ಯೇ ತ್ವಂ ಗತಿರದ್ಯ ನಃ ।
ದಾನವೋ ಮಹಿಷೋ ನಾಮ ಮಹಾವೀರ್ಯೋ ಮದಾನ್ವಿತಃ॥೨೩॥

ಯೋದ್ಧುಕಾಮಃ ಸಮಾಯಾತಿ ಬಹುಭಿರ್ದಾನವೈರ್ವೃತಃ ।
ತತ್ರ ಪ್ರತಿಕ್ರಿಯಾ ಕಾರ್ಯಾ ತ್ವಯಾ ಮಂತ್ರವಿದಾಽಧುನಾ ॥೨೪॥

---

ಮಂತ್ರಾಲೋಚನೆಯಲ್ಲಿ ಸಮರ್ಥನಾಗಿಯೂ ಆಂಗಿರಸಕುಲದವರಲ್ಲಿ ಶ್ರೇಷ್ಠನಾಗಿಯೂ ಇರುವ ತನ್ನ ಪುರೋಹಿತನಾದ ಬೃಹಸ್ಪತಿಯನ್ನು ಕರೆಯಿಸಿ ಅವನನ್ನು ಉತ್ತಮವಾದ ಪೀಠದಲ್ಲಿ ಕುಳ್ಳಿರಿಸಿ ಅವನೊಡನೆ ಮಂತ್ರಾಲೋಚನೆಯನ್ನು ಮಾಡಿದನು. ॥೨೦-೨೧॥

ಇಂದ್ರನು ಬೃಹಸ್ಪತಿಯನ್ನು ಕುರಿತು ಹೇಳಿದನು--ದೇವತೆಗಳಿಗೆ ಗುರುವಾದ ಓ ಬೃಹಸ್ಪತಿಯೇ, ನೀನು ಸಮಸ್ತವನ್ನೂ ತಿಳಿದವನು. ಕಾರ್ಯವು ಒದಗಿರುವಾಗ ನೀನೇ ನಮಗೆ ಗತಿಯು. ನಾವು ಈಗ ಏನನ್ನು ಮಾಡಬೇಕೆಂಬುದನ್ನು ನಮಗೆ ತಿಳಿಸು. ॥೨೨॥

ಬಹಳ ಪರಾಕ್ರಮಶಾಲಿಯೂ, ಗರ್ವಿಷ್ಠನೂ ಆದ ಮಹಿಷನೆಂಬ ದೈತ್ಯನು ಅನೇಕ ದಾನವರಿಂದ ಕೂಡಿಕೊಂಡು ನಮ್ಮೊಡನೆ ಯುದ್ಧಮಾಡಲಿಚ್ಛೆಯಿಂದ ಬರುವನು. ॥೨೩॥

ಆ ಯುದ್ಧವಿಚಾರದಲ್ಲಿ ಮಂತ್ರಾಲೋಚನೆಯನ್ನು ತಿಳಿದಿರುವ ನೀನು ಈಗ ತಕ್ಕ ಪ್ರತೀಕಾರೋಪಾಯವನ್ನು ಮಾಡಬೇಕು: ಆ ದಾನವರಿಗೆ ಶುಕ್ರಾಚಾರ್ಯನು ಹೇಗೆ ವಿಘ್ನಗಳನ್ನು ಪರಿಹಾರ ಮಾಡುವವನೋ ಹಾಗೆಯೇ ನೀನೂ ನಮಗೆ ವಿಘ್ನವನ್ನು ಪರಿಹರಿಸುವವನೆಂದು ನಾವು ನಂಬಿರುತ್ತೇವೆ ॥೨೪॥

ತೇಷಾಂ ಶುಕ್ರಸ್ತಥಾ ತ್ವಂ ಮೇ ವಿಘ್ನಹರ್ತಾ ಸುಸಂಮತಃ ।

|| ವ್ಯಾಸ ಉವಾಚ ||

ತಚ್ಛ್ರುತ್ವಾ ವಚನಂ ಪ್ರಾಹ ತುರಾಸಾಹಂ ಬೃಹಸ್ಪತಿಃ ||೨೫||

ವಿಚಿಂತ್ಯ ಮನಸಾ ಕಾಮಂ ಕಾರ್ಯಸಾಧನತತ್ಪರಃ ।

|| ಗುರುರುವಾಚ ||

ಸ್ವಸ್ಥೋ ಭವ ಸುರೇಂದ್ರ ತ್ವಂ ಧೈರ್ಯಮಾಲಂಬ್ಯ ಮಾರಿಷ ||೨೬||

ವ್ಯಸನೇ ಚ ಸಮುತ್ಪನ್ನೇ ನ ತ್ಯಾಜ್ಯಂ ಧೈರ್ಯಮಾಶು ವೈ ।
ಜಯಾಜಯೌ ಸುರಾಧ್ಯಕ್ಷ ದೈವಾಧೀನೌ ಸದೈವ ಹಿ ||೨೭||

ಸ್ಥಾತವ್ಯಂ ಧೈರ್ಯಮಾಲಂಬ್ಯ ತಸ್ಮಾದ್ಬುದ್ಧಿಮತಾ ಸದಾ ।
ಭವಿತವ್ಯಂ ಭವತ್ಯೇವ ಜಾನನ್ನೇವ ಶತಕ್ರತೋ ||೨೮||

ಉದ್ಯಮಃಸರ್ವಥಾ ಕಾರ್ಯೋ ಯಥಾಪೌರುಷಮಾತ್ಮನಃ ।
ಮುನಯೋಽಪಿ ಹಿ ಮುಕ್ತ್ಯರ್ಥಮುದ್ಯಮೈಕರತಾಃ ಸದಾ ||೨೯||

---

ವ್ಯಾಸಋಷಿಯು ಹೇಳಿದನು—ಇಂದ್ರನ ಆ ಮಾತನ್ನು ಕೇಳಿ ಬೃಹಸ್ಪತಿಯು ಕಾರ್ಯಸಾಧನೆ ಮಾಡುವುದರಲ್ಲಿ ಆಸಕ್ತನಾಗಿ, ತನ್ನ ಮನಸ್ಸಿನಲ್ಲಿ ಚನ್ನಾಗಿ ಆಲೋಚಿಸಿ ಇಂದ್ರನನ್ನು ಕುರಿತು ಹೀಗೆ ಹೇಳಿದನು ||೨೫||

ಬೃಹಸ್ಪತಿಯು ಹೇಳಿದನು— ಎಲೈ ಇಂದ್ರನೇ, ನೀನು ಧೈರ್ಯವನ್ನು ಅವಲಂಬಿಸಿ ಸ್ವಸ್ಥಚಿತ್ತನಾಗಿರು. ಕಳವಳ ಪಡಬೇಡ. ಮಹತ್ತರವಾದ ವ್ಯಸನವು ಪ್ರಾಪ್ತವಾಗಿರುವಾಗ ಧೈರ್ಯವನ್ನು ಬಿಡಬಾರದು. ಎಲೈ ಅಮರಾಧಿಪನೇ, ಜಯಾಪಜಯಗಳು ಯಾವಾಗಲೂ ದೈವಾಧೀನಗಳು ||೨೭||

ಆದುದರಿಂದ ಎಲೈ ಇಂದ್ರನೇ, ಬುದ್ಧಿವಂತನಾದವನು, ವಿಧಿನಿಯಮವಿರುವಂತೆ ಆಗಬೇಕಾದುದು ಆಗಿಯೇ ಆಗುವುದೆಂದು ತಿಳಿದು, ಯಾವಾಗಲೂ ಧೈರ್ಯವನ್ನು ಅವಲಂಬಿಸಿಕೊಂಡು ಇರಬೇಕು ||೨೮||

ಭವಿತವ್ಯವು ಅನ್ಯಥಾ ಆಗಲಾರದೆಂದು ತಿಳಿದಿದ್ದಾಗ್ಯೂ ತನ್ನ ಶಕ್ತಿಗೆ ಅನುಸಾರವಾಗಿ ಸರ್ವಪ್ರಕಾರದಿಂದಲೂ ಪ್ರಯತ್ನವನ್ನೂ ಮಾಡುತ್ತಿರಬೇಕು. ಮುನಿ

ದೈವಾಧೀನಂ ಚ ಜಾನಂತೋ ಯೋಗಧ್ಯಾನಪರಾಯಣಾಃ ।
ತಸ್ಮಾತ್ಸದೈವ ಕರ್ತವ್ಯೋ ವ್ಯವಹಾರೋದಿತೋದ್ಯಮಃ ॥೩೦॥

ಸುಖಂ ಭವತು ವಾ ಮಾ ವಾ ದೈವೇ ಕಾ ಪರಿದೇವನಾ ।
ವಿನಾ ಪುರುಷಕಾರೇಣ ಕದಾಚಿತ್ಸಿದ್ಧಿಮಾಪ್ನುಯಾತ್ ॥೩೧॥

ಅಂಧವತ್ಪಂಗುವತ್ಕಾಮಂ ನ ತಥಾ ಮುದಮಾವಹೇತ್ ।
ಕೃತೇ ಪುರುಷಕಾರೇಽಪಿ ಯದಿ ಸಿದ್ಧಿರ್ನ ಜಾಯತೇ ॥೩೨॥

ನ ತತ್ರ ದೂಷಣಂ ತಸ್ಯ ದೈವಾಧೀನೇ ಶರೀರಿಣಿ ।
ಕಾರ್ಯಸಿದ್ಧಿರ್ನ ಸೈನ್ಯೇಽಸ್ತಿ ನ ಮಂತ್ರೇ ನ ಚ ಮಂತ್ರಣೇ ॥೩೩॥
ನ ರಥೇನಾಽಽಯುಧೇ ನೂನಂ ದೈವಾಧೀನಾ ಸುರಾಧಿಪ ।

---

ಗಳೂ ಕೂಡ ಮುಕ್ತಿಗೋಸ್ಕರವಾಗಿ ಯಾವಾಗಲೂ ಪ್ರಯತ್ನ ಮಾಡುವುದರಲ್ಲಿ ಉದಾಸೀನರಾಗದೆ ತಕ್ಕ ಧರ್ಮಕಾರ್ಯಾಚರಣೆಯಲ್ಲಿ ಆಸಕ್ತರಾಗಿರುವರು ॥೨೯॥

ಎಲ್ಲವೂ ದೈವಕ್ಕೆ ಅಧೀನವೆಂದು ತಿಳಿದಿದ್ದರೂ ಋಷಿಗಳು ಯೋಗಧ್ಯಾನಗಳಲ್ಲಿ ಆಸಕ್ತರಾಗಿ ಪ್ರಯತ್ನಪರರಾಗಿರುವರು. ಆದುದರಿಂದ ವ್ಯವಹಾರದಲ್ಲಿ ಫಲಕ್ಕೆ ಅನುಕೂಲವಾದ ಪ್ರಯತ್ನವು ಯಾವಾಗಲೂ ಮಾಡಲ್ಪಡಬೇಕು ॥೩೦॥

ಸುಖವುಂಟಾಗಲಿ ಅಥವಾ ಆಗದಿರಲಿ, ದೈವವನ್ನು ಏಕೆ ನಿಂದಿಸಬೇಕು? ಪುರುಷಪ್ರಯತ್ನವಿಲ್ಲದೆ ಕಾರ್ಯಸಿದ್ಧಿಯನ್ನು ಒಂದು ಸಮಯದಲ್ಲಿ ಹೊಂದಿದರೂ ಹೊಂದಬಹುದು. ॥೩೧॥

ಹೀಗೆ ಪ್ರಯತ್ನವಿಲ್ಲದೆ ಕಾರ್ಯಸಿದ್ಧಿಯುಂಟಾದಾಗ ಕುರುಡನ ಹಾಗೂ ಹೆಳವನ ಹಾಗೂ ಸಂತೋಷದಿಂದ ಹಿಗ್ಗಬಾರದು. ಪುರುಷಪ್ರಯತ್ನವನ್ನು ಮಾಡಿದಾಗ್ಯೂ ಕಾರ್ಯಸಿದ್ಧಿಯು ಉಂಟಾಗದಿದ್ದರೆ ದೈವಗತಿಗೆ ಅಧೀನವಾಗಿ ಫಲವಿಲ್ಲದಿರುವ ಆ ಪ್ರಾಣಿಯ ವಿಷಯದಲ್ಲಿ ನಿಂದೆಯನ್ನೂ ಮಾಡಬಾರದು ॥೩೨॥

ಕಾರ್ಯಸಿದ್ಧಿಯು ಕೇವಲ ಸೇನೆಯ ಶಕ್ತಿಯಲ್ಲಾಗಲಿ, ಮಂತ್ರಾಲೋಚನೆಯಲ್ಲಾಗಲಿ, ಮಂತ್ರಪ್ರಯೋಗದಲ್ಲಾಗಲಿ, ರಥ, ಆಯುಧ ಇವುಗಳಲ್ಲಿಯಾಗಲೀ ಇರುವುದಿಲ್ಲವು. ಎಲೈ ಇಂದ್ರನೇ ಕೇಳು. ಕಾರ್ಯಸಿದ್ಧಿಯು ಯಾವಾಗಲಾದರೂ ದೈವಾಧೀನವಾಗಿರುವುದೂ ಉಂಟು. ಹೇಗೆಂದರೆ— ॥೩೩॥

ಬಲವಾನ್ ಕ್ಲೇಶಮಾಪ್ನೋತಿ ನಿರ್ಬಲಃ ಸುಖಮಶ್ನುತೇ ॥೩೪॥

ಬುದ್ಧಿಮಾನ್ ಕ್ಷುಧಿತಃ ಶೇತೇ ನಿರ್ಬುದ್ಧಿರ್ಭೋಗವಾನ್ ಭವೇತ್ ।
ಕಾತರೋ ಜಯಮಾಪ್ನೋತಿ ಶೂರೋ ಯಾತಿ ಪರಾಜಯಂ ॥೩೫॥

ದೈವಾಧೀನೇ ತು ಸಂಸಾರೇ ಕಾಮಂ ಕಾ ಪರಿದೇವನಾ ।
ಉದ್ಯಮೋ ಯೋಜಯೇನ್ನೂನಂ ಭವಿತವ್ಯಂ ಸುರಾಧಿಪ ॥೩೬॥

ದುಃಖದೇ ಸುಖದೇ ವಾಪಿ ತತ್ರ ತೌ ನ ವಿಚಿಂತಯೇತ್ ।
ದುಃಖೇ ದುಃಖಾಧಿಕಾನ್ಪಶ್ಯೇತ್ಸುಖೇ ಪಶ್ಯೇತ್ಸುಖಾಧಿಕಾನ್ ॥೩೭॥

---

ಬಲವುಳ್ಳವನು ಕ್ಲೇಶವನ್ನು ಹೊಂದುವನು, ನಿರ್ಬಲನು ಸುಖಪಡುತ್ತಿರುವನು, ಬುದ್ಧಿವಂತನು ಹಸಿವೆಯಿಂದ ತಿನ್ನುವುದಕ್ಕೆ ಏನೂ ಇಲ್ಲದೆ ಉಪವಾಸ ಮಲಗುವನು, ಬುದ್ಧಿಯಿಲ್ಲದ ದಡ್ಡನು ಸುಖವನ್ನು ಅನುಭವಿಸುವನು, ಮತ್ತು ಹೇಡಿಯು ಜಯವನ್ನು ಹೊಂದುವನು, ಶೂರನಾದವನು ಅಪಜಯವನ್ನು ಹೊಂದುವನು. ಇಂತಹ ಸಂಗತಿಗಳೂ ಸಂಭವಿಸುವುದುಂಟು ॥೩೪-೩೫॥

ಈ ವಿಧವಾದ ದೃಷ್ಟಾಂತಗಳು ಪ್ರಪಂಚದಲ್ಲಿ ಬಹಳವಾಗಿರುವಂತೆ ಕಾಣಬರುತ್ತಿರುವುವು. ಸಂಸಾರದಲ್ಲಿ ಹೀಗೆ ಉಂಟಾಗುವ ಸುಖದುಃಖಗಳು ಜನ್ಮಾಂತರದ ಕರ್ಮವೆಂಬ ದೈವಗತಿಯಿಂದ ಉಂಟಾಗುವುದರಿಂದ ಆ ವಿಷಯದಲ್ಲಿ ದುಃಖಪಡಬೇಕಾದುದೇನು? ಹೀಗಿರುವಾಗಲೂ ಕಾರ್ಯಸಿದ್ಧಿಯನ್ನು ಪಡೆಯಲು ಪುರುಷಪ್ರಯತ್ನವನ್ನು ಮಾತ್ರ ಖಂಡಿತವಾಗಿಯೂ ಮಾಡುತ್ತಿರಲೇ ಬೇಕು ॥೩೬॥

ದುಃಖವನ್ನು ಕೊಡುವ ಕಾರ್ಯದ ವಿಷಯದಲ್ಲಿಯೂ, ಸುಖವನ್ನು ಕೊಡುವ ಕೆಲಸದ ವಿಷಯದಲ್ಲಿಯೂ ಯಾವ ಚಿಂತೆಯನ್ನೂ ಮಾಡಬಾರದು. ದುಃಖಬಂದಾಗ ತನಗಿಂತಲೂ ಹೆಚ್ಚಾಗಿ ದುಃಖದಲ್ಲಿರುವವರನ್ನು ನೋಡಿ ತನ್ನ ದುಃಖವು ಅಷ್ಟೇನೂ ಹೆಚ್ಚಲ್ಲವೆಂದು ಸಮಾಧಾನ ಮಾಡಿಕೊಳ್ಳಬೇಕು. ಅದರಂತೆಯೇ ತನಗೆ ಸುಖವು ಪ್ರಾಪ್ತವಾದಾಗ ಅತಿಯಾಗಿ ಮೆರೆಯದೆ ತನಗಿಂತಲೂ ಅತಿಶಯವಾಗಿ ಸುಖವನ್ನನುಭವಿಸುತ್ತಿರುವವರನ್ನು ನೋಡಿ ತನ್ನ ಸುಖವು ಅಲ್ಪವೆಂದು ತಿಳಿದು ಹಿಗ್ಗದೆ ಅಹಂಕಾರ ಪಡದೆ ಸಮಭಾವದಿಂದಿರಬೇಕು ॥೩೭॥

ಆತ್ಮಾನಂ ಹರ್ಷಶೋಕಾಭ್ಯಾಂ ಶತ್ರುಭ್ಯಾಮಿವ ನಾರ್ಪಯೇತ್ ।
ಧೈರ್ಯಮೇವಾವಗಂತವ್ಯಂ ಹರ್ಷಶೋಕೋದ್ಭವೇ ಬುಧೈಃ ॥೩೮॥

ಅಧೈರ್ಯಾದ್ಯಾದೃಶಂ ದುಃಖಂ ನ ತು ಧೈರ್ಯೇಽಸ್ತಿ ತಾದೃಶಂ ।
ದುರ್ಲಭಂ ಸಹನತ್ವಂ ವೈ ಸಮಯೇ ಸುಖದುಃಖಯೋಃ
ಹರ್ಷಶೋಕೋದ್ಭವೋ ಯತ್ರ ನ ಭವೇದ್ಬುದ್ಧಿನಿಶ್ಚಯಾತ್ । ॥೩೯॥

ಕಿಂ ದುಃಖಂ ಕಸ್ಯ ವಾ ದುಃಖಂ ನಿರ್ಗುಣೋಽಹಂ ಸದಾಽವ್ಯಯಃ ॥೪೦॥

ಚತುರ್ವಿಂಶಾತಿರಿಕ್ತೋಽಸ್ಮಿ ಕಿಂ ಮೇ ದುಃಖಂ ಸುಖಂ ಚ ಕಿಂ ।
ಪ್ರಾಣಸ್ಯ ಕ್ಷುತ್ಪಿಪಾಸೇ ದ್ವೇ ಮನಸಃ ಶೋಕಮೂರ್ಛನೇ
ಜರಾಮೃತ್ಯೂ ಶರೀರಸ್ಯ ಷಡೂರ್ಮಿರಹಿತಶ್ಶಿವಃ ॥೪೧॥

---

ತನ್ನನ್ನು ಶತ್ರುವಿನ ವಶಕ್ಕೆ ಒಪ್ಪಿಸದಿರುವಂತೆಯೇ, ಸುಖದುಃಖಗಳಿಗೂ ತಾನು ಅಧೀನನಾಗಬಾರದು. ಸುಖದುಃಖಗಳುಂಟಾಗುವ ಕಾಲದಲ್ಲಿ ಪಂಡಿತನಾದವನು ಧೈರ್ಯದಿಂದಿರಬೇಕು ||೩೮||

ದುಃಖವು ಒದಗಿದ ಕಾಲದಲ್ಲಿ ಧೈರ್ಯವಿಲ್ಲದಿದ್ದರೆ ಉಂಟಾಗುವಷ್ಟು ದುಃಖವು ಧೈರ್ಯವಿದ್ದಲ್ಲಿ ಉಂಟಾಗುವುದಿಲ್ಲವು. ಸುಖದುಃಖಗಳನ್ನು ಅನುಭವಿಸುವ ಕಾಲದಲ್ಲಿ ಅವುಗಳ ಪರಿಣಾಮವನ್ನು ತಡೆಯಲು ಸಾಕಾದಷ್ಟು ಸಹನಶಕ್ತಿಯು ಪ್ರಾಣಿಗಳಿಗೆ ದುರ್ಲಭವಾಗಿರುತ್ತದೆ. ಯಾವ ಮನುಷ್ಯನಿಗೆ ಸ್ಥಿರವಾದ ಬುದ್ಧಿಯಿರುವುದೋ ಅವನಿಗೆ ಹರ್ಷವಾಗಲಿ, ದುಃಖವಾಗಲೀ ಮೇಗೈಯ್ಯಾಗಲಾರದು. ||೩೯||

ಎಲೈ ಇಂದ್ರನೇ, ಕೇಳು—ದುಃಖವೆಂದರೇನು? ದುಃಖವುಂಟಾಗುವುದು ಯಾರಿಗೆ? ನಾನು ಪ್ರಕೃತಿಯ ಗುಣಸಂಬಂಧವಿಲ್ಲದ ನಿರ್ಗುಣಸ್ವರೂಪನೂ ನಾಶರಹಿತನೂ ಆಗಿರುವೆನು. ಸಾಂಖ್ಯ ಮತದಂತೆ ಪ್ರಕೃತಿ, ಮಹತ್, ಅಹಂಕಾರ, ಪಂಚತನ್ಮಾತ್ರೆ, ಪಂಚಮಹಾಭೂತ, ಐದು ಕರ್ಮೇಂದ್ರಿಯ, ಐದು ಜ್ಞಾನೇಂದ್ರಿಯ, ಮನಸ್ ಎಂಬ ಇಪ್ಪತ್ತುನಾಲ್ಕು ಪದಾರ್ಥಗಳಿಗಿಂತ ನಾನು ಭಿನ್ನನಾದವನು. ನನಗೆ ಪ್ರಕೃತಿಸಂಬಂಧವು ಇಲ್ಲದ್ದರಿಂದ ಸುಖ-ದುಃಖಗಳು ಯಾವುವೂ ನನಗೆ ಇಲ್ಲವು. ಹಸಿವು ಬಾಯಾರಿಕೆಗಳು ಪ್ರಾಣಧರ್ಮಗಳು; ಅಜ್ಞಾನವೂ ದುಃಖವೂ ಮನೋಧರ್ಮಗಳು; ಜನ್ಮಮರಣಗಳು ಶರೀರ ಧರ್ಮಗಳು. ನಾನು, ಈ ಸುಖ

ಶೋಕಮೋಹೌ ಶರೀರಸ್ಯ ಗುಣೌ ಕಿಂ ಮೇಽತ್ರ ಚಿಂತನೇ ॥೪೨॥

ಶರೀರಂ ನಾಹಮಥವಾ ತತ್ಸಂಬಂಧೀ ನ ಚಾಪ್ಯಹಂ ।
ಸಪ್ತೈಕಷೋಡಶಾದಿಭ್ಯೋ ವಿಭಿನ್ನೋಽಹಂ ಸದಾಸುಖೀ ॥೪೩॥

ಪ್ರಕೃತಿರ್ವಿಕೃತಿರ್ನಾಹಂ ಕಿಂ ಮೇ ದುಃಖಂ ಸದಾ ಪುನಃ ।
ಇತಿ ಮತ್ವಾ ಸುರೇಶ ತ್ವಂ ಮನಸಾ ಭವ ನಿರ್ಮಮಃ ॥೪೪॥

ಉಪಾಯಃ ಪ್ರಥಮೋಽಯಂ ತೇ ದುಃಖನಾಶೇ ಶತಕ್ರತೋ ।
ಮಮತಾ ಪರಮಂ ದುಃಖಂ ನಿರ್ಮಮತ್ವಂ ಪರಂ ಸುಖಂ ॥೪೫॥

---

ದುಃಖ, ಹಸಿವು ಬಾಯಾರಿಕೆ, ಜನ್ಮಮರಣಗಳೆಂಬ ಆರು ಅಲೆಗಳಿಲ್ಲದ ಶಿವನಾಗಿರುವೆನು. ॥೪೦-೪೧॥

ದುಃಖ, ಭ್ರಾಂತಿ ಇವೆರಡೂ ಶರೀರದ ಗುಣಗಳಾಗಿರುವ ಕಾರಣ ಈ ವಿಷಯದಲ್ಲಿ ನಾನೇಕೆ ದುಃಖದ ಯೋಚನೆಯನ್ನು ಮಾಡಬೇಕು ? ॥೪೨॥

ನಾನು ಶರೀರವಲ್ಲವು. ನಾನು ಶರೀರಕ್ಕೆ ಸಂಬಂಧಪಟ್ಟ ವಸ್ತುವೂ ಅಲ್ಲ. ಇಪ್ಪತ್ತುನಾಲ್ಕು ತತ್ತ್ವಗಳಿಗಿಂತ ಭಿನ್ನನಾಗಿರುವ ನಾನು ಸರ್ವದಾ ಸುಖಿಯಾಗಿರುವೆನು. ॥೪೩॥

ನಿರ್ವಿಕಾರನಾದುದರಿಂದ ಕಾರಣವಾದ ಮೂಲಪ್ರಕೃತಿಯಾಗಲಿ, ಪ್ರಕೃತಿ ವಿಕೃತಿ ಎಂಬ ಉಭಯ ಧರ್ಮವುಳ್ಳ ಮಹತ್ತತ್ತ್ವವೇ ಮುಂತಾದ ಏಳು ಪದಾರ್ಥಗಳಾಗಲಿ, ಕಾರ್ಯಗಳಾದ ಹದಿನಾರು ವಿಕೃತಿಗಳಾಗಲಿ ನಾನಲ್ಲವು. ಹೀಗಿರುವಾಗ ನನಗೆ ಯಾವಾಗಲೂ ದುಃಖವೆಲ್ಲಿಯದು ? ಹೀಗೆಂಬುದಾಗಿ ನೀನು ತಿಳಿದು ಓ ಇಂದ್ರನೇ, ನಿನ್ನ ಮನಸ್ಸಿನಲ್ಲಿರುವ ನಾನು ನನ್ನದು ಎಂಬ ಅಹಂಭಾವ ಮಮಭಾವಗಳನ್ನು ಬಿಟ್ಟು ನಿಶ್ಚಲಬುದ್ಧಿಯುಳ್ಳವನಾಗಿರು. ಏಕೆಂದರೆ, ॥೪೪॥

ಎಲೈ ಇಂದ್ರನೇ, ನಾನು, ನನ್ನದು ಎಂಬ ಅಭಿಮಾನವು ದುಃಖಕ್ಕೆ ಮೂಲಕಾರಣವಾಗಿರುವುದು. ಹಾಗೆಯೇ, ಈ ಅಭಿಮಾನವಿಲ್ಲದಿರುವಿಕೆಯೇ ಸುಖಕ್ಕೆ ಹೇತುವು. ಈ ರೀತಿಯಾಗಿ ತಿಳಿದುಕೊಂಡು ನಿಶ್ಚಲಮನಸ್ಕನಾಗಿರುವುದೇ ದುಃಖವನ್ನು ನಾಶಮಾಡುವುದರಲ್ಲಿ ಮೊದಲನೆಯ ಉಪಾಯವಾಗಿರುತ್ತದೆ. ॥೪೫॥

ಸಂತೋಷಾದಪರಂ ನಾಸ್ತಿ ಸುಖಸ್ಥಾನಂ ಶಚೀಪತೇ ।
ಅಥವಾ ಯದಿ ನ ಜ್ಞಾನಂ ಮಮತ್ವನಾಶನೇ ಕಿಲ ॥೪೬॥

ತತೋ ವಿವೇಕಃ ಕರ್ತವ್ಯೋ ಭವಿತವ್ಯೇ ಸುರಾಧಿಪ ।
ಪ್ರಾರಬ್ಧಕರ್ಮಣಾಂ ನಾಶೋ ನಾಽಭೋಗಾಲ್ಲಕ್ಷ್ಯತೇ ಕಿಲ ॥೪೭॥

ಯದ್ಭಾವಿ ತದ್ಭವತ್ಯೇವ ಕಾ ಚಿಂತಾ ಸುಖದುಃಖಯೋಃ ।
ಸುರೈಃ ಸರ್ವೈಃ ಸಹಾಯೈರ್ವಾ ಬುದ್ಧ್ಯಾ ವಾ ತವ ಸತ್ತಮ ॥೪೮॥

ಸುಖಂ ಕ್ಷಯಾಯ ಪುಣ್ಯಸ್ಯ ದುಃಖಂ ಪಾಪಸ್ಯ ಮಾರಿಷ ।
ತಸ್ಮಾತ್ಸುಖಕ್ಷಯೇ ಹರ್ಷಃ ಕರ್ತವ್ಯಃ ಸರ್ವಥಾ ಬುಧೈಃ ॥೪೯॥

---

ಎಲೈ ಇಂದ್ರನೇ, ಆಶೆ ಇಲ್ಲದೆ ತೃಪ್ತಿ ಎಂಬ ಸಂತೋಷಕ್ಕಿಂತಲೂ ಬೇರೆಯಾದ ಸುಖಸ್ಥಾನವು ಇಲ್ಲವು. ಅಥವಾ ಮಮಕಾರವನ್ನು ನಾಶಮಾಡುವುದಕ್ಕೆ ತಕ್ಕಷ್ಟು ತತ್ವಜ್ಞಾನವಿಲ್ಲದಿರುವುದಾದರೆ, ॥೪೬॥

ಎಲೈ ಇಂದ್ರನೇ, ಅದೃಷ್ಟದ ವಶದಿಂದ ಬಂದೊದಗುವ ಸುಖದುಃಖಗಳನ್ನು ತಗ್ಗಿಸಿಕೊಳ್ಳುವ ವಿಷಯದಲ್ಲಿ ಮಮಕಾರವನ್ನು ಬಿಟ್ಟು ಪ್ರಯತ್ನ ಮಾಡಿದರೆ ವಿವೇಕವು ಸಹಾಯಕವಾಗುವುದು. ಹೇಗೆಂದರೆ, ಪ್ರಾರಬ್ಧಕರ್ಮಗಳು ಭೋಗವಿಲ್ಲದೆ ನಾಶವನ್ನು ಹೊಂದುವುದಿಲ್ಲವೆಂದು ತಿಳಿಯಲ್ಪಟ್ಟಿದೆಯಲ್ಲವೇ? ಆ ಕರ್ಮಫಲವನ್ನು ಸಹಿಸುವುದೇ ವಿವೇಕವು. ॥೪೭॥

ಎಲೈ ಶ್ರೇಷ್ಠನೇ, ಯಾವುದು ಆಗಬೇಕೋ ಅದು ಆಗಿಯೇ ತೀರುತ್ತದೆ. ಆದುದರಿಂದ ಸುಖದುಃಖಗಳ ವಿಷಯದಲ್ಲಿ ಚಿಂತೆಪಡಬೇಕಾದುದೇನು? ನಿನಗೆ ದೇವತೆಗಳೆಲ್ಲರೂ ಸಹಾಯಕರಾಗಿರುವರು. ಇದರಿಂದಲೂ ನಿನ್ನ ನಿಶ್ಚಿತವಾದ ಬುದ್ಧಿಯಿಂದಲೂ ಯೋಚಿಸಿ ಅನಿವಾರ್ಯವಾದ, ತಗ್ಗಿಸಬಹುದಾದ, ಸ್ವಲ್ಪಕಾಲಮಾತ್ರವಿರುವ, ಸುಖದುಃಖಗಳ ವಿಷಯದಲ್ಲಿ ಯೋಚನೆಯನ್ನು ಮಾಡಬೇಡ. ॥೪೮॥

ಓ ಗೌರವಾರ್ಹನಾದ ಇಂದ್ರನೇ, ಸುಖಾನುಭವದಿಂದ ಪುಣ್ಯವು ಕ್ಷಯಿಸುವುದು. ದುಃಖಾನುಭವದಿಂದ ಪಾಪಕರ್ಮವೂ ನಾಶವಾಗುವುದು. ಆದುದರಿಂದ ಬುದ್ಧಿವಂತರಾದವರು ಸತ್ಕರ್ಮವನ್ನು ಮಾಡಿ ಪುಣ್ಯವನ್ನು ಪುನಃ ಸಂಪಾದಿಸುವು

ಅಥವಾ ಮಂತ್ರಯಿತ್ವಾऽದ್ಯ ಕುರು ಯತ್ನಂ ಯಥಾವಿಧಿ ।
ಕೃತೇ ಯತ್ನೇ ಮಹಾರಾಜ ಭವಿತವ್ಯಂ ಭವಿಷ್ಯತಿ ॥೫೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಚತುರ್ಥೋऽಧ್ಯಾಯಃ.

---

ದರಲ್ಲಿ ಅಡ್ಡಿ ಏನೂ ಇಲ್ಲವೆಂದೂ, ಮುಂಚಿನಂತೆಯೇ ಮುಂದೆಯೂ ಅವಕಾಶವಿದೆ ಎಂದೂ ತಿಳಿದು, ವಿವೇಕ ಧೈರ್ಯಗಳಿಂದ ತಕ್ಕ ಪ್ರಯತ್ನವನ್ನು ಮಾಡಬೇಕು. ॥೪೯॥

ಹಾಗಿಲ್ಲದಿದ್ದರೆ ನೀನು ರಾಜನೀತಿಶಾಸ್ತ್ರದಲ್ಲಿ ಹೇಳಿರುವಂತೆ ಕ್ರಮವಾಗಿ ಮಂತ್ರಾಲೋಚನೆಯನ್ನು ಮಾಡಿ ಪ್ರಯತ್ನವನ್ನು ಮಾಡು. ಎಲೈ ಇಂದ್ರನೇ ಈಗ ನೀನು ಯತ್ನವನ್ನು ಮಾಡಿದರೆ ಆಗ ಮುಂದೆ ಆಗಬೇಕಾದದ್ದು ತನ್ನಷ್ಟಕ್ಕೆ ತಾನೇ ಆಗುವುದು. ॥೫೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### ॥ ಪಂಚಮೋಽಧ್ಯಾಯಃ ॥

### ಐದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತಿ ಶ್ರುತ್ವಾ ಸಹಸ್ರಾಕ್ಷಃ ಪುನರಾಹ ಬೃಹಸ್ಪತಿಂ ।**
**ಯುದ್ಧೋದ್ಯೋಗಂ ಕರಿಷ್ಯಾಮಿ ಹಯಾರೇರ್ನಾಶನಾಯ ವೈ ॥೧॥**

**ನೋದ್ಯಮೇನ ವಿನಾ ರಾಜ್ಯಂ ನ ಸುಖಂ ನ ಚ ವೈ ಯಶಃ ।**
**ನಿರುದ್ಯಮಂ ನ ಶಂಸಂತಿ ಕಾತರಾ ನ ಚ ಸೋದ್ಯಮಾಃ ॥೨॥**

**ಯತೀನಾಂ ಭೂಷಣಂ ಜ್ಞಾನಂ ಸಂತೋಷೋ ಹಿ ದ್ವಿಜನ್ಮನಾಂ ।**
**ಉದ್ಯಮಃ ಶತ್ರುಹನನಂ ಭೂಷಣಂ ಭೂತಿಮಿಚ್ಛತಾಂ ॥೩॥**

---

ವ್ಯಾಸಮಹರ್ಷಿಯು ಹೇಳಿದನು—ಹೀಗೆ ಬೃಹಸ್ಪತಿಯು ಹೇಳಿದ ಮಾತನ್ನು ಕೇಳಿ ಇಂದ್ರನು ತಿರುಗಿ ಬೃಹಸ್ಪತಿಯನ್ನು ಕುರಿತು ಹೀಗೆ ಹೇಳಿದನು—ಈಗ ಲಾದರೋ ನಾನು ಆ ಮಹಿಷಾಸುರನ ಸಂಹಾರಕ್ಕಾಗಿ ಯುದ್ಧದ ಪ್ರಯತ್ನವನ್ನು ವಿವೇಕ ಧೈರ್ಯಗಳಿಂದ ಕೂಡಿ ಮಾಡುವೆನು. ॥೧॥

ತಕ್ಕಷ್ಟು ಪ್ರಯತ್ನವನ್ನು ಮಾಡದೆ ರಾಜ್ಯಲಾಭವಾಗಲಿ, ಸುಖವಾಗಲಿ, ಕೀರ್ತಿಯಾಗಲಿ ಉಂಟಾಗುವುದಿಲ್ಲವು. ಪ್ರಯತ್ನ ಮಾಡದ ನಿರುದ್ಯೋಗಿಯನ್ನು ಹೇಡಿಗಳೂ ಪರಾಕ್ರಮಶಾಲಿಗಳೂ ಸಹ ಶ್ಲಾಘನೆ ಮಾಡುವುದಿಲ್ಲವು. ॥೨॥

ಯತಿಗಳಿಗೆ ಜ್ಞಾನವೂ, ಬ್ರಾಹ್ಮಣರಿಗೆ ದೊರೆತಷ್ಟರಲ್ಲಿಯೇ ಸಂತೋಷವೂ, ಸುಗುಣವಾಗಿ ಅಲಂಕಾರಪ್ರಾಯವಾದುದು. ಐಶ್ವರ್ಯವನ್ನಪೇಕ್ಷಿಸುವವರಿಗೆ ಯಾವಾ

**ಉದ್ಯಮೇನ ಹತಸ್ತ್ವಾಷ್ಟ್ರೋ ನಮುಚಿರ್ಬಲ ಏವ ಚ ।**
**ತಥೈನಂ ನಿಹನಿಷ್ಯಾಮಿ ಮಹಿಷಂ ಮುನಿಸತ್ತಮ ॥೪॥**

**ಬಲಂ ದೇವಗುರುಸ್ತ್ವಂ ಮೇ ವಜ್ರಮಾಯುಧಮುತ್ತಮಂ ।**
**ಸಹಾಯಸ್ತು ಹರಿರ್ನೂನಂ ತಥೋಮಾಪತಿರವ್ಯಯಃ ॥೫॥**

**ರಕ್ಷೋಘ್ನಾನ್ ಪಠ ಮೇ ಸಾಧೋ ಕರೋಮ್ಯದ್ಯ ಸಮುದ್ಯಮಂ ।**
**ಸ್ವಸೈನ್ಯಾಭಿನಿವೇಶಂ ಚ ಮಹಿಷಂ ಪ್ರತಿ ಮಾನದ ॥೬॥**

|| ವ್ಯಾಸ ಉವಾಚ ||

**ಇತ್ಯುಕ್ತೋ ದೇವರಾಜೇನ ವಾಚಸ್ಪತಿರುವಾಚ ಹ ।**
**ಸುರೇಂದ್ರಂ ಯುದ್ಧಸಂರಕ್ತಂ ಸ್ಮಿತಪೂರ್ವಂ ವಚಸ್ತದಾ ॥೭॥**

---

ಗಲೂ ಪ್ರಯತ್ನಶೀಲರಾಗಿರುವುದೂ, ಶತ್ರುಗಳನ್ನು ನಾಶಗೊಳಿಸಲು ಬೇಕಾದ ಪ್ರಯತ್ನಗಳನ್ನು ಮಾಡುವುದೂ ಸಹ ಭೂಷಣವು. ||೩||

ನಾನು ಮಾಡಿದ ಪ್ರಯತ್ನಫಲದಿಂದಲೇ ತ್ವಷ್ಟ್ರುಬ್ರಹ್ಮನ ಮಗನಾದ ವಿಶ್ವರೂಪನು ಹತನಾದನು. ನಮುಚಿ, ಹಲಾಸುರ ಇವರೂ ಸಹ ನನ್ನ ಪ್ರಯತ್ನದಿಂದಲೇ ನಷ್ಟವಾದರು. ಎಲೈ ಮುನಿಶ್ರೇಷ್ಠನಾದ ಬೃಹಸ್ಪತಿಯೇ, ಈಗ ಅದರಂತೆಯೇ ಪ್ರಯತ್ನವನ್ನು ಮಾಡಿ ಈ ಮಹಿಷಾಸುರನನ್ನು ಸಂಹರಿಸುವೆನು. ||೪||

ದೇವತೆಗಳಿಗೆ ಗುರುವಾದ ನೀನು ನನಗೆ ಬೆಂಬಲನಾಗಿರುವೆ. ಉತ್ತಮವಾದ ವಜ್ರಾಯುಧವೂ ನನ್ನ ಹತ್ತಿರದಲ್ಲಿ ಸಿದ್ಧವಾಗಿ ಇದೆ. ಇದರ ಜೊತೆಗೆ ನಿತ್ಯರಾದ ವಿಷ್ಣುವೂ, ಸರ್ವಶಕ್ತಿಪರಿಪೂರ್ಣನಾದ ಶಿವನೂ ಸಹ ನನಗೆ ಸಹಾಯಕರಾಗಿರುತ್ತಾರೆ. ||೫||

ಸತ್ಪುರುಷನಾದ ಓ ಬೃಹಸ್ಪತಿಯೇ, ಈಗ ನಾನು ಯುದ್ಧದ ಪ್ರಯತ್ನವನ್ನು ಮಾಡುತ್ತೇನೆ. ನೀನು ರಾಕ್ಷಸರ ಬಾಧೆಯು ಪರಿಹಾರವಾಗುವ 'ರಕ್ಷೋಘ್ನ' ಸೂಕ್ತಗಳನ್ನು ಜಪಿಸು. ಎಲೈ ಪೂಜ್ಯನೇ ನಿನ್ನ ಬಲದಿಂದ ನಾನು ಮಹಿಷಾಸುರನ ಮೇಲೆ ಯುದ್ಧಮಾಡಲು ನನ್ನ ಸೈನ್ಯವನ್ನು ಹೊರಡಿಸುವೆನು. ||೬||

ವ್ಯಾಸನು ಹೇಳಿದನು—ದೇವೇಂದ್ರನು ಹೀಗೆ ಹೇಳಲು ಬೃಹಸ್ಪತಿಯು ಯುದ್ಧಕ್ಕೆ ಸಿದ್ಧನಾಗುತ್ತಿರುವ ಇಂದ್ರನನ್ನು ಕುರಿತು ಮಂದಹಾಸಪೂರ್ವಕವಾಗಿ ಆಗ ಈ ಮಾತನ್ನು ಹೇಳಿದನು. ||೭||

॥ ಬೃಹಸ್ಪತಿರುವಾಚ ॥

**ಪ್ರೇರಯಾಮಿ ನ ಚಾಹಂ ತ್ವಾಂ ನ ಚ ನಿವಾರಯಾಮ್ಯಹಂ ।**
**ಸಂದಿಗ್ಧೇಽತ್ರ ಜಯೇ ಕಾಮಂ ಯುಧ್ಯತಶ್ಚ ಪರಾಜಯೇ ॥೮॥**

**ನ ತೇಽತ್ರ ದೂಷಣಂ ಕಿಂಚಿದ್ಭವಿತವ್ಯೇ ಶಚೀಪತೇ ।**
**ಸುಖಂ ವಾ ಯದಿ ವಾ ದುಃಖಂ ವಿಹಿತಂ ಚ ಭವಿಷ್ಯತಿ ॥೯॥**

**ನ ಮಯಾ ತತ್ಪರಿಜ್ಞಾತಂ ಭಾವಿ ದುಃಖಂ ಸುಖಂ ತಥಾ ।**
**ಯದ್ಭಾರ್ಯಾಹರಣೇ ಪ್ರಾಪ್ತಂ ಪುರಾ ವಾಸವ ವೇತ್ಸಿ ಹಿ ॥೧೦॥**

**ಶಶಿನಾ ಮೇ ಹೃತಾ ಭಾರ್ಯಾ ಮಿತ್ರೇಣಾಮಿತ್ರಕರ್ಶನ ।**
**ಸ್ವಾಶ್ರಮಸ್ಥೇನ ಸಂಪ್ರಾಪ್ತಂ ದುಃಖಂ ಸರ್ವಸುಖಾಪಹಂ ॥೧೧॥**

---

ಬೃಹಸ್ಪತಿಯು ಹೇಳಿದನು — ಯುದ್ಧ ಮಾಡುವವನಿಗೆ ಜಯವೂ, ಪರಾಜಯವೂ ಇವೆರಡೂ ಸಂದೇಹ ವಿಷಯವಾಗಿರುವುದರಿಂದ ನಾನು ನಿನ್ನನ್ನು ಯುದ್ಧ ಮಾಡೆಂದು ಪ್ರೇರಿಸುವುದೂ ಇಲ್ಲವು, ಬೇಡವೆಂದು ಹೇಳಿ ನಿಷೇಧಿಸುವುದೂ ಇಲ್ಲವು. ॥೮॥

ಎಲೈ ಇಂದ್ರನೇ, ಮುಂದೆ ಉಂಟಾಗುವ ಪರಿಣಾಮದ ವಿಷಯವಾಗಿ ನಿನಗೆ ಯಾವ ವಿಧವಾದ ನಿಂದೆಯೂ ಇರುವುದಿಲ್ಲವು. ಅದೃಷ್ಟದಲ್ಲಿದ್ದಂತೆ ಸುಖವೋ ದುಃಖವೋ ಯಾವುದೋ ಒಂದು ಈ ಯುದ್ಧದಿಂದ ಆಗುವುದು. ॥೯॥

ಎಲೈ ಇಂದ್ರನೇ, ಹಿಂದೆ ನನ್ನ ಹೆಂಡತಿಯನ್ನು ಚಂದ್ರನು ಅಪಹರಿಸಿದ ಕಾಲದಲ್ಲಿ ನನಗೆ ಉಂಟಾದ ದುಃಖವನ್ನು ಮುಂಚಿತವಾಗಿ ನಾನು ತಿಳಿಯಲು ಹೇಗೆ ಸಮರ್ಥನಾಗಲಿಲ್ಲವೋ, ಹಾಗೆಯೇ ಈಗಲೂ ಸಹ ಮುಂದೆ ಒದಗುವ ಸುಖವೋ ದುಃಖವೋ ಯಾವುದನ್ನೂ ಸಹ ತಿಳಿಯಲಾರೆನು. ಇದು ನಿನಗೂ ಗೊತ್ತಿದೆ. ॥೧೦॥

ಶತ್ರುಗಳನ್ನು ನಾಶಪಡಿಸುವ ಓ ಇಂದ್ರನೇ, ನನಗೆ ಮಿತ್ರನಾಗಿದ್ದುಕೊಂಡು ಚಂದ್ರನು ನನ್ನ ಹೆಂಡತಿಯನ್ನೇ ಅಪಹರಿಸಿದನು. ನನ್ನ ಆಶ್ರಮದ ಧರ್ಮಾಚರಣೆಯಲ್ಲಿ ನಾನು ತೊಡಗಿದ್ದಾಗ್ಯೂ ಸಮಸ್ತ ಸುಖವನ್ನೂ ಹಾಳುಮಾಡುವ ದುಃಖವು ನನಗೆ ಪ್ರಾಪ್ತವಾಯಿತು. ॥೧೧॥

ಬುದ್ಧಿಮಾನ್ ಸರ್ವಲೋಕೇಷು ವಿದಿತೋಽಹಂ ಸುರಾಧಿಪ ।
ಕ್ವ ಮೇ ಗತಾ ತದಾ ಬುದ್ಧಿರ್ಯದಾ ಭಾರ್ಯಾ ಹೃತಾ ಬಲಾತ್ ॥೧೨॥

ತಸ್ಮಾದುಪಾಯಃ ಕರ್ತವ್ಯೋ ಬುದ್ಧಿಮದ್ಭಿಃ ಸದಾನರೈಃ ।
ಕಾರ್ಯಸಿದ್ಧಿಃ ಸದಾ ನೂನಂ ದೈವಾಧೀನಾ ಸುರಾಧಿಪ ॥೧೩॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ಸತ್ಯಂ ಗುರೋಸ್ಸಾರ್ಥಂ ಶಚೀಪತಿಃ ।
ಬ್ರಹ್ಮಾಣಂ ಶರಣಂ ಗತ್ವಾ ನತ್ವಾ ವಚನಮಬ್ರವೀತ್ ॥೧೪॥

ಪಿತಾಮಹ ಸುರಾಧ್ಯಕ್ಷ ದೈತ್ಯೋ ಮಹಿಷಸಂಜ್ಞಕಃ ।
ಗ್ರಹೀತುಕಾಮಃ ಸ್ವರ್ಗಂ ಮೇ ಬಲೋದ್ಯೋಗಂ ಕರೋತ್ಯಲಂ॥೧೫॥

---

ಎಲೈ ಇಂದ್ರನೇ ಕೇಳು, ನನ್ನನ್ನು ಲೋಕದಲ್ಲಿ ಎಲ್ಲರೂ ಬುದ್ಧಿವಂತನೆಂದು ಹೇಳುವರು. ಆದರೆ ನನ್ನ ಹೆಂಡತಿಯು ಬಲಾತ್ಕಾರದಿಂದ ಅಪಹರಿಸಲ್ಪಟ್ಟಾಗ ನನ್ನ ಬುದ್ಧಿಯು ಎಲ್ಲಿಗೆ ಹೋಯಿತು ? ||೧೨||

ಎಲೈ ಸುರಾಧಿಪನೇ, ಪ್ರಾಣಿಗಳ ಬುದ್ಧಿಯು ಭವಿತವ್ಯಕ್ಕೆ ಅನುಸಾರವಾಗಿ ಆಯಾಯ ಕಾಲಗಳಲ್ಲಿ ಸ್ಫುರಿಸುವುದರಿಂದ ಬುದ್ಧಿವಂತರಾದವರು ಯಾವಾಗಲೂ ಉಪಾಯದಿಂದ ಫಲಪ್ರಾಪ್ತಿಯನ್ನುಂಟುಮಾಡುವ ಕೆಲಸಗಳನ್ನು ಮಾಡುತ್ತಿರ ಬೇಕು. ಕಾರ್ಯಸಿದ್ಧಿಯಾದರೋ ಯಾವಾಗಲೂ ದೈವಗತಿಗೆ ಅಧೀನವಾಗಿಯೇ ಇರುತ್ತದೆ. ||೧೩||

ವ್ಯಾಸನು ಹೇಳಿದನು—ಶಚೀಪತಿಯಾದ ಇಂದ್ರನು ಬೃಹಸ್ಪತಿಯು ಹೇಳಿದ ಸತ್ಯವಾಗಿಯೂ ಭಾವಗರ್ಭಿತವಾಗಿಯೂ ಇರುವ ಮಾತುಗಳನ್ನು ಕೇಳಿ, ಬ್ರಹ್ಮ ನನ್ನು ಶರಣುಹೊಂದಿ ಅವನಿಗೆ ನಮಸ್ಕಾರವನ್ನು ಮಾಡಿ ಹೀಗೆ ಅರಿಕೆ ಮಾಡಿ ದನು. ||೧೪||

ದೇವತೆಗಳೆಲ್ಲರಿಗೂ ಅಧಿಪತಿಯೆನಿಸಿದ ಅಜ್ಜನಾದ ಓ ಬ್ರಹ್ಮನೇ, ಮಹಿಷ ನೆಂದು ಹೆಸರುಳ್ಳ ಒಬ್ಬ ರಾಕ್ಷಸನು ಸ್ವರ್ಗವನ್ನು ಆಕ್ರಮಿಸಲು ಇಚ್ಛೆಯಿಂದ ಕೂಡಿ ದವನಾಗಿ ಸೈನ್ಯವನ್ನು ಶೇಖರಿಸಿ ಯುದ್ಧಕ್ಕೆ ತಕ್ಕಂತೆ ಸಿದ್ಧನಾಗುತ್ತಿರುವನು. ||೧೫||

ಅನ್ಯೇ ಚ ದಾನವಾಃ ಸರ್ವೇ ತತ್ಸೈನ್ಯಂ ಸಮುಪಸ್ಥಿತಾಃ ।
ಯೋದ್ಧುಕಾಮಾ ಮಹಾವೀರ್ಯಾಃ ಸರ್ವೇ ಯುದ್ಧವಿಶಾರದಾಃ ॥೧೬॥

ತೇನಾಹಂ ಭೀತಭೀತೋಽಸ್ಮಿ ತ್ವತ್ಸಕಾಶಮಿಹಾಗತಃ ।
ಸರ್ವಜ್ಞೋಽಸಿ ಮಹಾಪ್ರಾಜ್ಞ ಸಾಹಾಯ್ಯಂ ಕರ್ತುಮರ್ಹಸಿ ॥೧೭॥

॥ ಬ್ರಹ್ಮೋವಾಚ ॥

ಗಚ್ಛಾಮಃ ಸರ್ವ ಏವಾದ್ಯ ಕೈಲಾಸಂ ತ್ವರಿತಾ ವಯಂ ।
ಶಂಕರಂ ಪುರತಃ ಕೃತ್ವಾ ವಿಷ್ಣುಂ ಚ ಬಲಿನಾಂ ವರಂ ॥೧೮॥

ತತೋ ಯುದ್ಧಂ ಪ್ರಕರ್ತವ್ಯಂ ಸರ್ವೈಃ ಸುರಗಣೈಃ ಸಹ ।
ಮಿಳಿತ್ವಾ ಮಂತ್ರಮಾಧಾಯ ದೇಶಂ ಕಾಲಂ ವಿಚಿಂತ್ಯ ಚ ॥೧೯॥

---

ಇತರ ಅನೇಕ ದಾನವರೂ ಸಹ ಅವನ ಸೇನೆಗೆ ಸೇರಿದ್ದಾರೆ. ಅವರೆಲ್ಲರೂ ಯುದ್ಧ ಮಾಡುವುದರಲ್ಲಿ ಆಸಕ್ತಿಯುಳ್ಳವರೂ, ಮಹಾ ಪರಾಕ್ರಮಶಾಲಿಗಳೂ, ಯುದ್ಧ ಮಾಡುವುದರಲ್ಲಿ ಕುಶಲರೂ ಆಗಿರುವರು. ||೧೬||

ಆದುದರಿಂದ ನಾನು ತುಂಬ ಹೆದರಿಕೊಂಡು ನಿನ್ನ ಸಮೀಪಕ್ಕೆ ಬಂದಿರುವೆನು. ನೀನು ಸಮಸ್ತವನ್ನೂ ತಿಳಿದವನೂ ಮಹಾಬುದ್ಧಿಶಾಲಿಯೂ ಆಗಿರುವೆ. ಈ ಸಮಯದಲ್ಲಿ ನನಗೆ ಸಹಾಯವನ್ನು ಮಾಡಲು ಮನಸ್ಸಿನಲ್ಲಿ ಸಂಕಲ್ಪವನ್ನು ಮಾಡು. ||೧೭||

ಬ್ರಹ್ಮನು ಹೇಳಿದನು—ಈಗ ನಾವೆಲ್ಲರೂ ಬೇಗನೆ ಕೈಲಾಸಪರ್ವತಕ್ಕೆ ಹೋಗೋಣ ಅಲ್ಲಿ ಬಲಿಷ್ಠರಲ್ಲಿ ಶ್ರೇಷ್ಠರಾದ ಶಂಕರನನ್ನೂ ವಿಷ್ಣುವನ್ನೂ ಮುಂದಿಟ್ಟುಕೊಂಡು, ||೧೮||

ಅವರ ನೇತೃತ್ವದಲ್ಲಿ ಸಮಸ್ತ ದೇವತೆಗಳೊಡನೆ ಸೇರಿ ಮಂತ್ರಾಲೋಚನೆಯನ್ನು ಮಾಡಿ ದೇಶಕಾಲಪರಿಸ್ಥಿತಿಗಳನ್ನು ಚನ್ನಾಗಿ ವಿಮರ್ಶಿಸಿ ಆಮೇಲೆ ಯುದ್ಧವನ್ನು ಮಾಡಬೇಕು. ||೧೯||

ಬಲಾಬಲಮವಿಜ್ಞಾಯ ವಿವೇಕಮಪಹಾಯ ಚ ।
ಸಾಹಸಂ ತು ಪ್ರಕುರ್ವಾಣೋ ನರಃ ಪತನಮೃಚ್ಛತಿ ॥೨೦॥

॥ ವ್ಯಾಸ ಉವಾಚ ॥

ತನ್ನಿಶಮ್ಯ ಸಹಸ್ರಾಕ್ಷಃ ಕೈಲಾಸಂ ನಿರ್ಜಗಾಮ ಹ ।
ಬ್ರಹ್ಮಾಣಂ ಪುರತಃ ಕೃತ್ವಾ ಲೋಕಪಾಲಸಮನ್ವಿತಃ ॥೨೧॥

ತುಷ್ಟಾವ ಶಂಕರಂ ಗತ್ವಾ ವೇದಮಂತ್ರೈರ್ಮಹೇಶ್ವರಂ ।
ಪ್ರಸನ್ನಂ ಪುರತಃ ಕೃತ್ವಾ ಯಯೌ ವಿಷ್ಣುಪುರಂ ಪ್ರತಿ ॥೨೨॥

ಸ್ತುತ್ವಾ ತಂ ದೇವದೇವೇಶಂ ಕಾರ್ಯಂ ಪ್ರೋವಾಚ ಚಾತ್ಮನಃ ।
ಮಹಿಷಾತ್ತದ್ಭಯಂ ಚೋಗ್ರಂ ವರದಾನಮದೋದ್ಧತಾತ್ ॥೨೩॥

---

ಸ್ವಪರಪಕ್ಷಗಳ ಬಲಾಬಲಗಳನ್ನು ವಿಚಾರಮಾಡಿ ತಿಳಿಯದೆ, ಯುಕ್ತಾಯುಕ್ತ ವಿವೇಚನೆಯನ್ನು ಮಾಡದೆ ಬಿಟ್ಟು, ಒರಟುತನದಿಂದ ವೃಥಾ ಸಾಹಸವನ್ನು ಎಂದರೆ ಅಪಾಯದಿಂದ ಕೂಡಿರಬಹುದಾದ ದೊಡ್ಡಕಾರ್ಯವನ್ನು ಮಾಡುವ ಮನುಷ್ಯನು ಅಧೋಗತಿಯನ್ನು ಹೊಂದುವನು. ॥೨೦॥

ವ್ಯಾಸಋಷಿಯು ಹೇಳಿದನು—ಬ್ರಹ್ಮನು ಹೇಳಿದ ಮಾತನ್ನು ಕೇಳಿ ಇಂದ್ರನು ಲೋಕಪಾಲರೊಡಗೂಡಿ ಬ್ರಹ್ಮನನ್ನು ಮುಂದಿಟ್ಟುಕೊಂಡು ಕೈಲಾಸ ಲೋಕಕ್ಕೆ ಹೋದನು ॥೨೧॥

ಅಲ್ಲಿ ಹೋಗಿ ವೇದಮಂತ್ರಗಳಿಂದ ಮಹೇಶ್ವರನನ್ನು ಸ್ತೋತ್ರಮಾಡಿದನು. ಇವನ ಸ್ತೋತ್ರಕ್ಕೆ ಶಿವನು ಪ್ರಸನ್ನನಾದ ಮೇಲೆ ಆ ಶಿವನೊಡನೆ ವಿಷ್ಣುವಿರುವ ವೈಕುಂಠಲೋಕಕ್ಕೆ ಹೋದನು. ॥೨೨॥

ಆ ಬಳಿಕ ಇಂದ್ರನು, ದೇವತೆಗಳಿಗೂ ದೇವನಾದ ಆ ಮಹಾವಿಷ್ಣುವನ್ನು ಸ್ತುತಿಸಿ ತಾನು ಬಂದ ಕಾರ್ಯವನ್ನು ವಿಜ್ಞಾಪಿಸಿದನು. ಮತ್ತು ಅಗ್ನಿಯಿಂದ ವರವನ್ನು ಹೊಂದಿ ಅದರ ಬಲದಿಂದ ಮದೋನ್ಮತ್ತನಾಗಿ ನೀಚಕೆಲಸಗಳನ್ನು ಮಾಡುತ್ತಿರುವ ಆ ಮಹಿಷಾಸುರನಿಂದ ಒದಗಿರುವ ಭಯಂಕರವಾದ ವಿಪತ್ತನ್ನು ಎಂದರೆ ಯುದ್ಧ ಭಯವನ್ನು ಆ ವಿಷ್ಣುವಿಗೆ ಹೇಳಿದನು. ॥೨೩॥

ತದಾಕರ್ಣ್ಯ ಭಯಂ ತಸ್ಯ ವಿಷ್ಣುರ್ದೇವಾನುವಾಚ ಹ ।
ಕರಿಷ್ಯಾಮೋ ವಯಂ ಯುದ್ಧಂ ಹನಿಷ್ಯಾಮಸ್ತು ದುರ್ಜಯಂ॥೨೪॥

॥ ವ್ಯಾಸ ಉವಾಚ ॥

ಇತಿ ತೇ ನಿಶ್ಚಯಂ ಕೃತ್ವಾ ಬ್ರಹ್ಮವಿಷ್ಣುಹರೀಶ್ವರಾಃ ।
ಸ್ವಾನಿ ಸ್ವಾನಿ ಸಮಾರುಹ್ಯ ವಾಹನಾನಿ ಯಯುಃ ಸುರಾಃ ॥೨೫॥

ಬ್ರಹ್ಮಾ ಹಂಸಸಮಾರೂಢೋ ವಿಷ್ಣುರ್ಗರುಡವಾಹನಃ ।
ಶಂಕರೋ ವೃಷಭಾರೂಢೋ ವೃತ್ರಹಾ ಗಜಸಂಸ್ಥಿತಃ ॥೨೬॥

ಮಯೂರವಾಹನಃ ಸ್ಕಂದೋ ಯಮೋ ಮಹಿಷವಾಹನಃ ।
ಕೃತ್ವಾ ಸೈನ್ಯಸಮಾಯೋಗಂಯಾವತ್ತೇ ನಿರ್ಯಯುಃ ಸುರಾಃ॥೨೭॥

ತಾವದ್ದೈತ್ಯಬಲಂ ಪ್ರಾಪ್ತಂ ದೃಪ್ತಂ ಮಹಿಷಪಾಲಿತಂ ।
ತತ್ರಾಭೂತ್ತುಮುಲಂ ಯುದ್ಧಂ ದೇವದಾನವಸೈನ್ಯಯೋಃ ॥೨೮॥

---

ಮಹಿಷಾಸುರನಿಂದುಂಟಾಗಿದ್ದ ಆ ಭಯವನ್ನು ಇಂದ್ರನಿಂದ ಕೇಳಿ, ವಿಷ್ಣುವು ನಾವೆಲ್ಲರೂ ಒಟ್ಟಾಗಿ ಸಹಕರಿಸಿ ಯುದ್ಧವನ್ನು ಮಾಡಿ, ದುರ್ಜಯನಾದ ಅವನನ್ನು ಸಂಹರಿಸೋಣವೆಂದು ದೇವತೆಗಳಿಗೆ ಹೇಳಿ ಅವರನ್ನು ಸಮಾಧಾನಪಡಿಸಿದನು.॥೨೪॥

ವ್ಯಾಸನು ಹೇಳಿದನು—ಈ ರೀತಿಯಲ್ಲಿ ನಿಶ್ಚಯಮಾಡಿಕೊಂಡು ಬ್ರಹ್ಮ ವಿಷ್ಣು, ಈಶ್ವರ, ಇಂದ್ರ ಇವರುಗಳು ಎಲ್ಲರೂ ತಮ್ಮ ತಮ್ಮ ವಾಹನಗಳನ್ನು ಹತ್ತಿಕೊಂಡು, ಇತರ ದೇವತೆಗಳೊಡನೆ ಕೂಡಿ ಯುದ್ಧಕ್ಕಾಗಿ ಹೊರಟರು. ॥೨೫॥

ಬ್ರಹ್ಮನು ಹಂಸನನ್ನೂ, ವಿಷ್ಣುವು ಗರುಡನನ್ನೂ, ಈಶ್ವರನು ವೃಷಭನನ್ನೂ ಇಂದ್ರನು ಐರಾವತವೆಂಬ ಆನೆಯನ್ನೂ ಸಹ ಹತ್ತಿಕೊಂಡು ಹೊರಟರು. ॥೨೬॥

ಷಣ್ಮುಖನು ನವಿಲನ್ನೂ, ಯಮನು ಕೋಣವನ್ನೂ, ಹತ್ತಿಕೊಂಡು ಬಂದರು. ಆ ಬಳಿಕ ದೇವತೆಗಳು ಸೈನ್ಯಶೇಖರಣೆಯನ್ನು ಮಾಡಿ ಯುದ್ಧಕ್ಕೆ ಸಿದ್ಧರಾಗಿ ಹೊರಡುವಷ್ಟರಲ್ಲಿ ಮಹಿಷಾಸುರನಿಂದ ರಕ್ಷಿತವಾದ ಕೊಬ್ಬಿರುವ ರಾಕ್ಷಸ ಸೈನ್ಯವೆಲ್ಲವೂ ಅಲ್ಲಿಗೆ ಬಂದು ಸೇರಿತು. ॥೨೭-೨೮॥

**ಬಾಣೈಃ ಖಡ್ಗೈಸ್ತಥಾ ಪ್ರಾಸೈರ್ಮುಸಲೈಶ್ಚ ಪರಶ್ವಧೈಃ ।**
**ಗದಾಭಿಃ ಪಟ್ಟಿಶೈಃ ಶೂಲೈಶ್ಚಕ್ರೈಶ್ಚ ಶಕ್ತಿತೋಮರೈಃ ॥೨೯॥**

**ಮುದ್ಗರೈರ್ಭಿಂದಿಪಾಲೈಶ್ಚ ಹಲೈಶ್ಚೈವಾತಿದಾರುಣೈಃ ।**
**ಅನ್ಯೈಶ್ಚ ವಿವಿಧೈರಸ್ತ್ರೈರ್ನಿಜಘ್ನುಸ್ತೇ ಪರಸ್ಪರಂ ॥೩೦॥**

**ಸೇನಾನೀಶ್ಚಿಕ್ಷುರಸ್ತಸ್ಯ ಗಜಾರೂಢೋ ಮಹಾಬಲಃ ।**
**ಮಘವಂತಂ ಪಂಚಭಿಸ್ತೈಃ ಸಾಯಕೈಃ ಸಮತಾಡಯತ್ ॥೩೧॥**

**ತುರಾಷಾಡಪಿ ತಾಂಶ್ಛಿತ್ವಾ ಬಾಣೈರ್ಬಾಣಾಂಸ್ತ್ವರಾನ್ವಿತಃ ।**
**ಹೃದಯೇ ಚಾರ್ಧಚಂದ್ರೇಣ ತಾಡಯಾಮಾಸ ತಂ ತ್ರುತೀ ॥೩೨॥**

**ಬಾಣಾಹತಸ್ತು ಸೇನಾನೀಃ ಪ್ರಾಪ ಮೂರ್ಚ್ಛಾಂ ಗಜೋಪರಿ ।**
**ಕರಿಣಂ ವಜ್ರಘಾತೇನ ಸ ಜಘಾನ ಕರೇ ತತಃ ॥೩೩॥**

---

ಆಗ ಅಲ್ಲಿ ದೇವಸೇನೆಗೂ ರಾಕ್ಷಸಸೇನೆಗೂ ಸಹ ಭಯಂಕರವಾದ ತುಮುಲ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ದೇವತೆಗಳೂ ರಾಕ್ಷಸರೂ ಸಹ ಬಾಣಗಳು, ಕತ್ತಿಗಳು, ಪ್ರಾಸ, ಮುಸಲ, ಕೊಡಲಿ, ಗದೆ, ಪಟ್ಟಿಶ, ಶೂಲ, ಚಕ್ರ, ಶಕ್ತಿ, ತೋಮರ ಈ ಆಯುಧಗಳಿಂದಲೂ, ಮತ್ತು ಮುದ್ಗರ, ಭಿಂದಿಪಾಲ, ಅತಿಕ್ರೂರವಾದ ಹಲಾಯುಧ ಇವೇ ಮುಂತಾದ ಇತರ ಆಯುಧಗಳಿಂದಲೂ ಪರಸ್ಪರವಾಗಿ ಹೊಡೆದಾಡಿದರು. ॥೨೯-೩೦॥

ಮಹಾಬಲಶಾಲಿಯಾದ, ಮಹಿಷಾಸುರನ ಸೇನಾಪತಿಯಾದ ಚಿಕ್ಷುರನೆಂಬುವನು ಆನೆಯನ್ನು ಹತ್ತಿಕೊಂಡು ಯುದ್ಧಮಾಡುತ್ತಾ ಇಂದ್ರನನ್ನು ಐದು ಬಾಣಗಳಿಂದ ಹೊಡೆದನು. ॥೩೧॥

ಕುಶಲನಾದ ಇಂದ್ರನೂ ಕೂಡ ತನ್ನ ಬಾಣಗಳಿಂದ ಆ ಚಿಕ್ಷುರಾಸುರನು ಬಿಟ್ಟ ಬಾಣಗಳನ್ನು ಕತ್ತರಿಸಿ ಅರ್ಧಚಂದ್ರಾಯುಧದಿಂದ ಆ ರಾಕ್ಷಸನ ಎದೆಗೆ ಹೊಡೆದನು. ॥೩೨॥

ಸೇನಾಧಿಪತಿಯಾದ ಚಿಕ್ಷುರನು ಇಂದ್ರನ ಬಾಣಗಳಿಂದ ಹೊಡೆಯಲ್ಪಟ್ಟು ಆನೆಯ ಮೇಲೆಯೇ ಮೂರ್ಛೆಯನ್ನು ಹೊಂದಿದನು. ಆಗ ಇಂದ್ರನು ಆ ಆನೆಯ ಸೊಂಡಲಿಗೆ ತನ್ನ ವಜ್ರಾಯುಧದಿಂದ ಹೊಡೆದನು. ॥೩೩॥

ತದ್ವಜ್ರಾಭಿಹತೋ ನಾಗೋ ಭಗ್ನಃ ಸೈನ್ಯಂ ಜಗಾಮ ಹ ।
ದೃಷ್ಟ್ವಾ ತಂ ದೈತ್ಯರಾಟ್ಕ್ರುದ್ಧೋ ಬಿಡಾಲಾಖ್ಯಮಥಾಬ್ರವೀತ್ ॥೩೪॥

ಗಚ್ಛ ವೀರ ಮಹಾಬಾಹೋ ಜಹೀಂದ್ರಂ ಮದಗರ್ವಿತಂ ।
ವರುಣಾದೀನ್ಪರಾನ್ದೇವಾನ್ ಹತ್ವಾಽಽಗಚ್ಛ ಮಮಾಂತಿಕಂ ॥೩೫॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಬಿಡಾಲಾಖ್ಯೋ ಮಹಾಬಲಃ ।
ಆರುಹ್ಯ ವಾರಣಂ ಮತ್ತಂ ಜಗಾಮ ತ್ರಿದಶಾಧಿಪಂ ॥೩೬॥

ವಾಸವಸ್ತಂ ಸಮಾಯಾಂತಂ ದೃಷ್ಟ್ವಾ ಕ್ರೋಧಸಮನ್ವಿತಃ ।
ಜಘಾನ ವಿಶಿಖೈಸ್ತೀಕ್ಷ್ಣೈರಾಶೀವಿಷಸಮಪ್ರಭೈಃ ॥೩೭॥

---

ಇಂದ್ರನ ವಜ್ರಾಯುಧದ ಆಘಾತದಿಂದ ಸೊಂಡಿಲು ಮುರಿಯಲು ಆ ಆನೆಯು, ಹೆದರಿ ಹಿಂತಿರುಗಿ, ತನ್ನ ಸೈನ್ಯದ ಮೇಲೆಯೇ ನುಗ್ಗಿ ಓಡಿಹೋಯಿತು. ಅದನ್ನು ಕಂಡು ದೈತ್ಯೇಶ್ವರನಾದ ಮಹಿಷನು ಕೋಪಗೊಂಡು ಬಿಡಾಲನೆಂಬುವನನ್ನು ಕರೆದು ಹೀಗೆ ಅಪ್ಪಣೆಮಾಡಿ ಹೇಳಿದನು. ||೩೪||

ಎಲೈ ಬಾಹುಪರಾಕ್ರಮಶಾಲಿಯಾದ ವೀರನೇ ನೀನು ಹೋಗಿ ಮದದಿಂದ ಕೊಬ್ಬಿರುವ ಇಂದ್ರನನ್ನೂ, ವರುಣನೇ ಮೊದಲಾದ ಇತರ ದೇವತೆಗಳನ್ನೂ ಕೊಂದು ನನ್ನ ಬಳಿಗೆ ಹಿಂತಿರುಗಿ ಬಾ ಎಂದು ಅವನಿಗೆ ಅಪ್ಪಣೆಮಾಡಿದನು. ||೩೫||

ವ್ಯಾಸನು ಹೇಳಿದನು—ಮಹಿಷಾಸುರನ ಆ ಮಾತನ್ನು ಕೇಳಿ ಮಹಾಬಲಿಷ್ಠನಾದ ಆ ಬಿಡಾಲನೆಂಬ ರಾಕ್ಷಸನು ಮದಿಸಿದ ಆನೆಯನ್ನು ಹತ್ತಿಕೊಂಡು ಸ್ವರ್ಗಾಧಿಪತಿಯಾದ ಇಂದ್ರನ ಮೇಲೆ ನುಗ್ಗಿಬಂದನು. ||೩೬||

ಇಂದ್ರನು ಅವನು ಎದುರಿಸಲು ಬರುವುದನ್ನು ನೋಡಿ ಕೋಪದಿಂದ ಕೂಡಿ ಹಾವಿನಂತೆ ಕ್ರೂರವಾದ ಮತ್ತು ಹರಿತವಾದ ಬಾಣಗಳಿಂದ ಅವನನ್ನು ಹೊಡೆದನು. ||೩೭||

ಸ ತು ಛಿತ್ವಾ ಶರಾಂಸ್ತೂರ್ಣಂ ಸ್ವಶರೈಶ್ಚಾಪನಿಸ್ಸೃತೈಃ ।
ಪಂಚಾಶದ್ಭಿರ್ಜಘಾನಾಶು ವಾಸವಂ ಚ ಶಿಲೀಮುಖೈಃ ॥೩೮॥

ತಥೇಂದ್ರೋಽಪಿ ಚ ತದ್ಬಾಣಾಂಶ್ಛಿತ್ವಾ ಕೋಪಸಮನ್ವಿತಃ ।
ಜಘಾನ ವಿಶಿಖೈಸ್ತೀಕ್ಷ್ಣೈರಾಶೀವಿಷಸಮಪ್ರಭೈಃ ॥೩೯॥

ಸ ತು ಛಿತ್ವಾ ಶರಾಂಸ್ತೂರ್ಣಂ ಸ್ವಶರೈಶ್ಚಾಪನಿಸ್ಸೃತೈಃ ।
ಗದಯಾ ತಾಡಯಾಮಾಸ ಗಜಂ ತಸ್ಯ ಕರೋಪರಿ ॥೪೦॥

ಸ್ವಕರೇ ನಿಹತೋ ನಾಗಶ್ಚೀತ್ಕಾರಾರ್ತಸ್ವರಂ ಮುಹುಃ ।
ಪರಿವೃತ್ಯ ಜಘಾನಾಶು ದೈತ್ಯಸೈನ್ಯಂ ಭಯಾತುರಂ ॥೪೧॥

ದಾನವಸ್ತು ಗಜಂ ವೀಕ್ಷ್ಯ ಪರಾವೃತ್ಯ ಗತಂ ರಣಾತ್ ।
ಸಮಾವಿಶ್ಯ ರಥೇ ರಮ್ಯೇ ಜಗಾಮಾಶು ಸುರಾನ್ ರಣೇ ॥೪೨॥

---

ಆ ಬಿಡಾಲನೆಂಬ ರಾಕ್ಷಸವೀರನೂ ಸಹ ತನ್ನ ಧನುಸ್ಸಿನಿಂದ ಬೇಗಬೇಗನೆ ಬಾಣಗಳನ್ನು ಬಿಟ್ಟು ಇಂದ್ರನ ಬಾಣಗಳನ್ನು ಕತ್ತರಿಸಿ, ಐವತ್ತು ಬಾಣಗಳಿಂದ ಇಂದ್ರನನ್ನು ಹೊಡೆದನು. ॥೩೮॥

ಬಿಡಾಲನು ಮಾಡಿದಂತೆಯೇ, ಇಂದ್ರನೂ ಕೂಡ, ಕೋಪಗೊಂಡು ಆ ದೈತ್ಯನ ಬಾಣಗಳನ್ನೂ ಕತ್ತರಿಸಿ ಹಾವಿನಂತೆ ಕ್ರೂರವಾಗಿಯೂ ಮೊನಚಾಗಿಯೂ ಇರುವ ಬಾಣಗಳಿಂದ ಅವನನ್ನು ಹೊಡೆದನು. ॥೩೯॥

ಮತ್ತೆ ಆ ಇಂದ್ರನಾದರೋ ಆ ದೈತ್ಯನು ಬಿಟ್ಟ ಬಾಣಗಳನ್ನೂ ತನ್ನ ಬಾಣ ಗಳಿಂದ ಬೇಗನೆ ಕತ್ತರಿಸಿ, ಆ ದೈತ್ಯನು ಏರಿರುವ ಆನೆಯ ಸೊಂಡಲಿನ ಮೇಲೆ ಗದೆಯಿಂದ ಬಲವಾಗಿ ಹೊಡೆದನು. ॥೪೦॥

ಸೊಂಡಲಿನ ಮೇಲೆ ಏಟು ಬಿದ್ದುದರಿಂದ ಆನೆಯು ದೀನಸ್ವರದಿಂದ ಬಾರಿ ಬಾರಿಗೂ ಕಿರಿಚುತ್ತಾ ಹಿಂತಿರುಗಿ ಭಯದಿಂದ ಕೂಡಿದ ದೈತ್ಯಸೈನ್ಯವನ್ನೇ ಬೇಗನೆ ತುಳಿದು ಕೊಂದಿತು. ॥೪೧॥

ಆ ಬಿಡಾಲನೆಂಬ ದೈತ್ಯನು ತನ್ನ ಆನೆಯು ಯುದ್ಧಭೂಮಿಯಿಂದ ಹಿಂತಿ ರುಗಿ ಓಡಿಹೋಗುತ್ತಿರುವುದನ್ನು ನೋಡಿ, ಅದನ್ನು ತ್ಯಜಿಸಿ, ಉತ್ತಮವಾದ ರಥ ದಲ್ಲಿ ಕುಳಿತು ದೇವತೆಗಳಮೇಲೆ ಯುದ್ಧಕ್ಕೆ ಎದುರಾಗಿ ಬಂದನು. ॥೪೨॥

ತುರಾಷಾಡಪಿ ತಂ ವೀಕ್ಷ್ಯ ರಥಸ್ಥಂ ಪುನರಾಗತಂ ।
ಆಹನದ್ವಿಶಿಖೈಸ್ತೀಕ್ಷ್ಣೈರಾಶೀವಿಷಸಮಪ್ರಭೈಃ ॥೪೩॥

ಸೋಽಪಿ ಕ್ರುದ್ಧಶ್ಚಕಾರೋಗ್ರಾಂ ಬಾಣವೃಷ್ಟಿಂ ಮಹಾಬಲಃ ।
ಬಭೂವ ತುಮುಲಂ ಯುದ್ಧಂ ತಯೋಸ್ತತ್ರ ಜಯೈಷಿಣೋಃ ॥೪೪॥

ಇಂದ್ರಸ್ತು ಬಲಿನಂ ದೃಷ್ಟ್ವಾ ಕೋಪೇನಾಕುಲಿತೇಂದ್ರಿಯಃ ।
ಜಯಂತಮಗ್ರತಃ ಕೃತ್ವಾ ಯುಯುಧೇ ತೇನ ಸಂಯುತಃ ॥೪೫॥

ಜಯಂತಸ್ತು ಶಿತೈರ್ಬಾಣೈಸ್ತಂ ಜಘಾನ ಸ್ತನಾಂತರೇ ।
ಪಂಚಭಿಃ ಪ್ರಬಲಾಕೃಷ್ಟೈರಸುರಂ ಮದಗರ್ವಿತಂ ॥೪೬॥

ಸ ಬಾಣಾಭಿಹತಸ್ತಾವನ್ನಿಪಪಾತ ರಥೋಪರಿ ।
ಅತಿವಾಹ್ಯ ರಥಂ ಸೂತೋ ನಿರ್ಜಗಾಮ ರಣಾಜಿರಾತ್ ॥೪೭॥

---

ರಥದಲ್ಲಿ ಕುಳಿತುಕೊಂಡು ಪುನಃ ಯುದ್ಧಕ್ಕೆ ಬಂದ ಆ ದೈತ್ಯನನ್ನು ನೋಡಿ ಇಂದ್ರನೂ ಕೂಡ ಸರ್ಪದಂತೆ ತೀಕ್ಷ್ಣವಾದ ಬಾಣಗಳಿಂದ ಅವನನ್ನು ಹೊಡೆದನು. ॥೪೩॥

ಬಲಿಷ್ಠನಾದ ಆ ದೈತ್ಯನೂ ಕೋಪಗೊಂಡು ಇಂದ್ರನ ಮೇಲೆ ಕ್ರೂರವಾದ ಬಾಣಗಳ ಮಳೆಯನ್ನು ಸುರಿಸಿದನು. ಹೀಗೆ ಜಯವನ್ನು ಪಡೆಯುವುದಕ್ಕಾಗಿ ಆ ಬಿಡಾಲನೆಂಬ ದೈತ್ಯ ಮತ್ತು ಇಂದ್ರ ಇವರಿಬ್ಬರೂ ಪರಸ್ಪರವಾಗಿ ತುಮುಲಯುದ್ಧವನ್ನು ಮಾಡಿದರು. ॥೪೪॥

ಬಿಡಾಲನು ಬಲಿಷ್ಠನಾಗಿರುವುದನ್ನು ಇಂದ್ರನು ಕಂಡು ಕೋಪದಿಂದ ಕೂಡಿದ ಮನಸ್ಸುಳ್ಳವನಾಗಿ, ತನ್ನ ಮಗನಾದ ಜಯಂತನನ್ನು ಮುಂದಿಟ್ಟುಕೊಂಡು ಆ ರಾಕ್ಷಸನ ಸಂಗಡ ಯುದ್ಧವನ್ನು ಮಾಡಿದನು. ॥೪೫॥

ಜಯಂತನು ಧನುಸ್ಸಿನ ಹೆದೆಯನ್ನು ಚನ್ನಾಗಿ ಎಳೆದು, ಹರಿತವಾದ ಐದು ಬಾಣಗಳನ್ನು ಬಿಟ್ಟು, ಮದದಿಂದ ಕೊಬ್ಬಿದ ಆ ರಾಕ್ಷಸನ ಎದೆಯ ಮೇಲೆ ಸ್ತನಗಳ ಮಧ್ಯದಲ್ಲಿ ಹೊಡೆದನು. ॥೪೬॥

ಆ ಬಿಡಾಲನೆಂಬ ರಾಕ್ಷಸ ಮುಖಂಡನು ಜಯಂತನ ಬಾಣಗಳಿಂದ ಹೊಡೆಯಲ್ಪಟ್ಟು ರಥದ ಮೇಲೆ ಮೂರ್ಛಿತನಾಗಿ ಬಿದ್ದನು. ಅವನ ಸಾರಥಿಯು ರಥವನ್ನು

ತಸ್ಮಿನ್ನಿರ್ಗತೇ ದೈತ್ಯೇ ಬಿಡಾಲಾಖ್ಯೇಽಥ ಮೂರ್ಛಿತೇ ।
ಜಯಶಬ್ದೋ ಮಹಾನಾಸೀದ್ದುಂದುಭೀನಾಂ ಚ ನಿಸ್ವನಃ ॥೪೮॥

ಸುರಾಃ ಪ್ರಮುದಿತಾಃ ಸರ್ವೇ ತುಷ್ಟುವುಸ್ತಂ ಶಚೀಪತಿಂ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ॥೪೯॥

ಚುಕೋಪ ಮಹಿಷಃ ಶ್ರುತ್ವಾ ಜಯಶಬ್ದಂ ಸುರೈಃಕೃತಂ ।
ಪ್ರೇಷಯಾಮಾಸ ತತ್ರೈವ ತಾಮ್ರಂ ಪರಮದಾಪಹಂ ॥೫೦॥

ತಾಮ್ರಸ್ತು ಬಹುಭಿಃ ಸಾರ್ಧಂ ಸಮಾಗಮ್ಯ ರಣಾಜಿರೇ ।
ಶರವರ್ಷಂ ಚಕಾರಾಶು ತಡಿತ್ವಾನಿವ ಸಾಗರೇ ॥೫೧॥

---

ರಣಾಂಗಣದಿಂದ ತಪ್ಪಿಸಿ ನಡೆಸಿಕೊಂಡು ಮೂರ್ಛೆ ಹೊಂದಿದ್ದ ಬಿಡಾಲದೈತ್ಯನೊಡನೆ ಹೊರಟುಹೋದನು. ॥೪೭॥

ಈ ರೀತಿಯಲ್ಲಿ ಬಿಡಾಲನೆಂಬ ಅಸುರನು ಮೂರ್ಛೆಯನ್ನು ಹೊಂದಿ ರಣಾಂಗಣದಿಂದ ಹೊರಟುಹೋಗಲು, ದೇವತೆಗಳ ಸೇನೆಯಲ್ಲಿ ಸಂತೋಷಸೂಚಕವಾಗಿ ಜಯಶಬ್ದವೂ ನಗಾರಿಗಳ ಧ್ವನಿಯೂ ಆದುವು. ॥೪೮॥

ದೇವತೆಗಳು ಎಲ್ಲರೂ ಸಂತೋಷವುಳ್ಳವರಾಗಿ ಇಂದ್ರನನ್ನು ಹೊಗಳಿದರು. ಗಂಧರ್ವನಾಯಕರು ಗಾನವನ್ನು ಮಾಡಿದರು. ಅಪ್ಸರಸ್ತ್ರೀಯರು ಸಂತೋಷದಿಂದ ನರ್ತನವನ್ನೂ ಮಾಡಿದರು. ॥೪೯॥

ದೇವತೆಗಳು ಮಾಡುತ್ತಿರುವ ಜಯಶಬ್ದವನ್ನು ಕೇಳಿ ಮಹಿಷಾಸುರನು ಕೋಪಗೊಂಡು ಕೂಡಲೇ ಅಲ್ಲಿಗೆ ಶತ್ರುಗಳ ಕೊಬ್ಬನ್ನು ಅಡಗಿಸಲು ಸಮರ್ಥನಾದ ತಾಮ್ರನೆಂಬ ದೈತ್ಯಪ್ರಮುಖನನ್ನು ಕಳುಹಿಸಿದನು. ॥೫೦॥

ಆ ತಾಮ್ರನೆಂಬ ಅಸುರ ಸೇನಾನಾಯಕನು ಅನೇಕ ಜನ ದೈತ್ಯರೊಡನೆ ಯುದ್ಧಭೂಮಿಗೆ ಬಂದು, ಸಮುದ್ರದಲ್ಲಿ ಮೇಘವು ಮಳೆಯನ್ನು ಹುಯ್ಯುವಂತೆ ದೇವತೆಗಳ ಸೇನೆಯ ಮೇಲೆ ಬಾಣಗಳ ಮಳೆಯನ್ನು ಕರೆದನು. ॥೫೧॥

ವರುಣಃ ಪಾಶಮುದ್ಯಮ್ಯ ಜಗಾಮ ತ್ವರಿತಸ್ತದಾ ।
ಯಮಶ್ಚ ಮಹಿಷಾರೂಢೋ ದಂಡಮಾದಾಯ ನಿರ್ಯಯೌ ॥೫೨॥

ತತ್ರ ಯುದ್ಧಮಭೂದ್ಘೋರಂ ದೇವದಾನವಯೋರ್ಮಿಥಃ ।
ಬಾಣೈಃ ಖಡ್ಗೈಶ್ಚ ಮುಸಲೈಃ ಶಕ್ತಿಭಿಶ್ಚ ಪರಶ್ವಧೈಃ ॥೫೩॥

ದಂಡೇನ ನಿಹತಸ್ತಾಮ್ರೋ ಯಮಹಸ್ತೋದ್ಯತೇನ ಚ ।
ನ ಚಚಾಲ ಮಹಾಬಾಹುಃ ಸಂಗ್ರಾಮಾಂತಗಣಸ್ತದಾ ॥೫೪॥

ಚಾಪಮಾಕೃಷ್ಯ ವೇಗೇನ ಮುಕ್ತ್ವಾ ತೀವ್ರಾನ್ ಶಿಲೀಮುಖಾನ್ ।
ಇಂದ್ರಾದೀನಹನತ್ತೂರ್ಣಂ ತಾಮ್ರಸ್ತಸ್ಮಿನ್ ರಣಾಜಿರೇ ॥೫೫॥

ತೇಽಪಿ ದೇವಾಃ ಶರೈರ್ದಿವ್ಯೈರ್ನಿಶಿತೈಶ್ಚ ಶಿಲಾಶಿತೈಃ ।
ನಿಜಘ್ನುರ್ದಾನವಾನ್ಕ್ರುದ್ಧಾಂಸ್ತಿಷ್ಠ ತಿಷ್ಠೇತಿ ಚುಕ್ರುಶುಃ ॥೫೬॥

---

ಆಗ ವರುಣನು ತನ್ನ ಆಯುಧವಾದ ಪಾಶವನ್ನು ತೆಗೆದುಕೊಂಡು ಬೇಗನೆ ಯುದ್ಧಕ್ಕೆ ಬಂದನು. ಯಮನೂ ಕೂಡ ಕೋಣವನ್ನು ಹತ್ತಿಕೊಂಡು ತನ್ನ ದಂಡಾಯುಧವನ್ನು ಧರಿಸಿ ಯುದ್ಧಕ್ಕನುವಾದನು. ||೫೨||

ಅಲ್ಲಿ ದೇವತೆಗಳಿಗೂ ದಾನವರಿಗೂ, ಬಾಣಗಳು, ಕತ್ತಿಗಳು, ಮುಸಲ, ಶಕ್ತಿ, ಕೊಡಲಿ ಇವುಗಳಿಂದ ಪರಸ್ಪರವಾಗಿ ಭಯಂಕರವಾದ ಯುದ್ಧವು ನಡೆಯಿತು. ||೫೩||

ಯಮನು ತನ್ನ ಕೈಯ್ಯಿಂದ ಬೀಸಿ ಹೊಡೆದ ಯಮದಂಡದ ಏಟನಿಂದ ಆ ತಾಮ್ರಾಸುರನು ಆ ಯುದ್ಧರಂಗದಲ್ಲಿ ಕೊಂಚವೂ ಚಲಿಸಲಿಲ್ಲ. ||೫೪||

ಆ ತಾಮ್ರಾಸುರನು ತನ್ನ ಧನುಸ್ಸಿನ ಹೆದೆಯನ್ನು ಎಳೆದು, ಆ ಯುದ್ಧರಂಗದಲ್ಲಿ ತೀಕ್ಷ್ಣವಾದ ಬಾಣಗಳನ್ನು ವೇಗವಾಗಿ ಪ್ರಯೋಗಿಸಿ ಬಿಟ್ಟು ಇಂದ್ರಾದಿಗಳನ್ನು ಹೊಡೆದನು. ||೫೫||

ಆ ದೇವತೆಗಳೂ ಸಹ ಕೋಪಗೊಂಡು ಹರಿತವಾಗಿ ಕಲ್ಲಿನಂತೆ ಘಟ್ಟಿಯಾದ ಉತ್ತಮ ಬಾಣಗಳಿಂದ ದೈತ್ಯರನ್ನು ಹೊಡೆದು ಅವರನ್ನು ಕುರಿತು ನಿಲ್ಲು ನಿಲ್ಲೆಂದು ಕೂಗಿ ಗರ್ಜಿಸಿ ಕರೆಯುತ್ತಿದ್ದರು. ||೫೬||

ನಿಹತೈಸ್ತೈಸ್ಸುರೈರ್ದೈತ್ಯೋ ಮೂರ್ಛಾಮಾಪ ರಣಾಂಗಣೇ ।
ಹಾಹಾಕಾರೋ ಮಹಾನಾಸೀದ್ದೈತ್ಯಸೈನ್ಯೇ ಭಯಾತುರೇ ॥೫೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಪಂಚಮೋಽಧ್ಯಾಯಃ.

---

ಆಗ ದೇವತೆಗಳು ಹೊಡೆದ ಏಟಿನಿಂದ ತಾಮ್ರಾಸುರನು ಆ ರಣಭೂಮಿಯಲ್ಲಿ ಮೂರ್ಛೆಯನ್ನು ಹೊಂದಿದನು. ಅದರಿಂದ ಉಂಟಾದ ಭಯದಿಂದ ದುಃಖಪಡುತ್ತಿರುವ ಆ ದೈತ್ಯಸೈನ್ಯದಲ್ಲಿ ಬಹಳವಾಗಿ ಹಾಹಾಕಾರವೆದ್ದಿತು. ॥೫೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ನಾಲ್ಕನೆಯ ಸ್ಕಂಧದಲ್ಲಿ
ಐದನೆಯ ಅಧ್ಯಾಯವುಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಷಷ್ಠೋऽಧ್ಯಾಯಃ ||

### ಆರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತಾಮ್ರೇऽಥ ಮೂರ್ಛಿತೇ ದೈತ್ಯೇ ಮಹಿಷಃ ಕ್ರೋಧಸಂಯುತಃ ।**
**ಸಮುದ್ಯಮ್ಯ ಗದಾಂ ಗುರ್ವೀಂ ದೇವಾನುಪಜಗಾಮ ಹ ॥೧॥**

**ತಿಷ್ಠಂತ್ವದ್ಯ ಸುರಾಃ ಸರ್ವೇ ಹನ್ಮ್ಯಹಂ ಗದಯಾ ಕಿಲ ।**
**ಸರ್ವೇ ಬಲಿಭುಜಃ ಕಾಮಂ ಬಲಹೀನಾಃ ಸದೈವ ಹಿ ॥೨॥**

**ಇತ್ಯುಕ್ತ್ವಾऽಸೌ ಗಜಾರೂಢಂ ಸಂಪ್ರಾಪ್ಯ ಮದಗರ್ವಿತಃ ।**
**ಜಘಾನ ಗದಯಾ ತೂರ್ಣಂ ಬಾಹುಮೂಲೇ ಮಹಾಭುಜಃ ॥೩॥**

---

ವ್ಯಾಸಮಹರ್ಷಿಯು ಹೇಳಿದನು—ತಾಮ್ರನೆಂಬ ರಾಕ್ಷಸರ ಸೇನೆಗಳ ನಾಯಕನು ಯುದ್ಧರಂಗದಲ್ಲಿ ಮೂರ್ಛೆ ಹೊಂದಿದನಂತರದಲ್ಲಿ ಮಹಿಷಾಸುರನು ಕೋಪಾವಿಷ್ಟನಾಗಿ ದೊಡ್ಡದಾಗಿಯೂ ಭಾರವಾಗಿಯೂ ಇರುವ ಗದೆಯನ್ನು ಎತ್ತಿಕೊಂಡು ದೇವತೆಗಳಿಗೆ ಎದುರಾಗಿ ನುಗ್ಗಿ ಬಂದನು. ||೧||

ಎಲೈ ದೇವತೆಗಳಿರಾ, ನೀವು ಓಡಿಹೋಗದೆ ಇಲ್ಲಿಯೇ ನಿಲ್ಲಿರಿ. ನೀವು ಕಾಗೆಗಳಂತೆ ಯಜ್ಞ ಯಾಗಗಳಲ್ಲಿ ದೊರೆಯುವ ಹವಿಸ್ಸುಗಳ ರೂಪವಾದ ಬಲಿಯನ್ನು ತಿನ್ನುವವರೂ ಯಾವಾಗಲೂ ಸತ್ತ್ವಹೀನರೂ ಆಗಿರುವಿರಿ. ಈಗ ನಿಮ್ಮನ್ನು ಈ ಗದೆಯಿಂದ ಕೊಲ್ಲುವೆನು. ||೨||

ಹೀಗೆ ಹೇಳಿ ಮದದಿಂದ ಕೊಬ್ಬಿದ ಪರಾಕ್ರಮಶಾಲಿಯಾದ ಆ ಮಹಿಷಾಸುರನು, ಐರಾವತವನ್ನು ಹತ್ತಿ ಕುಳಿತಿರುವ ಇಂದ್ರನ ಸಮೀಪಕ್ಕೆ ಬಂದು ಅವನ ಭುಜಕ್ಕೆ ತನ್ನ ಗದೆಯಿಂದ ಹೊಡೆದನು. ||೩||

ಸೋಽಪಿ ವಜ್ರೇಣ ಘೋರೇಣ ಚಿಚ್ಛೇದಾಶು ಗದಾಂ ಚ ತಾಂ ।
ಪ್ರಹರ್ತುಕಾಮಸ್ತ್ವರಿತೋ ಜಗಾಮ ಮಹಿಷಂ ಪ್ರತಿ ॥೪॥

ಹಯಾರಿರಪಿ ಕೋಪೇನ ಖಡ್ಗಮಾದಾಯ ಸುಪ್ರಭಂ ।
ಯಯಾವಿಂದ್ರಂ ಮಹಾವೀರ್ಯಂ ಪ್ರಹರಿಷ್ಯನ್ನಿವಾಂತಿಕಂ ॥೫॥

ಬಭೂವ ಚ ತಯೋರ್ಯುದ್ಧಂ ಸರ್ವಲೋಕಭಯಾವಹಂ ।
ಆಯುಧೈರ್ವಿವಿಧೈಸ್ತತ್ರ ಮುನಿವಿಸ್ಮಯಕಾರಕಂ ॥೬॥

ಚಕಾರಾಶು ತದಾ ದೈತ್ಯೋ ಮಾಯಾಂ ಮೋಹಕರೀಂ ಕಿಲ ।
ಶಾಂಬರೀಂ ಸರ್ವಲೋಕಘ್ನೀಂ ಮುನೀನಾಮಪಿ ಮೋಹಿನೀಂ ॥೭॥

---

ಆ ಇಂದ್ರನೂ ಕೂಡ ಭಯಂಕರವಾದ ವಜ್ರಾಯುಧದಿಂದ ಅವನ ಆ ಗದೆಯನ್ನು ಬೇಗನೆ ಕತ್ತರಿಸಿದನು. ಮತ್ತು ಆ ಮಹಿಷಾಸುರನನ್ನು ಹೊಡೆಯಲು ಇಚ್ಛೆಯುಳ್ಳವನಾಗಿ ಬೇಗನೆ ಆ ರಾಕ್ಷಸನ ಹತ್ತಿರಕ್ಕೆ ಬಂದನು. ॥೪॥

ಮಹಿಷಾಸುರನೂ ಕೂಡ ಕೋಪಗೊಂಡು, ಹೊಳೆಯುತ್ತಿರುವ ಕತ್ತಿಯನ್ನು ಹಿಡಿದುಕೊಂಡು ಬಹಳ ಬಲಿಷ್ಠನಾಗಿರುವ ಇಂದ್ರನನ್ನು ಹೊಡೆಯುವವನಾಗಿ ಅವನ ಹತ್ತಿರಕ್ಕೆ ಬಂದನು. ॥೫॥

ಆ ಬಳಿಕ ಇಂದ್ರಮಹಿಷಾಸುರರಿಗೆ ಯುದ್ಧವು ನಡೆಯಿತು. ಅವರು ನಾನಾವಿಧವಾದ ಆಯುಧಪ್ರಯೋಗಗಳಿಂದ ಮಾಡುತ್ತಿದ್ದ ಯುದ್ಧವು ಸಮಸ್ತ ಜನರಿಗೂ ಭಯವನ್ನುಂಟುಮಾಡುವುದಾಗಿಯೂ, ಮುನಿಗಳಿಗೂ ಕೂಡ ಆಶ್ಚರ್ಯವನ್ನುಂಟುಮಾಡುವುದಾಗಿಯೂ ಇದ್ದಿತು. ॥೬॥

ಆಗ ಮಹಿಷಾಸುರನು, ಋಷಿಗಳಿಗೂ ಭ್ರಾಂತಿಯನ್ನುಂಟುಮಾಡುವುದಾಗಿಯೂ ಸಮಸ್ತಲೋಕಗಳನ್ನೂ ನಾಶಮಾಡುವುದಾಗಿಯೂ, ಎಲ್ಲರನ್ನೂ ಮೋಹಗೊಳಿಸುವುದಾಗಿಯೂ ಇರುವ ಶಂಬರಾಸುರನ ಸಂಬಂಧಿಯಾದ ಮಾಯೆಯನ್ನು ಇಂದ್ರನ ಮೇಲೆ ಬೇಗನೆ ವ್ಯಾಪಿಸುವಂತೆ ಪ್ರಯೋಗಿಸಿದನು. ॥೭॥

ಕೋಟಿಶೋ ಮಹಿಷಾಸ್ತತ್ರ ತದ್ರೂಪಾಸ್ತತ್ಪರಾಕ್ರಮಾಃ ।
ದದೃಶುಃ ಸಾಯುಧಾಸ್ಸರ್ವೇ ನಿಘ್ನಂತೋ ದೇವವಾಹಿನೀಂ ॥೮॥

ಮಘವಾ ವಿಸ್ಮಿತಸ್ತತ್ರ ದೃಷ್ಟ್ವಾ ತಾಂ ದೈತ್ಯನಿರ್ಮಿತಾಂ ।
ಬಭೂವಾತಿಭಯೋದ್ವಿಗ್ನೋ ಮಾಯಾಂ ಮೋಹಕರೀಂ ಕಿಲ ॥೯॥

ವರುಣೋsಪಿ ಸುಸಂತ್ರಸ್ತಸ್ತಥೈವ ಧನನಾಯಕಃ ।
ಯಮೋ ಹುತಾಶನಃ ಸೂರ್ಯಃ ಶೀತರಶ್ಮಿರ್ಭಯಾತುರಃ ॥೧೦॥

ಪಲಾಯನಪರಾಃ ಸರ್ವೇ ಬಭೂವುರ್ಮೋಹಿತಾಃ ಸುರಾಃ ।
ಬ್ರಹ್ಮವಿಷ್ಣುಮಹೇಶಾನಾಂ ಸ್ಮರಣಂ ಚಕ್ರುರುದ್ಯತಾಃ ॥೧೧॥

ತತ್ರಾಜಗ್ಮುಶ್ಚ ಕಾಜೇಶಾಃ ಸ್ಮೃತಮಾತ್ರಾಃ ಸುರೋತ್ತಮಾಃ ।
ಹಂಸತಾರ್ಕ್ಷ್ಯವೃಷಾರೂಢಾಸ್ತ್ರಾತುಕಾಮಾ ವರಾಯುಧಾಃ ॥೧೨॥

---

ಮಾಯಾಪ್ರಯೋಗದಿಂದ ಆ ಯುದ್ಧರಂಗದಲ್ಲಿ ಮಹಿಷಾಸುರನಿಗೆ ಸಮಾನವಾದ ಆಕಾರವೂ ಪರಾಕ್ರಮವೂ ಉಳ್ಳ ಅನೇಕ ಕೋಟಿ ಮಹಿಷಾಸುರರು ಆಯುಧಗಳನ್ನು ಧರಿಸಿ ದೇವತೆಗಳ ಸೇನೆಯನ್ನು ಕೊಲ್ಲುತ್ತಿರುವವರಾಗಿ ಕಂಡುಬಂದರು. ||೮||

ಆಗ ಅಲ್ಲಿ ಇಂದ್ರನು ಆ ಮಹಿಷಾಸುರನಿಂದ ನಿರ್ಮಿಸಲ್ಪಟ್ಟು ಭ್ರಾಂತಿಯನ್ನುಂಟುಮಾಡುತ್ತಿರುವ ಆ ಮಾಯೆಯ ಮಹಿಮೆಯನ್ನು ನೋಡಿ ಬಹಳ ಭಯದಿಂದ ಹೆಚ್ಚಾಗಿ ಗಾಬರಿಯುಳ್ಳವನಾದನು. ||೯||

ವರುಣನೂ ಕೂಡ ತುಂಬ ಹೆದರಿದನು. ಹಾಗೆಯೇ ಕುಬೇರನೂ, ಯಮನೂ ಅಗ್ನಿಯೂ, ಸೂರ್ಯನೂ, ಚಂದ್ರನೂ ದಿಗಿಲಿನಿಂದ ಸಂಕಟಪಟ್ಟರು. ||೧೦||

ಮತ್ತು ಇತರ ಎಲ್ಲ ದೇವತೆಗಳೂ ಭಯದಿಂದ ಹೆದರಿ, ಮಾಯೆಯಿಂದ ಮೋಹಿತರಾಗಿ, ಓಡುವುದಕ್ಕೆ ಪ್ರಾರಂಭಿಸಿದರು. ಮತ್ತು ತಮ್ಮನ್ನು ಕಾಪಾಡುವುದಕ್ಕಾಗಿ ಬ್ರಹ್ಮವಿಷ್ಣುಮಹೇಶ್ವರರ ಸ್ಮರಣೆಯನ್ನು ಪ್ರಯತ್ನಪೂರ್ವಕವಾಗಿ ಮಾಡತೊಡಗಿದರು. ||೧೧||

ಈ ದೇವತೆಗಳು ಸ್ಮರಿಸಿದ ಕೂಡಲೇ, ಮೊದಲೇ ಬಂದು ಇವರ ಹಿಂಬದಿಯಲ್ಲಿದ್ದು ಆವಶ್ಯಕತೆಯ ಸಮಯವನ್ನು ನಿರೀಕ್ಷಿಸುತ್ತಿದ್ದ, ದೇವತೆಗಳಲ್ಲಿ ಶ್ರೇಷ್ಠ

ಶೌರಿಸ್ತಾಂ ಮೋಹಿನೀಂ ದೃಷ್ಟ್ವಾ ಸುದರ್ಶನಮಥೋಜ್ಜ್ವಲಂ ।
ಮುಮೋಚ ತತ್ತೇಜಸೈವ ಮಾಯಾ ಸಾ ವಿಲಯಂ ಗತಾ ॥೧೩॥

ವೀಕ್ಷ್ಯ ತಾನ್ಮಹಿಷಸ್ತತ್ರ ಸೃಷ್ಟಿಸ್ಥಿತ್ಯಂತಕಾರಿಣಃ ।
ಯೋದ್ಧುಕಾಮಃ ಸಮಾದಾಯ ಪರಿಘಂ ಸಮುಪಾದ್ರವತ್ ॥೧೪॥

ಮಹಿಷಾಖ್ಯೋ ಮಹಾವೀರಃ ಸೇನಾನೀಶ್ಚಿಕ್ಷುರಸ್ತಥಾ ।
ಉಗ್ರಾಸ್ಯಶ್ಚೋಗ್ರವೀರ್ಯಶ್ಚ ದುದ್ರುವುರ್ಯುದ್ಧಕಾಮುಕಾಃ ॥೧೫॥

ಅಸಿಲೋಮಾ ತ್ರಿನೇತ್ರಶ್ಚ ಬಾಷ್ಕಲೋಽನ್ಧಕ ಏವ ಚ ।
ಏತೇ ಚಾನ್ಯೇ ಚ ಬಹವೋ ಯುದ್ಧಕಾಮಾ ವಿನಿರ್ಯಯುಃ ॥೧೬॥

---

ರಾದ, ಆ ಬ್ರಹ್ಮವಿಷ್ಣುಮಹೇಶ್ವರರೂ ತಮ್ಮ ತಮ್ಮ ವಾಹನಗಳಾದ ಹಂಸ, ಗರುಡ, ವೃಷಭಗಳನ್ನೇರಿ, ದಿವ್ಯಾಯುಧಗಳನ್ನು ಧರಿಸಿ, ದೇವತೆಗಳನ್ನು ಕಾಪಾಡಲು ಇಚ್ಛೆಯುಳ್ಳವರಾಗಿ ಯುದ್ಧಕ್ಕೆ ಮುನ್ನುಗ್ಗಿ ಬಂದರು. ||೧೨||

ವಿಷ್ಣುವು ಮಹಿಷಾಸುರನ ಆ ಮಾಯೆಯನ್ನು ನೋಡಿ ಪ್ರಕಾಶಮಾನವಾದ ಸುದರ್ಶನವೆಂಬ ತನ್ನ ಚಕ್ರವನ್ನು ಪ್ರಯೋಗಿಸಿ ಬಿಟ್ಟನು. ಅದರ ತೇಜಸ್ಸಿನಿಂದ ಆ ಮಾಯೆಯು ನಾಶವನ್ನು ಹೊಂದಿತು. ||೧೩||

ಈ ಪ್ರಪಂಚದ ಸೃಷ್ಟಿ ಸ್ಥಿತಿ ಪ್ರಳಯಗಳನ್ನು ಮಾಡುವವರಾದ ಆ ಬ್ರಹ್ಮ ವಿಷ್ಣು ಮಹೇಶ್ವರರನ್ನು ಅಲ್ಲಿ ನೋಡಿ ಮಹಿಷಾಸುರನು ಅವರೊಡನೆ ಯುದ್ಧ ಮಾಡುವ ಇಚ್ಛೆಯಿಂದ ಪರಿಘವೆಂಬ ಆಯುಧವನ್ನು ಹಿಡಿದುಕೊಂಡು ಮುಂದಕ್ಕೆ ಬಂದನು. ||೧೪||

ಮಹಾಪರಾಕ್ರಮಿಯಾದ ಮಹಿಷಾಸುರನೂ, ಅವನ ಸೇನಾಧಿಪತಿಯಾದ ಚಿಕ್ಷುರಾಸುರನೂ, ಉಗ್ರಾಸ್ಯನೂ, ಉಗ್ರವೀರ್ಯನೂ ಯುದ್ಧಮಾಡಲೆಳಸಿ ಓಡಿ ಬಂದರು. ||೧೫||

ಮತ್ತು ಅಸಿಲೋಮನೂ, ತ್ರಿನೇತ್ರನೂ, ಬಾಷ್ಕಲನೂ, ಅಂಧಕನೂ ಇನ್ನೂ ಅನೇಕ ಇತರ ದೈತ್ಯರು ಯುದ್ಧಮಾಡಲು ಆಶೆಯುಳ್ಳವರಾಗಿ ಹೊರಟು ಅಲ್ಲಿಗೆ ಓಡಿಬಂದರು. ||೧೬||

**ಸನ್ನದ್ಧಾ ಧೃತಚಾಪಾಸ್ತ್ರೇ ರಥಾರೂಢಾ ಮದೋದ್ಧತಾಃ ।**
**ಪರಿವವ್ರುಃ ಸುರಾನ್ಸರ್ವಾನ್ಸೃಕಾ ಇವ ಸುವತ್ಸಕಾನ್ ॥೧೭॥**

**ಬಾಣವೃಷ್ಟಿಂ ತತಶ್ಚಕ್ರುರ್ದಾನವಾ ಮದಗರ್ವಿತಾಃ ।**
**ಸುರಾಶ್ಚಾಪಿ ತಥಾ ಚಕ್ರುಃ ಪರಸ್ಪರಜಿಘಾಂಸವಃ ॥೧೮॥**

**ಅಂಧಕೋ ಹರಿಮಾಸಾದ್ಯ ಪಂಚಬಾಣಾಞ್ಶಿಲಾಶಿತಾನ್ ।**
**ಮುಮೋಚ ವಿಷಸಂದಿಗ್ಧಾನ್ ಕರ್ಣಾಕೃಷ್ಟಾನ್ಮಹಾಬಲಾನ್ ॥೧೯॥**

**ವಾಸುದೇವೋಽಸ್ಯಸಂಪ್ರಾಪ್ತಾನ್ ವಿಶಿಖಾನಾಶುಗೈಸ್ತದಾ ।**
**ಚಿಚ್ಛೇದ ತಾನ್ ಪುನಃ ಪಂಚ ಮುಮೋಚ ರಿಪುನಾಶನಃ ॥೨೦॥**

---

ಆ ರಾಕ್ಷಸಪ್ರಮುಖರೆಲ್ಲರೂ ಯುದ್ಧಕ್ಕೆ ಸಿದ್ಧರಾಗಿ ಧನುಸ್ಸನ್ನು ಹಿಡಿದುಕೊಂಡು, ರಥವನ್ನೇರಿ ಬಲದಿಂದ ಕೊಬ್ಬಿ ಅಹಂಕಾರದಿಂದ ವಿಜೃಂಭಿಸುತ್ತಾ, ತೋಳಗಳು ಕರುಗಳನ್ನು ಮುತ್ತುವಂತೆ, ದೇವತೆಗಳೆಲ್ಲರನ್ನೂ ಮುತ್ತಿದರು. ॥೧೭॥

ಆಮೇಲೆ ಮದದಿಂದ ಕೊಬ್ಬಿದ ಆ ದೈತ್ಯರೂ, ದೇವತೆಗಳೂ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಇಚ್ಛೆಯುಳ್ಳವರಾಗಿ ಬಾಣಗಳ ಮಳೆಯನ್ನೇ ಸುರಿಸಿದರು. ॥೧೮॥

ಅವರಲ್ಲಿ ಅಂಧಕನೆಂಬ ರಾಕ್ಷಸನು ವಿಷ್ಣುವಿನ ಸಂಗಡ ಯುದ್ಧಮಾಡುವಾಗ ತನ್ನ ಧನುಸ್ಸಿನ ಹೆದೆಯನ್ನು ಕಿವಿಯವರೆಗೂ ಎಳೆದು, ಕಲ್ಲಿನ ಚೂರಿನಂತೆ ಮೊನಚಾಗಿಯೂ, ತುಂಬ ಗಟ್ಟಿಯಾಗಿಯೂ ಮತ್ತು ವಿಷದಿಂದ ಚನ್ನಾಗಿ ನೆನೆಸಲ್ಪಟ್ಟದ್ದಾಗಿಯೂ ಇರುವ ಐದು ಬಾಣಗಳನ್ನು ವಿಷ್ಣುವಿನ ಮೇಲೆ ಪ್ರಯೋಗಿಸಿಬಿಟ್ಟನು. ॥೧೯॥

ಆಗ ಶತ್ರುಗಳನ್ನು ನಾಶಮಾಡುವವನಾದ ಆ ವಿಷ್ಣುವೂ ಕೂಡ ಅಂಧಕನು ಬಿಟ್ಟ ಆ ಬಾಣಗಳು ತನ್ನ ಹತ್ತಿರಕ್ಕೆ ಬರುವುದಕ್ಕೆ ಮುಂಚೆಯೇ ಅವುಗಳನ್ನು ತನ್ನ ಬಾಣಗಳಿಂದ ಕತ್ತರಿಸಿ, ತಾನೂ ಐದು ಬಾಣಗಳನ್ನು ಅವನಮೇಲೆ ಬಿಟ್ಟನು. ॥೨೦॥

ತಯೋಃ ಪರಸ್ಪರಂ ಯುದ್ಧಂ ಬಭೂವ ಹರಿದೈತ್ಯಯೋಃ ।
ಬಾಣಾಸಿಚಕ್ರಮುಸಲೈರ್ಗದಾಶಕ್ತಿಪರಶ್ವಧೈಃ ॥೨೦॥

ಮಹೇಶಾಂಧಕಯೋರ್ಯುದ್ಧಂ ತುಮುಲಂ ಲೋಮಹರ್ಷಣಂ ।
ಪಂಚಾಶದ್ದಿನಪರ್ಯಂತಂ ಬಭೂವ ಚ ಪರಸ್ಪರಂ ॥೨೨॥

ಇಂದ್ರಬಾಷ್ಕಲಯೋಸ್ತದ್ವನ್ಮಹಿಷಾಸುರರುದ್ರಯೋಃ ।
ಯಮತ್ರಿನೇತ್ರಯೋಸ್ತದ್ವನ್ಮಹಾಹನುಧನೇಶಯೋಃ ॥೨೩॥

ಅಸಿಲೋಮವರುಣಯೋರ್ಯುದ್ಧಂ ಪರಮದಾರುಣಂ ।
ಗರುಡಂ ಗದಯಾ ದೈತ್ಯೋ ಜಘಾನ ಹರಿವಾಹನಂ ॥೨೪॥

ಸ ಗದಾಪಾತಖಿನ್ನಾಂಗೋ ನಿಶ್ವಸನ್ನವತಿಷ್ಠತ ।
ಶೌರಿಸ್ತಂ ದಕ್ಷಿಣೇನಾಶು ಹಸ್ತೇನ ಪರಿಸಾಂತ್ವಯನ್ ॥೨೫॥

---

ವಿಷ್ಣುವು ಮತ್ತು ಅಂಧಕಾಸುರನು ಇವರಿಬ್ಬರಿಗೂ ಬಾಣ, ಕತ್ತಿ, ಚಕ್ರ, ಮುಸಲ, ಗದೆ, ಶಕ್ತಿ, ಕೊಡಲಿ ಮೊದಲಾದ ಆಯುಧಗಳಿಂದ ಪರಸ್ಪರವಾಗಿ ಯುದ್ಧವು ನಡೆಯಿತು. ॥೨೦॥

ದೊಡ್ಡ ಪ್ರಭುವಾದ ವಿಷ್ಣು, ಅಂಧಕಾಸುರ, ಇವರಿಬ್ಬರಿಗೂ ಸಹ ಭಯಂಕರ ವಾಗಿಯೂ, ರೋಮಾಂಚವನ್ನುಂಟುಮಾಡುವುದಾಗಿಯೂ ಇರುವ ಯುದ್ಧವು ಐವತ್ತು ದಿನಗಳವರೆಗೂ ಪರಸ್ಪರವಾಗಿ ಅವಿಚ್ಛಿನ್ನವಾಗಿ ನಡೆಯಿತು. ॥೨೨॥

ಹಾಗೆಯೇ ಎಂದರೆ ವಿಷ್ಣು ಮತ್ತು ಅಂಧಕಾಸುರ ಇವರಿಗೆ ನಡೆದ ಯುದ್ಧ ದಂತೆಯೇ, ಇಂದ್ರಬಾಷ್ಕಲರಿಗೂ, ಮಹಿಷಾಸುರರುದ್ರರಿಗೂ, ಯಮ ಮತ್ತು ತ್ರಿಣೇತ್ರನೆಂಬ ರಾಕ್ಷಸಮುಖಂಡ ಇವರಿಗೂ, ಮಹಾಹನುವೆಂಬ ಅಸುರ ಮತ್ತು ಕುಬೇರ ಇವರಿಗೂ, ಅಸಿಲೋಮವರುಣರಿಗೂ, ಸಹ ಪರಸ್ಪರವಾಗಿ ಭಯಂಕರವಾದ ಯುದ್ಧವು ನಡೆಯಿತು. ॥೨೩॥

ಹೀಗೆ ಯುದ್ಧವು ನಡೆಯುತ್ತಿರುವಾಗ ಅಂಧಕಾಸುರನು ವಿಷ್ಣುವಿಗೆ ವಾಹನ ವಾದ ಗರುಡನನ್ನು ಗದೆಯಿಂದ ಹೊಡೆದನು. ॥೨೪॥

ಸ್ಥಿರಂ ಚಕಾರ ದೇವೇಶೋ ವೈನತೇಯಂ ಮಹಾಬಲಂ ।
ಸಮಾಕೃಷ್ಯ ಧನುಶ್ಶಾರ್ಙ್ಗಂ ಮುಮೋಚ ವಿಶಿಖಾನ್ಬಹೂನ್ ॥೨೬॥

ಅಂಧಕೋಽಪರಿ ಕೋಪೇನ ಹಂತುಕಾಮೋ ಜನಾರ್ದನಃ ।
ದಾನವೋಽಪಿ ಚ ತಾನ್ಬಾಣಾಂಶ್ಚಿಚ್ಛೇದ ಸ್ವಶರೈಃ ಶಿತೈಃ ॥೨೭॥

ಪಂಚಾಶದ್ಭಿರ್ಹರಿಂ ಕೋಪಾಜ್ಜಘಾನ ಚ ಶಿಲಾಶಿತೈಃ ।
ವಾಸುದೇವೋಽಪಿ ತಾಂಸ್ತೂರ್ಣಂ ವಂಚಯಿತ್ವಾ ಶರೋತ್ತಮಾನ್ ॥೨೮॥

ಚಕ್ರಂ ಮುಮೋಚ ವೇಗೇನ ಸಹಸ್ರಾರಂ ಸುದರ್ಶನಂ ।
ತ್ಯಕ್ತಂ ಸುದರ್ಶನಂ ದೂರಾತ್ಸ್ವಚಕ್ರೇಣ ನ್ಯವಾರಯತ್ ॥೨೯॥

---

ಆ ಗರುಡನು ಗದೆಯ ಏಟಿನಿಂದ ತನ್ನ ಅಂಗವು ಮುರಿದುಹೋದಂತಾಗಿ, ನಿಟ್ಟುಸಿರನ್ನು ಬಿಡುತ್ತಾ ನಿಂತನು. ಆಗ ದೇವದೇವನಾದ ವಿಷ್ಣುವು ಮಹಾಬಲಿಷ್ಠನಾದ ಗರುಡನನ್ನು ತನ್ನ ಬಲಗೈಯಿಂದ ಬೇಗನೆ ತಟ್ಟಿ ತಡವರಿಸಿ ಸಮಾಧಾನ ಮಾಡುತ್ತಾ ಅವನನ್ನು ಪೂರ್ವದಂತೆಯೇ ಧೈರ್ಯೋತ್ಸಾಹದ ಸ್ಥಿತಿಯನ್ನು ಹೊಂದುವಂತೆ ಮಾಡಿದನು. ॥೨೫॥

ದುಷ್ಟರನ್ನು ನಿಗ್ರಹಿಸುವ ವಿಷ್ಣುವು ಅಂಧಕಾಸುರನನ್ನು ಕೊಲ್ಲಲು ಇಚ್ಛೆಯುಳ್ಳವನಾಗಿ ಕೋಪದಿಂದ ತನ್ನ ಶಾರ್ಙ್ಗವೆಂಬ ಧನುಸ್ಸಿನ ಹೆದೆಯನ್ನು ಎಳೆದು ಅನೇಕ ಬಾಣಗಳನ್ನು ಬಿಟ್ಟನು. ॥೨೬॥

ಅಂಧಕಾಸುರನೂ ಕೂಡ ತನ್ನ ಗಟ್ಟಿಯಾದ ಮತ್ತು ಹರಿತವಾದ ಬಾಣಗಳಿಂದ ವಿಷ್ಣುವು ಬಿಟ್ಟ ಬಾಣಗಳನ್ನು ಕತ್ತರಿಸಿ ಕೋಪದಿಂದ ಐವತ್ತು ಬಾಣಗಳನ್ನು ಪ್ರಯೋಗಿಸಿ ವಿಷ್ಣುವನ್ನು ಹೊಡೆದನು. ॥೨೭॥

ವಿಷ್ಣುವೂ ಕೂಡ ಆ ರಾಕ್ಷಸನು ಬಿಟ್ಟ ಬಾಣಗಳನ್ನು ತನ್ನ ಮೇಲೆ ಬೀಳದಂತೆ ಬೇಗನೆ ತಪ್ಪಿಸಿ, ಸಾವಿರ ಅಲಗುಗಳುಳ್ಳ ತನ್ನ ಸುದರ್ಶನವೆಂಬ ಚಕ್ರವನ್ನು ಆ ರಾಕ್ಷಸನ ಮೇಲೆ ಬಿಟ್ಟನು. ವಿಷ್ಣುವು ಬಿಟ್ಟ ಚಕ್ರವನ್ನು ನೋಡಿ ಆ ರಾಕ್ಷಸನು ದೂರದಿಂದಲೇ ತನ್ನ ಚಕ್ರದಿಂದ, ಆ ಚಕ್ರವು ತನ್ನ ಮೇಲೆ ಬೀಳದಂತೆ ತಪ್ಪಿಸಿ ಕೊಂಡನು. ॥೨೮-೨೯॥

ನನಾದ ಚ ಮಹಾರಾಜ ದೇವಾನ್ಸಂಮೋಹಯನ್ನಿವ ।
ದೃಷ್ಟ್ವಾ ತು ವಿಫಲಂ ಜಾತಂ ಚಕ್ರಂ ದೇವಸ್ಯ ಶಾರ್ಙ್ಗಿಣಃ ।
ಜಗ್ಮುಃ ಶೋಕಂ ಸುರಾಃ ಸರ್ವೇ ಜಹರ್ಷುರ್ದಾನವಾಸ್ತಥಾ ॥೩೦॥

ವಾಸುದೇವೋಽಪಿ ತರಸಾ ದೃಷ್ಟ್ವಾ ದೇವಾಞ್ಛುಚಾಽಽವೃತಾನ್ ।
ಗದಾಂ ಕೌಮೋದಕೀಂ ಧೃತ್ವಾ ದಾನವಂ ಸಮುಪಾದ್ರವತ್ ॥೩೧॥

ತಂ ಜಘಾನಾತಿವೇಗೇನ ಮೂರ್ಧ್ನಿ ಮಾಯಾವಿನಂ ಹರಿಃ ।
ಸ ಗದಾಭಿಹತೋ ಭೂಮೌ ನಿಪಪಾತಾತಿಮೂರ್ಚ್ಛಿತಃ ॥೩೨॥

ತಂ ತಥಾ ಪತಿತಂ ವೀಕ್ಷ್ಯ ಹಯಾರಿರತಿಕೋಪನಃ ।
ಆಜಗಾಮ ರಮಾನಾಥಂ ತ್ರಾಸಯನ್ನತಿಗರ್ಜಿತೈಃ ॥೩೩॥

---

ಎಲೈ ಜನಮೇಜಯರಾಜನೇ, ದೇವತೆಗಳು ಭ್ರಮೆಯನ್ನು ಹೊಂದುವ ಹಾಗೆ ಅಂಧಕಾಸುರನು ಘಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ದೇವನಾದ ವಿಷ್ಣುವಿನ ಚಕ್ರವು ವ್ಯರ್ಥವಾದುದನ್ನು ನೋಡಿ ದೇವತೆಗಳೆಲ್ಲರೂ ವ್ಯಸನವನ್ನು ಹೊಂದಿದರು. ದಾನವರೆಲ್ಲರೂ ಸಂತೋಷಪಟ್ಟರು. ||೩೦||

ವಿಷ್ಣುವೂ ಕೂಡ, ದೇವತೆಗಳು ದುಃಖದಿಂದ ಕೂಡಿರುವುದನ್ನು ನೋಡಿ ಕೌಮೋದಕಿಯೆಂಬ ಗದೆಯನ್ನು ತೆಗೆದುಕೊಂಡು ಬೇಗನೆ ಮಾಯಾವಿಯಾದ ಆ ದಾನವನ ಮೇಲೆ ನುಗ್ಗಿ ಹೋದನು. ||೩೧||

ಮತ್ತು ಅವನ ತಲೆಗೆ ಆ ಗದೆಯಿಂದ ಬಲವಾಗಿ ಹೊಡೆದನು. ಅವನು ಆ ಗದೆಯ ಏಟನಿಂದ ಬಹಳವಾಗಿ ಮೂರ್ಛೆಹೊಂದಿ ಭೂಮಿಯ ಮೇಲೆ ಉರುಳಿ ಬಿದ್ದನು. ||೩೨||

ಅಂಧಕಾಸುರನು ಮೂರ್ಛೆಯನ್ನು ಹೊಂದಿದುದನ್ನು ನೋಡಿ, ಮಹಿಷಾಸುರನು ಬಹಳ ಕೋಪಗೊಂಡು, ಮಿತಿಮೀರಿದ ಗರ್ಜನೆಯಿಂದ ವಿಷ್ಣುವನ್ನು ಹೆದರಿಸುತ್ತಾ ಯುದ್ಧಕ್ಕೆ ಬಂದನು. ||೩೩||

ವಾಸುದೇವೋಽಪಿ ತಂ ದೃಷ್ಟ್ವಾ ಸಮಾಯಾಂತಂ ಕ್ರುಧಾನ್ವಿತಂ ।
ಚಾಪಜ್ಯಾನಿನದಂ ಚೋಗ್ರಂ ಚಕಾರ ನಂದಯನ್ಸುರಾನ್ ॥೩೪॥

ಶರವೃಷ್ಟಿಂ ಚಕಾರಾಶು ಭಗವಾನ್ಮಹಿಷೋಪರಿ ।
ಸೋಽಪಿ ಚಿಚ್ಛೇದ ಬಾಣೌಘೈಸ್ತಾಞ್ಛರಾನ್ಗಗನೇರಿತಾನ್ ॥೩೫॥

ತಯೋರ್ಯುದ್ಧಮಭೂದ್ರಾಜನ್ಪರಸ್ಪರಭಯಾವಹಂ ।
ಗದಯಾ ತಾಡಯಾಮಾಸ ಕೇಶವೋ ಮಸ್ತಕೋಪರಿ ॥೩೬॥

ಸ ಗದಾಭಿಹತೋ ಮೂರ್ಧ್ನಿ ಪಪಾತೋರ್ವ್ಯಾಂ ಸುಮೂರ್ಛಿತಃ ।
ಹಾಹಾಕಾರೋ ಮಹಾನಾಸೀತ್ಸೈನ್ಯೇ ತಸ್ಯ ಸುದಾರುಣಃ ॥೩೭॥

ಸ ವಿಹಾಯ ವ್ಯಥಾಂ ದೈತ್ಯೋ ಮುಹೂರ್ತಾದುತ್ಥಿತಃ ಪುನಃ ॥೩೮॥
ಗೃಹೀತ್ವಾ ಪರಿಘಂ ಶೀರ್ಷೇ ಜಘಾನ ಮಧುಸೂದನಂ ।

---

ವಿಷ್ಣುವೂ ಕೂಡ, ಆ ಮಹಿಷಾಸುರನು ಕೋಪದಿಂದ ಬರುತ್ತಿರುವುದನ್ನು ನೋಡಿ ಧನುಸ್ಸಿನ ಮೌರ್ವಿಯನ್ನು ಎಳೆದು ಭಯಂಕರವಾದ ಧ್ವನಿಯನ್ನು ಮಾಡಿ ದೇವತೆಗಳನ್ನು ಸಂತೋಷಪಡಿಸಿದನು. ॥೩೪॥

ಮತ್ತು ಬೇಗನೆ ಆ ಮಹಿಷಾಸುರನ ಮೇಲೆ ಮಹಾಮಹಿಮನಾದ ವಿಷ್ಣುವು ಬಾಣಗಳ ಮಳೆಯನ್ನು ಸುರಿಸಿದನು. ಆಗ ಆ ಮಹಿಷಾಸುರನು ಆ ಬಾಣಸಮೂಹವನ್ನು, ಅವು ಬರುತ್ತಿರುವಾಗಲೇ ಆಕಾಶದಲ್ಲಿಯೇ ಕತ್ತರಿಸಿ ಕೆಡವಿದನು. ॥೩೫॥

ಎಲೈ ಜನಮೇಜಯರಾಜನೇ, ಈ ರೀತಿಯಲ್ಲಿ ವಿಷ್ಣು-ಮಹಿಷಾಸುರರಿಗೆ ಪರಸ್ಪರವಾಗಿ ಭಯಂಕರ ಯುದ್ಧವು ನಡೆಯಿತು. ಬಳಿಕ ವಿಷ್ಣುವು ತನ್ನ ಗದೆಯಿಂದ ಆ ಮಹಿಷಾಸುರನ ತಲೆಯ ಮೇಲೆ ಹೊಡೆದನು. ॥೩೬॥

ಆ ಗದೆಯ ಏಟಿನಿಂದ ಮಹಿಷಾಸುರನು ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು. ಅದನ್ನು ಕಂಡು ಅವನ ಸೈನ್ಯದಲ್ಲಿ ಮಹತ್ತರವಾದ ಹಾಹಾಕಾರ ವೆದ್ದಿತು. ॥೩೭॥

ಅನಂತರದಲ್ಲಿ ಒಂದು ಕ್ಷಣದಲ್ಲಿಯೇ ಆ ದೈತ್ಯನು ಮೂರ್ಛೆಯಿಂದ ಎಚ್ಚತ್ತು ಎದ್ದುನಿಂತನು. ॥೩೮॥

ಪರಿಘೇಣಾಹತಸ್ತೇನ ಮೂರ್ಚ್ಛಾಮಾಪ ಜನಾರ್ದನಃ ॥೩೯॥

ಮೂರ್ಚ್ಛಿತಂ ತಮುವಾಹಾಶು ಜಗಾಮ ಗರುಡೋ ರಣಾತ್ ।
ಪರಾವೃತ್ತೇ ಜಗನ್ನಾಥೇ ದೇವಾ ಇಂದ್ರಪುರೋಗಮಾಃ ॥೪೦॥

ಭಯಂ ಪ್ರಾಪುಃ ಸುದುಃಖಾರ್ತಾಶ್ಚುಕ್ರುಶುಶ್ಚ ರಣಾಜಿರೇ ।
ಕ್ರಂದಮಾನಾನ್ಸುರಾನ್ವೀಕ್ಷ್ಯ ಶಂಕರಃ ಶೂಲಭೃತ್ತದಾ ॥೪೧॥

ಸೋಽಪಿ ಶಕ್ತಿಂ ಮುಮೋಚಾಥ ಶಂಕರಸ್ಯೋರಸಿ ಸ್ಫುಟಂ ।
ಜಗರ್ಜ ಸ ಚ ದುಷ್ಟಾತ್ಮಾ ವಂಚಯಿತ್ವಾ ತ್ರಿಶೂಲಕಂ ॥೪೨॥

ಶಂಕರೋಽಪಿ ತದಾ ಪೀಡಾಂ ನ ಪ್ರಾಪೋರಸಿ ತಾಡಿತಃ ।
ತಂ ಜಘಾನ ತ್ರಿಶೂಲೇನ ಕೋಪಾದರುಣಲೋಚನಃ ॥೪೩॥

---

ಮತ್ತು ವ್ಯಥೆಯನ್ನು ಬಿಟ್ಟು ಪರಿಘಾಯುಧವನ್ನು ತೆಗೆದುಕೊಂಡು ಮಧು ದೈತ್ಯನ ಸಂಹಾರಕನಾದ ವಿಷ್ಣುವನ್ನು ಹೊಡೆದನು. ಪರಿಘಾಯುಧದ ಏಟಿನಿಂದ ವಿಷ್ಣುವು ಮೂರ್ಛೆಯನ್ನು ಹೊಂದಿದನು. ॥೩೯॥

ಮೂರ್ಛೆಯನ್ನು ಹೊಂದಿದ ವಿಷ್ಣುವನ್ನು ವಾಹನವಾಗಿದ್ದ ಗರುಡನು ಬೇಗನೆ ಯುದ್ಧರಂಗದಿಂದ ತಪ್ಪಿಸಿ ಕರೆದುಕೊಂಡು ಹೋದನು. ಜಗದೊಡೆಯ ನಾದ ವಿಷ್ಣುವು ಯುದ್ಧದಿಂದ ಹಿಂತಿರುಗಲು, ಇಂದ್ರನೇ ಮೊದಲಾದ ದೇವತೆಗಳು ಭಯಗೊಂಡು ದುಃಖದಿಂದ ಆರ್ತನಾದವನ್ನು ಮಾಡತೊಡಗಿದರು. ॥೪೦॥

ಆಗ ದುಃಖದಿಂದ ಅಳುತ್ತಿರುವ ದೇವತೆಗಳನ್ನು ನೋಡಿ ಶಂಕರನು ಶೂಲಾ ಯುಧವನ್ನು ತೆಗೆದುಕೊಂಡು ಮಹಾಕ್ರೋಪಾನ್ವಿತನಾಗಿ ಬೇಗನೆ ಮಹಿಷಾಸುರನ ಮೇಲೆ ನುಗ್ಗಿಬಂದು ಅವನನ್ನು ಹೊಡೆದನು. ॥೪೧॥

ಆ ಮಹಿಷಾಸುರನೂ ಕೂಡ ಶಂಕರನ ಎದೆಗೆ ಗುರಿಯಿಟ್ಟು ಶಕ್ತ್ಯಾಯುಧ ವನ್ನು ಬಿಟ್ಟನು. ಅಲ್ಲದೆ ಶಂಕರನು ಪ್ರಯೋಗಿಸಿದ ತ್ರಿಶೂಲವನ್ನು ತಪ್ಪಿಸಿಕೊಂಡು ಆ ದುಷ್ಟದೈತ್ಯನು ಗರ್ಜಿಸಿದನು. ॥೪೨॥

ಮಹಿಷಾಸುರನು ಶಕ್ತ್ಯಾಯುಧದಿಂದ ಎದೆಯ ಮೇಲೆ ಹೊಡೆದ ಏಟಿನಿಂದ ಶಂಕರನಿಗೆ ಏನೂ ನೋವಾಗಲಿಲ್ಲ. ಶಂಕರನು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಆ ದೈತ್ಯನನ್ನೂ ತ್ರಿಶೂಲದಿಂದ ಹೊಡೆದನು. ॥೪೩॥

ಸಂಲಗ್ನಂ ಶಂಕರಂ ದೃಷ್ಟ್ವಾ ಮಹಿಷೇಣ ದುರಾತ್ಮನಾ ।
ಆಜಗಾಮ ಹರಿಸ್ತಾವತ್ತ್ಯಕ್ತ್ವಾ ಮೂರ್ಛಾಂ ಪ್ರಹಾರಜಾಂ ॥೪೪॥

ಮಹಿಷಸ್ತು ತದಾ ವೀಕ್ಷ್ಯ ಸಂಪ್ರಾಪ್ತೌ ಹರಿಶಂಕರೌ ॥೪೫॥

ಯುದ್ಧಕಾಮೌ ಮಹಾವೀರ್ಯೌ ಚಕ್ರಶೂಲಧರೌ ಪರೌ ।
ಕೋಪಯುಕ್ತೋ ಬಭೂವಾಸೌ ದೃಷ್ಟ್ವಾ ತೌ ಸಮುಪಾಗತೌ ॥೪೬॥

ಜಗಾಮ ಸಂಮುಖಸ್ತಾವತ್ಸಂಗ್ರಾಮಾರ್ಥಂ ಮಹಾಭುಜಃ ।
ಮಾಹಿಷಂ ವಪುರಾಸ್ಥಾಯ ಧುನ್ವನ್ಪುಚ್ಛಂ ಸಮುತ್ಕಟಂ ॥೪೭॥

ಚಕಾರ ಭೈರವಂ ನಾದಂ ತ್ರಾಸಯನ್ನಮರಾನಪಿ ।
ಧುನ್ವನ್ ಶೃಂಗೇ ಮಹಾಕಾಯೋ ದಾರುಣೋ ಜಲದೋ ಯಥಾ ॥

ಶೃಂಗಾಭ್ಯಾಂ ಪಾರ್ವತಾಞ್ಛೃಂಗಾಂಶ್ಚಿಕ್ಷೇಪ ಭೃಶಮುತ್ಕಟಾನ್ ।
ದೃಷ್ಟ್ವಾ ತೌ ತು ಮಹಾವೀರ್ಯೌ ದಾನವಂ ದೇವಸತ್ತಮೌ ॥೪೯॥

---

ದುಷ್ಟನಾದ ಮಹಿಷಾಸುರನೊಡನೆ ಶಂಕರನು ಯುದ್ಧದಲ್ಲಿ ತೊಡಗಿರುವುದನ್ನು ನೋಡಿದೊಡನೆ ಅಷ್ಟುಹೊತ್ತಿನೊಳಗೆ ಪರಿಘಾಯುಧದಿಂದ ಉಂಟಾದ ಮೂರ್ಛೆಯನ್ನು ತಿಳಿದು ಎಚ್ಚತ್ತಿದ್ದ ವಿಷ್ಣುವು ಬೇಗನೆ ಬಂದನು. ॥೪೪॥

ಆಗ ಮಹಿಷಾಸುರನು, ಬಹಳ ಶಕ್ತಿವಂತರಾಗಿಯೂ, ಚಕ್ರಶೂಲಗಳನ್ನು ಧರಿಸಿರುವವರಾಗಿಯೂ, ಶ್ರೇಷ್ಠರಾಗಿಯೂ ಇರುವ ವಿಷ್ಣುಶಿವರು ಯುದ್ಧಮಾಡಲು ಇಚ್ಛೆಯಿಂದ ತನ್ನ ಎದುರಾಗಿ ಬರುತ್ತಿರುವುದನ್ನು ನೋಡಿ ಬಹಳ ಕೋಪಗೊಂಡನು. ॥೪೫-೪೬॥

ಮಹಾಭುಜವುಳ್ಳ ಆ ಮಹಿಷಾಸುರನು ಆಗ ಕೋಣನ ಶರೀರವನ್ನು ಧರಿಸಿ ದೊಡ್ಡದಾದ ಬಾಲವನ್ನು, ಬೀಸುತ್ತಾಯುದ್ಧಕ್ಕಾಗಿ ಅವರಿಗೆ ಎದುರಾದನು. ॥೪೭॥

ಆ ಮಹಿಷಾಸುರನು ದೊಡ್ಡದಾದ ಮಹಿಷಾಕಾರದ ದೇಹವನ್ನು ಹೊಂದಿ ದೇವತೆಗಳಿಗೂ ಭಯವಾಗುವಂತೆ, ತನ್ನ ಕೊಂಬುಗಳನ್ನು ಕೊಡುವುತ್ತಾ, ವರ್ಷಾಕಾಲದ ಮೇಘದಂತೆ ಭಯಂಕರವಾದ ಗರ್ಜನೆಯನ್ನು ಮಾಡಿದನು. ॥೪೮॥

ಮಹಾಪರಾಕ್ರಮಶಾಲಿಗಳಾದ, ದೇವೋತ್ತಮರಾದ ಹರಿಹರರನ್ನು ನೋಡಿ ಮಹಿಷಾಸುರನು ತನ್ನ ಕೊಂಬುಗಳಿಂದ ದೊಡ್ಡದಾದ ಬೆಟ್ಟದ ಶಿಖರಗಳನ್ನು ತಿವಿದು

ಚಕ್ರತುರ್ಬಾಣವೃಷ್ಟಿಂ ಚ ದಾನವೋಪರಿ ದಾರುಣಾಂ ।
ಕುರ್ವಾಣೌ ಬಾಣವೃಷ್ಟಿಂ ತೌ ದೃಷ್ಟ್ವಾ ಹರಿಹರೌ ಹರಿಃ ॥೫೦॥

ಚಿಕ್ಷೇಪ ಗಿರಿಶೃಂಗಂ ತು ಪುಚ್ಛೇನಾವೃತ್ಯ ದಾರುಣಂ ।
ಆಪತಂತಂ ಗಿರಿಂ ವೀಕ್ಷ್ಯ ಭಗವಾನ್ಸಾತ್ವತಾಂ ಪತಿಃ ॥೫೧॥

ವಿಶಿಖೈಃ ಶತಧಾ ಚಕ್ರೇ ಚಕ್ರೇಣಾಶು ಜಘಾನ ತಂ ।
ಹರಿಚಕ್ರಾಹತಃ ಸಂಖ್ಯೇ ಮೂರ್ಛಾಮಾಪ ಸ ದೈತ್ಯರಾಟ್ ॥೫೨॥

ಉತ್ತಸ್ಥೌ ಚ ಕ್ಷಣಾನ್ನೂನಂ ಮಾನುಷಂ ವಪುರಾಸ್ಥಿತಃ ।
ಗದಾಪಾಣಿರ್ಮಹಾಘೋರೋ ದಾನವಃ ಪರ್ವತೋಪಮಃ ॥೫೩॥

---

ಎತ್ತಿ ಅವರ ಮೇಲೆ ಚಿಮ್ಮಿಸಿ ಹಾಕಿದನು. ಆ ವಿಷ್ಣುಶಂಕರರೂ ಆ ರಾಕ್ಷಸನ ಮೇಲೆ ಕ್ರೂರವಾದ ಬಾಣಗಳ ಮಳೆಯನ್ನು ಕರೆದರು. ||೪೯||

ಮಳೆಯು ಸುರಿಯುವಂತೆ ಬಾಣಗಳನ್ನು ಸುರಿಸುತ್ತಿರುವ ಆ ಹರಿಶಂಕರರನ್ನು ನೋಡಿ ಹಯಾರಿ ಎಂದರೆ ಕುದುರೆಗೆ ಶತ್ರುವಾದ ಕೋಣನ ರೂಪದಲ್ಲಿದ್ದ ಮಹಿಷಾಸುರನು ದೊಡ್ಡದಾಗಿ ಭಯಂಕರವಾದ ಒಂದು ಗಿರಿಶಿಖರವನ್ನು ತನ್ನ ಬಾಲದಿಂದ ಸುತ್ತಿ ಇವರ ಮೇಲೆ ಬೀಸಿ ಎಸೆದನು. ||೫೦||

ತಮ್ಮಗಳ ಮೇಲೆ ಬೀಳಲು ಬರುತ್ತಿರುವ ಬೆಟ್ಟದ ಕೋಡನ್ನು ನೋಡಿ ಮಹಾಮಹಿಮನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ವಿಷ್ಣುವು ತನ್ನ ಬಾಣಗಳಿಂದ ಆ ಬೆಟ್ಟವನ್ನು ನೂರಾರು ಚೂರುಗಳನ್ನಾಗಿ ಮಾಡಿ, ಆ ದೈತ್ಯನನ್ನು ಬೇಗನೆ ಚಕ್ರಾಯುಧದಿಂದ ಹೊಡೆದನು. ವಿಷ್ಣುಚಕ್ರದಿಂದ ಏಟನ್ನು ತಿಂದು ಮಹಿಷಾಸುರನು ಮೂರ್ಛೆಯನ್ನು ಹೊಂದಿದನು. ||೫೧-೫೨||

ಬಹಳ ಕ್ರೂರನಾಗಿಯೂ ಬೆಟ್ಟದ ಹಾಗೆ ಗಟ್ಟಿಯೂ ದೊಡ್ಡದೂ ಆದ ಶರೀರವುಳ್ಳವನೂ ಆಗಿದ್ದ ಆ ಮಹಿಷಾಸುರನು ಒಂದು ಕ್ಷಣಕಾಲದವರೆಗೆ ಮೂರ್ಛೆಯಲ್ಲಿದ್ದು, ಕೂಡಲೇ ಎಚ್ಚತ್ತು, ಮನುಷ್ಯಾಕೃತಿಯನ್ನು ಧರಿಸಿ ಗದೆಯನ್ನು ಹಿಡಿದುಕೊಂಡು ಬಂದು ದೇವತೆಗಳೂ ಹೆದರಿಕೊಳ್ಳುವಂತೆ ಘಟ್ಟಿಯಾಗಿ ಮೇಘಗರ್ಜನೆಯಂತೆ ಇರುವ ಸಿಂಹನಾದವನ್ನು ಮಾಡಿದನು. ||೫೩||

ಮೇಘನಾದಂ ನನಾದೋಚ್ಚೈರ್ಭೀಷಯನ್ನಮರಾನಪಿ ।
ತಚ್ಛ್ರುತ್ವಾ ಭಗವಾನ್ವಿಷ್ಣುಃ ಪಾಂಚಜನ್ಯಂ ಸಮುಜ್ಜ್ವಲಂ ॥೫೪॥

ಪೂರಯಾಮಾಸ ತರಸಾ ಶಬ್ದಂ ಕರ್ತುಂ ಖರಸ್ವರಂ ।
ತೇನ ಶಬ್ದೇನ ಶಂಖಸ್ಯ ಭಯತ್ರಸ್ತಾಶ್ಚ ದಾನವಾಃ ॥೫೫॥
ಬಭೂವುರ್ಮುದಿತಾ ದೇವಾ ಋಷಯಶ್ಚ ತಪೋಧನಾಃ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಷಷ್ಠೋಽಧ್ಯಾಯಃ.

---

ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಅವನು ಮಾಡಿದ ಸಿಂಹನಾದವನ್ನು ಕೇಳಿ ಪ್ರಕಾಶಮಾನವಾದ ಪಾಂಚಜನ್ಯವೆಂಬ ಶಂಖವನ್ನು ತೆಗೆದುಕೊಂಡು ಹೆಚ್ಚಾಗಿ ಶಬ್ದವುಂಟಾಗುವಂತೆ ವೇಗದಿಂದ ಊದಿದನು. ಶಂಖದ ಆ ಧ್ವನಿಯಿಂದ ದಾನವರೆಲ್ಲರೂ ಭಯದಿಂದ ಹೆದರಿದರು. ದೇವತೆಗಳೂ ತಪೋನಿಧಿಗಳಾದ ಋಷಿಗಳೂ ಸಂತೋಷವುಳ್ಳವರಾದರು. ||೫೪-೫೫||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಆರನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಅಸುರಾನ್ಮಹಿಷೋ ದೃಷ್ಟ್ವಾ ವಿಷಣ್ಣಮನಸಸ್ತದಾ ।**
**ತ್ಯಕ್ತ್ವಾ ತನ್ಮಾಹಿಷಂ ರೂಪಂ ಬಭೂವ ಮೃಗರಾಡಸೌ ॥೧॥**

**ಕೃತ್ವಾ ನಾದಂ ಮಹಾಘೋರಂ ವಿಸ್ತಾರ್ಯ ಚ ಮಹಾಸಟಂ ।**
**ಪಪಾತ ಸುರಸೇನಾಯಾಂ ತ್ರಾಸಯನ್ನಖದರ್ಶನೈಃ ॥೨॥**

**ಗರುಡಂ ಚ ನಖಾಘಾತೈಃ ಕೃತ್ವಾ ರುಧಿರವಿಪ್ಲುತಂ ।**
**ಜಘಾನ ಚ ಭುಜೇ ವಿಷ್ಣುಂ ನಖಾಘಾತೇನ ಕೇಸರೀ ॥೩॥**

---

ವ್ಯಾಸಮಹರ್ಷಿಯು ಹೇಳಿದನು—ಆಗ ಮಹಿಷಾಸುರನು, ರಾಕ್ಷಸರು ವಿಷಾದದಿಂದ ಕೂಡಿದ ಮನಸ್ಸುಳ್ಳವರಾಗಿರುವುದನ್ನು ನೋಡಿ ತಾನು ಆ ಕೋಣನ ರೂಪವನ್ನು ಬಿಟ್ಟು ಸಿಂಹದ ಆಕಾರವನ್ನು ಹೊಂದಿದನು. ||೧||

ಸಿಂಹದಾಕಾರವನ್ನು ಧರಿಸಿದ ಮಹಿಷಾಸುರನು ಬಹಳ ಭಯಂಕರವಾದ ಗರ್ಜನೆಯ ಧ್ವನಿಯನ್ನು ಮಾಡಿ ಕೋಪದಿಂದ ಕುತ್ತಿಗೆಯ ಮೇಲಿರುವ ಕೇಸರವನ್ನು (ಕೂದಲನ್ನು) ಕೆದರಿಕೊಂಡು ದೇವಸೇನೆಯ ಮೇಲೆ ನೆಗೆದು ಎಲ್ಲರನ್ನೂ ತನ್ನ ಉಗುರಿನಿಂದ ಹೆದರಿಸುತ್ತಾ ಯುದ್ಧಕ್ಕೆ ನುಗ್ಗಿ ಬಂದನು. ||೨||

ಆ ಸಿಂಹವು ಗರುಡನನ್ನು ಉಗುರಿನಿಂದ ಪರಚಿ ಅವನ ಶರೀರವು ರಕ್ತಮಯವಾಗುವಂತೆ ಮಾಡಿತು. ಬಳಿಕ ವಿಷ್ಣುವನ್ನೂ ಸಹ ಭುಜದಲ್ಲಿ ಉಗುರಿನಿಂದಲೇ ಘಾಯಪಡಿಸಿ ತನ್ನ ಪಂಜದಿಂದ ಹೊಡೆಯಿತು. ||೩||

ವಾಸುದೇವೋಽಪಿ ತಂ ದೃಷ್ಟ್ವಾ ಚಕ್ರಮುದ್ಯಮ್ಯ ವೇಗವಾನ್ ।
ಹಂತುಕಾಮೋ ಹರಿಃ ಕಾಮಮುಪಾಪಾಶು ಕ್ರುಧಾನ್ವಿತಃ ॥೪॥

ಯಾವದ್ಧಯರಿಪುಂ ವೇಗಾಚ್ಚಕ್ರೇಣಾಭಿಜಘಾನ ತಂ ।
ತಾವತ್ಸೋಽತಿಬಲಃ ಶೃಂಗೀ ಶೃಂಗಾಭ್ಯಾಂ ನ್ಯಹನದ್ಧರಿಂ ॥೫॥

ವಾಸುದೇವೋ ವಿಷಾಣಾಭ್ಯಾಂ ತಾಡಿತೋರಸಿ ವಿಹ್ವಲಃ ।
ಪಲಾಯನಪರೋ ವೇಗಾಜ್ಜಗಾಮ ಭುವನಂ ನಿಜಂ ॥೬॥

ಗತಂ ದೃಷ್ಟ್ವಾ ಹರಿಂ ಕಾಮಂ ಶಂಕರೋಽಪಿ ಭಯಾನ್ವಿತಃ
ಅವಧ್ಯಂ ತಂ ಪರಂ ಮತ್ವಾ ಯಯೌ ಕೈಲಾಸಪರ್ವತಂ ॥೭॥

ಬ್ರಹ್ಮಾಪಿ ಚ ನಿಜಂ ಧಾಮ ತ್ವರಿತಃ ಪ್ರಯಯೌ ಭಯಾತ್ ।
ಮಘವಾ ವಜ್ರಮಾಲಂಬ್ಯ ತಸ್ಥೌ ವಾಜೌ ಮಹಾಬಲಃ ॥೮॥

---

ವಿಷ್ಣುವೂ ಕೂಡ ಆ ಸಿಂಹವನ್ನು ನೋಡಿ ಅದನ್ನು ಹೊಡೆಯಬೇಕೆಂಬ ಇಚ್ಛೆಯಿಂದ ಚಕ್ರಾಯುಧವನ್ನು ಬೇಗನೆ ತೆಗೆದುಕೊಂಡು ಕೋಪದಿಂದ ಅದರ ಮೇಲೆ ನುಗ್ಗಿಬಂದನು. ||೪||

ವಿಷ್ಣುವು ತನ್ನ ಚಕ್ರದಿಂದ ಆ ಸಿಂಹರೂಪಿಯಾದ ಮಹಿಷಾಸುರನನ್ನು ಜೋರಾಗಿ ಹೊಡೆಯುವಷ್ಟರಲ್ಲಿ ಅತಿ ಬಲಿಷ್ಠನಾದ ಅವನು ಎಮ್ಮೆಯ ಆಕಾರವನ್ನು ಹೊಂದಿ ತನ್ನ ಕೋಡುಗಳಿಂದ ವಿಷ್ಣುವನ್ನು ತಿವಿದನು. ||೫||

ವಿಷ್ಣುವು ಆ ಮಹಿಷಾಸುರನ ಕೊಂಬುಗಳ ತಿವಿತದಿಂದ ಎದೆಯಲ್ಲಿ ಏಟು ಬಿದ್ದು ಸಂಕಟಪಡುತ್ತಾ ತನ್ನ ಸ್ವಸ್ಥಾನವನ್ನು ಕುರಿತು ಬೇಗನೆ ಓಡಿಹೋದನು. ||೬||

ವಿಷ್ಣುವು ಆರೀತಿಯಲ್ಲಿ ಹೊರಟು ಹೋದುದನ್ನು ನೋಡಿ ಶಂಕರನು ಭಯದಿಂದ ಕೂಡಿ, ಅವನನ್ನು ಅವಧ್ಯನೆಂದು ತಿಳಿದು ತಾನೂ ಕೈಲಾಸಪರ್ವತಕ್ಕೆ ಹೊರಟು ಹೋದನು. ||೭||

ಬ್ರಹ್ಮನೂ ಕೂಡ ಹೆದರಿಕೊಂಡು ವೇಗದಿಂದ ಹೊರಟು ತನ್ನ ಸ್ಥಾನವನ್ನು ಸೇರಿದನು. ಬಳಿಕ ಬಲಶಾಲಿಯಾದ ಇಂದ್ರನು ತನ್ನ ವಜ್ರಾಯುಧವನ್ನು ಹಿಡಿದುಕೊಂಡು ಯುದ್ಧಮಾಡುವುದಕ್ಕಾಗಿ ನಿಂತನು. ||೮||

ವರುಣಃ ಶಕ್ತಿಮಾಲಂಬ್ಯ ಧೈರ್ಯಮಾಲಂಬ್ಯ ಸಂಸ್ಥಿತಃ ।
ಯಮೋऽಪಿ ದಂಡಮಾದಾಯ ಯತಃಸಮರತತ್ಪರಃ ॥೯॥

ತತೋ ಯಕ್ಷಾಧಿಪಃ ಕಾಮಂ ಬಭೂವ ರಣತತ್ಪರಃ ।
ಪಾವಕಃ ಶಕ್ತಿಮಾದಾಯ ತತ್ರಾಭೂದ್ಯುದ್ಧಮಾನಸಃ ॥೧೦॥

ನಕ್ಷತ್ರಾಧಿಪತಿಃ ಸೂರ್ಯಃ ಸಮವೇತೌ ಸ್ಥಿತಾವುಭೌ ।
ವೀಕ್ಷ್ಯ ತಂ ದಾನವಶ್ರೇಷ್ಠಂ ಯುದ್ಧಾಯ ಕೃತನಿಶ್ಚಯೌ ॥೧೧॥

ಏತಸ್ಮಿನ್ನಂತರೇ ಕ್ರುದ್ಧಂ ದೈತ್ಯಸೈನ್ಯಂ ಸಮುಭ್ಯಗಾತ್ ।
ವಿಸೃಜನ್ಬಾಣಜಾಲಾನಿ ಕ್ರೂರಾಹಿಸದೃಶಾನಿ ಚ ॥೧೨॥

ಕೃತ್ವಾ ಹಿ ಮಾಹಿಷಂ ರೂಪಂಭೂಪತಿಃ ಸಂಸ್ಥಿತಸ್ತದಾ ।
ದೇವದಾನವಯೋಧಾನಾಂ ನಿನಾದಸ್ತುಮುಲೋऽಭವತ್ ॥೧೩॥

---

ವರುಣನು ಶಕ್ತಿಯೆಂಬ ಆಯುಧವನ್ನು ಧರಿಸಿ ಧೈರ್ಯದಿಂದ ಯುದ್ಧಕ್ಕೆ ನಿಂತನು. ಯಮನೂ ಕೂಡ ದಂಡಾಯುಧವನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧವಾದುದನ್ನು ನೋಡಿ ಯಕ್ಷಾಧಿಪತಿಯಾದ ಕುಬೇರನೂ ಯುದ್ಧಾಸಕ್ತಿಯಿಂದ ಬಂದು ನಿಂತನು. ||೯||

ಅಗ್ನಿಯು ತನ್ನ ಶಕ್ತ್ಯಾಯುಧವನ್ನು ತೆಗೆದುಕೊಂಡು ಯುದ್ಧದಲ್ಲಿ ಮನಸ್ಸುಳ್ಳವನಾಗಿ ಬಂದನು. ನಕ್ಷತ್ರಗಳಿಗೆ ಅಧಿಪನಾದ ಚಂದ್ರನೂ, ಸೂರ್ಯನೂ ಇವರಿಬ್ಬರೂ ಒಂದು ಕಡೆಯಲ್ಲಿ ನಿಂತುಕೊಂಡು ಆ ದಾನವಶ್ರೇಷ್ಠನಾದ ಮಹಿಷಾಸುರನನ್ನು ನೋಡಿ ತಾವೂ ಬಂದು ಯುದ್ಧ ಮಾಡಬೇಕೆಂದು ನಿಶ್ಚಯಿಸಿದರು. ||೧೦-೧೧||

ಈ ಸಮಯದಲ್ಲಿ ದಾನವಸೇನೆಯೂ ಕೋಪಗೊಂಡು ಹಾವಿನಂತೆ ಬಹು ಕ್ರೂರವಾದ ಬಾಣಗಳ ಪರಂಪರೆಯನ್ನು ಬಿಡುತ್ತಾ ಇವರಿಗೆ ಎದುರಾಯಿತು. ||೧೨||

ದಾನವರ ಧೊರೆಯಾದ ಮಹಿಷಾಸುರನು ಕೋಣನ ಆಕಾರವನ್ನು ಧರಿಸಿಕೊಂಡು ಆ ಯುದ್ಧರಂಗದಲ್ಲಿ ಬಂದು ನಿಂತನು. ಆಗ ದೇವದಾನವ ಸೈನ್ಯಗಳ ಯುದ್ಧಭಟರ ರಣಕೋಲಾಹಲವು ಬಹಳ ಭಯಂಕರವಾಗಿತ್ತು. ||೧೩||

ಜ್ಯಾಘಾತಶ್ಚ ತಲಾಘಾತೋ ಮೇಘನಾದಸಮೋಽಭವತ್ ।
ಸಂಗ್ರಾಮೇ ಸುಮಹಾಘೋರೇ ದೇವದಾನವಸೇನಯೋಃ ॥೧೪॥

ಶೃಂಗಾಭ್ಯಾಂ ಪರ್ವತಾಞ್ಛೃಂಗಾಂಶ್ಚಿಕ್ಷೇಪ ಚ ಮಹಾಬಲಃ ।
ಜಘಾನ ಸುರಸಂಘಾಂಶ್ಚ ದಾನವೋ ಮದಗರ್ವಿತಃ ॥೧೫॥

ಖುರಘಾತೈಸ್ತಥಾ ದೇವಾನ್ಪುಚ್ಛಸ್ಯ ಭ್ರಮಣೇನ ಚ ।
ಸ ಜಘಾನ ರುಷಾವಿಷ್ಟೋ ಮಹಿಷಃ ಪರಮಾದ್ಭುತಃ ॥೧೬॥

ತತೋ ದೇವಾಃ ಸಗಂಧರ್ವಾ ಭಯಮಾಜಗ್ಮುರುದ್ಯತಾಃ ।
ಮಘವಾ ಮಹಿಷಂ ದೃಷ್ಟ್ವಾ ಪಲಾಯನಪರೋಽಭವತ್ ॥೧೭॥

ಸಂಗರಂ ಸಂಪರಿತ್ಯಜ್ಯ ಗತೇ ಶಕ್ರೇ ಶಚೀಪತೌ ।
ಯಮೋ ಧನಾಧಿಪಃ ಪಾಶೀ ಜಗ್ಮುಃ ಸರ್ವೇ ಭಯಾತುರಾಃ ॥೧೮॥

---

ಆ ದೇವದಾನವಸೈನ್ಯಗಳಿಗೆ ಸಂಭವಿಸಿದ ಬಹಳ ಭಯಂಕರವಾದ ಆ ಯುದ್ಧದಲ್ಲಿ ಧನುಸ್ಸಿನ ಮೌರ್ವಿಗಳ ಧ್ವನಿಯೂ ಕೈಗಳಿಂದ ಉಂಟಾದ ಶಬ್ದವೂ ಸಹ ಮೇಘಗರ್ಜನೆಗೆ ಸಮಾನವಾಗಿದ್ದಿತು. ॥೧೪॥

ಮಹಾಬಲಿಷ್ಠನಾದ ಆ ಮಹಿಷಾಸುರನು ಮದದಿಂದ ಕೊಬ್ಬಿ ಪರ್ವತಶಿಖರ ಗಳನ್ನು ತನ್ನ ಕೊಂಬುಗಳಿಂದ ಎತ್ತಿ ದೇವತೆಗಳ ಮೇಲೆಸೆದು ಅವರನ್ನು ಕೊಲ್ಲು ತ್ತಿದ್ದನು. ॥೧೫॥

ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವ ಆಕಾರವುಳ್ಳ ಆ ಮಹಿಷಾಸುರನು ಬಹಳ ಕೋಪದಿಂದ ಕೂಡಿ ತನ್ನ ಕಾಲು ಗೊರಸುಗಳ ತುಳಿತದಿಂದಲೂ ಬಾಲವನ್ನು ಬೀಸಿ ಅಪ್ಪಳಿಸುವುದರಿಂದಲೂ ದೇವತೆಗಳನ್ನು ಕೊಲ್ಲುತ್ತಿದ್ದನು. ॥೧೬॥

ಯುದ್ಧಕ್ಕೆ ಸಿದ್ಧರಾಗಿ ನಿಂತಿದ್ದ ದೇವತೆಗಳೂ ಗಂಧರ್ವರೂ ಭಯವನ್ನು ಹೊಂದಿದರು. ಇಂದ್ರನು ಮಹಿಷನನ್ನು ನೋಡಿ ಹೆದರಿ ಓಡಿಹೋದನು. ॥೧೭॥

ಇಂದ್ರನು ಈರೀತಿಯಲ್ಲಿ ಯುದ್ಧರಂಗವನ್ನು ಬಿಟ್ಟು ಓಡಿಹೋದುದನ್ನು ಕಂಡು ಯಮನೂ, ಕುಬೇರನೂ, ವರುಣನೂ ಸಹ ಭಯದಿಂದ ಕೂಡಿದವರಾಗಿ ಎಲ್ಲರೂ ಓಡಿಹೋದರು. ॥೧೮॥

ಮಹಿಷೋಽತಿಜಯಂ ಮತ್ವಾ ಜಗಾಮ ಸ್ವಗೃಹಂ ತತಃ ।
ಐರಾವತಂ ಗಜಂ ಪ್ರಾಪ್ಯ ತ್ಯಕ್ತಮಿಂದ್ರೇಣ ಗಚ್ಛತಾ ॥೧೯॥

ತಥೋಚ್ಚೈಃಶ್ರವಸಂ ಭಾನೋಃ ಕಾಮಧೇನುಂ ಪಯಸ್ವಿನೀಂ ।
ಸ್ವಸೈನ್ಯ ಸಂವೃತಸ್ತೂರ್ಣಂ ಸ್ವರ್ಗಂ ಗಂತುಂ ಮನೋದಧೇ ॥೨೦॥

ತರಸಾ ದೇವಸದನಂ ಗತ್ವಾ ಸ ಮಹಿಷಾಸುರಃ ।
ಜಗ್ರಾಹ ಸುರರಾಜ್ಯಂ ವೈ ತ್ಯಕ್ತಂ ದೇವೈರ್ಭಯಾತುರೈಃ ॥೨೧॥

ಇಂದ್ರಾಸನೇ ತಥಾ ರಮ್ಯೇ ದಾನವಃ ಸಮುಪಾವಿಶತ್ ।
ದಾನವಾನ್ಸ್ಥಾಪಯಾಮಾಸ ದೇವಾನಾಂ ಸ್ಥಾನಕೇಷು ಸಃ ॥೨೨॥

ಏವಂ ವರ್ಷಶತಂ ಪೂರ್ಣಂ ಕೃತ್ವಾ ಯುದ್ಧಂ ಸುದಾರುಣಂ ।
ಅವಾಪ್ಯೈಂದ್ರಪದಂ ಕಾಮಂ ದಾನವೋ ಮದಗರ್ವಿತಃ ॥೨೩॥

---

ಮಹಿಷಾಸುರನು ತನಗೆ ಮಹತ್ತರವಾದ ಜಯವಾಯಿತೆಂದು ತಿಳಿದು ಅಲ್ಲಿಂದ ತನ್ನ ಮನೆಗೆ ಹೊರಟನು. ಆದರೆ ಇಂದ್ರನು ಓಡಿಹೋಗುವಾಗ ಬಿಟ್ಟು ಹೋದ ಐರಾವತವೆಂಬ ಆನೆಯನ್ನೂ ಪಡೆದನು. ॥೧೯॥

ಹಾಗೆಯೇ ಸೂರ್ಯನ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನೂ ಕಾಮಧೇನು ವೆಂಬ ಕರೆಯುವ ಹಸುವನ್ನೂ ಸಹ ತನ್ನ ವಶಪಡಿಸಿಕೊಂಡು ತನ್ನ ಸೇನೆಯಿಂದ ಕೂಡಿ ಸ್ವರ್ಗಕ್ಕೇ ಹೋಗಲು ಮನಸ್ಸುಮಾಡಿದನು. ॥೨೦॥

ಆ ಮಹಿಷಾಸುರನು ಸಾವಕಾಶಮಾಡದೆ ಸ್ವರ್ಗಲೋಕಕ್ಕೆ ಹೋಗಿ, ದೇವತೆಗಳು ಹೆದರಿಕೊಂಡು ಬಿಟ್ಟುಹೋಗಿದ್ದ ದೇವರಾಜ್ಯವನ್ನು ಬೇಗನೆ ಆಕ್ರಮಿಸಿಕೊಂಡನು. ॥೨೧॥

ಬಳಿಕ ಆ ರಾಕ್ಷಸನು ಮನೋಹರವಾದ ಇಂದ್ರನ ಸಿಂಹಾಸನದಲ್ಲಿ ಕುಳಿತುಕೊಂಡನು. ಮತ್ತು ಓಡಿಹೋದ ದೇವತೆಗಳ ಪದವಿಗಳಿಗೆ ತನ್ನ ಕಡೆಯ ದೈತ್ಯರನ್ನು ನಿಯಮಿಸಿದನು. ॥೨೨॥

ಈ ರೀತಿಯಾಗಿ ನೂರು ವರ್ಷಗಳ ವರೆಗೂ ಗರ್ವದಿಂದ ಕೊಬ್ಬಿದ ಆ ಮಹಿಷಾಸುರನು ಭಯಂಕರವಾದ ಯುದ್ಧವನ್ನು ಮಾಡಿ ತಾನು ಅಪೇಕ್ಷಿಸುತ್ತಿದ್ದ ಇಂದ್ರಪದವಿಯನ್ನು ಹೊಂದಿದನು. ॥೨೩॥

ನಿರ್ಜರಾ ನಿರ್ಗತಾ ನಾಕಾತ್ತೇನ ಸರ್ವೇऽತಿಪೀಡಿತಾಃ ।
ಏವಂ ಬಹೂನಿ ವರ್ಷಾಣಿ ಬಭ್ರಮುರ್ಗಿರಿಗಹ್ವರೇ ॥೨೪॥

ಶ್ರಾಂತಾಃ ಸರ್ವೇ ತದಾ ರಾಜನ್ಬ್ರಹ್ಮಾಣಂ ಶರಣಂ ಯಯುಃ ।
ಪ್ರಜಾಪತಿಂ ಜಗನ್ನಾಥಂ ರಜೋರೂಪಂ ಚತುರ್ಮುಖಂ ॥೨೫॥

ಪದ್ಮಾಸನಂ ವೇದಗರ್ಭಂ ಸೇವಿತಂ ಮುನಿಭಿಃ ಸ್ವಜೈಃ ।
ಮರೀಚಿಪ್ರಮುಖೈಃ ಶಾಂತೈರ್ವೇದವೇದಾಂಗಪಾರಗೈಃ ॥೨೬॥

ಕಿನ್ನರೈಃ ಸಿದ್ಧಗಂಧರ್ವೈಶ್ಚಾರಣೋರಗಪನ್ನಗೈಃ ।
ತುಷ್ಟುವುರ್ಭಯಭೀತಾಸ್ತೇ ದೇವದೇವಂ ಜಗದ್ಗುರುಂ ॥೨೭॥

---

ಆ ಮಹಿಷಾಸುರನ ತೊಂದರೆಯು ಹೆಚ್ಚಾದ ಕಾರಣ ದೇವತೆಗಳೆಲ್ಲರೂ ಸ್ವರ್ಗವನ್ನು ಬಿಟ್ಟು ಹೋಗಿ ಅನೇಕ ವರ್ಷಗಳವರೆಗೂ ಬೆಟ್ಟಗಳಗುಹೆಗಳಲ್ಲಿ ವಾಸ ಮಾಡುತ್ತಿದ್ದರು. ॥೨೪॥

ಎಲೈ ಜನಮೇಜಯರಾಜನೇ ಕೇಳು—ದೇವತೆಗಳೆಲ್ಲರೂ ಈ ರೀತಿಯಲ್ಲಿ ಕಷ್ಟಪಡುತ್ತಾ ಬಹುವಾಗಿ ಬಳಲಿ, ಪ್ರಜೆಗಳೆಲ್ಲರಿಗೂ ಅಧಿಪತಿಯಾಗಿಯೂ, ಜಗತ್ತಿಗೆ ಸ್ವಾಮಿಯಾಗಿಯೂ, ರಜೋಗುಣದ ಪ್ರಾಧಾನ್ಯದಿಂದ ಕೂಡಿದ ಆಕಾರ ಉಳ್ಳವನಾಗಿಯೂ, ನಾಲ್ಕುಮುಖವುಳ್ಳವನಾಗಿಯೂ ಇರುವ ಬ್ರಹ್ಮನನ್ನು ಶರಣುಹೊಂದಿದರು. ॥೨೫॥

ಭಯದಿಂದ ಹೆದರಿದವರಾದ ಆ ದೇವತೆಗಳು ಪದ್ಮಾಸನದಲ್ಲಿ ಕುಳಿತಿರುವವನೂ, ವೇದಗಳನ್ನು ಕಾಪಾಡಿ ಪ್ರಕಟಪಡಿಸಿದವನೂ, ಆದ ಬ್ರಹ್ಮನನ್ನು ಕಂಡರು. ಆಗ ಅವನು ತನ್ನಿಂದಲೇ ಮಾನಸಪುತ್ರರಾಗಿ ಉಂಟಾದ ವೇದವೇದಾಂಗಪಾರಂಗತರೂ ಶಾಂತಚಿತ್ತರೂ ಆದ ಮರೀಚಿ ಮುಂತಾದ ಋಷಿಗಳಿಂದ ಸೇವಿಸಲ್ಪಡುತ್ತಿದ್ದನು.॥೨೬॥

ಹಾಗೆಯೇ ಕಿನ್ನರರೂ ಸಿದ್ಧರೂ ಗಂಧರ್ವರೂ ಚಾರಣರೂ ಉರಗಗಳೂ ಮತ್ತು ಇತರವಿಧವಾದ ಪ್ರಾಣಿಗಳು ಇವರುಗಳಿಂದ ಓಲೈಸಲ್ಪಡುತ್ತಿರುವವನೂ, ಜಗತ್ತಿಗೆ ಒಡೆಯನೂ ದೇವದೇವನೂ ಆಗಿ ಇದ್ದ ಆ ಬ್ರಹ್ಮನನ್ನು ಆ ದೇವತೆಗಳು ಹೀಗೆ ಸ್ತೋತ್ರಮಾಡಿದರು. ॥೨೭॥

|| ದೇವಾ ಊಚುಃ ||

**ಧಾತಃ ಕಿಮೇತದಖಿಲಾರ್ತಿಹರಾಂಬುಜನ್ಮ**
**ಜನ್ಮಾಭಿವೀಕ್ಷ್ಯ ನ ದಯಾಂ ಕುರುಷೇ ಸುರಾನ್ ಯತ್ ।**
**ಸಂಪೀಡಿತಾನ್ ರಣಜಿತಾನಸುರಾಧಿಪೇನ**
**ಸ್ಥಾನಚ್ಯುತಾನ್ ಗಿರಿಗುಹಾಕೃತಸನ್ನಿವಾಸಾನ್ ॥೨೮॥**

**ಪುತ್ರಾನ್ಪಿತಾ ಕಿಮಪರಾಧಶತೈಃ ಸಮೇತಾನ್**
**ಸಂತ್ಯಜ್ಯ ಲೋಭರಹಿತಃ ಕುರುತೇಽತಿದುಃಸ್ಥಾನ್ ।**
**ಯಸ್ತ್ವಂ ಸುರಾಂಸ್ತವ ಪದಾಂಬುಜಭಕ್ತಿಯುಕ್ತಾನ್**
**ದೈತ್ಯಾರ್ದಿತಾಂಶ್ಚ ಕೃಪಣಾನ್ಯದುಪೇಕ್ಷಸೇಽದ್ಯ ॥೨೯॥**

---

ದೇವತೆಗಳು ಬ್ರಹ್ಮನನ್ನು ಹೀಗೆ ಸ್ತೋತ್ರಮಾಡಿದರು— ಓ ಬ್ರಹ್ಮನೇ, ನೀನು ನೀರಿನಲ್ಲಿ ಹುಟ್ಟಿದ ಕಮಲದಿಂದ ಉದ್ಭವಿಸಿರುವೆ. ಎಲ್ಲರ ಕಷ್ಟಗಳನ್ನೂ ಪರಿಹರಿಸಲು ಶಕ್ತನಾಗಿ ಕಾಪಾಡುತ್ತಿರುವೆ. ಈಗಲಾದರೋ, ನಾವು ಯುದ್ಧದಲ್ಲಿ ರಾಕ್ಷಸರ ಅಧಿಪತಿಯಾದ ಮಹಿಷಾಸುರನಿಂದ ಪರಾಜಿತರಾಗಿ ನಮ್ಮ ಸ್ಥಾನಮಾನಗಳನ್ನು ಕಳೆದುಕೊಂಡಿದ್ದೇವೆ. ಆ ರಾಕ್ಷಸನ ತೊಂದರೆಯು ನಮಗೆ ಬಹಳವಾಗಿರುತ್ತದೆ. ನಾವು ಸ್ಥಾನಭ್ರಷ್ಟರಾಗಿ ಬೆಟ್ಟದ ಗುಹೆಗಳಲ್ಲಿ ವಾಸಮಾಡುವಂತಾಗಿದೆ. ಈ ಪ್ರಕಾರವಾಗಿ ದುರ್ದಶೆಯಲ್ಲಿರುವ ನಮ್ಮನ್ನು ನೋಡಿಯೂ, ನಮ್ಮ ಮೇಲೆ ಕೃಪೆಮಾಡದೆ ಹೀಗೆ ನೀನು ನಮ್ಮನ್ನು ಉಪೇಕ್ಷೆಮಾಡಬಹುದೇ ? ||೨೮||

ದೇವತೆಗಳಾದ ನಾವೆಲ್ಲರೂ ನಿನ್ನ ಪಾದಪದ್ಮಗಳಲ್ಲಿ ಭಕ್ತಿಯುಳ್ಳವರಾಗಿದ್ದೇವೆ. ರಾಕ್ಷಸನ ಬಾಧೆಯನ್ನು ಅನುಭವಿಸುತ್ತಿರುವ ದೀನರಾದ ನಮ್ಮನ್ನು ನೀನು ಈಗ ಉಪೇಕ್ಷೆಮಾಡಿರುವಂತಿದೆ. ಆದರೆ ಲೋಕದಲ್ಲಿ ಮಕ್ಕಳು ಅನೇಕ ತಪ್ಪುಗಳನ್ನು ಮಾಡಿದ್ದಾಗ್ಯೂ, ತಂದೆಯಾದವನು ಅವುಗಳನ್ನು ಮುಂದಾಗಿ ಪರಿಗಣಿಸದೆ, ಅವರಲ್ಲಿ ಪ್ರೀತಿ ಇಲ್ಲದವನಾಗಿ ಅವರು ದುಃಖಕ್ಕೀಡಾಗುವಂತೆ ಬಿಡುತ್ತಾನೆಯೇ ? ಆದುದರಿಂದ ನೀನು ನಿನ್ನ ಮಕ್ಕಳಂತಿರುವ ನಮ್ಮನ್ನು ಈಗ ಉಪೇಕ್ಷೆಮಾಡುವುದು ಲೋಕರೀತಿಯ ದೃಷ್ಟಿಯಿಂದಲೂ ವಿರುದ್ಧವಾಗಿರುತ್ತದೆ. ||೨೯||

ಅಸುರಭುವನರಾಜ್ಯಂ ತೇನ ಭುಕ್ತಂ ನಿತಾಂತಂ
ಮಖಹವಿರಪಿ ಯೋಗ್ಯಂ ಬ್ರಾಹ್ಮಣೈರಾದದಾತಿ ।
ಸುರತರುವರಪುಷ್ಪಂ ಸೇವತೇಽಸೌ ದುರಾತ್ಮಾ
ಜಲನಿಧಿನಿಧಿಭೂತಾಂ ಗಾಮಸೌ ಸೇವತೇ ತಾಂ ॥೩೦॥

ಕಿಂ ವಾ ಗೃಣೀಮಃ ಸುರಕಾರ್ಯಮದ್ಭುತಂ
ಜಾನಾಸಿ ದೇವೇಶ ಸುರಾರಿಚೇಷ್ಟಿತಂ ।
ಜ್ಞಾನೇನ ಸರ್ವಂ ತ್ವಮತೇಷಕಾರ್ಯವಿ
ತ್ತಸ್ಮಾತ್ಪ್ರಭೋ ತೇ ಪ್ರಣತಾಃ ಸ್ಮ ಪಾದಯೋಃ ॥೩೧॥

ಯತ್ರಾಪಿ ಕುತ್ರಾಪಿ ಗತಾನ್ಸುರಾನಸೌ
ನಾನಾಚರಿತ್ರೈಃ ಖಲು ಪಾಪಮಾನಸಃ ।

---

ಆ ದುಷ್ಟನಾದ ಮಹಿಷಾಸುರನು ಸ್ವರ್ಗಲೋಕಸಾಮ್ರಾಜ್ಯವನ್ನು ಚೆನ್ನಾಗಿ ಅನುಭವಿಸುತ್ತಿದಾನೆ. ಬ್ರಾಹ್ಮಣರು ಕೊಡುವ ದೇವಯೋಗ್ಯವಾದ ಯಜ್ಞಭಾಗ ವನ್ನೂ ನಮಗೆ ತಪ್ಪಿಸಿ ಆ ದೈತ್ಯನೇ ಸ್ವೀಕರಿಸುತ್ತಿದಾನೆ. ಉತ್ತಮವಾದ ಕಲ್ಪವೃಕ್ಷದ ಪುಷ್ಪಗಳ ಪರಿಮಳ ಸೌಂದರ್ಯಗಳನ್ನೂ ಅನುಭವಿಸುತ್ತಿರುವುದಲ್ಲದೆ, ರತ್ನವೇ ಮುಂತಾದ ಐಶ್ವರ್ಯಾದಿಗಳಿಂದ ಸಮೃದ್ಧವಾದ ಭೂಮಿಯನ್ನೂ ಅನುಭವಿಸುತ್ತಿರು ವನು. ॥೩೦॥

ಓ ದೇವದೇವನಾದ ಬ್ರಹ್ಮನೇ, ಆ ಮಹಿಷಾಸುರನು ದೇವತೆಗಳಿಗೆ ಕೊಡು ತ್ತಿರುವ ಚಿತ್ರಹಿಂಸೆಯ ಚೇಷ್ಟೆಗಳನ್ನೂ, ಇದರ ನಿವಾರಣೆಗಾಗಿ ದೇವತೆಗಳಿಗೆ ಮಾಡ ಬೇಕಾಗಿರುವ ಮಹಾಸಹಾಯವನ್ನೂ ಕುರಿತು ನಾವು ಏನೆಂದು ಹೇಳೋಣ. ಅದೆಲ್ಲ ವನ್ನೂ ಸರ್ವಜ್ಞನಾದ ನೀನು ತಿಳಿದಿರುವುದಿಲ್ಲವೇ? ನೀನು ಜ್ಞಾನದಿಂದ ಸಮಸ್ತ ವಿಷಯಗಳನ್ನೂ ಸಂಗತಿಗಳನ್ನೂ ತಿಳಿದವನಾಗಿರುತ್ತೀಯೆ. ಆದುದರಿಂದ ಓ ಸ್ವಾಮಿಯೇ, ನಮ್ಮ ರಕ್ಷಣೆಯ ಕಾರ್ಯಸಿದ್ಧಿಗಾಗಿ ನಾವುಗಳು ನಿನ್ನ ಪಾದಗಳಿಗೆ ನಮಸ್ಕರಿಸುತ್ತೇವೆ. ॥೩೧॥

ಆ ದುಷ್ಟಬುದ್ಧಿಯುಳ್ಳ ಮಹಿಷಾಸುರನು ಯಾವಾಗಲೂ ಕೆಟ್ಟಕೆಲಸಗಳನ್ನೇ ಮಾಡುತ್ತಿರುವನು. ದೇವತೆಗಳು ಎಲ್ಲಿ ಹೋಗಿ ಅಡಗಿಕೊಂಡಿದ್ದರೂ ಅಲ್ಲಿಯೂ ಅವರನ್ನು ಬಿಡದೆ ನಾನಾವಿಧವಾದ ದುಷ್ಟ ನಡವಳಿಕೆಗಳಿಂದ ಅವರನ್ನು ಹಿಂಸಿಸುತ್ತಿ

ಪೀಡಾಂ ಕರೋತ್ಯೇವ ಸುದುಷ್ಟಚೇಷ್ಟಿತ
ಸ್ತ್ರಾತಾಽಸಿ ದೇವೇಶ ವಿಧೇಹಿ ಶಂ ವಿಭೋ ॥೩೨॥

ನೋ ಚೇದ್ವಯಂ ದಾವಮಹಾಗ್ನಿ ಪೀಡಿತಾಃ
ಕಂ ಶಾಂತಿಕರ್ತಾರಮನಂತತೇಜಸಂ ।
ಯಾಮಃ ಪ್ರಜೇಶಂ ಶರಣಂ ಸುರೇಷ್ಟಂ
ಧಾತಾರಮಾದ್ಯಂ ಪರಿಮುಚ್ಯ ಕಂ ಶಿವಂ ॥೩೩॥

॥ ವ್ಯಾಸ ಉವಾಚ ॥

ಇತಿ ಸ್ತುತ್ವಾ ಸುರಾಃ ಸರ್ವೇ ಪ್ರಣೇಮುಸ್ತಂ ಪ್ರಜಾಪತಿಂ ।
ಬದ್ಧಾಂಜಲಿಪುಟಾಃ ಸರ್ವೇ ವಿಷಣ್ಣವದನಾ ಭೃಶಂ ॥೩೪॥

ತಾಂಸ್ತಥಾ ಪೀಡಿತಾನ್ದೃಷ್ಟ್ವಾ ತದಾ ಲೋಕಪಿತಾಮಹಃ ।
ಉವಾಚ ಶ್ಲಕ್ಷ್ಣಯಾ ವಾಚಾ ಸುಖಂ ಸಂಜನಯನ್ನಿವ ॥೩೫॥

---

ರುವನು. ಓ ದೇವದೇವನೇ, ನೀನೇ ನಮಗೆ ರಕ್ಷಕನಾದ ಸ್ವಾಮಿಯು. ನಮಗೆ ಸುಖವನ್ನುಂಟುಮಾಡಿ ನಮ್ಮನ್ನು ನೀನೇ ಕಾಪಾಡಬೇಕು. ॥೩೨॥

ಓ ಬ್ರಹ್ಮನೇ, ನೀನು ನಮಗೆ ಒದಗಿರುವ ಈ ಕಷ್ಟವೆಂಬ ದೊಡ್ಡ ಕಾಡು ಕಿಚ್ಚಿನಿಂದ ಪೀಡಿತರಾಗಿರುವ ನಮ್ಮನ್ನು ಕಾಪಾಡದಿದ್ದರೆ, ಶುಭಕರನಾಗಿ ಶಾಂತಿ ಸುಖಕರನಾಗಿಯೂ, ಅಪರಿಮಿತವಾದ ತೇಜಸ್ಸುಳ್ಳವನಾಗಿಯೂ ಪ್ರಜೆಗಳಿಗೆ ಅಧಿಪತಿ ಯಾಗಿಯೂ, ದೇವತೆಗಳಿಗೆ ಯಾವಾಗಲೂ ಹಿತವನ್ನು ಉಂಟುಮಾಡುವವ ನಾಗಿಯೂ, ಎಲ್ಲರಿಗಿಂತಲೂ ಮೊದಲನೆಯವನಾಗಿಯೂ ಇರುವ ನಿನ್ನನ್ನು ಬಿಟ್ಟು, ಈ ಕಾರ್ಯದಲ್ಲಿ ಸಮರ್ಥನಾದ ಮತ್ತಾರನ್ನು ತಾನೇ ನಾವು ಶರಣುಹೊಂದಬೇಕು.॥೩೩॥

ವ್ಯಾಸಮುನಿಯು ಹೇಳಿದನು—ಈ ಪ್ರಕಾರವಾಗಿ ಸ್ತೋತ್ರಮಾಡಿ ದೇವತೆ ಗಳೆಲ್ಲರೂ ತಮ್ಮ ಕೈಗಳನ್ನು ಮುಗಿದುಕೊಂಡು ದುಃಖದಿಂದ ಕೂಡಿದ ಮುಖವುಳ್ಳ ವರಾಗಿ ಆ ಬ್ರಹ್ಮನಿಗೆ ನಮಸ್ಕಾರಮಾಡಿದರು. ॥೩೪॥

ಆಗ ಲೋಕಪಿತಾಮಹನಾದ ಬ್ರಹ್ಮನು ಆ ದೇವತೆಗಳು ಹಾಗೆ ದುಃಖಪಡು ತ್ತಿರುವುದನ್ನು ನೋಡಿ ತನ್ನ ಮಾತಿನಿಂದಲೂ ಅವರಿಗೆ ಸುಖವಾಗುವಂತೆ ಮಧುರ ವಾದ ಭಾಷೆಯಿಂದ ಹೀಗೆ ಹೇಳಿದನು. ॥೩೫॥

|| ಬ್ರಹ್ಮೋವಾಚ ||

**ಕಿಂ ಕರೋಮಿ ಸುರಾಃ ಕಾಮಂ ದಾನವೋ ವರದರ್ಪಿತಃ ।**
**ಸ್ತ್ರೀವಧ್ಯೋಽಸೌ ನ ಪುಂವಧ್ಯೋ ವಿಧೇಯಂ ತತ್ರ ಕಿಂ ಪುನಃ ॥೩೬॥**

**ವ್ರಜಾಮೋಽದ್ಯ ಸುರಾಃ ಸರ್ವೇ ಕೈಲಾಸಂ ಪರ್ವತೋತ್ತಮಂ ।**
**ಶಂಕರಂ ಪುರತಃ ಕೃತ್ವಾ ಸರ್ವಕಾರ್ಯವಿಶಾರದಂ ॥೩೭॥**

**ತತೋ ವ್ರಜಾಮ ವೈಕುಂಠಂ ಯತ್ರ ದೇವೋ ಜನಾರ್ದನಃ ।**
**ಮಿಲಿತ್ವಾ ದೇವಕಾರ್ಯಂ ಚ ವಿಮೃಶಾಮೋ ವಿಶೇಷತಃ ॥೩೮॥**

**ಇತ್ಯುಕ್ತ್ವಾ ಹಂಸಮಾರುಹ್ಯ ಬ್ರಹ್ಮಾ ಕಾರ್ಯಸಮುಚ್ಚಯೇ ।**
**ದೇವಾಂಶ್ಚ ಪೃಷ್ಠತಃ ಕೃತ್ವಾ ಕೈಲಾಸಾಭಿಮುಖೋ ಯಯೌ ॥೩೯॥**

---

ಬ್ರಹ್ಮನು ಹೇಳಿದನು—ಎಲೈ ದೇವತೆಗಳಿರಾ, ಕೇಳಿ. ಆ ರಾಕ್ಷಸನು ವರ ಬಲದಿಂದ ಬಹಳವಾಗಿ ಕೊಬ್ಬಿರುವನು. ಈ ವಿಷಯದಲ್ಲಿ ನಾನು ಏನನ್ನು ತಾನೇ ಮಾಡಲಿ? ಇವನಿಗೆ ಪುರುಷರಿಂದ ಮರಣವಿಲ್ಲವು. ಸ್ತ್ರೀಯರಿಂದ ಮಾತ್ರವೇ ಇವನು ಸಂಹರಿಸಲ್ಪಡಬೇಕಾಗಿರುವನು. ಹೀಗೆ ಇವನಿಗೆ ವರವು ಇರುವುದರಿಂದ ಇವನ ಸಂಹಾರ ವಿಚಾರದಲ್ಲಿ ನಾವು ಈಗ ಏನನ್ನು ಮಾಡಬೇಕು. ॥೩೬॥

ಎಲೈ ದೇವತೆಗಳಿರಾ, ಈಗ ನಾವೆಲ್ಲರೂ ಗಿರಿಗಳಲ್ಲಿ ಶ್ರೇಷ್ಠವಾಗಿರುವ ಕೈಲಾಸ ಪರ್ವತಕ್ಕೆ ಹೋಗಿ ಎಲ್ಲ ಕಾರ್ಯಗಳಲ್ಲಿಯೂ ಬುದ್ಧಿವಂತನಾದ ಈಶ್ವರನನ್ನು ಮುಂದೆ ಮಾಡಿಕೊಂಡು ॥೩೭॥

ಅಲ್ಲಿಂದ ದುಷ್ಟಸಂಹಾರಕನಾದ ವಿಷ್ಣುವು ಇರುವ ವೈಕುಂಠಲೋಕಕ್ಕೆ ಹೋಗೋಣ. ಅಲ್ಲಿ ನಾವೆಲ್ಲರೂ ಒಟ್ಟು ಸೇರಿ ದೇವತೆಗಳ ರಕ್ಷಣೆಗೆ ಮುಂದೆ ಮಾಡ ಬೇಕಾದ ಕಾರ್ಯವನ್ನು ಚನ್ನಾಗಿ ವಿಮರ್ಶೆ ಮಾಡಿ ಗೊತ್ತು ಮಾಡೋಣ. ॥೩೮॥

ದೇವತೆಗಳ ಕಾರ್ಯನಿರ್ವಾಹದ ವಿಷಯದಲ್ಲಿ ಹೀಗೆಂದು ಹೇಳಿ ಬ್ರಹ್ಮನು ಹಂಸವಾಹನವನ್ನು ಹತ್ತಿಕೊಂಡು, ದೇವತೆಗಳನ್ನು ತನ್ನ ಹಿಂದೆ ಕರೆದುಕೊಂಡು, ಕೈಲಾಸಗಿರಿಗೆ ಅಭಿಮುಖವಾಗಿ ಪ್ರಯಾಣ ಮಾಡಿದನು. ॥೩೯॥

ತಾವಚ್ಛಿವೋಽಪಿ ತರಸಾ ಜ್ಞಾತ್ವಾ ಧ್ಯಾನೇನ ಪದ್ಮಜಂ ।
ಆಗಚ್ಛಂತಂ ಸುರೈಃ ಸಾರ್ಧಂ ನಿರ್ಗತಃ ಸ್ವಗೃಹಾದ್ಬಹಿಃ ॥೪೦॥

ದೃಷ್ಟ್ವಾ ಪರಸ್ಪರಂ ತೌ ತು ಕೃತಾಭಿವಾದನೌ ಭೃಶಂ ।
ಪ್ರಣತೌ ಚ ಸುರೈಃ ಸರ್ವೈಃ ಸಂತುಷ್ಟೌ ಸಂಬಭೂವತುಃ ॥೪೧॥

ಆಸನಾನಿ ಪೃಥಗ್ದತ್ವಾ ದೇವೇಭ್ಯೋ ಗಿರಿಜಾಪತಿಃ ।
ಉಪವಿಷ್ಟೇಷು ತೇಷ್ವೇವ ನಿಷಸಾದಾಸನೇ ಸ್ವಕೇ ॥೪೨॥

ಕೃತ್ವಾ ತು ಕುಶಲಪ್ರಶ್ನಂ ಬ್ರಹ್ಮಾಣಂ ವೃಷಭಧ್ವಜಃ ।
ಪಪ್ರಚ್ಛ ಕಾರಣಂ ದೇವಾನ್ಕೈಲಾಸಾಗಮನೇ ವಿಭುಃ ॥೪೩॥

॥ ಶಿವ ಉವಾಚ ॥

ಕಿಮತ್ರಾಗಮನಂ ಬ್ರಹ್ಮನ್ಕೃತಂ ದೇವೈಃ ಸವಾಸವೈಃ ।
ಭವತಾ ಚ ಮಹಾಭಾಗ ಬ್ರೂಹಿ ತತ್ಕಾರಣಂ ಕಿಲ ॥೪೪॥

---

ಅಷ್ಟರಲ್ಲಿ ಶಿವನೂ ಕೂಡ, ಬ್ರಹ್ಮನು ದೇವತೆಗಳೊಡನೆ ಬರುತ್ತಿರುವುದನ್ನು ಧ್ಯಾನದ ದೃಷ್ಟಿಯಿಂದ ಬೇಗನೆ ತಿಳಿದು ತನ್ನ ಮನೆಯಿಂದ ಹೊರಗೆ ಬಂದನು.॥೪೦॥

ಶಿವನೂ, ಬ್ರಹ್ಮನೂ ಒಬ್ಬರನ್ನೊಬ್ಬರು ನೋಡಿ, ಪರಸ್ಪರವಾಗಿ ಅಭಿವಾದನವನ್ನು ಮಾಡಿ, ದೇವತೆಗಳೆಲ್ಲರಿಂದಲೂ ನಮಸ್ಕರಿಸಲ್ಪಟ್ಟವರಾಗಿ ಸಂತೋಷವುಳ್ಳವರಾದರು. ॥೪೧॥

ಪಾರ್ವತೀಪತಿಯಾದ ಶಂಕರನು ದೇವತೆಗಳಿಗೆಲ್ಲರಿಗೂ ಬೇರೆ ಬೇರೆಯಾಗಿ ಆಸನಗಳನ್ನು ಕೊಟ್ಟು, ಅವರೆಲ್ಲರೂ ಕೂತುಕೊಂಡ ಅನಂತರದಲ್ಲಿ ತಾನೂ ತನ್ನ ಆಸನದಲ್ಲಿ ಕೂತುಕೊಂಡನು. ॥೪೨॥

ಆ ಬಳಿಕ ಈಶ್ವರನು ಬ್ರಹ್ಮನ ಸಂಗಡ ಕುಶಲಪ್ರಶ್ನೆಯನ್ನು ಮಾಡಿ, ಆ ದೇವತೆಗಳನ್ನು ಕುರಿತು ಕೈಲಾಸಪರ್ವತಕ್ಕೆ ಬರಲು ಕಾರಣವೇನೆಂದು ಬ್ರಹ್ಮನನ್ನು ಹೀಗೆ ಕೇಳಿದನು. ॥೪೩॥

ಶಂಕರನು ಹೇಳಿದನು—ಎಲೈ ಬ್ರಹ್ಮನೇ ಈ ದೇವತೆಗಳೆಲ್ಲರೂ ಇಲ್ಲಿಗೆ ಏತಕ್ಕಾಗಿ ಬಂದಿರುವರು ? ಎಲೈ ಪೂಜ್ಯನೇ ನೀನೂ ಕೂಡ ಇಲ್ಲಿಗೆ ಬಂದಿರುವುದರ ಕಾರಣವೇನು ? ಇದನ್ನು ನನಗೆ ಹೇಳು. ॥೪೪॥

|| ಬ್ರಹ್ಮೋವಾಚ ||

ಮಹಿಷೇಣ ಸುರೇಶಾನ ಪೀಡಿತಾಃ ಸ್ವರ್ನಿವಾಸಿನಃ ।
ಭ್ರಮಂತಿ ಗಿರಿದುರ್ಗೇಷು ಭಯತ್ರಸ್ತಾಃ ಸವಾಸವಾಃ ||೪೫||

ಯಜ್ಞಭುಙ್ಮಹಿಷೋ ಜಾತಸ್ತಥಾऽನ್ಯೇ ಸುರಶತ್ರವಃ ।
ಪೀಡಿತಾ ಲೋಕಪಾಲಾಶ್ಚ ತ್ವಾಮದ್ಯ ಶರಣಂ ಗತಾಃ ||೪೬||

ಮಯಾ ತೇ ಭವನಂ ಶಂಭೋ ಪ್ರಾಪಿತಾಃ ಕಾರ್ಯಗೌರವಾತ್ ।
ಯದ್ಯುಕ್ತಂ ತದ್ವಿಧತ್ಸ್ವಾದ್ಯ ಸುರಕಾರ್ಯಂ ಸುರೇಶ್ವರ ||೪೭||

ತ್ವಯಿ ಭಾರೋऽಸ್ತಿ ಸರ್ವೇಷಾಂ ದೇವಾನಾಂ ಭೂತಭಾವನ ।

|| ವ್ಯಾಸ ಉವಾಚ ||

ಇತಿ ತದ್ವಚನಂ ಶ್ರುತ್ವಾ ಶಂಕರಃ ಪ್ರಹಸನ್ನಿದಂ ||೪೮||

---

ಬ್ರಹ್ಮನು ಹೇಳಿದನು—ಓ ದೇವದೇವನೇ ಕೇಳು. ಸ್ವರ್ಗದಲ್ಲಿ ವಾಸಿಸುವ ಇಂದ್ರನೇ ಮೊದಲಾದ ದೇವತೆಗಳು ಮಹಿಷಾಸುರನ ಬಾಧೆಯಿಂದ ಹೆದರಿಕೊಂಡು ಬೆಟ್ಟಗಳಲ್ಲಿಯೂ ದುರ್ಗಪ್ರದೇಶಗಳಲ್ಲಿಯೂ ಅಲೆದಾಡುತ್ತಿರುವರು. ||೪೫||

ಮಹಿಷಾಸುರನೂ, ದೇವತೆಗಳಿಗೆ ಶತ್ರುಗಳಾದ ಇತರ ದೈತ್ಯರೂ, ದೇವತೆಗಳಿಗೆ ಸಲ್ಲಬೇಕಾಗಿದ್ದ ಯಜ್ಞಭಾಗವನ್ನು ತಾವೇ ಅನುಭವಿಸುತ್ತಿರುವರು. ಅಷ್ಟೇ ಅಲ್ಲದೆ ಈ ಇಂದ್ರಾದಿ ಲೋಕಪಾಲಕರೂ ಆ ಮಹಿಷಾಸುರನಿಂದ ಹಿಂಸಿಸಲ್ಪಡುತ್ತಿರುವರು. ಆದುದರಿಂದ ಈ ದೇವತೆಗಳು ನಿನ್ನನ್ನು ಶರಣು ಹೊಂದಿರುವರು. ||೪೬||

ಕಾರ್ಯಾರ್ಥಿಗಳಾದ ಈ ದೇವತೆಗಳೆಲ್ಲರನ್ನೂ ನಾನು ನಿನ್ನ ಆವಾಸಸ್ಥಾನಕ್ಕೆ ಕರೆತಂದಿರುವೆನು. ಓ ದೇವದೇವನೇ, ಈ ದೇವತೆಗಳ ರಕ್ಷಣೆಯ ಮಹಾಕಾರ್ಯದ ವಿಚಾರದಲ್ಲಿ ನೀನು ಈಗ ಯುಕ್ತವಾದುದನ್ನು ಮಾಡು. ||೪೭||

ಪ್ರಾಣಿ ಸಾಮಾನ್ಯವನ್ನೂ ಅಳಿಯದೆ ಬಾಳುವಂತೆ ಮಾಡಬಲ್ಲ ಓ ಶಂಕರನೇ, ಈ ಎಲ್ಲ ದೇವತೆಗಳ ರಕ್ಷಣೆಯ ಭಾರವು ನಿನ್ನಲ್ಲಿಯೇ ಅಧೀನವಾಗಿರುವುದಲ್ಲವೇ ?

ವಚನಂ ಶ್ಲಕ್ಷ್ಣಯಾ ವಾಚಾ ಪ್ರೋವಾಚ ಪದ್ಮಜಂ ಪ್ರತಿ ॥
ಭವತೈವ ಕೃತಂ ಕಾರ್ಯಂ ವರದಾನಾತ್ಪುರಾ ವಿಭೋ ।
ಅನರ್ಥದಂ ಚ ದೇವಾನಾಂ ಕಿಂ ಕರ್ತವ್ಯಮತಃಪರಂ ॥೪೯॥

ಈದೃಶೋ ಬಲವಾಞ್ಶೂರಃ ಸರ್ವದೇವಭಯಪ್ರದಃ ॥೫೦॥

॥ ಶಿವ ಉವಾಚ ॥

ಕಾ ಸಮರ್ಥಾ ವರಾ ನಾರೀ ತಂ ಹಂತುಂ ಮದದರ್ಪಿತಂ ।
ನ ಮೇ ಭಾರ್ಯಾ ನ ತೇ ಭಾರ್ಯಾ ಸಂಗ್ರಾಮಂ ಗಂತುಮರ್ಹತಿ ॥೫೧॥

ಗತ್ವೈವ ತೇ ಮಹಾಭಾಗೇ ಯುಯುಧಾತೇ ಕಥಂ ಪುನಃ ।
ಇಂದ್ರಾಣೀ ಚ ಮಹಾಭಾಗ ನ ಯುದ್ಧಕುಶಲಾಽಸ್ತಿ ಹಿ ॥೫೨॥

---

ವ್ಯಾಸನು ಹೇಳಿದನು—ಈ ರೀತಿಯಾಗಿ ಹೇಳಿದ ಬ್ರಹ್ಮನ ಮಾತನ್ನು ಕೇಳಿ ಶಂಕರನು ನಗುತ್ತ, ಮಧುರವಾದ ಮಾತಿನಿಂದ ಬ್ರಹ್ಮನನ್ನು ಕುರಿತು ಹೀಗೆ ಹೇಳಿದನು. ॥೪೮-೪೯॥

ಶಿವನು ಹೇಳುವನು—ಭಕ್ತವತ್ಸಲನಾದ ವಿಭುವಾದ ಎಲೈ ಬ್ರಹ್ಮನೇ, ಪೂರ್ವದಲ್ಲಿ ಈ ದಾನವನಿಗೆ ನೀನು ವರವನ್ನು ಕೊಟ್ಟುದರಿಂದ ಈಗ ಈ ಅನರ್ಥವು ಸಂಭವಿಸಿದೆ. ಆ ನಿನ್ನ ವರದ ಬಲದಿಂದಲೇ ಆ ದುಷ್ಟ ರಾಕ್ಷಸನು ಈ ರೀತಿಯಾಗಿ ಬಲಿಷ್ಠನೂ, ಶೂರನೂ ಆಗಿ ಎಲ್ಲ ದೇವತೆಗಳಿಗೂ ಭಯವನ್ನುಂಟು ಮಾಡುತ್ತಿರುವನು. ಆದುದರಿಂದ ಇನ್ನು ಮುಂದೆ ಮಾಡಬೇಕಾದುದೇನು? ॥೫೦॥

ಮದದಿಂದ ಕೊಬ್ಬಿರುವ ಮಹಿಷಾಸುರನನ್ನು ಕೊಲ್ಲಲು ಸಮರ್ಥಳಾದ ಸ್ತ್ರೀಯು ಯಾವಳಿರುವಳು? ನನ್ನ ಹೆಂಡತಿಯಾಗಲಿ, ನಿನ್ನ ಹೆಂಡತಿಯಾಗಲಿ, ಅವನ ಸಂಗಡ ಯುದ್ಧಮಾಡಲು ಹೊರಡುವುದು ತಕ್ಕುದಲ್ಲವು. ॥೫೧॥

ಎಲೈ ಪೂಜ್ಯನೇ, ಆದುದರಿಂದ ನನ್ನ ನಿನ್ನ ಹೆಂಡತಿಯರಾದ ಪಾರ್ವತೀ ಸರಸ್ವತಿಯರು ಆ ದೈತ್ಯನ ಸಂಗಡ ಹೇಗೆ ಯುದ್ಧವನ್ನು ಮಾಡಿಯಾರು? ಇಂದ್ರನ ಪತ್ನಿಯೂ ಕೂಡ ಯುದ್ಧ ಮಾಡುವುದರಲ್ಲಿ ನಿಪುಣೆಯೇನೂ ಆಗಿಲ್ಲವು. ಹೀಗಿರುವಲ್ಲಿ ಮದದಿಂದ ಕೊಬ್ಬಿರುವ ಆ ಪಾಪಿಷ್ಠನನ್ನು ಕೊಲ್ಲಲು ಸಮರ್ಥಳಾದ ಸ್ತ್ರೀಯು ಬೇರೆಯಾಗಿ ಯಾವಳಿರುವಳು? ॥೫೨॥

ಕಾನ್ಯಾ ಹಂತುಂ ಸಮರ್ಥಾಽಸ್ತಿ ತಂ ಪಾಪಂ ಮುದದರ್ಪಿತಂ ।
ಮಮೇದಂ ಮತಮದ್ಯೈವ ಗತ್ವಾ ದೇವಂ ಜನಾರ್ದನಂ ॥೫೩॥

ಸ್ತುತ್ವಾ ತಂ ದೇವಕಾರ್ಯಾಯ ಪ್ರೇರಯಾಮಃ ಸುಸತ್ವರಂ ।
ಸೋಽತಿಬುದ್ಧಿಮತಾಂ ಶ್ರೇಷ್ಠೋ ವಿಷ್ಣುಃ ಸರ್ವಾರ್ಥಸಾಧನೇ ॥೫೪॥

ಮಿಲಿತ್ವಾ ವಾಸುದೇವಂ ವೈ ಕರ್ತವ್ಯಂ ಕಾರ್ಯಚಿಂತನಂ ।
ಪ್ರಪಂಚೇನ ಚ ಬುದ್ಧ್ಯಾಸ ಸಂವಿಧಾಸ್ಯತಿ ಸಾಧನಂ ॥೫೫॥

ಇತಿ ರುದ್ರವಚಃ ಶ್ರುತ್ವಾ ಬ್ರಹ್ಮಾದ್ಯಾಃ ಸುರಸತ್ತಮಾಃ ।
ಉತ್ಥಿತಾಸ್ತೇ ತಥೇತ್ಯುಕ್ತ್ವಾ ಶಿವೇನ ಸಹ ಸತ್ವರಾಃ ॥೫೬॥

ಸ್ವಕೀಯೈರ್ವಾಹನೈಃ ಸರ್ವೇ ಯಯುರ್ವಿಷ್ಣುಪುರಂ ಪ್ರತಿ ।
ಮುದಿತಾಃ ಶಕುನಾನ್ದೃಷ್ಟ್ವಾ ಕಾರ್ಯಸಿದ್ಧಿಕರಾಞ್ಛುಭಾನ್ ॥೫೭॥

---

ಈಗ ನನ್ನ ಅಭಿಪ್ರಾಯವನ್ನು ಹೇಳುವೆನು. ನಾವೆಲ್ಲರೂ ವಿಷ್ಣುವಿನ ಸಮೀಪಕ್ಕೆ ಈ ಕೂಡಲೇ ಹೋಗಿ ಅವನನ್ನು ಸ್ತುತಿಸಿ ದೇವತೆಗಳ ಕಾರ್ಯಸಿದ್ಧಿಗಾಗಿ ಬೇಗನೆ ಅವನನ್ನು ಪ್ರೇರಿಸೋಣ. ॥೫೩॥

ಆ ವಿಷ್ಣುವು ಎಲ್ಲ ಕಾರ್ಯಗಳನ್ನು ಸಾಧಿಸುವುದರಲ್ಲಿ ಅತಿಬುದ್ಧಿವಂತರಾದವರಲ್ಲೂ ಉತ್ತಮನು. ಅವನನ್ನು ಸೇರಿಸಿಕೊಂಡು ಕಾರ್ಯಾಲೋಚನೆಯನ್ನು ಮಾಡಬೇಕು. ಅವನು ತನ್ನ ಬುದ್ಧಿಯಿಂದ ಚನ್ನಾಗಿ ಯೋಚನೆಯನ್ನು ಮಾಡಿ ಈ ಕಾರ್ಯವು ಸಿದ್ಧಿಸುವುದರಲ್ಲಿ ಅನುಸರಿಸಬೇಕಾಗಿರುವ ಉಪಾಯದ ರೀತಿನೀತಿಗಳನ್ನು ತಿಳಿಸಿ ಸಹಾಯವನ್ನೂ ಮಾಡುವನು. ॥೫೪-೫೫॥

ವ್ಯಾಸನು ಹೇಳಿದನು—ಬ್ರಹ್ಮನೇ ಮೊದಲಾದ ದೇವಶ್ರೇಷ್ಠರು ರುದ್ರನು ಹೇಳಿದ ಈ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿ ಅಲ್ಲಿಂದ ಮೇಲೆದ್ದು ಶಿವನೊಡನೆ ಬೇಗಬೇಗನೆ ತಮ್ಮ ತಮ್ಮ ವಾಹನಗಳನ್ನು ಏರಿಕೊಂಡು ಎಲ್ಲರೂ ವಿಷ್ಣುವಿನ ಆವಾಸಸ್ಥಾನವಾದ ವೈಕುಂಠವನ್ನು ಕುರಿತು ಹೊರಟರು. ॥೫೬-೫೭॥

**ವವುರ್ವಾತಾಃ ಶುಭಾಃ ಶಾಂತಾಃ ಸುಗಂಧಾಃ ಶುಭಶಂಸಿನಃ ।**
**ಪಕ್ಷಿಣಶ್ಚ ಶಿವಾವಾಚಸ್ತತ್ರೋಚುಃ ಪಥಿ ಸರ್ವಶಃ ॥೫೮॥**

**ನಿರ್ಮಲಂ ಚಾಭವದ್ವ್ಯೋಮ ದಿಶಶ್ಚ ವಿಮಲಾಸ್ತಥಾ ।**
**ಗಮನೇ ತತ್ರ ದೇವಾನಾಂ ಸರ್ವಂ ಶುಭಮಿವಾಭವತ್ ॥೫೯॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ಸಪ್ತಮೋಽಧ್ಯಾಯಃ.**

---

ದೇವತೆಗಳು ವೈಕುಂಠವನ್ನು ಕುರಿತು ಪ್ರಯಾಣಮಾಡುತ್ತಿರುವಾಗ, ಸುವಾಸನೆಯಿಂದ ಕೂಡಿದ ಮಂದಮಾರುತವು ಶುಭವನ್ನು ಸೂಚಿಸುವಹಾಗೆ ಮೆಲ್ಲನೆ ಬೀಸಿತು. ದಾರಿಯಲ್ಲಿ ಎಲ್ಲಿ ನೋಡಿದರೂ ಪಕ್ಷಿಗಳು ಮಂಗಳಕರವಾದ ಧ್ವನಿಯನ್ನು ಮಾಡುತ್ತಿದ್ದುವು. ಆಕಾಶವು ಮೋಡವಿಲ್ಲದೆ ಸ್ವಚ್ಛವಾಗಿದ್ದಿತು. ದಿಕ್ಕುಗಳೆಲ್ಲವೂ ಪ್ರಕಾಶಮಾನವಾಗಿದ್ದುವು. ಹೀಗೆ ಎಲ್ಲವೂ ಮಂಗಳಕರವಾಗಿದ್ದಿತು. ಈ ರೀತಿಯಾದ ಶುಭಶಕುನಗಳನ್ನು ನೋಡಿ, ದೇವತೆಗಳು ತಮ್ಮ ಕಾರ್ಯಸಿದ್ಧಿಯಾಗುವುದೆಂದು ಮನಗಾಣುತ್ತಾ ಸಂತೋಷವುಳ್ಳವರಾದರು. ॥೫೮-೫೯॥

ಬ್ರಹ್ಮ ವಿಷ್ಣು ರುದ್ರ ಇಂದ್ರ ಮುಂತಾದ ದೊಡ್ಡವರೂ ತಾವೂ ಧರ್ಮಬದ್ಧರಾದುದರಿಂದ ಕಷ್ಟಬಂದ ಕಾಲದಲ್ಲಿ ಹೇಗೆ ನಡೆದುಕೊಂಡರೆಂಬುದನ್ನು ಗಮನಿಸಬೇಕು. ಎಲ್ಲರಿಗೂ ಉಂಟಾದ ಸೋಲಿನಿಂದ ಅವರು ನಿರಾಶರಾಗದೆ, ದೈವನಿಂದೆಯನ್ನು ಮಾಡುತ್ತಾ ಧರ್ಮವನ್ನು ಕೈಬಿಡದೆ, ಭಕ್ತವತ್ಸಲನಾದ ಬ್ರಹ್ಮನು ಮಹಿಷನ ಕಾಮ್ಯತಪಸ್ಸಿನ ಫಲವಾಗಿ ಅವನಿಗೆ ಕೊಟ್ಟ ವರಕ್ಕಾಗಿ ಬ್ರಹ್ಮನನ್ನೂ ನಿಂದಿಸದೆ, ವರಪಾಲನೆಯ ಧರ್ಮವು ಎಲ್ಲರಿಗೂ ಮಾನ್ಯವೆಂದು ತಿಳಿದು, ಶಾಂತಿಸಮಾಧಾನಗಳಿಂದ ಕಷ್ಟವನ್ನು ಕೆಲವು ಕಾಲದ ವರೆಗೆ ಸಹಿಸಿ, ಮಹಿಷನ ಪುಣ್ಯವು ಮುಗಿಯುತ್ತಿರಲು, ತಾವೆಲ್ಲರೂ ಒಟ್ಟುಗೂಡಿ ಐಕಮತ್ಯದಿಂದಲೂ ಮುಂದಾಲೋಚನೆಯಿಂದಲೂ ಸಹಕರಿಸಿ, ಕಡೆಗೆ ಸುಖವನ್ನು ಪಡೆಯುವ ಮಾರ್ಗವನ್ನು ಆಲೋಚಿಸಿ ತಿಳಿದು, ತಕ್ಕ ಕಾರ್ಯಗಳನ್ನು ನೆರವೇರಿಸಿ, ತಮಗೂ ಲೋಕಕ್ಕೂ ಕಲ್ಯಾಣವಾಗುವಂತೆ ಮಾಡಿದರು.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಅಷ್ಟಮೋಽಧ್ಯಾಯಃ ||

### ಎಂಟನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತರಸಾ ತೇಽಥ ಸಂಪ್ರಾಪ್ಯ ವೈಕುಂಠಂ ವಿಷ್ಣುವಲ್ಲಭಂ ।**
**ದದೃಶುಃ ಸರ್ವಶೋಭಾಢ್ಯಂ ದಿವ್ಯಗೃಹವಿರಾಜಿತಂ ॥೧॥**

**ಸರೋವಾಪೀಸರಿದ್ಭಿಶ್ಚ ಸಂಯುತಂ ಸುಖದಂ ಶುಭಂ ।**
**ಹಂಸಸಾರಸಚಕ್ರಾಹ್ವೈಃ ಕೂಜದ್ಭಿಶ್ಚ ವಿರಾಜಿತಂ ॥೨॥**

**ಚಂಪಕಾಶೋಕಕಲ್ಹಾರಮಂದಾರಬಕುಲಾವೃತೈಃ ।**
**ಮಲ್ಲಿಕಾತಿಲಕಾಮ್ರಾತಯುತೈಃ ಕುರಬಕಾದಿಭಿಃ ॥೩॥**

---

ವ್ಯಾಸಮಹರ್ಷಿಯು ಹೇಳಿದನು—ಅನಂತರದಲ್ಲಿ ದೇವತೆಗಳು ಬೇಗನೆ ಹೊರಟು ಪ್ರಯಾಣ ಮಾಡುತ್ತಾ, ವಿಷ್ಣುವಿನಿಂದ ಪಾಲಿತವಾದ, ಅಂದಚೆಂದಗಳಿಂದ ಕೂಡಿರುವುದಾಗಿಯೂ, ಉತ್ತಮವಾದ ಗೃಹಗಳಿಂದ ಕಂಗೊಳಿಸುತ್ತಲೂ ಇರುವ ವೈಕುಂಠಲೋಕದ ಸಮೀಪಕ್ಕೆ ಬಂದು ಅದನ್ನು ಆದರದಿಂದ ನೋಡಿದರು. ||೧||

ಆ ವೈಕುಂಠವು ಹಂಸ, ಸಾರಸ, ಚಕ್ರವಾಕ ಮೊದಲಾದ ಪಕ್ಷಿಗಳ ಸುಶ್ರಾವ್ಯವಾದ ಧ್ವನಿಗಳಿಂದ ಕೂಡಿ ಮನಸ್ಸಿಗೆ ಮಂಗಳಕರವಾಗಿ ಸುಖವನ್ನುಂಟುಮಾಡುವ ಸರೋವರಗಳು, ಕೊಳಗಳು, ನದಿಗಳು ಇವುಗಳಿಂದ ಕಂಗೊಳಿಸುತ್ತಿತ್ತು. ||೨||

ಆ ವೈಕುಂಠದಲ್ಲಿರುವ ಉದ್ಯಾನವನಗಳಲ್ಲಿ ಸಂಪಗೆ, ಅಶೋಕ, ಕಲ್ಹಾರ, ಮಂದಾರ, ವಕುಳ, ಮಲ್ಲಿಗೆ, ತಿಲಕ, ಆಮ್ರಾತ, ಗೋರಂಟೆ ಮೊದಲಾದ ಪುಷ್ಪವೃಕ್ಷಗಳು ಮತ್ತು ಲತೆಗಳು ಕಂಗೊಳಿಸುತ್ತಿದ್ದುವು. ||೩||

ಕೋಕಿಲಾರಾವಸನ್ನಾದ್ಯೈಃ ಶಿಖಂಡ್ಯೈರ್ನೃತ್ಯರಂಜಿತೈಃ ।
ಭ್ರಮರಾರಾವರಮ್ಯೈಶ್ಚ ದಿವ್ಯೈರುಪವನೈರ್ಯುತಂ ॥೪॥

ಸುನಂದನಂದನಾದ್ಯೈಶ್ಚ ಪಾರ್ಷದೈರ್ಭಕ್ತಿತತ್ಪರೈಃ ।
ಸಂಸ್ತುವದ್ಭಿರ್ಯುತಂ ಭಕ್ತ್ಯೈರನನ್ಯಭವವೃತ್ತಿಭಿಃ ॥೫॥

ಪ್ರಾಸಾದೈ ರತ್ನಖಚಿತೈಃ ಕಾಂಚನೈಶ್ಚಿತ್ರಮಂಡಿತೈಃ ।
ಅಭ್ರಂಲಿಹೈರ್ವಿರಾಜದ್ಭಿಃ ಸಂಯುತಂ ಶುಭಸದ್ಮಕೈಃ ॥೬॥

ಗಾಯದ್ಭಿರ್ದೇವಗಂಧರ್ವೈರ್ನೃತ್ಯದ್ಭಿರಪ್ಸರೋಗಣೈಃ ।
ರಂಜಿತಂ ಕಿನ್ನರೈಃ ಶಶ್ವದ್ರಕ್ತಕಂಠೈರ್ಮನೋಹರೈಃ ॥೭॥

ಮುನಿಭಿಶ್ಚ ತಥಾ ಶಾಂತೈರ್ವೇದಪಾಠಕೃತಾದರೈಃ ।
ಸ್ತುವದ್ಭಿಃ ಶ್ರುತಿಸೂಕ್ತೈಶ್ಚ ಮಂಡಿತಂ ಸದನಂ ಹರೇಃ ॥೮॥

---

ಮತ್ತು ಆ ವನಗಳು ಮನೋಹರವಾದ ಕೋಗಿಲೆಗಳ ಸ್ವರಗಳಿಂದಲೂ, ನರ್ತನವನ್ನು ಮಾಡುತ್ತಿರುವ ನವಿಲುಗಳ ನಲಿಯುವಿಕೆಗಳಿಂದಲೂ, ದುಂಬಿಗಳ ಝೇಂಕಾಶಧ್ವನಿಗಳಿಂದಲೂ ಶೋಭಿಸುತ್ತಿದ್ದವು. ॥೪॥

ಅಲ್ಲದೆ ಆ ವೈಕುಂಠವು, ಬೇರೆ ದೇವತೆಗಳಲ್ಲಿ ಮನೋವೃತ್ತಿಯಿಲ್ಲದೆ ವಿಷ್ಣುವನ್ನೇ ಭಕ್ತಿಭಾವದಿಂದ ಸ್ತೋತ್ರ ಮಾಡುತ್ತಿರುವ ಸುನಂದ ನಂದನ ಮೊದಲಾದ ಪರಿವಾರ ದೇವತೆಗಳಿಂದ ಒಪ್ಪುತ್ತಿತ್ತು. ॥೫॥

ಚಿನ್ನದಿಂದಲೂ, ರತ್ನಗಳಿಂದಲೂ ಕೆತ್ತಿ ನಿರ್ಮಿಸಿರುವ, ವಿಚಿತ್ರ ಅಲಂಕಾರಗಳಿಂದ ಕೂಡಿ ಗಗನವನ್ನು ಚುಂಬಿಸುತ್ತಿರುವ ಉತ್ತಮವಾದ ಭವನಗಳಿಂದ ಆ ವೈಕುಂಠವು ಶೋಭಿಸುತ್ತಿತ್ತು. ॥೬॥

ಮತ್ತು ಆ ವೈಕುಂಠವು, ಶ್ರಾವ್ಯವಾಗಿ ಗಾನಮಾಡುತ್ತಿರುವ ಗಂಧರ್ವರಿಂದಲೂ, ನರ್ತನವನ್ನು ಮಾಡುತ್ತಿರುವ ಅಪ್ಸರಸ್ತ್ರೀಯರ ಸಮೂಹದಿಂದಲೂ, ರಾಗಕ್ಕೆ ಅನುರೂಪವಾದ ಕಂಠಧ್ವನಿಯುಳ್ಳವರಾದ ಕಿನ್ನರರಿಂದಲೂ ಕೂಡಿ ವಿರಾಜಿಸುತ್ತಿತ್ತು. ॥೭॥

ವಿಷ್ಣುವಿನ ವಾಸಸ್ಥಾನವಾದ ಆ ವೈಕುಂಠವು ಶಾಂತರಾಗಿಯೂ, ವೇದಪಾಠಗಳಲ್ಲಿ ಆದರವುಳ್ಳವರಾಗಿಯೂ, ವೇದಸೂಕ್ತಗಳಿಂದ ವಿಷ್ಣುವನ್ನು ಸ್ತೋತ್ರಮಾಡುತ್ತಲೂ ಇರುವ ಋಷಿಗಳಿಂದ ಅಲಂಕಾರಪ್ರಾಯವಾಗಿತ್ತು. ॥೮॥

ತೇ ಚ ವಿಷ್ಣುಗೃಹಂ ಪ್ರಾಪ್ಯ ದ್ವಾರಪಾಲೌ ಶುಭಾಕೃತೀ ।
ವೀಕ್ಷ್ಯೋಚುರ್ಜಯವಿಜಯೌ ಹೇಮಯಷ್ಟಿಧರೌ ಸ್ಥಿತೌ ॥೯॥

ಗತ್ವೈಕೋಽಪ್ಯುಭಯೋರ್ಮಧ್ಯೇ ನಿವೇದಯತು ಸಂಗತಾನ್ ।
ದ್ವಾರಸ್ಥಾನ್ ಬ್ರಹ್ಮರುದ್ರಾದೀನ್ವಿಷ್ಣುದರ್ಶನಲಾಲಸಾನ್ ॥೧೦॥

॥ ವ್ಯಾಸ ಉವಾಚ ॥

ವಿಜಯಸ್ತದ್ವಚಃ ಶ್ರುತ್ವಾ ಗತ್ವಾಽಥ ವಿಷ್ಣುಸನ್ನಿಧೌ ।
ಸರ್ವಾನ್ಸಮಾಗತಾನ್ದೇವಾನ್ ಪ್ರಣಮ್ಯೋವಾಚ ಸತ್ವರಃ ॥೧೧॥

॥ ವಿಜಯ ಉವಾಚ ॥

ದೇವದೇವ ಮಹಾರಾಜ ರಮಾಕಾಂತ ಸುರಾರಿಹನ್ ।
ಸಮಾಗತಾಃ ಸುರಾಃ ಸರ್ವೇ ದ್ವಾರಿ ತಿಷ್ಠಂತಿ ವೈ ವಿಭೋ ॥೧೨॥

---

ಆ ದೇವತೆಗಳು ವೈಕುಂಠದಲ್ಲಿರುವ ವಿಷ್ಣುವಿನ ಭವನಕ್ಕೆ ಬಂದು ಬಾಗಿಲು ಬಳಿಯಲ್ಲಿ ಚಿನ್ನದ ದಂಡವನ್ನು ಹಿಡಿದು ನಿಂತಿರುವ, ಮಂಗಳಕರವಾದ ಆಕಾರವುಳ್ಳ ಜಯವಿಜಯರೆಂಬ ದ್ವಾರಪಾಲಕರನ್ನು ಕಂಡು ಅವರೊಡನೆ ಮಾತನಾಡಿದರು. ॥೯॥

ನಿಮ್ಮಿಬ್ಬರಲ್ಲಿ ಒಬ್ಬರು ಒಳಕ್ಕೆ ಹೋಗಿ, ವಿಷ್ಣುವಿನ ದರ್ಶನಕ್ಕಾಗಿ ಬ್ರಹ್ಮ ರುದ್ರರೇ ಮೊದಲಾದ ದೇವತೆಗಳು ಬಂದು ಬಾಗಿಲಿನಲ್ಲಿ ಕಾದು ನಿಂತಿರುವರೆಂದು ವಿಷ್ಣುವಿಗೆ ತಿಳಿಸಿ ಎಂದು ದೇವತೆಗಳು ಹೇಳಿದರು. ॥೧೦॥

ವ್ಯಾಸಋಷಿಯು ಹೇಳಿದನು—ವಿಜಯನು ದೇವತೆಗಳು ಹೀಗೆ ಹೇಳಿದ ಕೂಡಲೇ ಬೇಗನೆ ವಿಷ್ಣುವಿನ ಸಮೀಪಕ್ಕೆ ಹೋಗಿ ಆವನನ್ನು ನಮಸ್ಕರಿಸಿ ದೇವತೆಗಳು ಬಂದಿರುವ ವಿಚಾರವನ್ನು ಅರಿಕೆ ಮಾಡಿದನು. ॥೧೧॥

ವಿಜಯನು ವಿಷ್ಣುವಿಗೆ ಈ ರೀತಿಯಾಗಿ ವಿಜ್ಞಾಪಿಸಿದನು—ದೇವತೆಗಳಿಗೆ ದೇವನಾಗಿಯೂ, ಲಕ್ಷ್ಮಿಗೆ ಪತಿಯಾಗಿಯೂ, ದೇವಶತ್ರುಗಳನ್ನು ಸಂಹಾರ ಮಾಡುವವನಾಗಿಯೂ ಎಲ್ಲರಿಗೂ ದೊರೆಯಾಗಿಯೂ ಇರುವ ಓ ಸ್ವಾಮಿಯೇ ಎಲ್ಲ ದೇವತೆಗಳೂ ಬಂದು ಬಾಗಿಲಿನಲ್ಲಿದಾರೆ. ॥೧೨॥

ಬ್ರಹ್ಮಾ ರುದ್ರಸ್ತಥೇಂದ್ರಶ್ಚ ವರುಣಃ ಪಾವಕೋ ಯಮಃ ।
ಸ್ತುವಂತಿ ವೇದವಾಕ್ಯೈಸ್ತ್ವಾಮುಮರಾ ದರ್ಶನಾರ್ಥಿನಃ ॥೧೩॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ವಿಷ್ಣುರ್ವಿಜಯಸ್ಯ ರಮಾಪತಿಃ ।
ನಿರ್ಜಗಾಮ ಗೃಹಾತ್ತೂರ್ಣಂ ಸುರಾನ್ಸಮಧಿಕೋತ್ಸವಃ ॥೧೪॥

ಗತ್ವಾ ವೀಕ್ಷ್ಯ ಹರಿರ್ದೇವಾನ್ ದ್ವಾರಸ್ಥಾಞ್ಛ್ರಮಕರ್ಶಿತಾನ್ ।
ಪ್ರೀತಿಪ್ರವಣಯಾ ದೃಷ್ಟ್ಯಾ ಪ್ರೀಣಯಾಮಾಸ ದುಃಖಿತಾನ್ ॥೧೫॥

ಪ್ರಣೇಮುಸ್ತೇ ಸುರಾಃ ಸರ್ವೇ ದೇವದೇವಂ ಜನಾರ್ದನಂ ।
ತುಷ್ಟುವುಶ್ಚ ಸುರಾರಿಘ್ನಂ ವಾಗ್ಭಿರ್ವೇದವಿನಿಶ್ಚಿತಂ ॥೧೬॥

---

ಬ್ರಹ್ಮನು, ರುದ್ರನು, ವರುಣನು, ಅಗ್ನಿಯು, ಯಮನು ಇವರೇ ಮೊದಲಾದ ದೇವತೆಗಳೆಲ್ಲರೂ ನಿನ್ನನ್ನು ವೇದವಾಕ್ಯಗಳಿಂದ ಸ್ತೋತ್ರಮಾಡುತ್ತಾ, ನಿನ್ನ ದರ್ಶನಾಕಾಂಕ್ಷಿಗಳಾಗಿ ಬಂದು ಬಾಗಿಲಿನಲ್ಲಿ ಕಾದು ನಿಂತಿರುವರು. ||೧೩||

ವ್ಯಾಸಋಷಿಯು ಹೇಳಿದನು—ವಿಜಯನ ಆ ಮಾತನ್ನು ಕೇಳಿ, ಲಕ್ಷ್ಮೀಪತಿಯಾದ ವಿಷ್ಣುವು ಸಂಭ್ರಮಗೊಂಡು, ಬೇಗನೆ ಮನೆಯೊಳಗಿಂದ ದೇವತೆಗಳನ್ನು ನೋಡಲು ಹೊರಕ್ಕೆ ಹೆಚ್ಚು ಸಂತುಷ್ಟನಾಗಿ ಬಂದನು. ||೧೪||

ವಿಷ್ಣುವು ಮನೆಯೊಳಗಿಂದ ಹೊರಟುಬಂದು ಆಯಾಸದಿಂದ ಕೃಶರಾಗಿ ಬಾಗಿಲಿನಲ್ಲಿ ನಿಂತಿರುವ ದೇವತೆಗಳನ್ನು ಪ್ರೀತಿಯನ್ನು ಸೂಸುತ್ತಿರುವ ತನ್ನ ಪ್ರಸನ್ನ ದೃಷ್ಟಿಯಿಂದ ನೋಡಿ ಮಾರ್ಗಾಯಾಸದಿಂದ ದುಃಖಪಡುತ್ತಿರುವ ಅವರನ್ನು ಸಂತೋಷಪಡಿಸಿದನು. ||೧೫||

ಆ ದೇವತೆಗಳೆಲ್ಲರೂ, ದೇವದೇವನಾಗಿಯೂ, ಶತ್ರುಗಳನ್ನು ನಾಶಮಾಡುವವನಾಗಿಯೂ, ರಾಕ್ಷಸರನ್ನು ಸಂಹರಿಸುವವನಾಗಿಯೂ, ವೇದಪ್ರತಿಪಾದ್ಯನಾಗಿಯೂ ಇರುವ ವಿಷ್ಣುವನ್ನು ನಮಸ್ಕರಿಸಿ ವೇದಾರ್ಥಗರ್ಭಿತವಾದ ವಾಕ್ಯಗಳಿಂದ ಸ್ತೋತ್ರ ಮಾಡಿದರು. ||೧೬||

|| ದೇವಾ ಊಚುಃ ||

**ದೇವದೇವ ಜಗನ್ನಾಥ ಸೃಷ್ಟಿಸ್ಥಿತ್ಯಂತಕಾರಕ ।**
**ದಯಾಸಿಂಧೋ ಮಹಾರಾಜ ತ್ರಾಹಿ ನಃ ಶರಣಾಗತಾನ್ ॥೧೭॥**

|| ವಿಷ್ಣುರುವಾಚ ||

**ವಿಶಂತು ನಿರ್ಜರಾಃ ಸರ್ವೇ ಕುಶಲಂ ಕಥಯಂತು ವಃ ।**
**ಆಸನೇಷು ಕಿಮರ್ಥಂ ವೈ ಮಿಲಿತಾಃ ಸಮುಪಾಗತಾಃ ॥೧೮॥**

**ಚಿಂತಾತುರಾಃ ಕಥಂ ಜಾತಾ ವಿಷಣ್ಣಾ ದೀನಮಾನಸಾಃ ।**
**ಬ್ರಹ್ಮರುದ್ರೇಣ ಸಹಿತಾಃ ಕಾರ್ಯಂ ಪ್ರಬ್ರೂತ ಸತ್ವರಂ ॥೧೯॥**

|| ದೇವಾ ಊಚುಃ ||

**ಮಹಿಷೇಣ ಮಹಾರಾಜ ಪೀಡಿತಾಃ ಪಾಪಕರ್ಮಣಾ ।**
**ಅಸಾಧ್ಯೇನಾತಿದುಷ್ಟೇನ ವರದೃಪ್ತೇನ ಪಾಪಿನಾ ॥೨೦॥**

---

ದೇವತೆಗಳು ಹೇಳಿದರು—ಓ ದೇವದೇವನೇ, ನೀನು ಈ ಜಗತ್ತಿಗೆ ಸ್ವಾಮಿಯಾದವನು, ಪ್ರಪಂಚದ ಸೃಷ್ಟಿಸ್ಥಿತಿನಾಶಗಳನ್ನು ಮಾಡತಕ್ಕವನು, ದಯಾಸಮುದ್ರನು, ನಮ್ಮೆಲ್ಲರಿಗೂ ಪ್ರಭುವು. ನಿನ್ನನ್ನು ಮರೆಹೊಕ್ಕಿರುವ ನಮ್ಮನ್ನು ಕಾಪಾಡು. ||೧೭||

ವಿಷ್ಣುವು ಹೇಳಿದನು—ಓ ದೇವತೆಗಳಿರಾ, ನೀವು ಎಲ್ಲರೂ ಒಳಕ್ಕೆ ಬನ್ನಿರಿ. ಆಸನಗಳಲ್ಲಿ ಕುಳಿತುಕೊಂಡು ನಿಮ್ಮ ನಿಮ್ಮ ಕುಶಲಸಮಾಚಾರಗಳನ್ನು ಹೇಳಿರಿ. ಮತ್ತು ನೀವೆಲ್ಲರೂ ಒಟ್ಟು ಸೇರಿ ಇಲ್ಲಿಗೆ ಬಂದಕಾರಣವೇನೆಂಬುದನ್ನು ತಿಳಿಸಿರಿ. ||೧೮||

ನೀವು ವ್ಯಸನದಿಂದ ಕಂಗೆಟ್ಟು ಬಾಡಿದಮುಖವುಳ್ಳವರಾಗಿ ಚಿಂತಾತುರರಾಗಿರಲು ಏನು ಕಾರಣವು? ಬ್ರಹ್ಮರುದ್ರರಿಂದಲೂ ಕೂಡಿ ನೀವೆಲ್ಲರೂ ಇಲ್ಲಿಗೆ ಬಂದಿರುವ ಕಾರ್ಯವನ್ನು ಬೇಗನೆ ಹೇಳಿರಿ. ||೧೯||

ದೇವತೆಗಳು ಹೇಳಿದರು—ಓ ಸ್ವಾಮಿಯೇ, ಪಾಪಿಯಾಗಿಯೂ, ವರದಿಂದ ಕೊಬ್ಬಿದವನಾಗಿಯೂ, ಬಹಳ ತುಂಟನಾಗಿಯೂ, ನಾವುಗಳು ಜಯಿಸಲಸಾಧ್ಯ

ಯಜ್ಞಭಾಗಾನಸೌ ಭುಂಕ್ತೇ ಬ್ರಾಹ್ಮಣೈಃ ಪ್ರತಿಪಾದಿತಾನ್ ।
ಅಮರಾ ಗಿರಿದುರ್ಗೇಷು ಭ್ರಮಂತಿ ಚ ಭಯಾತುರಾಃ ॥೨೧॥

ವರದಾನೇನ ಧಾತುಸ್ಸ ದುರ್ಜಯೋ ಮಧುಸೂದನ ।
ತಸ್ಮಾತ್ತ್ವಾಂ ಶರಣಂ ಪ್ರಾಪ್ತಾ ಜ್ಞಾತ್ವಾ ತತ್ಕಾರ್ಯಗೌರವಾತ್ ॥೨೨॥

ಸಮರ್ಥೋಽಪಿ ಸಮುದ್ಧರ್ತುಂ ದೈತ್ಯಮಾಯಾವಿಶಾರದ ।
ಕುರು ಕೃಷ್ಣ ವಧೋಪಾಯಂ ತಸ್ಯದಾನವಮರ್ದನ ॥೨೩॥

ಧಾತ್ರಾ ತಸ್ಮೈ ವರೋ ದತ್ತೋ ಹ್ಯವಧ್ಯೋಽಸಿ ನರೈಃ ಕಿಲ ।
ಕಾ ಸ್ತ್ರೀ ತ್ವೇವಂವಿಧಾ ಬಾಲಾ ಯಾ ಹನ್ಯಾತ್ತಂ ಶಠಂ ರಣೇ ॥೨೪॥

---

ನಾಗಿಯೂ, ಯಾವಾಗಲೂ ಕೆಟ್ಟ ಕೆಲಸಗಳನ್ನು ಮಾಡುತ್ತಿರುವವನಾಗಿಯೂ ಇರುವ ಮಹಿಷಾಸುರನಿಂದ ನಾವು ಪೀಡಿಸಲ್ಪಟ್ಟವರಾಗಿರುತ್ತೇವೆ. ||೨೦||

ಬ್ರಾಹ್ಮಣರು ಯಜ್ಞಗಳಲ್ಲಿ ಕೊಡತಕ್ಕ ಹವಿರ್ಭಾಗಗಳನ್ನು ದೇವತೆಗಳಿಗೆ ತಪ್ಪಿಸಿ ಈ ಮಹಿಷಾಸುರನೇ ತಿನ್ನುವನು. ಇವನ ಭಯದಿಂದ ದೇವತೆಗಳು ಆಶ್ರಯ ವಿಲ್ಲದೆ ಕಂಗೆಟ್ಟು ಬೆಟ್ಟದುರ್ಗಗಳಲ್ಲಿ ಅಲೆಯುತ್ತಿರುವರು. ||೨೧||

ಆ ಮಹಿಷಾಸುರನು ಬ್ರಹ್ಮನು ಕೊಟ್ಟ ವರಬಲದಿಂದ ಜಯಿಸಲಸಾಧ್ಯನಾಗಿ ರುವನು. ಮಧುವೆಂಬ ರಾಕ್ಷಸನನ್ನು ನಿಗ್ರಹಿಸಿದ ಓ ವಿಷ್ಣುವೇ, ಇವನನ್ನು ಸೋಲಿ ಸಲು ನಮಗೆ ಆಗದೇ ಇರುವುದರಿಂದ ಆ ಕಾರ್ಯದ ಮಹತ್ತ್ವವನ್ನು ತಿಳಿದು ನಾವೆಲ್ಲರೂ ನಿನ್ನನ್ನು ಶರಣುಹೊಂದಿರುವೆವು. ||೨೨||

ರಾಕ್ಷಸರನ್ನು ನಿಗ್ರಹಿಸಲು ಶಕ್ತಿಯುಳ್ಳ ಓ ವಿಷ್ಣುವೇ, ನೀನು ದೈತ್ಯರ ಮಾಯೆಗಳನ್ನು ತಿಳಿದವನಾಗಿರುವುದರಿಂದ ನಮ್ಮನ್ನು ವಿಪತ್ತಿನಿಂದ ಪಾರುಮಾಡಲು ಸಮರ್ಥನಾಗಿರುತ್ತೀಯೆ. ಆದುದರಿಂದ ಅವನನ್ನು ಕೊಲ್ಲಲು ತಕ್ಕ ಉಪಾಯವನ್ನು ಮಾಡು. ||೨೩||

"ನೀನು ಪುರುಷರಿಂದ ಅವಧ್ಯನಾಗಿರುವೆ" ಎಂದು ಬ್ರಹ್ಮನು ಅವನಿಗೆ ವರವನ್ನು ಕೊಟ್ಟಿರುವನಷ್ಟೆ? ಈಗ ಆ ನೀಚನನ್ನು ಯುದ್ಧದಲ್ಲಿ ಕೊಲ್ಲಲು ಸಮರ್ಥ ಳಾದ ಹೆಂಗಸು ಇರುವುದಾದರೆ ಅಂತಹ ಆ ಬಾಲೆಯು ಯಾರು? ||೨೪||

ಉಮಾ ಮಾ ವಾ ಶಚೀ ವಿದ್ಯಾ ಕಾ ಸಮರ್ಥಾऽಸ್ಯ ಘಾತನೇ ।
ಮಹಿಷಸ್ಯಾತಿದುಷ್ಟಸ್ಯ ವರದಾನಬಲಾದಪಿ ॥೨೫॥

ವಿಚಿಂತ್ಯ ಬುದ್ಧ್ಯಾ ಯತ್ಸರ್ವಂ ಮರಣಸ್ಯಾಸ್ಯ ಕಾರಣಂ ।
ಕುರು ಕಾರ್ಯಂ ಚ ದೇವಾನಾಂ ಭಕ್ತವತ್ಸಲ ಭೂಧರ ॥೨೬॥

॥ ವ್ಯಾಸ ಉವಾಚ ॥

ಶ್ರುತ್ವಾ ತದ್ವಚನಂ ವಿಷ್ಣುಸ್ತಾನುವಾಚ ಹಸನ್ನಿವ ।
ಯುದ್ಧಂ ಕೃತಂ ಪುರಾऽಸ್ಮಾಭಿಸ್ತಥಾಪಿ ನ ಮೃತೋ ಹ್ಯಸೌ ॥೨೭॥

ಅದ್ಯ ಸರ್ವಸುರಾಣಾಂ ವೈ ತೇಜೋಭೀ ರೂಪಸಂಪದಾ ।
ಉತ್ಪನ್ನಾ ಚೇದ್ವರಾರೋಹಾ ಸಾ ಹನ್ಯಾತ್ತ್ರಂ ರಣೇ ಬಲಾತ್ ॥೨೮॥

---

ಈ ಮಹಿಷಾಸುರನು ಸ್ವಭಾವದಿಂದಲೇ ಅತಿ ದುಷ್ಟನಾದವನು. ಇದರ ಜೊತೆಗೆ ವರದ ಬಲವೂ ಇರುವುದರಿಂದ ಈ ದುಷ್ಟನನ್ನು ಸಂಹಾರ ಮಾಡಲು ಪಾರ್ವತಿಯೋ, ಲಕ್ಷ್ಮಿಯೋ, ಶಚಿಯೋ, ಸರಸ್ವತಿಯೋ ಈ ದೊಡ್ಡವರಲ್ಲಿ ಯಾರು ಸಮರ್ಥರು ? ॥೨೫॥

ಭೂಮಿಯನ್ನು ಉದ್ಧಾರಮಾಡಿದ ಓ ಸ್ವಾಮಿಯೇ, ನೀನು ಭಕ್ತವತ್ಸಲನು. ಈ ಮಹಿಷಾಸುರನ ಮರಣಕ್ಕೆ ಕಾರಣವು ಯಾವುದೆಂಬುದನ್ನು ನಿನ್ನ ಬುದ್ಧಿಯಿಂದ ಎಲ್ಲವನ್ನೂ ಯೋಚಿಸಿ ದೇವತೆಗಳ ಕಾರ್ಯವನ್ನು ನೆರವೇರಿಸು. ॥೨೬॥

ವ್ಯಾಸನು ಹೇಳಿದನು. ವಿಷ್ಣುವು ಆ ದೇವತೆಗಳ ಮಾತನ್ನು ಕೇಳಿ ನಗುತ್ತಾ ಅವರೊಡನೆ ಮಾತನಾಡಿದನು. ನಾವೆಲ್ಲರೂ ಹಿಂದೆ ಆ ಮಹಿಷಾಸುರನೊಡನೆ ಯುದ್ಧವನ್ನು ಮಾಡಿದವು. ಆದಾಗ್ಯೂ ಅವನು ಮರಣವನ್ನು ಹೊಂದಲಿಲ್ಲವು. ಆದುದರಿಂದ ಅವನನ್ನು ನಮ್ಮವರಲ್ಲಿ ಒಬ್ಬರ ಶಕ್ತಿಯಿಂದಲೇ ಕೊಲ್ಲುವುದು ಅಸಾಧ್ಯವು. ಆದುದರಿಂದ ॥೨೭॥

ಈಗ ಈ ನಮ್ಮ ಎಲ್ಲ ದೇವತೆಗಳ ಒಟ್ಟುಗೂಡಿದ ತೇಜಸ್ಸಿನಿಂದಲೂ ಹೆಚ್ಚಾದ ರೂಪುಸಂಪತ್ತಿನಿಂದಲೂ ಕೂಡಿ ಒಬ್ಬ ಸ್ತ್ರೀಯು ಉತ್ಪನ್ನಳಾಗುವುದಾದರೆ ಅವಳು ಆ ದುಷ್ಟನನ್ನು ಯುದ್ಧದಲ್ಲಿ ಬಲಾತ್ಕಾರದಿಂದ ಕೊಲ್ಲುವಳು. ॥೨೮॥

ಹಯಾರಿಂ ವರದೃಪ್ತಂ ಚ ಮಾಯಾಶತವಿಶಾರದಂ ।
ಹಂತುಂ ಯೋಗ್ಯಾ ಭವೇನ್ನಾರೀ ಶಕ್ತ್ಯಂಶೈರ್ನಿರ್ಮಿತಾ ಹಿ ನಃ ॥೨೯॥

ಪ್ರಾರ್ಥಯಂತು ಚ ತೇಜೋಽಂಶಾನ್ ಸ್ತ್ರಿಯೋಽಸ್ಮಾಕಂ ತಥಾ ಪುನಃ ।
ಉತ್ಪನ್ನೈಸ್ತೈಶ್ಚ ತೇಜೋಽಂಶೈಸ್ತೇಜೋರಾಶಿರ್ಭವೇದ್ಯಥಾ ॥೩೦॥

ಆಯುಧಾನಿ ವಯಂ ದದ್ಮಃ ಸರ್ವೇ ರುದ್ರಪುರೋಗಮಾಃ ।
ತಸ್ಯೈ ಸರ್ವಾಣಿ ದಿವ್ಯಾನಿ ತ್ರಿಶೂಲಾದೀನಿ ಯಾನಿ ಚ ॥೩೧॥

ಸರ್ವಾಯುಧಧರಾ ನಾರೀ ಸರ್ವತೇಜಸ್ಸಮನ್ವಿತಾ ।
ಹನಿಷ್ಯತಿ ದುರಾತ್ಮಾನಂ ತಂ ಪಾಪಂ ಮದಗರ್ವಿತಂ ॥೩೨॥

---

ಅನೇಕ ವಿಧವಾದ ಮಾಯೆಗಳನ್ನು ಬಲ್ಲವನಾಗಿ ವರಬಲದಿಂದ ಕೊಬ್ಬಿ ಮೆರೆಯುತ್ತಿರುವ ಕುದುರೆಗೆ ಶತ್ರುವಾದ ಕೋಣನ ಜಾತಿಯ ದೇಹವುಳ್ಳ ಆ ಮಹಿಷಾಸುರನನ್ನು ಕೊಲ್ಲುವುದಕ್ಕೆ ನಮ್ಮೆಲ್ಲರ ಶಕ್ತಿಗಳ ಒಟ್ಟಿನಿಂದ ನಿರ್ಮಿಸಲ್ಪಟ್ಟ ಸ್ತ್ರೀಯು ಮಾತ್ರ ಸಮರ್ಥಳಾಗುವಳು. ॥೨೯॥

ದೇವತೆಗಳಾದ ನಾವು ಯುದ್ಧದಲ್ಲಿ ಅವನನ್ನು ಗೆಲ್ಲುವುದಕ್ಕೂ ಆಗದಿರುವಾಗ ನಮ್ಮ ತೇಜಸ್ಸಿನ ಅಂಶವು ಅವನನ್ನು ಕೊಲ್ಲಲು ಸಮರ್ಥವಾಗಲಾರದೆಂದು ನೀವು ಯೋಚನೆಯನ್ನು ಮಾಡಬೇಡಿ. ಅದಕ್ಕಾಗಿ ನೀವುಗಳು ನಿಮ್ಮ ತೇಜಸ್ಸಿನ ಅಂಶಕ್ಕೆ ಆ ಮಹಿಷಾಸುರನನ್ನು ಕೊಲ್ಲುವ ಸಾಮರ್ಥ್ಯವು ಉಂಟಾಗಲಿ ಎಂದು ನಿಮ್ಮ ತೇಜೋಽಂಶವನ್ನು ಪ್ರಾರ್ಥಿಸಿಕೊಳ್ಳಬೇಕು. ಹಾಗೆಯೇ ನಮ್ಮ ನಮ್ಮ ಸ್ತ್ರೀಯರನ್ನೂ ಸಹ ಪ್ರಾರ್ಥನೆ ಮಾಡುವಂತೆ ಹೇಳಬೇಕು. ಅಲ್ಲದೆ ಎಲ್ಲಕ್ಕೂಮೇಲಾಗಿ ದೇವತೆಗಳ ಆಯಾಯ ತೇಜಸ್ಸಿನ ಭಾಗಗಳು ನಮ್ಮಿಂದ ಪ್ರತ್ಯೇಕವಾಗಿ ಹೊರಟು, ಅವೆಲ್ಲವೂ ಒಟ್ಟಾಗಿ ಸೇರಿ, ಒಂದು ಸ್ತ್ರೀವ್ಯಕ್ತಿಯಾಗುವಂತೆ ಅನುಗ್ರಹಿಸಬೇಕೆಂಬದಾಗಿ ನಾವೂ, ನಮ್ಮ ನಮ್ಮ ಸ್ತ್ರೀಯರೂ ಸಹ ಆ ದೇವಿಯನ್ನೂ ಪ್ರಾರ್ಥಿಸಬೇಕು. ॥೩೦॥

ರುದ್ರನೇ ಮೊದಲಾದ ನಾವೆಲ್ಲರೂ ತ್ರಿಶೂಲವೇ ಮೊದಲಾದ ನಮ್ಮ ನಮ್ಮ ದಿವ್ಯಾಯುಧಗಳನ್ನೂ ನಮ್ಮ ತೇಜೋರಾಶಿಯ ಸ್ವರೂಪವಾದ ಆ ದೇವಿಯ ವಶಕ್ಕೆ ಕೊಡೋಣ. ॥೩೧॥

ಹೀಗೆ ನಮ್ಮೆಲ್ಲರ ತೇಜಶ್ಶಕ್ತಿಗಳಿಂದ ಕೂಡಿ ಮತ್ತು ನಮ್ಮ ಸಮಸ್ತ ಆಯುಧಗಳನ್ನೂ ಧರಿಸಿರುವ ಆ ಸ್ತ್ರೀಯು ಪಾಪಿಷ್ಠನಾಗಿಯೂ ಮದದಿಂದ ಕೊಬ್ಬಿದವನಾಗಿಯೂ ಇರುವ ಆ ದುಷ್ಟನನ್ನು ಸಂಹಾರಮಾಡುವಳು. ॥೩೨॥

|| ವ್ಯಾಸ ಉವಾಚ ||

ಇತ್ಯುಕ್ತವತಿ ದೇವೇಶೇ ಬ್ರಹ್ಮಣೋ ವದನಾತ್ತತಃ ।
ಸ್ವಯಮೇವೋದ್ಬಭೌ ತೇಜೋರಾಶಿಶ್ಚಾತೀವ ದುಃಸಹಃ ॥೩೩॥

ರಕ್ತವರ್ಣಂ ಶುಭಾಕಾರಂ ಪದ್ಮರಾಗಮಣಿಪ್ರಭಂ ।
ಕಿಂಚಿಚ್ಛೀತಂ ತಥಾ ಚೋಷ್ಣಂ ಮರೀಚಿಜಾಲಮಂಡಿತಂ ॥೩೪॥

ನಿಃಸೃತಂ ಹರಿಣಾ ದೃಷ್ಟಂ ಹರೇಣ ಚ ಮಹಾತ್ಮನಾ ।
ವಿಸ್ಮಿತೌ ತೌ ಮಹಾರಾಜ ಬಭೂವತುರುರುಕ್ರಮೌ ॥೩೫॥

ಶಂಕರಸ್ಯ ಶರೀರಾತ್ತು ನಿಃಸೃತಂ ಮಹದದ್ಭುತಂ ।
ರೌಪ್ಯವರ್ಣಮಭೂತ್ತೀವ್ರಂ ದುರ್ದರ್ಶಂ ದಾರುಣಂ ಮಹತ್ ॥೩೬॥

---

ವ್ಯಾಸನು ಹೇಳಿದನು — ದೇವಾಧಿಪನಾದ ವಿಷ್ಣುವು, ನಾವೆಲ್ಲರೂ ದೇವಿಯನ್ನು ಪ್ರಾರ್ಥಿಸಿಕೊಳ್ಳಬೇಕೆಂದು ಹೇಳಿದ ಕೂಡಲೇ, ವಿಷ್ಣುವಿನ ಸಂಕಲ್ಪಾನುಸಾರವಾಗಿ ಯಾರಿಂದಲೂ ತಡೆಯಲಸಾಧ್ಯವಾದ ತೇಜೋರಾಶಿಯು ಬ್ರಹ್ಮನ ಮುಖದಿಂದ ತನ್ನ ಷ್ಟಕ್ಕೆ ತಾನೇ ಉದ್ಭವಿಸಿ ಪ್ರಕಾಶಿಸಿತು. ||೩೩||

ಈ ತೇಜಸ್ಸು ಕೆಂಪುಬಣ್ಣವುಳ್ಳದ್ದಾಗಿ ಪದ್ಮರಾಗರತ್ನದಂತೆ ಕಾಂತಿಯುಳ್ಳ ದ್ದಾಗಿ ಕಾಣುತ್ತಿತ್ತು. ಇದು ಶುಭಕರವಾದ ಆಕಾರವುಳ್ಳದ್ದಾಗಿ, ಕೊಂಚ ತಣ್ಣಗೂ, ಕೊಂಚ ಬಿಸಿಯಾಗಿಯೂ ಇರುವ ಕಿರಣಗಳ ಸಮೂಹದಿಂದ ಕೂಡಿ ಪ್ರಕಾಶಿಸು ತ್ತಿತ್ತು. ||೩೪||

ಎಲೈ ರಾಜನೇ ಕೇಳು. ಈ ತೇಜಸ್ಸನ್ನು ಮಹಾತ್ಮನಾದ ಶಿವನೂ, ವಿಷ್ಣುವೂ ಸಹ ನೋಡಿದರು. ಪರಾಕ್ರಮಶಾಲಿಗಳಾದ ಇವರಿಬ್ಬರೂ ಇದನ್ನು ನೋಡಿ ಆಶ್ಚ ರ್ಯಪಟ್ಟರು. ||೩೫||

ಆಮೇಲೆ ಈಶ್ವರನ ದೇಹದಿಂದಲೂ ಕ್ರೂರವಾಗಿಯೂ, ನೋಡಲಸಾಧ್ಯ ವಾಗಿಯೂ, ಶುಭ್ರವಾದ ಕಾಂತಿಯುಳ್ಳದ್ದಾಗಿಯೂ. ಬಹಳ ಆಶ್ಚರ್ಯಕರವಾಗಿಯೂ ಇರುವ ತೇಜಸ್ಸು ಬೇಗನೆ ಹೊರಹೊಮ್ಮಿತು. ||೩೬||

ಭಯಂಕರಂ ಚ ದೈತ್ಯಾನಾಂ ದೇವಾನಾಂ ವಿಸ್ಮಯಪ್ರದಂ ।
ಘೋರರೂಪಂ ಗಿರಿಪ್ರಖ್ಯಂ ತಮೋಗುಣಮಿವಾಪರಂ ॥೩೭॥

ತತೋ ವಿಷ್ಣುಶರೀರಾತ್ತು ತೇಜೋರಾಶಿಮಿವಾಪರಂ ।
ನೀಲಂ ಸತ್ತ್ವಗುಣೋಪೇತಂ ಪ್ರಾದುರಾಸ ಮಹಾದ್ಯುತಿ ॥೩೮॥

ತತಶ್ಚೇಂದ್ರಶರೀರಾತ್ತು ಚಿತ್ರರೂಪಂ ದುರಾಸದಂ ।
ಆವಿರಾಸೀತ್ಸುಸಂವೃತ್ತಂ ತೇಜಃಸರ್ವಗುಣಾತ್ಮಕಂ ॥೩೯॥

ಕುಬೇರಯಮವಹ್ನೀನಾಂ ಶರೀರೇಭ್ಯಸ್ಸಮಂತತಃ ।
ನಿಶ್ಚಕ್ರಾಮ ಮಹತ್ತೇಜೋ ವರುಣಸ್ಯ ತಥೈವ ಚ ॥೪೦॥

---

ಶಿವನಿಂದ ಉದ್ಭವಿಸಿದ ಈ ತೇಜಸ್ಸು ದೈತ್ಯರಿಗೆ ಭಯವನ್ನುಂಟುಮಾಡುವುದಾಗಿಯೂ, ದೇವತೆಗಳಿಗೆ ಆಶ್ಚರ್ಯವನ್ನುಂಟುಮಾಡುವುದಾಗಿಯೂ ಇತ್ತು. ಮತ್ತು ಈ ತೇಜಸ್ಸು ಬೆಟ್ಟಕ್ಕೆ ಸಮಾನವಾದ ಆಕಾರವುಳ್ಳದ್ದಾಗಿ ಭಯಂಕರವಾದ ತಮೋಗುಣದ ರೂಪಾಂತರವೆಂಬಂತೆ ಇತ್ತು. ॥೩೭॥

ಅನಂತರದಲ್ಲಿ ವಿಷ್ಣುವಿನ ಶರೀರದಿಂದಲೂ ಸತ್ತ್ವಗುಣದಿಂದ ಕೂಡಿ ಹೆಚ್ಚಾದ ಕಾಂತಿಯುಳ್ಳದ್ದಾಗಿಯೂ, ಕಪ್ಪುಬಣ್ಣವುಳ್ಳದ್ದಾಗಿಯೂ, ಮೊದಲು ಹುಟ್ಟಿದ್ದ ಬ್ರಹ್ಮಶಿವರ ತೇಜಸ್ಸಿಗಿಂತ ವಿಲಕ್ಷಣವಾದ ತೇಜಸ್ಸಿನ ರಾಶಿಯು ಉದ್ಭವಿಸಿತು.॥೩೮॥

ಸರ್ವದೇವಶರೀರೇಭ್ಯೋ ಯಾಽವಿರ್ಭೂತಾ ಮಹಾಪ್ರಭಾ । ತ್ರಿಗುಣಾಸಾ ಮಹಾಲಕ್ಷ್ಮೀಃ ಸಾಕ್ಷಾನ್ಮಹಿಷಮರ್ದಿನೀ ॥ ಎಂದು ವೈಕೃತಿಕರಹಸ್ಯದಲ್ಲೂ ಹೇಳಿದೆ. ಬ್ರಹ್ಮನಿಂದ ರಜೋಗುಣಾಧಿಕವಾದ ತೇಜಸ್ಸೂ, ವಿಷ್ಣುವಿನ ಸತ್ತ್ವಗುಣಾಧಿಕವಾದ ತೇಜಸ್ಸೂ, ರುದ್ರನಿಂದ ತಮೋಗುಣಾಧಿಕವಾದ ತೇಜಸ್ಸೂ ಈ ಮೂರುವಿಧವಾದ ತೇಜಸ್ಸುಗಳೂ ಸೇರಿರುವುದರಿಂದ ಈ ಮಹಿಷಾಸುರಮರ್ದಿನೀ ದೇವಿಯ ಅವತಾರವು ತ್ರಿಗುಣಮಯವಾದುದು. ದೇವತೆಗಳೆಲ್ಲರೂ ರಜಸ್ಸತ್ತ್ವಗುಣಗಳ ಆಧಿಕ್ಯವುಳ್ಳವರೆಂದು ಪುರಾಣಾಂತರದಲ್ಲಿಯೂ ಹೇಳಲ್ಪಟ್ಟಿದೆ.

ಆಮೇಲೆ ಇಂದ್ರನ ಶರೀರದಿಂದ ಅನೇಕ ಬಣ್ಣವುಳ್ಳದ್ದಾಗಿ, ಶತ್ರುಗಳಿಗೆ ಸಹಿಸಲಶಕ್ಯವಾಗಿಯೂ, ಎಲ್ಲ ಗುಣಗಳಿಂದಲೂ ಕೂಡಿರುವ ತೇಜಸ್ಸು ಉತ್ಪನ್ನವಾಯಿತು. ॥೩೯॥

ಇದೇ ಪ್ರಕಾರದಲ್ಲಿ ಕುಬೇರ, ಯಮ, ಅಗ್ನಿ, ವರುಣ ಇವರ ದೇಹಗಳಿಂದಲೂ ದೊಡ್ಡದಾದ ತೇಜಶ್ಶಕ್ತಿಗಳು ಹೊರಹೊಮ್ಮಿದುವು. ॥೪೦॥

**ಅನ್ಯೇಷಾಂ ಚೈವ ದೇವಾನಾಂ ಶರೀರೇಭ್ಯೋಽತಿಭಾಸ್ವರಂ ।**
**ನಿರ್ಗತಂ ತನ್ಮಹಾತೇಜೋರಾಶಿರಾಸೀನ್ಮಹೋಜ್ಜ್ವಲಃ ॥೪೧॥**

**ತಂ ದೃಷ್ಟ್ವಾ ವಿಸ್ಮಿತಾಸ್ಸರ್ವೇ ದೇವಾ ವಿಷ್ಣುಪುರೋಗಮಾಃ ।**
**ತೇಜೋರಾಶಿಂ ಮಹಾದಿವ್ಯಂ ಹಿಮಾಚಲಮಿವಾಪರಂ ॥೪೨॥**

**ಪಶ್ಯತಾಂ ತತ್ರ ದೇವಾನಾಂ ತೇಜಃಪುಂಜಸಮುದ್ಭವಾ ।**
**ಬಭೂವಾತಿವರಾ ನಾರೀ ಸುಂದರೀ ವಿಸ್ಮಯಪ್ರದಾ ॥೪೩॥**

**ತ್ರಿಗುಣಾ ಸಾ ಮಹಾಲಕ್ಷ್ಮೀಃ ಸರ್ವದೇವಶರೀರಜಾ ।**
**ಅಷ್ಟಾದಶಭುಜಾ ರಮ್ಯಾ ತ್ರಿವರ್ಣಾ ವಿಶ್ವಮೋಹಿನೀ ॥೪೪॥**

---

ಹಾಗೆಯೇ ಇತರ ದೇವತೆಗಳ ಶರೀರಗಳಿಂದಲೂ ಬಹಳ ಪ್ರಕಾಶಮಾನವಾದ ತೇಜಸ್ಸುಗಳು ಹೊರಟವು. ಈ ತೇಜಸ್ಸುಗಳೆಲ್ಲವೂ ಒಟ್ಟು ಒಂದು ರಾಶಿಯಾಗಿ ಬಹಳ ಪ್ರಕಾಶಕರವಾಗಿದ್ದಿತು. ॥೪೧॥

ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ, ಬೇರೊಂದು ಹಿಮಾಚಲ ಪರ್ವತದಂತೆ ದೊಡ್ಡದಾಗಿ ಇರುವ ಶ್ರೇಷ್ಠವಾದ ತೇಜಸ್ಸಿನ ಆ ರಾಶಿಯನ್ನು ನೋಡಿ ಆಶ್ಚರ್ಯಪಟ್ಟರು. ಏಕೆಂದರೆ ಇವರೆಲ್ಲರ ಒಟ್ಟು ಪ್ರಾರ್ಥನೆಯ ಫಲವಾಗಿ ಭಕ್ತ ವತ್ಸಲಳಾದ ಆ ಪರಾಶಕ್ತಿಯು ಎಲ್ಲರನ್ನೂ ಕಾಪಾಡಲು ಸಾವಕಾಶಮಾಡದೆ ಅವತರಿಸಿದಳು. ॥೪೨॥

ಅಲ್ಲಿ ಆ ದೇವತೆಗಳೆಲ್ಲರೂ ಆ ತೇಜೋರಾಶಿಯನ್ನು ನೋಡುತ್ತಿರುವಾಗಲೇ ಆ ತೇಜಸ್ಸಿನ ಸಮೂಹದಿಂದ ಉತ್ತಮಳೂ, ಸುಂದರಿಯೂ, ಇತರರಿಗೆ ಆಶ್ಚರ್ಯ ವನ್ನುಂಟುಮಾಡುವವಳೂ ಆಗಿರುವ ಒಬ್ಬ ಸ್ತ್ರೀಯು ಆವಿರ್ಭವಿಸಿದಳು. ಈ ತಾಯಿಯ ವಾತ್ಸಲ್ಯವು ಇತರಾತಿಶಾಯಿಯಾದುದು ಎಂದು "ಭುವನೇಶೀತ್ಯೇವ ವಕ್ತ್ರೇ ದದಾತಿಭುವನತ್ರಯಂ । ಮಾಂಪಾಹೀತಿವಚೋವಕ್ತ್ರೇ ದೇಯಾಭಾವಾದೃಣಾನ್ವಿತಾ" ಎಂಬಲ್ಲಿ ಹೇಳಿದೆ. ದೇ. ಭಾ. ಸ್ಕಂ. ೪. ॥೪೩॥

ಆ ಸ್ತ್ರೀಯೇ ಎಲ್ಲ ದೇವತೆಗಳ ಶರೀರದಿಂದ ಹುಟ್ಟಿದ ಮಹಾಲಕ್ಷ್ಮಿಯು. ಇವಳು ಸತ್ತ್ವರಜಸ್ತಮೋರೂಪವಾದ ಮೂರು ಗುಣಗಳುಳ್ಳವಳು, ಹದಿನೆಂಟು ಭುಜಗಳುಳ್ಳವಳು. ಕಪ್ಪು, ಕೆಂಪು, ಬಿಳುಪು ಎಂಬ ಮೂರು ವಿಧವಾದ ಬಣ್ಣ

ಶ್ವೇತಾನನಾ ಕೃಷ್ಣನೇತ್ರಾ ಸಂರಕ್ತಾಧರಪಲ್ಲವಾ ।
ತಾಮ್ರಪಾಣಿತಲಾ ಕಾಂತಾ ದಿವ್ಯಭೂಷಣಭೂಷಿತಾ ॥೪೫॥

ಅಷ್ಟಾದಶಭುಜಾ ದೇವೀ ಸಹಸ್ರಭುಜಮಂಡಿತಾ ।
ಸಂಭೂತಾಸುರನಾಶಾಯ ತೇಜೋರಾಶಿಸಮುದ್ಭವಾ ॥೪೬॥

॥ ಜನಮೇಜಯ ಉವಾಚ ॥

ಕೃಷ್ಣದೇವ ಮಹಾಭಾಗ ಸರ್ವಜ್ಞ ಮುನಿಸತ್ತಮ ।
ವಿಸ್ತರಂ ಬ್ರೂಹಿ ತಸ್ಯಾಸ್ತ್ವಂ ಶರೀರಸ್ಯ ಸಮುದ್ಭವಂ ॥೪೭॥

ಏಕೀಭೂತಂ ಚ ಸರ್ವೇಷಾಂ ತೇಜಃ ಕಿಂ ವಾ ಪೃಥಕ್‌ಸ್ಥಿತಂ ।
ಅಂಗಾನಿ ಚೈವ ತಸ್ಯಾಸ್ತು ಸರ್ವತೇಜೋಮಯಾನಿ ವಾ ॥೪೮॥

---

ಗಳುಳ್ಳವಳಾಗಿ ಮನೋಹರಳಾಗಿ ಒಪ್ಪುತ್ತ ಪ್ರಪಂಚವನ್ನು ಮೋಹಗೊಳಿಸುವವ ಳಾಗಿ ಇದ್ದಳು. ಈ ಪರಾಶಕ್ತಿಯ ಅವತಾರವು ಕಾತ್ಯಾಯನ ಮಹರ್ಷಿಯು ಮಹಿಷಾಸುರನಿಗೆ ಕೊಟ್ಟ ಶಾಪಕ್ಕೂ ಅನುಗುಣವಾಗಿ ಆಯಿತೆಂದು ಕಾಳಿಕಾಪುರಾಣ ದಲ್ಲೂ ಹೇಳಿದೆ. ॥೪೪॥

ಬಿಳುಪಾದ ಮುಖವೂ, ಕಪ್ಪಾದ ಕಣ್ಣುಗಳೂ, ಕೆಂಪಾದ ಚಿಗುರಿನಂತಿರುವ ತುಟಿಯೂ, ಕೆಂಪಾದ ಅಂಗೈಗಳೂ ಉಳ್ಳ ಈ ಮಹಾಲಕ್ಷ್ಮಿಯು ಉತ್ತಮವಾದ ಆಭರಣಗಳಿಂದ ಅಲಂಕೃತಳಾಗಿ ಮನೋಹರವಾಗಿ ಒಪ್ಪುತ್ತಿದ್ದಳು. ॥೪೫॥

ಈ ರೀತಿಯಲ್ಲಿ ದೇವತೆಗಳ ತೇಜೋರಾಶಿಯಿಂದ ರಾಕ್ಷಸರ ನಾಶಕ್ಕಾಗಿ ಉದ್ಭವಿಸಿದ ಆ ದೇವಿಯು ಕಾಲ-ದೇಶ-ಕಾರ್ಯಗಳಿಗೆ ತಕ್ಕಂತೆ ಕೆಲವು ಕಡೆಗಳಲ್ಲಿ ಹದಿನೆಂಟು ತೋಳುಗಳಿಂದಲೂ, ಮತ್ತೆ ಕೆಲವು ಕಡೆಗಳಲ್ಲಿ ಸಹಸ್ರ ಭುಜಗಳಿಂ ದಲೂ ಕೂಡಿ ಶೋಭಿಸುತ್ತಿದ್ದಳು. ॥೪೬॥

ಜನಮೇಜಯರಾಜನು ಹೇಳಿದನು—ಓ ಪೂಜ್ಯನಾದ ಕೃಷ್ಣದ್ವೈಪಾಯನ ವ್ಯಾಸನೇ ನೀನು ಮುನಿಗಳಲ್ಲಿ ಶ್ರೇಷ್ಠನಾದವನು ಮತ್ತು ಸರ್ವಜ್ಞನು. ನೀನು ನನಗೆ ಆ ದೇವಿಯ ಶರೀರವು ಉಂಟಾದ ವಿವರವನ್ನು ವಿಸ್ತಾರವಾಗಿ ಹೇಳು. ॥೪೭॥

ಓ ವ್ಯಾಸನೇ, ಎಲ್ಲ ದೇವತೆಗಳ ತೇಜಸ್ಸೆಲ್ಲವೂ ಒಟ್ಟಾಗಿ ಸೇರಿ ಆ ದೇವಿಯ ಆಕಾರವಾಯಿತೇ ಅಥವಾ ಬೇರೆಬೇರೆಯಾಗಿಯೇ ಇದ್ದು ಆ ದೇವಿಯ ತೇಜೋ ಮಯಗಳಾದ ಅಂಗಗಳಾಗಿ ಮಾರ್ಪಟ್ಟವೇ ಎಂಬುದನ್ನು ವಿವರವಾಗಿ ತಿಳಿಸು. ॥೪೮॥

**ಭಿನ್ನಭಾಗಾವಿಭಾಗೇನ ಜಾತಾನ್ಯಂಗಾನಿ ಯಾನಿ ತು ।**
**ಮುಖನಾಸಾಕ್ಷಿಭೇದೇನ ಸರ್ವತ್ರೈಕಭವಾನಿ ಚ ॥೪೯॥**

**ಬ್ರೂಹಿ ತದ್ವಿಸ್ತರಂ ವ್ಯಾಸ ಶರೀರಾಂಗಸಮುದ್ಭವಂ ।**
**ಬಭೂವ ಯಸ್ಯ ದೇವಸ್ಯ ತೇಜಸೋಽಙ್ಗಂ ಯದದ್ಭುತಂ ॥೫೦॥**

**ಆಯುಧಾಭರಣಾದೀನಿ ದತ್ತಾನಿ ಯೈರ್ಯಥಾ ಯಥಾ ।**
**ತತ್ಸರ್ವಂ ಶ್ರೋತುಕಾಮೋಽಸ್ಮಿ ತ್ವನ್ಮುಖಾಂಬುಜನಿರ್ಗತಂ ॥೫೧॥**

**ನ ಹಿ ತೃಪ್ಯಾಮ್ಯಹಂ ಬ್ರಹ್ಮನ್ಸುಧಾಮಯರಸಂ ಪಿಬನ್ ।**
**ಚರಿತಂ ಚ ಮಹಾಲಕ್ಷ್ಮ್ಯಾಸ್ತ್ವನ್ಮುಖಾಂಭೋಜನಿಃಸೃತಂ ॥೫೨॥**

**॥ ಸೂತ ಉವಾಚ ॥**

**ಇತಿ ತಸ್ಯ ವಚಃ ಶ್ರುತ್ವಾ ರಾಜ್ಞಃ ಸತ್ಯವತೀಸುತಃ ।**
**ಉವಾಚ ಮಧುರಂ ವಾಕ್ಯಂ ಪ್ರೀಣಯನ್ನಿವ ಭೂಪತಿಂ ॥೫೩॥**

---

ಆ ದೇವಿಯ ಮುಖ, ಮೂಗು, ಕಣ್ಣು ಎಂಬ ಅನೇಕ ಸಣ್ಣದಾದ ಅಂಗ ವಿಭಾಗಗಳಲ್ಲಿ ಯಾವ ಯಾವ ಅಂಗಗಳು ಯಾವ ಯಾವ ದೇವತೆಗಳ ತೇಜಸ್ಸಿನಿಂದ ಉಂಟಾಗಿ ಒಟ್ಟು ಸೇರಿದುವು ಎಂಬುದನ್ನೂ ವಿಶದವಾಗಿ ವಿವರಿಸು. ॥೪೯॥

ಓ ವ್ಯಾಸಮಹರ್ಷಿಯೇ, ಯಾವ ದೇವತೆಯ ತೇಜಸ್ಸಿನಿಂದ ಯಾವ ಅಂಗವು ಆ ಸ್ತ್ರೀಗೆ ಉಂಟಾಯಿತು? ಆಶ್ಚರ್ಯಕರವಾದ ಈ ಅಂಗೋತ್ಪತ್ತಿ ಕ್ರಮವನ್ನು ನನಗೆ ವಿಸ್ತಾರವಾಗಿ ಹೇಳುವವನಾಗು. ॥೫೦॥

ದೇವತೆಗಳಲ್ಲಿ ಯಾರು ಯಾರು ಯಾವ ಯಾವ ಆಯುಧವನ್ನು ಈ ದೇವಿಗೆ ಕೊಟ್ಟರು? ಅದೆಲ್ಲವನ್ನು ಕೇಳಲು ನಾನು ತವಕಪಡುತ್ತಿರುವೆನು. ॥೫೧॥

ಓ ಬ್ರಾಹ್ಮಣಶ್ರೇಷ್ಠನೇ, ನಿನ್ನ ಮುಖದಿಂದ ಹೊರಟುಬರುತ್ತಿರುವ ದೇವಿಯ ಚರಿತ್ರೆಯೆಂಬ ಅಮೃತರಸವನ್ನು ಎಷ್ಟು ಪಾನಮಾಡಿದರೂ ನನಗೆ ತೃಪ್ತಿಯೇ ಉಂಟಾಗುವುದಿಲ್ಲವು. ಆದುದರಿಂದ ನಾನು ಕೇಳಿದ ವಿವರವನ್ನೆಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳುವವನಾಗು. ॥೫೨॥

ಸೂತಪುರಾಣಿಕನು ಹೇಳಿದನು—ಈ ರೀತಿಯಲ್ಲಿ ಪ್ರಶ್ನೆಮಾಡಿದ ಜನಮೇಜಯರಾಜನ ಮಾತನ್ನು ಕೇಳಿ, ಸತ್ಯವತೀಪುತ್ರನಾದ ವ್ಯಾಸಮುನಿಯು ಆ ರಾಜನಿಗೆ

|| ವ್ಯಾಸ ಉವಾಚ ||

**ಶೃಣು ರಾಜನ್ಮಹಾಭಾಗ ವಿಸ್ತರೇಣ ಬ್ರವೀಮಿ ತೇ ।**
**ಯಥಾಮತಿ ಕುರುಶ್ರೇಷ್ಠ ತಸ್ಯಾ ದೇಹಸಮುದ್ಭವಮ್ ॥೫೪॥**

**ನ ಬ್ರಹ್ಮಾ ನ ಹರಿಃ ಸಾಕ್ಷಾನ್ನ ರುದ್ರೋ ನ ಚ ವಾಸವಃ ।**
**ಯಾಥಾತಥ್ಯೇನ ತದ್ರೂಪಂ ವಕ್ತುಮೀಶಃ ಕದಾಚನ ॥೫೫॥**

**ಕಥಂ ಜಾನಾಮ್ಯಹಂ ದೇವ್ಯಾ ಯದ್ರೂಪಂ ಯಾದೃಶಂ ಯತಃ ।**
**ವಾಚಾರಂಭಣಮಾತ್ರಂ ತದುತ್ಪನ್ನೇತಿ ಬ್ರವೀಮಿ ಯತ್ ॥೫೬॥**

**ಸಾ ನಿತ್ಯಾ ಸರ್ವದೈವಾಸ್ತೇ ದೇವಕಾರ್ಯಾರ್ಥಸಿದ್ಧಯೇ ।**
**ನಾನಾರೂಪಾ ತ್ವೇಕರೂಪಾ ಜಾಯತೇ ಕಾರ್ಯಗೌರವಾತ್ ॥೫೭॥**

---

ಸಂತೋಷವುಂಟಾಗುವಂತೆ ಮೃದುಮಧುರವಾದ ಭಾಷೆಯಿಂದ ಹೀಗೆ ವಿವರಿಸುತ್ತಾ ಹೇಳಿದನು. ||೫೩||

ವ್ಯಾಸಋಷಿಯು ಹೇಳಿದನು — ಕುರುವಂಶೋದ್ಭವನಾದ ಪುಣ್ಯವಂತನೇ, ಕೇಳು. ನನಗೆ ತಿಳಿದಮಟ್ಟಿಗೆ ಆ ದೇವಿಯ ದೇಹವು ಉಂಟಾದ ಕ್ರಮವನ್ನು ನಿನಗೆ ವಿಸ್ತಾರವಾಗಿ ಹೇಳುತ್ತೇನೆ. ||೫೪||

ಬ್ರಹ್ಮನೂ, ವಿಷ್ಣುವೂ, ರುದ್ರನೂ, ಇಂದ್ರನೂ ಇಂತಹ ದೊಡ್ಡವರೂ ಸಹ ಆ ದೇವಿಯ ರೂಪವನ್ನು ಯಥಾವತ್ತಾಗಿ ಸಮಗ್ರವಾಗಿ ತಿಳಿದು ವಿವರಿಸಲು ಎಂದಿಗೂ ಸಮರ್ಥರಲ್ಲವು. ಈ ಅಂಶವನ್ನು ಪಂಚೋಪನಿಷತ್ತಿನ ದೇವೀ ಉಪನಿಷತ್ತಿನಲ್ಲೂ ಹೇಳಿದೆ. ಪುಟ ೭೯. ||೫೫||

ಹರಿಹರಬ್ರಹ್ಮಾದಿಗಳಿಗೂ ಸಂಪೂರ್ಣವಾಗಿ ತಿಳಿಯಲಸಾಧ್ಯವಾದ ಆ ದೇವಿಯ ಶರೀರವು ಯಾವ ಆಕಾರವುಳ್ಳದ್ದು, ಯಾವರೀತಿ ಇರತಕ್ಕದ್ದು, ವಾಙ್ಮಾತ್ರದಿಂದ ಹುಟ್ಟಿತು ಎಂದು ಯಾವುದನ್ನು ಹೇಳುವೆವೋ ಅಂತಹ ಆ ಶರೀರದ ವಿವರವನ್ನು ನಾನುತಾನೇ ಎಲ್ಲವನ್ನೂ ಸಮಗ್ರವಾಗಿ ಹೇಗೆ ತಿಳಿಯಬಲ್ಲೆನು ? ||೫೬||

ಆ ದೇವಿಯು ಜನ್ಮಮರಣರಹಿತಳಾಗಿ ಎಲ್ಲ ಕಾಲದಲ್ಲಿಯೂ ಇರತಕ್ಕವಳು. ದೇವತೆಗಳ ಕಾರ್ಯಸಿದ್ಧಿಗಾಗಿ ಆಯಾಯ ಕಾರ್ಯಗಳ ಯೋಗ್ಯತಾನುಸಾರವಾಗಿ ಆ ದೇವಿಯು ಒಂದು ರೂಪವನ್ನೋ, ಅನೇಕರೂಪಗಳನ್ನೋ ಧರಿಸುವಳು. ||೫೭||

ಯಥಾ ನಟೋ ರಂಗಗತೋ ನಾನಾರೂಪೋ ಭವತ್ಯಸೌ ।
ಏಕರೂಪಸ್ವಭಾವೋಽಪಿ ಲೋಕರಂಜನ ಹೇತವೇ ॥೫೮॥

ತಥೈಷಾ ದೇವಕಾರ್ಯಾರ್ಥಮರೂಪಾಽಪಿ ಸ್ವಲೀಲಯಾ ।
ಕರೋತಿ ಬಹುರೂಪಾಣಿ ನಿರ್ಗುಣಾ ಸಗುಣಾಪಿ ಚ ॥೫೯॥

ಕಾರ್ಯಕರ್ಮಾನುಸಾರೇಣ ನಾಮಾನಿ ಪ್ರಭವಂತಿ ಹಿ ।
ಧಾತ್ವರ್ಥಗುಣಯುಕ್ತಾನಿ ಗೌಣಾನಿ ಸುಬಹೂನ್ಯಪಿ ॥೬೦॥

ತದ್ವೈ ಬುದ್ಧ್ಯನುಸಾರೇಣ ಪ್ರಬ್ರವೀಮಿ ನರಾಧಿಪ ।
ಯಥಾ ತೇಜಃ ಸಮುದ್ಭೂತಂ ರೂಪಂ ತಸ್ಯಾ ಮನೋಹರಂ ॥೬೧॥

---

ನಾಟಕಗಳ ಅಭಿನಯದಲ್ಲಿ ನಟನು ಸ್ವಭಾವವಾಗಿ ಒಂದೇ ಆಕಾರ ಮತ್ತು ಸ್ವಭಾವವುಳ್ಳವನಾಗಿದ್ದರೂ, ಸನ್ನಿವೇಶಕ್ಕೆ ತಕ್ಕಂತೆ ಜನಗಳನ್ನು ಆನಂದಗೊಳಿಸುವುದಕ್ಕಾಗಿ ಅನೇಕವಿಧವಾದ ರೂಪಗಳನ್ನು ಹೇಗೆ ಧರಿಸುವನೋ, ಹಾಗೆಯೇ ನಿರ್ಗುಣಳಾದ ಈ ದೇವಿಯೂ ತಾನು ಆಕಾರರಹಿತಳಾಗಿದ್ದಾಗ್ಯೂ 'ಲೋಕವತ್ತು ಲೀಲಾಕೈವಲ್ಯಂ' ಎಂದು ವ್ಯಾಸಸೂತ್ರದಲ್ಲಿ ಹೇಳಿರುವಂತೆ ತನ್ನ ಲೀಲೆಯಿಂದ ದೇವತೆಗಳ ಕಾರ್ಯಕ್ಕೋಸ್ಕರ ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ಅನೇಕವಿಧವಾದ ಆಕಾರಗಳನ್ನು ಹೊಂದುವಳು. ॥೫೮-೫೯॥

ಲೋಕದಲ್ಲಿ ಮನುಷ್ಯನಾದವನಿಗೆ ಅವನ ಕರ್ಮಾನುಸಾರವಾಗಿ ಎಂದರೆ ಅವನು ಮಾಡುವ ಕೆಲಸಕ್ಕೆ ಅನುರೂಪವಾಗಿ ಜೋಯಿಸ, ವೈದ್ಯ ಮೊದಲಾದ ಬೇರೆ ಬೇರೆ ಹೆಸರುಗಳಿರುವಂತೆ, ಈ ದೇವಿಯೂ ಸಹ ದೇವತೆಗಳ ಹಿತಕ್ಕಾಗಿ ನಡೆಯಿಸುವ ಕಾರ್ಯಗಳಿಗೆ ಅನುರೂಪವಾಗಿ ಅನ್ವರ್ಥವಾದ ಹೆಸರುಗಳು ಎಂದರೆ ಭುವನೇಶೀ, ಕಾಲೀ, ದುರ್ಗಾ ಮೊದಲಾದ ಅನೇಕ ಹೆಸರುಗಳನ್ನು ಆಯಾ ಕಾಲಕ್ಕೆ ತಕ್ಕಂತೆ ಧರಿಸಿ ಪ್ರಸಿದ್ಧಳಾಗಿರುತ್ತಾಳೆ. ಹೀಗೆ ದೇವಿಯ ನಾಮಗಳೂ ರೂಪಗಳೂ ಅನಂತವಾಗಿವೆ. ಅಸಂಖ್ಯೇಯಾನಿ ನಾಮಾನಿ ತಸ್ಯಾಬ್ರಹ್ಮಾದಿಭಿಸ್ಸುರೈಃ । ಗುಣಕರ್ಮವಿಧಾನಾದ್ಯೈಃ ಕಲ್ಪಿತಾನಿ ಚ ಕಿಂಬ್ರುವೇ ॥ ಎಂದು ಹೇಳಿದೆ. ॥೬೦॥

ಎಲೈ ರಾಜನೇ, ಆ ದೇವಿಯ ಚರಿತ್ರೆಯೆಲ್ಲವನ್ನೂ ನನ್ನ ಬುದ್ಧಿಶಕ್ತಿಗೆ ಅನುಸಾರವಾಗಿ ತಿಳಿದು, ಆ ದೇವಿಯ ಮನೋಹರವಾದ ರೂಪವು ತೇಜಸ್ಸಿನಿಂದ ಹೇಗೆ ಆಯಿತೆಂಬುದನ್ನು ಹೇಳುವೆನು. ॥೬೧॥

ಶಂಕರಸ್ಯ ಚ ಯತ್ತೇಜಸ್ತೇನ ತನ್ಮುಖಪಂಕಜಂ ।
ಶ್ವೇತವರ್ಣಂ ಶುಭಾಕಾರಮಜಾಯತ ಮಹತ್ತರಂ ॥೬೨॥

ಕೇಶಾಸ್ತಸ್ಯಾಸ್ತಥಾ ಸ್ನಿಗ್ಧಾ ಯಾಮ್ಯೇನ ತೇಜಸಾಽಭವನ್ ।
ವಕ್ರಾಗ್ರಾಶ್ಚಾತಿದೀರ್ಘಾ ವೈ ಮೇಘವರ್ಣಾ ಮನೋಹರಾಃ ॥೬೩॥

ನಯನತ್ರಿತಯಂ ತಸ್ಯಾ ಜಜ್ಞೇ ಪಾವಕತೇಜಸಾ ।
ಕೃಷ್ಣಂ ರಕ್ತಂ ತಥಾ ಶ್ವೇತಂ ವರ್ಣತ್ರಯವಿಭೂಷಿತಂ ॥೬೪॥

ವಕ್ರೇ ಸ್ನಿಗ್ಧೇ ಕೃಷ್ಣವರ್ಣೇ ಸಂಧ್ಯಯೋಸ್ತೇಜಸಾ ಭ್ರುವೌ ।
ಜಾತೇ ದೇವ್ಯಾಃ ಸುತೇಜಸ್ಕೇ ಕಾಮಸ್ಯ ಧನುಷೀವ ತೇ ॥೬೫॥

ವಾಯೋಶ್ಚ ತೇಜಸಾ ಶಸ್ತೌ ಶ್ರವಣೌ ಸಂಬಭೂವತುಃ ।
ನಾತಿದೀರ್ಘೌ ನಾತಿಹ್ರಸ್ವೌ ದೋಲಾವಿವ ಮನೋಭುವಃ ॥೬೬॥

---

ಈಶ್ವರನ ಮುಖದಿಂದ ಹೊರಟ ಮಂಗಳಕರವಾದ ತೇಜಸ್ಸಿನಿಂದ ದೊಡ್ಡದಾಗಿ ಬಿಳಿಯ ಬಣ್ಣವುಳ್ಳ ಕಮಲದಂತಿರುವ ಆ ದೇವಿಯ ಮುಖವು ಉಂಟಾಯಿತು. ॥೬೨॥

ಯಮನ ತೇಜಸ್ಸಿನಿಂದ ಆ ದೇವಿಯ ತಲೆಯ ಕೂದಲುಗಳಾದುವು. ಅವು ನುಣುಪಾಗಿಯೂ, ವಕ್ರವಾದ ತುದಿಗಳುಳ್ಳವಾಗಿಯೂ, ಉದ್ದವಾಗಿಯೂ, ಮೇಘದಂತಿರುವ ಬಣ್ಣವುಳ್ಳವುಗಳಾಗಿ ಮನೋಹರವಾಗಿ ಇದ್ದವು. ॥೬೩॥

ಅಗ್ನಿಯ ತೇಜಸ್ಸಿನಿಂದ, ಕಪ್ಪು, ಕೆಂಪು, ಬಿಳಿಯ ಬಣ್ಣವೆಂಬ ಮೂರು ವಿಧವಾದ ಬಣ್ಣಗಳಿಂದ ಒಪ್ಪುವ ಮೂರು ಕಣ್ಣುಗಳೂ ಆ ದೇವಿಗೆ ಉಂಟಾದುವು. ॥೬೪॥

ವಕ್ರಗಳಾಗಿಯೂ, ಮೃದುವಾಗಿಯೂ, ಕಾಡಿಗೆಯಿಂದ ಕಪ್ಪುಬಣ್ಣವುಳ್ಳದಾಗಿ ಕಾಂತಿಯಿಂದ ಮನ್ಮಥನ ಬಿಲ್ಲುಗಳೋ ಎಂಬಂತೆ ಶೋಭಿಸುತ್ತಿರುವ ಆ ದೇವಿಯ ಹುಬ್ಬುಗಳು ಸಂಧ್ಯಾದೇವತೆಗಳ ತೇಜಸ್ಸಿನಿಂದ ಹುಟ್ಟಿದುವು. ॥೬೫॥

ಹೆಚ್ಚಾಗಿ ಉದ್ದವಿಲ್ಲದೆಯೂ, ಹೆಚ್ಚಾಗಿ ಹ್ರಸ್ವವಿಲ್ಲದೆಯೂ, ಆಕಾರದಲ್ಲಿ ಮನ್ಮಥನ ತೊಟ್ಟಿಲೋ ಎಂಬಂತೆ ತೋರುತ್ತಿರುವ ಆ ದೇವಿಯ ಎರಡು ಕಿವಿಗಳು ವಾಯುವಿನ ತೇಜಸ್ಸಿನಿಂದ ಉಂಟಾದುವು. ॥೬೬॥

ತಿಲಪುಷ್ಪಸಮಾಕಾರಾ ನಾಸಿಕಾ ಸುಮನೋಹರಾ ।
ಸಂಜಾತಾ ಸ್ನಿಗ್ಧವರ್ಣಾ ವೈ ಧನದಸ್ಯ ಚ ತೇಜಸಾ ॥೬೭॥

ದಂತಾಃ ಶಿಖರಿಣಃ ಶ್ಲಕ್ಷ್ಣಾಃ ಕುಂದಾಗ್ರಸದೃಶಾಃ ಸಮಾಃ ।
ಸಂಜಾತಾಃ ಸುಪ್ರಭಾ ರಾಜನ್ಪ್ರಾಜಾಪತ್ಯೇನ ತೇಜಸಾ ॥೬೮॥

ಅಧರಶ್ಚಾತಿರಕ್ತೋಽಸ್ಯಾಃ ಸಂಜಾತೋಽರುಣತೇಜಸಾ ।
ಉತ್ತರೋಷ್ಠಸ್ತಥಾ ರಮ್ಯಃ ಕಾರ್ತಿಕೇಯಸ್ಯ ತೇಜಸಾ ॥೬೯॥

ಅಷ್ಟಾದಶಭುಜಾಕಾರಾ ಬಾಹವೋ ವಿಷ್ಣುತೇಜಸಾ ।
ವಸೂನಾಂ ತೇಜಸಾಂಗುಲ್ಯೋ ರಕ್ತವರ್ಣಾಸ್ತಥಾಽಭವನ್ ॥೭೦॥

ಸೌಮ್ಯೇನ ತೇಜಸಾ ಜಾತಂ ಸ್ತನಯೋರ್ಯುಗ್ಮಮುತ್ತಮಂ ।
ಐಂದ್ರೇಣಾಸ್ಯಾಸ್ತಥಾ ಮಧ್ಯಂ ಜಾತಂ ತ್ರಿವಲಿಸಂಯುತಂ ॥೭೧॥

---

ಎಳ್ಳಿನ ಹೂವಿಗೆ ಸಮನಾದ ಆಕಾರವುಳ್ಳ, ಸುಂದರವಾದ ಬಣ್ಣದಿಂದ ಕೂಡಿ ಬಹಳ ಮನೋಹರವಾಗಿ ಒಪ್ಪುತ್ತಿರುವ ಆ ದೇವಿಯ ಮೂಗು ಕುಬೇರನ ತೇಜಸ್ಸಿನಿಂದ ಉಂಟಾಯಿತು. ||೬೭||

ಎಲೈ ಜನಮೇಜಯರಾಜನೇ, ಮಲ್ಲಿಗೆ ಮೊಗ್ಗಿನಂತೆ ಬಿಳುಪಾಗಿ ಒಂದೇ ಸಮವಾದ, ನುಣುಪಾಗಿಯೂ ಮೊನೆಯಾಗಿಯೂ ಚನ್ನಾಗಿ ಕಾಂತಿಯುಳ್ಳದ್ದಾಗಿಯೂ ಇರುವ ಆ ದೇವಿಯ ಹಲ್ಲುಗಳು ದಕ್ಷಬ್ರಹ್ಮನ ತೇಜಸ್ಸಿನಿಂದ ಆದುವು. ||೬೮||

ಈ ದೇವಿಯ ಬಹಳ ಕೆಂಪಾಗಿರುವ ಕೆಳಗಿನ ತುಟಿಯು ಅರುಣನ ತೇಜಸ್ಸಿನಿಂದ ಆಯಿತು. ಮನೋಹರವಾದ ಮೇಲು ತುಟಿಯು ಷಣ್ಮುಖನ ತೇಜಸ್ಸಿನಿಂದ ರೂಪಗೊಂಡಿತು. ||೬೯||

ವಿಷ್ಣುವಿನ ತೇಜಸ್ಸಿನಿಂದ ಹದಿನೆಂಟು ಭುಜಗಳೂ, ವಸುಗಳ ತೇಜಸ್ಸಿನಿಂದ ಕೆಂಪಗಿರುವ ಬೆರಳುಗಳೂ ಉಂಟಾದುವು. ||೭೦||

ಶ್ರೇಷ್ಠವಾದ ಎರಡು ಸ್ತನಗಳು ಚಂದ್ರನ ತೇಜಸ್ಸಿನಿಂದ ಆದುವು. ಈ ದೇವಿಯ ತ್ರಿವಳಿ (ಎಂದರೆ ನಡುವಿನಲ್ಲಿರುವ ಸುಕ್ಕುಗಳು) ಗಳಿಂದ ಕೂಡಿದ ಮಧ್ಯ ಪ್ರದೇಶವು ಇಂದ್ರನ ತೇಜಸ್ಸಿನಿಂದ ಆಯಿತು. ||೭೧||

ಜಂಘೋರೂ ವರುಣಸ್ಯಾಥ ತೇಜಸಾ ಸಂಬಭೂವತುಃ ।
ನಿತಂಬಃ ಸ ತು ಸಂಜಾತೋ ವಿಪುಲಸ್ತೇಜಸಾ ಭುವಃ ॥೭೨॥

ಏವಂ ನಾರೀ ಶುಭಾಕಾರಾ ಸುರೂಪಾ ಸುಸ್ವರಾ ಭೃಶಂ ।
ಸಮುತ್ಪನ್ನಾ ತಥಾ ರಾಜಂಸ್ತೇಜೋರಾಶಿಸಮುದ್ಭವಾ ॥೭೩॥

ತಾಂ ದೃಷ್ಟ್ವಾ ಸುಷ್ಠು ಸರ್ವಾಂಗೀಂ ಸುದತೀಂ ಚಾರುಲೋಚನಾಂ ।
ಮುದಂ ಪ್ರಾಪುಃ ಸುರಾಃ ಸರ್ವೇ ಮಹಿಷೇಣ ಪ್ರಪೀಡಿತಾಃ ॥೭೪॥

ವಿಷ್ಣುಸ್ತ್ವಾಹ ಸುರಾನ್ಸರ್ವಾನ್ಭೂಷಣಾನ್ಯಾಯುಧಾನಿ ಚ ।
ಪ್ರಯಚ್ಛಂತು ಶುಭಾನ್ಯಸ್ಯೈ ದೇವಾಃ ಸರ್ವಾಣಿ ಸಾಂಪ್ರತಂ ॥೭೫॥

---

ಮೊಣಕಾಲುಗಳೂ, ತೊಡೆಗಳೂ ಸಹ ವರುಣನ ತೇಜಸ್ಸಿನಿಂದ ಆದುವು. ವಿಸ್ತಾರವಾದ ಕಟಿಪಶ್ಚಾದ್ಭಾಗವು ಭೂದೇವತೆಯ ತೇಜಸ್ಸಿನಿಂದ ಆಯಿತು. ॥೭೨॥

ಎಲೈ ಜನಮೇಜಯರಾಜನೇ, ಈ ರೀತಿಯಲ್ಲಿ ದೇವತೆಗಳ ತೇಜೋರಾಶಿಯಿಂದ ಮಂಗಳಕರವಾದ ಆಕೃತಿಯುಳ್ಳವಳಾಗಿಯೂ, ಚನ್ನಾದ ಕಂಠಸ್ವರವುಳ್ಳವಳಾಗಿಯೂ, ಬಹಳ ರೂಪವತಿಯಾಗಿಯೂ, ಸರ್ವತೇಜಶ್ಶಕ್ತಿರೂಪಳಾದುದರಿಂದ ಪರಾಶಕ್ತಿಸ್ವರೂಪಳಾಗಿ ಇರುವ ದೇವಿಯು ಆವಿರ್ಭವಿಸಿದಳು. ॥೭೩॥

ಚನ್ನಾಗಿ ಪುಷ್ಟವಾಗಿರುವ ಅವಯವಗಳಿಂದ ಕೂಡಿಯೂ, ಒಳ್ಳೆಯ ದಂತಪಂಙ್ತಿಯುಳ್ಳವಳಾಗಿಯೂ, ಸುಂದರವಾದ ಕಣ್ಣುಗಳುಳ್ಳವಳಾಗಿಯೂ ಇರುವ ಆ ದೇವಿಯನ್ನು ನೋಡಿ, ಮಹಿಷಾಸುರನಿಂದ ಪೀಡಿಸಲ್ಪಟ್ಟ ದೇವತೆಗಳೆಲ್ಲರೂ ಸಂತೋಷವನ್ನು ಹೊಂದಿದರು. ॥೭೪॥

ವಿಷ್ಣುವು ದೇವತೆಗಳನ್ನು ಕುರಿತು—ಎಲೈ ದೇವತೆಗಳಿರಾ, ನೀವುಗಳೆಲ್ಲರೂ ಈಗ ಈ ದೇವಿಗೆ ನಿಮ್ಮ ನಿಮ್ಮ ಮಂಗಳಕರವಾದ ಆಭರಣಗಳನ್ನೂ ಆಯುಧಗಳೆಲ್ಲವನ್ನೂ ಸಮರ್ಪಿಸಿರಿ ಎಂದು ಹೇಳಿದನು. ॥೭೫॥

**ಸ್ವಾಯುಧೇಭ್ಯಃ ಸಮುತ್ಪಾದ್ಯ ತೇಜೋಯುಕ್ತಾನಿ ಸತ್ವರಾಃ ।**
**ಸಮರ್ಪಯಂತು ಸರ್ವೇಽದ್ಯ ದೇವ್ಯೈ ನಾನಾಯುಧಾನಿ ವೈ ॥೭೬॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ ಅಷ್ಟಮೋಽಧ್ಯಾಯಃ.**

---

ಮತ್ತು ಆ ವಿಷ್ಣುವು— ಈಗ ನೀವೆಲ್ಲರೂ ನಿಮ್ಮ ನಿಮ್ಮ ಆಯುಧಗಳಿಂದ ತೇಜಸ್ಸುಳ್ಳ ಬೇರೆ ಆಯುಧಗಳನ್ನು ನಿರ್ಮಿಸಿ ಬೇಗನೆ ಈ ದೇವಿಗೆ ಒಪ್ಪಿಸಿರೆಂದು, ಆ ದೇವತೆಗಳಿಗೆ ಹೇಳಿದನು. ||೭೬||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ ಎಂಟನೆಯ ಅಧ್ಯಾಯವುಮುಗಿದುದು.

|| ಶ್ರೀರಸ್ತು ||



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ನವಮೋಽಧ್ಯಾಯಃ ||

### ಒಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ದೇವಾ ವಿಷ್ಣುವಚಃ ಶ್ರುತ್ವಾ ಸರ್ವೇ ಪ್ರಮುದಿತಾಸ್ತದಾ ।**
**ದದುಶ್ಚ ಭೂಷಣಾನ್ಯಾಶು ವಸ್ತ್ರಾಣಿ ಸ್ವಾಯುಧಾನಿ ಚ ||೧||**

**ಕ್ಷೀರೋದಶ್ಚಾಂಬರೇ ದಿವ್ಯೇ ರಕ್ತೇ ಸೂಕ್ಷ್ಮೇ ತಥಾಽಜರೇ ।**
**ನಿರ್ಮಲಂ ಚ ತಥಾ ಹಾರಂ ಪ್ರೀತಸ್ತಸ್ಯೈ ಸುಮಂಡಿತಂ ||೨||**

**ದದೌ ಚೂಡಾಮಣಿಂ ದಿವ್ಯಂ ಸೂರ್ಯಕೋಟಿಸಮಪ್ರಭಂ ।**
**ಕುಂಡಲೇ ಚ ತಥಾ ಶುಭ್ರೇ ಕಟಕಾನಿ ಭುಜೇಷು ವೈ ||೩||**

---

ವ್ಯಾಸಮಹರ್ಷಿಯು ಹೇಳಿದನು—ಬಳಿಕ ದೇವತೆಗಳೆಲ್ಲರೂ ವಿಷ್ಣುವಿನ ಮಾತನ್ನು ಕೇಳಿ ಸಂತೋಷವುಳ್ಳವರಾಗಿ ಆ ದೇವಿಗೆ ತಮ್ಮ ತಮ್ಮ ಆಭರಣಗಳನ್ನೂ ವಸ್ತ್ರಗಳನ್ನೂ, ಆಯುಧಗಳನ್ನೂ ಸಹ ಒಪ್ಪಿಸಿದರು. ಹೇಗೆಂದರೆ, ||೧||

ಕ್ಷೀರಸಮುದ್ರಾಭಿಮಾನಿಯಾದ ದೇವತೆಯು ಆ ದೇವಿಗೆ ಕೆಂಪುಬಣ್ಣದಿಂದ ಕೂಡಿ ಸೂಕ್ಷ್ಮವಾಗಿಯೂ, ಯಾವಾಗಲೂ ಮಾಸದೆಯೂ ಜೀರ್ಣವಾಗದೆಯೂ ಇರುವ ಶ್ರೇಷ್ಠವಾದ ಎರಡು ವಸ್ತ್ರಗಳನ್ನೂ, ನಿರ್ಮಲವಾದ ಮತ್ತು ಒಳ್ಳೆಯ ಅಲಂಕಾರವಾಗಿರುವ ಒಂದು ಹಾರವನ್ನೂ ಸಹ ಸಂತೋಷದಿಂದ ಸಮರ್ಪಿಸಿದನು. ||೨||

ಆ ಬಳಿಕ ವಿಶ್ವಕರ್ಮನು ನಿರ್ಮಲವೂ ಸಂತುಷ್ಟವೂ ಆದ ಇಂದ್ರಿಯಗಳೂ ಮನಸ್ಸೂ ಉಳ್ಳವನಾಗಿ ಆ ದೇವಿಗೆ ಕೋಟಿಸೂರ್ಯರ ಕಾಂತಿಯುಳ್ಳ, ಶಿರಸ್ಸಿನಲ್ಲಿ

ಕೇಯೂರಾನ್ಕಂಕಣಾನ್ದಿವ್ಯಾನ್ನಾನಾರತ್ನವಿರಾಜಿತಾನ್ ।
ದದೌ ತಸ್ಯೈ ವಿಶ್ವಕರ್ಮಾ ಪ್ರಸನ್ನೇಂದ್ರಿಯಮಾನಸಃ ॥೪॥

ನೂಪುರೌ ಸುಸ್ವರೌ ಕಾಂತೌ ನಿರ್ಮಲೌ ರತ್ನಭೂಷಿತೌ ।
ದದೌ ಸೂರ್ಯಪ್ರತೀಕಾಶೌ ತ್ವಷ್ಟಾ ತಸ್ಯೈ ಸುಪಾದಯೋಃ ॥೫॥

ತಥಾ ಗ್ರೈವೇಯಕಂ ರಮ್ಯಂ ದದೌ ತಸ್ಯೈ ಮಹಾರ್ಣವಃ ।
ಅಂಗುಲೀಯಕರತ್ನಾನಿ ತೇಜೋವಂತಿ ಚ ಸರ್ವಶಃ ॥೬॥

ಅಮ್ಲಾನಪಂಕಜಾಂ ಮಾಲಾಂ ಗಂಧಾಢ್ಯಾಂ ಭ್ರಮರಾನುಗಾಂ ।
ತಥೈವ ವೈಜಯಂತೀಂ ಚ ವರುಣಃ ಸಂಪ್ರಯಚ್ಛತ ॥೭॥

---

ಧರಿಸುವ, ದಿವ್ಯರತ್ನವನ್ನೂ ಶುಭ್ರವಾದ ಎರಡು ಕುಂಡಲಗಳನ್ನೂ, ತೋಳುಬಂದಿಗಳನ್ನೂ, ಅನೇಕವಿಧವಾದ ರತ್ನಗಳನ್ನು ಕೆತ್ತಿರುವ ಕಡಗಗಳನ್ನೂ ಕೊಟ್ಟನು. ॥೩-೪॥

ಹಾಗೆಯೇ ಆ ವಿಶ್ವಕರ್ಮನೆಂದು ಪ್ರಸಿದ್ಧನಾದ ತ್ವಷ್ಟೃಬ್ರಹ್ಮನು, ಆ ದೇವಿಗಾಗಿ, ಚನ್ನಾಗಿ ಧ್ವನಿಯನ್ನು ಮಾಡುತ್ತಿರುವ, ಕೊಳೆಯಿಲ್ಲದೆ ನಿರ್ಮಲವಾಗಿಯೂ ಪ್ರಕಾಶಮಾನವಾಗಿಯೂ ರತ್ನಗಳ ಕಾಂತಿಯಿಂದ ಬೆಳಗುತ್ತ ಸೂರ್ಯನಂತೆ ಹೊಳೆಯುತ್ತಿರುವ ಎರಡು ನೂಪುರಗಳೆಂಬ ಕಾಲಿನಲ್ಲಿ ಧರಿಸುವ ಆಭರಣಗಳನ್ನೂ ಒಪ್ಪಿಸಿದನು. ॥೫॥

ಮತ್ತು ಸಮುದ್ರದಂತೆ ಗಂಭೀರಸ್ವಭಾವವುಳ್ಳ ಆ ವಿಶ್ವಕರ್ಮನು ಆ ದೇವಿಗೆ ಬಹಳ ಪ್ರಕಾಶಮಾನವಾದ ನಾನಾಬಗೆಯ ರತ್ನಗಳಿಂದ ಖಚಿತವಾದ, ಉಂಗುರಗಳನ್ನೂ, ದಿವ್ಯವಾದ ಹಾರವನ್ನೂ ಸಹ ಸಮರ್ಪಿಸಿದನು. ॥೬॥

ಯಾವಾಗಲೂ ಬಾಡದ ಕಮಲದ ಹೂವುಗಳಿಂದ ಕೂಡಿ ಸುವಾಸನೆಯುಳ್ಳುದಾಗಿಯೂ, ಆ ಕಾರಣದಿಂದಲೇ ದುಂಬಿಗಳು ಅನುಸರಿಸುತ್ತಲೂ ಇರುವ ಉತ್ತಮವಾದ ವೈಜಯಂತೀ ಎಂಬ ಹೂವಿನ ಹಾರವನ್ನು ವರುಣನು ಆ ದೇವಿಗೆ ಅರ್ಪಿಸಿದನು. ॥೭॥

ಹಿಮವಾನಥ ಸಂತುಷ್ಟೋ ರತ್ನಾನಿ ವಿವಿಧಾನಿ ಚ ।
ದದೌ ಚ ವಾಹನಂ ಸಿಂಹಂ ಕನಕಾಭಂ ಮನೋಹರಂ ॥೮॥

ಭೂಷಣೈರ್ಭೂಷಿತಾ ದಿವ್ಯೈಃ ಸಾ ರರಾಜ ವರಾ ಶುಭಾ ।
ಸಿಂಹಾರೂಢಾ ವರಾರೋಹಾ ಸರ್ವಲಕ್ಷಣಸಂಯುತಾ ॥೯॥

ವಿಷ್ಣುಶ್ಚಕ್ರಾತ್ಸಮುತ್ಪಾದ್ಯ ದದಾವಸ್ಯೈ ರಥಾಂಗಕಂ ।
ಸಹಸ್ರಾರಂ ಸುದೀಪ್ತಂ ಚ ದೇವಾರಿಶಿರಸಾಂ ಹರಂ ॥೧೦॥

ಸ್ವತ್ರಿಶೂಲಾತ್ಸಮುತ್ಪಾದ್ಯ ಶಂಕರಃ ಶೂಲಮುತ್ತಮಂ ।
ದದೌ ದೇವ್ಯೈ ಸುರಾರೀಣಾಂ ಕೃಂತನಂ ಭಯನಾಶನಂ ॥೧೧॥

---

ಆ ಬಳಿಕ ಹಿಮವಂತನು ಬಹಳ ಸಂತೋಷದಿಂದ ಅನೇಕ ವಿಧವಾದ ರತ್ನಗಳನ್ನೂ ಚಿನ್ನದ ಕಾಂತಿಯಂತೆ ಇರುವ ಕಾಂತಿಯಿಂದ ಬೆಳಗುತ್ತಿರುವ ಸಿಂಹವನ್ನು ವಾಹನಕ್ಕಾಗಿ ಆ ದೇವಿಗೆ ಸಮರ್ಪಿಸಿದನು. ಪರಾಶಕ್ತಿಸ್ವರೂಪಳಾದ ದೇವಿಯು ಸೃಷ್ಟಿಯ ಕ್ರಮದಲ್ಲಿ ದೇವತೆಗಳಿಗೆ ಅವರವರ ಅಧಿಕಾರಗಳ ಕಾರ್ಯಗಳನ್ನು ನೆರವೇರಿಸಲು ತನ್ನ ಶಕ್ತ್ಯಂಶಗಳನ್ನು ಅನುಗ್ರಹಿಸಿದ್ದಳು. ಈಗ ಆ ದೇವತೆಗಳೇ ಸ್ವಾತಂತ್ರ್ಯದಿಂದ ನೆರವೇರಿಸಲು ಅಸಾಧ್ಯವಾದ ಮಹಾಕಾರ್ಯವನ್ನು ನೆರವೇರಿಸಲು ಅನುಕೂಲವಾಗುವಂತೆ ಆಶಕ್ತ್ಯಂಶಗಳೆಲ್ಲವನ್ನೂ ಒಟ್ಟುಗೂಡಿಸಲಾಯಿತೆಂದು ಭಾವವು. ॥೮॥

ಸಮಸ್ತ ಲಕ್ಷಣಗಳಿಂದಲೂ ಕೂಡಿದ ಮಂಗಳಕರಳಾದ ಆ ದೇವಿಯು ಸಿಂಹಾರೂಢಳಾಗಿ ಉತ್ತಮವಾದ ಆಭರಣಗಳಿಂದ ಅಲಂಕೃತಳಾಗಿ ಪ್ರಕಾಶಿಸುತ್ತಿದ್ದಳು.॥೯॥

ವಿಷ್ಣುವು, ಸಾವಿರ ಅಲಗುಗಳಿಂದ ಕೂಡಿ ಹೊಳೆಯುತ್ತಿರುವ ಮತ್ತು ದೇವತೆಗಳ ಶತ್ರುಗಳ ತಲೆಯನ್ನು ಕತ್ತರಿಸಬಲ್ಲ ಚಕ್ರಾಯುಧವನ್ನು ತನ್ನ ಚಕ್ರಾಯುಧದ ಸಾರದಿಂದ ಬೇರೆಯಾಗಿ ಹೊರಹೊಮ್ಮಿಸಿ ಈ ದೇವಿಗಾಗಿ ಸಮರ್ಪಿಸಿದನು. ॥೧೦॥

ಶಂಕರನೂ, ದೇವಶತ್ರುಗಳನ್ನು ನಾಶಮಾಡುವ ಮತ್ತು ಆ ದೇವತೆಗಳಿಗೆ ರಾಕ್ಷಸರಿಂದ ಉಂಟಾಗಿದ್ದ ಭಯವನ್ನು ಹೋಗಲಾಡಿಸುವ ತ್ರಿಶೂಲವೆಂಬ ದಿವ್ಯಾಯುಧವನ್ನು ತನ್ನ ತ್ರಿಶೂಲದ ಸಾರದಿಂದ ಹೊರದೆಗೆದು ಆ ದೇವಿಗೆ ಅರ್ಪಿಸಿದನು. ॥೧೧॥

ವರುಣಶ್ಚ ಪ್ರಸನ್ನಾತ್ಮಾ ದದೌ ಶಂಖಂ ಸಮುಜ್ಜ್ವಲಂ ।
ಘೋಷವಂತಂ ಸ್ವಶಂಖಾತ್ತು ಸಮುತ್ಪಾದ್ಯ ಸುಮಂಗಲಂ ॥೧೨॥

ಹುತಾಶನಸ್ತಥಾ ಶಕ್ತಿಂ ಶತಘ್ನೀಂ ಸುಮನೋಜವಾಂ ।
ಪ್ರಾಯಚ್ಛತ್ತು ಪ್ರಸನ್ನಾತ್ಮಾ ತಸ್ಯೈ ದೈತ್ಯವಿನಾಶನೀಂ ॥೧೩॥

ಇಷುಧಿಂ ಬಾಣಪೂರ್ಣಂ ಚ ಚಾಪಂ ಚಾದ್ಭುತದರ್ಶನಂ ।
ಮಾರುತೋ ದತ್ತವಾಂಸ್ತಸ್ಯೈ ದುರಾಕರ್ಷಂ ಖರಸ್ವರಂ ॥೧೪॥

ಸ್ವವಜ್ರಾದ್ವಜ್ರಮುತ್ಪಾದ್ಯ ದದಾವಿಂದ್ರೋಽತಿದಾರುಣಂ ।
ಘಂಟಾಮೈರಾವತಾತ್ತೂರ್ಣಂ ಸುಶಬ್ದಾಂ ಚಾತಿಸುಂದರಾಂ ॥೧೫॥

---

ವರುಣನು ಸಂತೋಷವುಳ್ಳ ಮನಸ್ಸಿನಿಂದ ಆ ದೇವಿಗೆ, ಪ್ರಕಾಶಮಾನವಾಗಿಯೂ ಮಂಗಳವಾದ ಧ್ವನಿಯನ್ನು ಉಂಟುಮಾಡುವುದಾಗಿಯೂ ಇರುವ ಒಳ್ಳೆಯ ಶಂಖವನ್ನು, ತನ್ನ ಶಂಖದಿಂದ ನಿರ್ಮಿಸಿಕೊಟ್ಟನು. ॥೧೨॥

ಅಗ್ನಿಯು ಸಂತೋಷಗೊಂಡು ರಾಕ್ಷಸರನ್ನು ನಾಶಮಾಡಬಲ್ಲ, ಮನೋವೇಗದಂತೆ ಇರುವ ವೇಗವುಳ್ಳ, ಅನೇಕರನ್ನು ಕೊಲ್ಲುವ ಸಾಮರ್ಥ್ಯವುಳ್ಳ ಶಕ್ತಿಯೆಂಬ ಆಯುಧವನ್ನು ಆ ದೇವಿಗೆ ಒಪ್ಪಿಸಿದನು. ॥೧೩॥

ಬಾಣಗಳಿಂದ ತುಂಬಿರುವ ಬತ್ತಳಿಕೆಯನ್ನೂ, ನೋಡಿದ ಕೂಡಲೇ ಆಶ್ಚರ್ಯವನ್ನುಂಟುಮಾಡುವುದಾಗಿಯೂ, ಅಶಕ್ತರಿಂದ ಹೆದೆಯೇರಿಸಲು ಅಸಾಧ್ಯವಾಗಿಯೂ, ಕಠಿನವಾದ ಶತ್ರುಗಳಿಗೂ ದಿಗಿಲನ್ನುಂಟುಮಾಡುವ ಧ್ವನಿಯುಳ್ಳದ್ದಾಗಿಯೂ ಇರುವ ಧನುಸ್ಸನ್ನು ವಾಯುವು ಈ ದೇವಿಗಾಗಿ ಕೊಟ್ಟನು. ॥೧೪॥

ಇಂದ್ರನು ತನ್ನ ವಜ್ರಾಯುಧದ ಸಾರದಿಂದ ಬಹಳ ಕ್ರೂರವಾದ ಬೇರೆ ವಜ್ರಾಯುಧವನ್ನು ಹೊರಹೊಮ್ಮಿಸಿ ಅದನ್ನೂ, ಬಹಳ ಸುಂದರವಾಗಿ ಚನ್ನಾಗಿ ನಾದವನ್ನು ಕೊಡುವ ಘಂಟೆಯನ್ನೂ ಐರಾವತದಿಂದ ತೆಗೆದು ಅದನ್ನೂ ಸಹ ದೇವಿಗಾಗಿ ಬೇಗನೆ ಸಮರ್ಪಿಸಿದನು. ॥೧೫॥

ದದೌ ದಂಡಂ ಯಮಃ ಕಾಮಂ ಕಾಲದಂಡಸಮುದ್ಭವಂ ।
ಯೇನಾಂತಂ ಸರ್ವಭೂತಾನಾಮುಕರೋತ್ಕಾಲ ಆಗತೇ ॥೧೬॥

ಬ್ರಹ್ಮಾ ಕಮಂಡಲುಂ ದಿವ್ಯಂ ಗಂಗಾವಾರಿಪ್ರಪೂರಿತಂ ।
ದದಾವಸ್ಯೈ ಮುದಾ ಯುಕ್ತೋ ವರುಣಃ ಪಾಶಮೇವ ಚ ॥೧೭॥

ಕಾಲಃ ಖಡ್ಗಂ ತಥಾ ಚರ್ಮ ಪ್ರಾಯಚ್ಛತ್ತು ನರಾಧಿಪ ।
ಪರಶುಂ ವಿಶ್ವಕರ್ಮಾ ಚ ತೀಕ್ಷ್ಣಮಸ್ಯೈ ದದಾವಥ ॥೧೮॥

ಧನದಸ್ತು ಸುರಾಪೂರ್ಣಂ ಪಾನಪಾತ್ರಂ ಸುವರ್ಣಜಂ ।
ಪಂಕಜಂ ವರುಣಶ್ಚಾದಾದ್ದೇವ್ಯೈ ದಿವ್ಯಂ ಮನೋಹರಂ ॥೧೯॥

ಗದಾಂ ಕೌಮೋದಕೀಂ ತ್ವಷ್ಟಾ ಘಂಟಾಶತನಿನಾದಿನೀಂ ।
ಅದಾತ್ತಸ್ಯೈ ಪ್ರಸನ್ನಾತ್ಮಾ ಸುರಶತ್ರುವಿನಾಶಿನೀಂ ॥೨೦॥

---

ಮರಣಕಾಲವು ಒದಗಲು, ಎಲ್ಲ ಪ್ರಾಣಿಗಳಿಗೂ ಯಾವ ಯಮದಂಡದಿಂದ ಮರಣವು ಸಂಭವಿಸುವುದೋ ಆ ದಂಡದಿಂದ ಬೇರೆ ದಂಡಾಯುಧವನ್ನು ಉಂಟು ಮಾಡಿ ಅದನ್ನು ಯಮನು ಆ ದೇವಿಗೆ ಒಪ್ಪಿಸಿದನು. ॥೧೬॥

ಗಂಗೋದಕದಿಂದ ತುಂಬಿ ಶ್ರೇಷ್ಠವಾದ ಕಮಂಡಲುವನ್ನು ಬ್ರಹ್ಮನೂ, ಸಂತೋಷದಿಂದ ಕೂಡಿದ ವರುಣನು ಪಾಶವೆಂಬ ಆಯುಧವನ್ನೂ ಈ ದೇವಿಗಾಗಿ ಅರ್ಪಿಸಿದರು. ॥೧೭॥

ಎಲೈ ಜನಮೇಜಯ ರಾಜನೇ—ಕಾಲಪುರುಷನು ಈ ದೇವಿಗೆ ಕತ್ತಿಯನ್ನೂ ಗುರಾಣಿಯನ್ನೂ, ಹಾಗೆಯೇ ವಿಶ್ವಕರ್ಮನು ಹರಿತವಾದ ಕೊಡಲಿಯನ್ನೂ ಒಪ್ಪಿಸಿದರು. ॥೧೮॥

ಕುಬೇರನು, ಚಿನ್ನದಿಂದ ಮಾಡಿದ, ಮದ್ಯದಿಂದ ತುಂಬಿದ ಪಾನಪಾತ್ರೆಯನ್ನೂ ವರುಣನು ಮನೋಹರವಾದ ದಿವ್ಯಕಮಲವನ್ನೂ ಸಹ ದೇವಿಗೆ ಕಾಣಿಕೆಯಾಗಿ ಕೊಟ್ಟರು. ॥೧೯॥

ತ್ವಷ್ಟೃಬ್ರಹ್ಮನು ಅನೇಕ ಘಂಟೆಗಳಿಂದ ಧ್ವನಿಮಾಡುತ್ತಿರುವ ಮತ್ತು ದೇವಶತ್ರುಗಳನ್ನು ನಾಶಮಾಡುವ ಕೌಮೋದಕೀ ಎಂಬ ಗದೆಯನ್ನು ಆ ದೇವಿಗೆ ಅರ್ಪಿಸಿದನು. ॥೨೦॥

ಅಸ್ತ್ರಾಣ್ಯನೇಕರೂಪಾಣಿ ತಥಾಽಭೇದ್ಯಂ ಚ ದಂಶನಂ ।
ದದೌ ತ್ವಷ್ಟಾ ಜಗನ್ಮಾತ್ರೇ ನಿಜರಶ್ಮೀನ್ದಿವಾಕರಃ ॥೨೧॥

ಸಾಯುಧಾಂ ಭೂಷಣೈರ್ಯುಕ್ತಾಂ ದೃಷ್ಟ್ವಾ ತೇ ವಿಸ್ಮಯಂಗತಾಃ ।
ತುಷ್ಟುವುಸ್ತಾಂ ಸುರಾ ದೇವೀಂ ತ್ರೈಲೋಕ್ಯಮೋಹಿನೀಂ ಶಿವಾಂ ॥೨೨॥

॥ ದೇವಾ ಊಚುಃ ॥

ನಮಃ ಶಿವಾಯೈ ಕಲ್ಯಾಣ್ಯೈ ಶಾಂತ್ಯೈ ಪುಷ್ಟ್ಯೈ ನಮೋನಮಃ ।
ಭಗವತ್ಯೈ ನಮೋ ದೇವ್ಯೈ ರುದ್ರಾಣ್ಯೈ ಸತತಂ ನಮಃ ॥೨೩॥

ಕಾಳರಾತ್ರ್ಯೈ ತಥಾಂಬಾಯೈ ಇಂದ್ರಾಣ್ಯೈ ತೇ ನಮೋ ನಮಃ ।
ಸಿದ್ಧ್ಯೈ ಬುದ್ಧ್ಯೈ ತಥಾ ವೃದ್ಧ್ಯೈ ವೈಷ್ಣವ್ಯೈ ತೇ ನಮೋ ನಮಃ ॥೨೪॥

---

ಹಾಗೆಯೇ ಆ ತ್ವಷ್ಟೃಬ್ರಹ್ಮನು ಅನೇಕ ವಿಧವಾದ ಆಕಾರಗಳುಳ್ಳ ಅಸ್ತ್ರಗಳನ್ನೂ ಯಾರೂ ಕತ್ತರಿಸಲಸಾಧ್ಯವಾದ ಕವಚವನ್ನೂ, ಸೂರ್ಯನು ತನ್ನ ಕಿರಣಗಳನ್ನು ಜಗನ್ಮಾತೆಯಾದ ಈ ದೇವಿಗೆ ಸಮರ್ಪಿಸಿದರು. ಹೀಗೆ ದೇವತೆಗಳು ತಮ್ಮಲ್ಲಿ ಒಬ್ಬೊಬ್ಬರ ಶಕ್ತಿಗೆ ಮೀರಿದ ಕಾರ್ಯವನ್ನು ನೆರವೇರಿಸಬೇಕಾಗಿ ಬಂದಾಗ ಧೈರ್ಯಗೆಡದೆ ಒಗ್ಗಟ್ಟಿನಿಂದ ಸಹಕರಿಸಿ ಎಲ್ಲರ ತೇಜಶ್ಶಕ್ತಿಸಂಪತ್ತುಗಳನ್ನು ಐಕಮತ್ಯದಿಂದ ಒಟ್ಟುಗೂಡಿಸಿ ಮಹಾವಿಪತ್ತಿನಿಂದ ಪಾರಾಗಲು ಅನುವಾದರೆಂಬುದು ಭಾವವು. ॥೨೧॥

ಆಯುಧಗಳನ್ನು ಧರಿಸಿ, ಸರ್ವಾಭರಣಯುಕ್ತಳಾಗಿ ಮೂರು ಲೋಕಗಳನ್ನೂ ಶಕ್ತಿ ತೇಜಸ್ಸು, ರೂಪಗಳಿಂದ ಮೋಹಗೊಳಿಸುತ್ತಿರುವ ಮಂಗಳಕರಳಾದ ಆ ದೇವಿಯನ್ನು ನೋಡಿ, ದೇವತೆಗಳೆಲ್ಲರೂ ಆಶ್ಚರ್ಯವನ್ನು ಹೊಂದಿ ಅವಳನ್ನು ಸ್ತೋತ್ರ ಮಾಡಿದರು. ॥೨೨॥

ದೇವತೆಗಳು ಹೇಳಿದರು—ಮಂಗಳಸ್ವರೂಪಳಾಗಿಯೂ, ಕ್ಷೇಮವನ್ನುಂಟುಮಾಡುವವಳಾಗಿಯೂ, ಶಾಂತಿಯನ್ನೂ ಪುಷ್ಟಿಯನ್ನೂ ಅನುಗ್ರಹಿಸುವವಳಾಗಿಯೂ ಇರುವ ರುದ್ರನ ಸಂಬಂಧಿಯಾದ ಷಡ್ಗುಣೈಶ್ವರ್ಯಸಂಪನ್ನಳಾದ ದೇವಿಗೆ ಯಾವಾಗಲೂ ಅನೇಕ ನಮಸ್ಕಾರಗಳನ್ನು ಮಾಡುತ್ತೇವೆ. ॥೨೩॥

ಓ ದೇವಿಯೇ ಕಾಳರಾತ್ರಿಯಾದ ನಿನಗೆ ನಮಸ್ಕಾರವು, ಎಲ್ಲರಿಗೂ ತಾಯಿಯಾಗಿಯೂ, ಇಂದ್ರಪತ್ನಿರೂಪಳಾಗಿಯೂ ಇರುವ ನಿನಗೆ ನಮಸ್ಕಾರವು. ಸಿದ್ಧಿ,

**ಪೃಥಿವ್ಯಾಂ ಯಾ ಸ್ಥಿತಾ ಪೃಥ್ವ್ಯಾ ನ ಜ್ಞಾತಾ ಪೃಥಿವೀಂ ಚ ಯಾ ।**
**ಅಂತಸ್ಸ್ಥಿತಾ ಯಮಯತಿ ವಂದೇ ತಾಮೀಶ್ವರೀಂ ಪರಾಂ ॥೨೫॥**

**ಮಾಯಾಯಾಂ ಯಾ ಸ್ಥಿತಾ ಜ್ಞಾತಾ ಮಾಯಯಾ ನ ಚ ತಾಮಜಾಂ ।**
**ಅಂತಸ್ಸ್ಥಿತಾ ಪ್ರೇರಯತಿ ಪ್ರೇರಯಿತ್ರೀಂ ನುಮಃ ಶಿವಾಂ ॥೨೬॥**

**ಕಲ್ಯಾಣಂ ಕುರು ಭೋ ಮಾತಸ್ತ್ರಾಹಿ ನಃ ಶತ್ರುತಾಪಿತಾನ್ ।**
**ಜಹಿ ಪಾಪಂ ಹಯಾರಿಂ ತಂ ತೇಜಸಾ ಸ್ವೇನ ಮೋಹಿತಂ ॥೨೭॥**

---

ಬುದ್ಧಿ, ವೃದ್ಧಿ ಈ ರೂಪಗಳಿಂದ ಇರುವ ನಿನಗೆ ನಮಸ್ಕಾರವು. ವಿಷ್ಣುಸಂಬಂಧಿಯೂ ಆದ ನಿನಗೆ ಅನೇಕ ನಮಸ್ಕಾರಗಳು. ॥೨೪॥

ಯಾವ ದೇವಿಯು ಪೃಥ್ವಿಯಲ್ಲಿ ಇರುವಳೋ, ಯಾವ ದೇವಿಯನ್ನು ಪೃಥ್ವಿಯ ಅಭಿಮಾನಿದೇವತೆಯೂ ಪೂರ್ಣವಾಗಿ ತಿಳಿದಿಲ್ಲವೋ, ಯಾವ ದೇವಿಯು ಪೃಥ್ವಿಯ ಒಳಗೂ ವ್ಯಾಪಿಸಿ ಇದ್ದುಕೊಂಡು ಪೃಥ್ವಿಯನ್ನು ಒಂದೇ ಸಮನಾಗಿರುವಂತೆ ಧರ್ಮನಿಯಮದ ನಿರ್ಬಂಧದಲ್ಲಿರಿಸಿರುವಳೋ, ಹೀಗೆ ಎಲ್ಲಕ್ಕೂ ಅಧಿಪತಿಯಾಗಿ ನಡೆಯಿಸುತ್ತಿರುವ ಆ ಪರಾಶಕ್ತಿಗೆ ನಮಸ್ಕಾರವನ್ನು ಮಾಡುತ್ತೇವೆ. ಈಅಂಶವನ್ನು " ಯಃಪೃಥಿವ್ಯಾಂತಿಷ್ಠನ್......." ಎಂದು ಮೊದಲಾಗುವ ಬೃಹದಾರಣ್ಯಕೋಪನಿಷತ್ತಿನ ವಾಕ್ಯದಲ್ಲೂ, ಬ್ರಹ್ಮಸೂತ್ರದ ಅಂತರ್ಯಾಮ್ಯಧಿಕರಣದಲ್ಲೂ ನಿರೂಪಿಸಿದೆ. ॥೨೫॥

ಯಾವ ದೇವಿಯು ಮಾಯೆಯಲ್ಲಿಯೂ ಇರುವಳೋ, ಆ ಮಾಯೆಗೂ ಕಾರಣವಾದ ಬ್ರಹ್ಮಸ್ವರೂಪಳಾಗಿ ನಿತ್ಯಳಾಗಿರುವ ಯಾವ ದೇವಿಯನ್ನು ಮಾಯೆಗೂ ತಿಳಿಯಲು ಶಕ್ಯವಲ್ಲವೋ, ಯಾವ ದೇವಿಯು ಮಾಯೆಯನ್ನೂ ಕಾರ್ಯೋನ್ಮುಖವನ್ನಾಗಿ ಮಾಡುವಳೋ, ಚರಾಚರಾತ್ಮಕವಾದ ಸಕಲಪ್ರಪಂಚಕ್ಕೂ ಪ್ರೇರಕಳಾಗಿ ಅಂತರ್ಯಾಮಿಸ್ವರೂಪದಿಂದಿರುವ ಮಂಗಳಕರಳಾದ ಅಂತಹ ದೇವಿಯನ್ನು ಸ್ತೋತ್ರ ಮಾಡುತ್ತೇವೆ. ಹೀಗೆ ಸೃಷ್ಟಿಕ್ರಮದಲ್ಲಿ ಕಡೆಯ ಕಾರ್ಯವಾದ ಸ್ಥೂಲಪೃಥಿವಿಯನ್ನೂ, ಎಲ್ಲಕ್ಕೂ ಮೂಲಕಾರಣವಾದ ಮಹಾಮಾಯೆಯನ್ನೂ ಆರಿಸಿಕೊಂಡಿರುವುದರಿಂದ ಪ್ರತ್ಯಾಹಾರನ್ಯಾಯವನ್ನನುಸರಿಸಿ ದೇವಿಯೇ ಎಲ್ಲಕ್ಕೂ ಮಿಗಿಲಾದ ಸರ್ವಾಂತರ್ಯಾಮಿ ಮೂಲಕಾರಣತತ್ವರೂಪಳೆಂದು ಹೇಳಿದಹಾಗಾಯಿತೆಂದು ತಿಳಿಯಬಹುದು. ॥೨೬॥

ಓ ತಾಯಿಯೇ, ಬ್ರಹ್ಮನ ವರದ ಮೂಲಕ ಬಂದಿರುವ ನಿನ್ನ ತೇಜಶ್ಶಕ್ತಿಯ ಪ್ರಭಾವವನ್ನು ತನ್ನ ತೇಜಸ್ಸೆಂದು ಭ್ರಾಂತನಾಗಿರುವ ಆ ಪಾಪಿಯಾದ ಮಹಿಷಾ

ಖಲಂ ಮಾಯಾವಿನಂ ಘೋರಂ ಸ್ತ್ರೀವಧ್ಯಂ ವರದರ್ಪಿತಂ ।
ದುಃಖದಂ ಸರ್ವದೇವಾನಾಂ ನಾನಾರೂಪಧರಂ ಶಠಂ ॥೨೮॥

ತ್ವಮೇಕಾ ಸರ್ವದೇವಾನಾಂ ಶರಣಂ ಭಕ್ತವತ್ಸಲೇ ।
ಪೀಡಿತಾನ್ ದಾನವೇನಾದ್ಯ ತ್ರಾಹಿ ದೇವಿ ನಮೋಽಸ್ತು ತೇ ॥೨೯॥

॥ ವ್ಯಾಸ ಉವಾಚ ॥

ಏವಂ ಸ್ತುತಾ ತದಾ ದೇವೀ ಸುರೈಃ ಸರ್ವಸುಖಪ್ರದಾ ।
ತಾನುವಾಚ ಮಹಾದೇವೀ ಸ್ಮಿತಪೂರ್ವಂ ಶುಭಂ ವಚಃ ॥೩೦॥

---

ಸುರನನ್ನು ನೀನು ವಧಿಸಿ ಶತ್ರುಗಳ ಬಾಧೆಯಿಂದ ಸಂಕಟಪಡುತ್ತಿರುವ ನಮ್ಮನ್ನು ಕಾಪಾಡು ಮತ್ತು ನಮಗೆ ಕ್ಷೇಮವನ್ನುಂಟುಮಾಡು. ॥೨೭॥

ಓ ದೇವಿಯೇ, ಆ ಮಹಿಷಾಸುರನು, ಬಹಳ ದುಷ್ಟನು, ಮೋಸಗಾರನು, ಭಯಂಕರನು, ಹೆಂಗುಸಿನಿಂದ ಮಾತ್ರವೇ ವಧ್ಯನು, ಬ್ರಹ್ಮನ ವರಬಲದಿಂದ ಕೊಬ್ಬಿ ಮೆರೆಯುತ್ತಿರುವವನು, ಎಲ್ಲ ದೇವತೆಗಳಿಗೂ ದುಃಖವನ್ನುಂಟುಮಾಡುತ್ತಿರುವವನು, ಅನೇಕ ರೂಪಗಳನ್ನು ಧರಿಸುವವನು, ಗುಟ್ಟಿನಲ್ಲಿ ಮೋಸಮಾಡುವ ಹಠಗಾರನೂ ಆಗಿರುವನು. ॥೨೮॥

ಈ ರೀತಿಯಿಂದ ವರ್ತಿಸುತ್ತಾ ಇರುವ ಆ ದುಷ್ಟದಾನವನನ್ನು ಓ ಭಕ್ತ ವತ್ಸಲೆಯಾದ ದೇವಿಯೇ, ನೀನು ಸಂಹಾರಮಾಡಿ, ಆ ದಾನವನಿಂದ ಪೀಡಿತರಾಗಿ ನಿನ್ನನ್ನೇ ಮರೆಹೊಕ್ಕಿರುವ ನಮ್ಮನ್ನು ಕಾಪಾಡು. ನಿನಗೆ ನಾವು ನಮಸ್ಕಾರವನ್ನು ಮಾಡುತ್ತೇವೆ. ನೀನೊಬ್ಬಳೇ ಎಲ್ಲ ದೇವತೆಗಳನ್ನೂ ಕಾಪಾಡಬಲ್ಲವಳು. ॥೨೯॥

ವ್ಯಾಸಋಷಿಯು ಹೇಳಿದನು—ಮೇಲೆ ಹೇಳಿದ ರೀತಿಯಲ್ಲಿ ದೇವತೆಗಳು ಆ ದೇವಿಯನ್ನು ಸ್ತೋತ್ರಮಾಡಲು, ಸರ್ವರಿಗೂ ಸುಖವನ್ನುಂಟುಮಾಡುವ ಆ ಮಹಾದೇವಿಯು ಮಂದಹಾಸದಿಂದ ಆ ದೇವತೆಗಳನ್ನು ಕುರಿತು ಮಂಗಳಕರವಾದ ಮತ್ತು ಆಪ್ಯಾಯಕವಾದ ಒಳ್ಳೆಯ ಮಾತನ್ನು ಹೀಗೆ ಹೇಳಿದಳು. ॥೩೦॥

|| ದೇವ್ಯುವಾಚ ||

**ಭಯಂ ತ್ಯಜಂತು ಗೀರ್ವಾಣಾ ಮಹಿಷಾನ್ಮಂದಚೇತಸಃ ।**
**ಹನಿಷ್ಯಾಮಿ ರಣೇಽದ್ಯೈವ ವರದೃಪ್ತಂ ವಿಮೋಹಿತಂ ॥೩೧॥**

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ಸಾ ಸುರಾನ್ದೇವೀ ಜಹಾಸಾತೀವ ಸುಸ್ವರಂ ।**
**ಚಿತ್ರಮೇತಚ್ಚ ಸಂಸಾರೇ ಭ್ರಮಮೋಹಯುತಂ ಜಗತ್ ॥೩೨॥**

**ಬ್ರಹ್ಮವಿಷ್ಣುಮಹೇಶಾದ್ಯಾಃ ಸೇಂದ್ರಾಶ್ಚಾನ್ಯೇ ಸುರಾಸ್ತಥಾ ।**
**ಕಂಪಯುಕ್ತಾ ಭಯತ್ರಸ್ತಾ ವರ್ತಂತೇ ಮಹಿಷಾತ್ಕಿಲ ॥೩೩॥**

**ಅಹೋ ದೈವಬಲಂ ಘೋರಂ ದುರ್ಜಯಂ ವಿಬುಧೈರಪಿ ।**
**ಕಾಲಃ ಕರ್ತಾಽಸ್ತಿ ದುಃಖಾನಾಂ ಸುಖಾನಾಂ ಪ್ರಭುರೀಶ್ವರಃ ॥೩೪॥**

---

ದೇವಿಯು ದೇವತೆಗಳನ್ನು ಕುರಿತು ಹೀಗೆ ಹೇಳಿದಳು—ಎಲೈ ದೇವತೆಗಳಿರಾ, ಆ ದಡ್ಡಬುದ್ಧಿಯುಳ್ಳ ಮಹಿಷಾಸುರನ ಭಯವನ್ನು ಬಿಡಿ. ವರಬಲದಿಂದ ಮದಿಸಿ ಭ್ರಾಂತನಾಗಿರುವ ಆ ದುಷ್ಟನನ್ನು ಈಗಲೇ ಯುದ್ಧದಲ್ಲಿ ಕೊಲ್ಲುವೆನು. ||೩೧||

ವ್ಯಾಸನು ಹೇಳಿದನು—ಆ ದೇವಿಯು ದೇವತೆಗಳಿಗೆ ಹೀಗೆ ಹೇಳಿ ಬಹಳ ಗಟ್ಟಿಯಾಗಿ ಸುಸ್ವರದಿಂದ ನಕ್ಕಳು. ಈ ಪ್ರಪಂಚದಲ್ಲಿ, ಎಂದರೆ ಕರ್ತೃತ್ವ-ಭೋಕ್ತೃತ್ವ ಜನನ-ಮರಣಗಳ ಅನಾದಿಯಾದ ಪರಂಪರೆ ಎಂಬ ದೊಡ್ಡ ಪ್ರವಾಹದ ಸುಳಿಯಲ್ಲಿ ಸುತ್ತಿ ಬಳಲುತ್ತಿರುವಿಕೆ ಎಂಬ ಮಹಾ ಸಂಸಾರದಲ್ಲಿ, ಸಿಕ್ಕಿರುವ ಪ್ರಾಣಿ ಸಾಮಾನ್ಯವೂ ನಾನು-ನನ್ನದು ಎಂಬ ಅಜ್ಞಾನ ಭ್ರಾಂತಿಗಳಿಂದ ಅನಾದಿಯಾಗಿ ವಿಚಾರ ಮಾಡದೆ ಕೂಡಿರುತ್ತದೆ. ಇದು ಆಶ್ಚರ್ಯವು. ||೩೨||

ಬ್ರಹ್ಮ, ವಿಷ್ಣು, ಮಹೇಶ್ವರರೇ ಮೊದಲಾದ ದೊಡ್ಡವರೂ, ಇಂದ್ರನೇ ಮೊದಲಾದ ದೇವಪ್ರಮುಖರೂ ದಿಕ್ಪಾಲಕರೂ ಆ ಮಹಿಷಾಸುರನ ಭಯದಿಂದ ಹೆದರಿಕೊಂಡು ನಡುಗುತ್ತಿರುವರಲ್ಲವೇ ? ||೩೩||

ದೈವಬಲವೆಂಬುದು ಭಯಂಕರವಾದುದು. ದೇವತೆಗಳೂ ಇದನ್ನು ಮೀರಿ ಜಯಿಸಲಾರರು. ಫಲೋನ್ಮುಖಗಳಾದ ಕರ್ಮಗಳು ಫಲಕೊಡಲು ಪ್ರಾರಂಭಿಸಿರುವ ಕಾಲವೇ, ದುಃಖವನ್ನೂ ಸುಖವನ್ನೂ ಉಂಟುಮಾಡುವ ಕರ್ತೃವಾಗಿಯೂ, ಆ

**ಸೃಷ್ಟಿಪಾಲನಸಂಹಾರೇ ಸಮರ್ಥಾ ಅಪಿ ತೇ ಯದಾ ।**
**ಮುಹ್ಯಂತಿ ಕ್ಲೇಶಸಂತಪ್ತಾ ಮಹಿಷೇಣ ಪ್ರಪೀಡಿತಾಃ ॥೩೫॥**

**ಇತಿ ಕೃತ್ವಾ ಸ್ಮಿತಂ ದೇವೀ ಸಾಟ್ಟಹಾಸಂ ಚಕಾರ ಹ ।**
**ಉಚ್ಚೈಃ ಶಬ್ದಂ ಮಹಾಘೋರಂ ದಾನವಾನಾಂ ಭಯಪ್ರದಂ ॥೩೬॥**

**ಚಕಂಪೇ ವಸುಧಾ ತತ್ರ ಶ್ರುತ್ವಾ ತಚ್ಛಬ್ದಮದ್ಭುತಂ ।**
**ಚೇಲುಶ್ಚ ಪರ್ವತಾಃ ಸರ್ವೇ ಚುಕ್ಷೋಭಾಬ್ಧಿಶ್ಚ ವೀರ್ಯವಾನ್ ॥೩೭॥**

**ಮೇರುಶ್ಚಚಾಲ ಶಬ್ದೇನ ದಿಶಃ ಸರ್ವಾಃ ಪ್ರಪೂರಿತಾಃ ।**
**ಭಯಂ ಜಗ್ಮುಸ್ತದಾ ಶ್ರುತ್ವಾ ದಾನವಾಸ್ತಂ ಸ್ವನಂ ಮಹತ್ ॥೩೮॥**

---

ಸುಖದುಃಖಗಳು ಆ ಕಾಲಕ್ಕೆ ಅಧೀನವಾಗಿಯೂ ಇರುವುದರಿಂದ ಅವಕ್ಕೆ ಆ ಕಾಲವೇ ಅಧಿಪತಿಯಾಗಿಯೂ ಮುಖ್ಯಕಾರಣವಾಗಿಯೂ ಇರುವುದು. ॥೩೪॥

ಈ ಬ್ರಹ್ಮ, ವಿಷ್ಣು, ರುದ್ರರೆಂಬ ದೇವತೆಗಳು ಪ್ರಪಂಚವನ್ನು ಸೃಷ್ಟಿಸುವುದು, ರಕ್ಷಿಸುವುದು, ಸಂಹರಿಸುವುದು ಇವುಗಳಲ್ಲಿ ಸಮರ್ಥರಾಗಿದ್ದಾಗ್ಯೂ, ಮಹಿಷಾಸುರನ ತೊಂದರೆಯಿಂದ ದುಃಖಕ್ಕೀಡಾಗಿ ಭ್ರಾಂತಿಯನ್ನು ಹೊಂದಿರುವರು! ಇದಕ್ಕೆ ಕಾಲವೇ ಮೂಲಕಾರಣವು. ಆದುದರಿಂದ ಕಾಲವು ಎಲ್ಲಕ್ಕಿಂತಲೂ ದೊಡ್ಡದು. ॥೩೫॥

ಬ್ರಹ್ಮ ಕಾಲ ಮತ್ತು ಶಕ್ತಿಸ್ವರೂಪಳೂ ಆದ ದೇವಿಯು ಹೀಗೆಂಬುದಾಗಿ ತನ್ನಲ್ಲಿಯೇ ಯೋಚಿಸಿಕೊಂಡು ಮುಗುಳುನಗೆಯನ್ನು ನಕ್ಕು, ಆ ಮೇಲೆ ಪ್ರಕೃತ ಕಾರ್ಯನಿರ್ವಾಹಕ್ಕಾಗಿ ದಾನವರಿಗೆ ಭೀತಿಯನ್ನುಂಟುಮಾಡುವಂತೆ ಘಟ್ಟಿಯಾದ ಧ್ವನಿಯಿಂದ ಭಯಂಕರವಾದ ಗರ್ಜನೆಯ ಅಟ್ಟಹಾಸವನ್ನು ಮಾಡಿದಳು. ॥೩೬॥

ಆ ಅದ್ಭುತವಾದ ಧ್ವನಿಯನ್ನು ಕೇಳಿ ಭೂಮಿಯು ನಡುಗಿತು. ಪರ್ವತಗಳು ಅಲ್ಲಾಡಿದುವು. ಗಂಭೀರವಾದ ಸಮುದ್ರವೂ ಕೂಡ ಉಲ್ಲೋಲಕಲ್ಲೋಲವಾಯಿತು. ॥೩೭॥

ಆ ಧ್ವನಿಯಿಂದ ಮೇರುಪರ್ವತವೂ ಚಲಿಸಿತು. ದಿಕ್ಕುಗಳೆಲ್ಲವೂ ಧ್ವನಿಯಿಂದ ಮೊಳಗುತ್ತಾ ತುಂಬಿಹೋದುವು. ಆಗ ದಾನವರೂ ದೊಡ್ಡದಾದ ಆ ಧ್ವನಿಯನ್ನು ಕೇಳಿ ಭಯವನ್ನು ಹೊಂದಿದರು. ॥೩೮॥

ಜಯ ಪಾಹೀತಿ ದೇವಾಸ್ತಾಮೂಚುಃ ಪರಮಹರ್ಷಿತಾಃ ।
ಮಹಿಷೋಽಪಿ ಸ್ವನಂ ಶ್ರುತ್ವಾ ಚುಕೋಪ ಮದಗರ್ವಿತಃ ॥೩೯॥

ಕಿಮೇತದಿತಿ ತಾನ್ದೈತ್ಯಾನ್ಪಪ್ರಚ್ಛ ಸ್ವನಶಂಕಿತಃ ।
ಗಚ್ಛಂತು ತ್ವರಿತಾ ದೂತಾ ಜ್ಞಾತುಂ ಶಬ್ದಸಮುದ್ಭವಂ ॥೪೦॥

ಕೃತಃ ಕೇನಾಯಮತ್ಯುಗ್ರಃ ಶಬ್ದಃ ಕರ್ಣವ್ಯಥಾಕರಃ ।
ದೇವೋ ವಾ ದಾನವೋ ವಾಪಿ ಯೋ ಭವೇತ್ಸ್ವನಕಾರಕಃ ॥೪೧॥

ಗೃಹೀತ್ವಾ ತಂ ದುರಾತ್ಮಾನಂ ಮತ್ಸಮೀಪಂ ನಯಂತ್ವಿಹ ।
ಹನಿಷ್ಯಾಮಿ ದುರಾಚಾರಂ ಗರ್ಜಂತಂ ಸ್ಮಯದುರ್ಮದಂ ॥೪೨॥

ಕ್ಷೀಣಾಯುಷ್ಕಂ ಮಂದಮತಿಂ ನಯಾಮಿ ಯಮಸಾದನಂ ।
ಪರಾಜಿತಾಃ ಸುರಾಃ ಕಾಮಂ ನ ಗರ್ಜಂತಿ ಭಯಾತುರಾಃ ॥೪೩॥

---

ದೇವತೆಗಳೂ ಬಹಳ ಸಂತೋಷವುಳ್ಳವರಾಗಿ ಓ ದೇವಿಯೇ, ನಮ್ಮನ್ನು ಕಾಪಾಡು, ನಿನಗೆ ಜಯವಾಗಲೆಂದು ಹರ್ಷಧ್ವನಿಯನ್ನು ಮಾಡಿದರು. ಮದದಿಂದ ಗರ್ವಿತನಾದ ಆ ಮಹಿಷಾಸುರನಾದರೋ ಆ ಧ್ವನಿಯನ್ನು ಕೇಳಿ ಕೋಪಗೊಂಡನು. ||೩೯||

ಆ ಶಬ್ದವು ಯಾವುದೆಂದು ಸಂಶಯಗೊಂಡು ಆ ಮಹಿಷಾಸುರನು ದೈತ್ಯರನ್ನು ಇದೇನೆಂದು ಕೇಳಿದನು. ಮತ್ತು ಈ ಶಬ್ದವು ಯಾವುದು, ಎಲ್ಲಿ ಹುಟ್ಟಿತು, ಎಂಬುದನ್ನು ತಿಳಿದುಕೊಂಡು ಬರಲು ದೂತರು ಬೇಗನೆ ಹೊರಡಲಿ, ಎಂದು ಆಜ್ಞಾಪಿಸಿದನು. ||೪೦||

ಕಿವಿಯಿಂದ ಕೇಳಲು ಕಠೋರವಾಗಿರುವ ಬಹಳ ಕ್ರೂರವಾದ ಈ ಧ್ವನಿಯನ್ನು ಮಾಡಿದವರು ಯಾರು ? ದೇವತೆಯೋ, ದಾನವನೋ ಯಾರು ಈ ಶಬ್ದವನ್ನು ಮಾಡಿದರೆಂಬುದನ್ನು ತಿಳಿಯಿರಿ. ||೪೧||

ಆ ದುಷ್ಟನನ್ನು ಹಿಡಿದು ನನ್ನ ಹತ್ತಿರಕ್ಕೆ ಕರೆದುಕೊಂಡು ಬನ್ನಿರಿ. ಕೆಟ್ಟ ನಡತೆಯುಳ್ಳ, ದುರಹಂಕಾರದಿಂದ ಕೊಬ್ಬಿ ಗರ್ಜಿಸುತ್ತಿರುವ ಆ ನೀಚನನ್ನು ಇಲ್ಲಿಯೇ ಕೊಲ್ಲುವೆನು. ಮಂದಮತಿಯಾದ ಆ ದುಷ್ಟನಿಗೆ ಆಯುಸ್ಸು ತೀರಿರುವುದು. ಅವನನ್ನು ಯಮನ ಪಟ್ಟಣಕ್ಕೆ ಕಳುಹಿಸುವೆನು. ||೪೨||

ದೇವತೆಗಳೆಲ್ಲರೂ ನನ್ನಿಂದ ಸೋಲಿಸಲ್ಪಟ್ಟು ನನಗೆ ಭಯಪಡುತ್ತಿರುವುದರಿಂದ ಈ ರೀತಿಯಲ್ಲಿ ಮನಸ್ವಿಯಾಗಿ ಗರ್ಜಿಸಲಾರರು. ದೈತ್ಯರೆಲ್ಲರೂ ನನ್ನ ಅಧೀನ

ನಾಸುರಾ ಮಮ ವಶ್ಯಾಸ್ತೇ ಕಸ್ಯೇದಂ ಮೂಢಚೇಷ್ಟಿತಂ ।
ತ್ವರಿತಾ ಮಾಮುಪಾಯಾಂತು ಜ್ಞಾತ್ವಾ ಶಬ್ದಸ್ಯ ಕಾರಣಂ ॥೪೪॥

॥ ವ್ಯಾಸ ಉವಾಚ ॥

ಅಹಂ ಗತ್ವಾ ಹನಿಷ್ಯಾಮಿ ತಂ ಪಾಪಂ ವಿತಥಶ್ರಮಂ ।
ಇತ್ಯುಕ್ತಾಸ್ತೇನ ತೇ ದೂತಾ ದೇವೀಂ ಸರ್ವಾಂಗಸುಂದರೀಂ ॥೪೫॥

ಅಷ್ಟಾದಶಭುಜಾಂ ದಿವ್ಯಾಂ ಸರ್ವಾಭರಣಭೂಷಿತಾಂ ।
ಸರ್ವಲಕ್ಷಣಸಂಪನ್ನಾಂ ವರಾಯುಧಧರಾಂ ಶುಭಾಂ ॥೪೬॥

ದಧತೀಂ ಚಷಕಂ ಹಸ್ತೇ ಪಿಬಂತೀಂ ಚ ಮುಹುರ್ಮಧು ।
ಸಂವೀಕ್ಷ್ಯ ಭಯಭೀತಾಸ್ತೇ ಜಗ್ಮುಸ್ತ್ರಸ್ತಾಃ ಸುಶಂಕಿತಾಃ ॥೪೭॥
ಸಕಾಶೇ ಮಹಿಷಸ್ಯಾಶು ತಮೂಚುಃ ಸ್ವನಕಾರಣಂ ।

---

ದಲ್ಲಿ ಇರುವುದರಿಂದ ಅವರೂ ಹೀಗೆ ಗರ್ಜಿಸುವುದಿಲ್ಲ. ಆದುದರಿಂದ ಈ ರೀತಿಯಲ್ಲಿ ಆಗಿರುವ ಈ ಚೇಷ್ಟೆಯು ಯಾವ ಮೂಢನದಾಗಿರಬಹುದು ? ॥೪೩॥

ಈ ಶಬ್ದಕ್ಕೆ ಕಾರಣನಾದವನು ಯಾರೆಂಬುದನ್ನು ತಿಳಿದು ಬೇಗ ನನ್ನ ಬಳಿಗೆ ಬಂದು ತಿಳಿಸಿರಿ. ನಾನು ಹೋಗಿ, ವ್ಯರ್ಥವಾದ ಆಯಾಸವುಳ್ಳ ಆ ಪಾಪಿಷ್ಠನನ್ನು ಕೊಲ್ಲುವೆನು. ॥೪೪॥

ವ್ಯಾಸಋಷಿಯು ಹೇಳಿದನು—ಮಹಿಷಾಸುರನು ತನ್ನ ದೂತರಿಗೆ ಈ ರೀತಿ ಯಲ್ಲಿ ಹೇಳಲು, ಅವರು ಆ ಶಬ್ದವನ್ನನುಸರಿಸಿ ಬಂದು, ಸರ್ವಾಂಗಸುಂದರಿ ಯಾಗಿಯೂ, ಹದಿನೆಂಟು ಭುಜಗಳುಳ್ಳವಳಾಗಿಯೂ, ಸಮಸ್ತ ಆಭರಣಗಳಿಂದ ಅಲಂಕೃತಳಾಗಿಯೂ, ಸರ್ವ ಲಕ್ಷಣಸಂಪನ್ನೆಯಾಗಿ, ದಿವ್ಯಾಯುಧಗಳನ್ನು ಧರಿಸಿ, ಮಂಗಳಕರಳಾಗಿರುವ ತೇಜೋರೂಪಳಾದ ದೇವಿಯನ್ನು ಕಂಡರು. ॥೪೫-೪೬॥

ಅವಳು ಕೈಯಲ್ಲಿ ಮದ್ಯಪಾತ್ರೆಯನ್ನು ಹಿಡಿದುಕೊಂಡು ಆಗಾಗ್ಗೆ ಮದ್ಯ ವನ್ನು ಕುಡಿಯುತ್ತಿರುವುದನ್ನು ಕಂಡು, ವೀರಪಾನದಿಂದ ಹೆದರಿ ನಡುಗುತ್ತಾ, ಆತಂಕ ಸಂಶಯಗಳಿಂದ ಕೂಡಿದವರಾಗಿ, ಬೇಗನೆ ಮಹಿಷಾಸುರನ ಸಮೀಪಕ್ಕೆ ಹಿಂತಿರುಗಿ ಓಡಿಹೋಗಿ ಅವನಿಗೆ ಆ ಧ್ವನಿಯ ಕಾರಣವನ್ನು ಹೀಗೆ ವಿಜ್ಞಾಪಿಸಿದರು. ॥೪೭॥

॥ ದೈತ್ಯಾ ಊಚುಃ ॥

**ದೇವೀ ದೈತ್ಯೇಶ್ವರ ಪ್ರೌಢಾ ದೃಶ್ಯತೇ ಕಾಚಿದಂಗನಾ ॥೪೮॥**

**ಸರ್ವಾಂಗಭೂಷಣಾ ನಾರೀ ಸರ್ವರತ್ನೋಪಶೋಭಿತಾ ।**
**ನ ಮಾನುಷೀ ನಾಸುರೀ ಸಾ ದಿವ್ಯರೂಪಾ ಮನೋಹರಾ ॥೪೯॥**

**ಸಿಂಹಾರೂಢಾಽಽಯುಧಧರಾ ಚಾಷ್ಟಾದಶಕರಾ ವರಾ ।**
**ಸಾ ನಾದಂ ಕುರುತೇ ನಾರೀ ಲಕ್ಷ್ಯತೇ ಮದಗರ್ವಿತಾ ॥೫೦॥**

**ಸುರಾಪಾನರತಾ ಕಾಮಂ ಜಾನೀಮೋ ನ ಸಭರ್ತೃಕಾ ।**
**ಅಂತರಿಕ್ಷಸ್ಥಿತಾ ದೇವಾಸ್ತಾಂ ಸ್ತುವಂತಿ ಮುದಾನ್ವಿತಾಃ ॥೫೧॥**

---

ದೈತ್ಯರು ಅರಿಕೆ ಮಾಡಿದರು—ದೈತ್ಯರಿಗೆ ಅಧಿಪತಿಯಾದ ಓ ಸ್ವಾಮಿಯೇ, ನಾವು ಧ್ವನಿಯ ಕಾರಣವನ್ನು ಹುಡುಕಲು ಹೋಗಿ ನೋಡಲು, ಒಬ್ಬ ಪ್ರೌಢಳಾದ ಸ್ತ್ರೀಯನ್ನು ಕಂಡೆವು. ॥೪೮॥

ಅವಳು ಸರ್ವಾಭರಣಭೂಷಿತಳಾಗಿ ನಾನಾರತ್ನಾಲಂಕಾರಗಳಿಂದ ಶೋಭಿಸುತ್ತಾ ಸರ್ವಾಂಗಸುಂದರಿಯಾಗಿರುವಳು. ಅವಳು ಮನುಷ್ಯಳೂ ಅಲ್ಲವು. ರಾಕ್ಷಸಿಯೂ ಅಲ್ಲವು. ಆ ಸ್ತ್ರೀಯು ಸುಂದರವಾದ ಮನೋಹರವಾದ ತೇಜೋರೂಪವಾದ ಆಕಾರವುಳ್ಳವಳಾಗಿದಾಳೆ. ॥೪೯॥

ಆ ದೇವಿಯು ಹದಿನೆಂಟು ಭುಜಗಳುಳ್ಳವಳಾಗಿ ನಾನಾಬಗೆಯ ಆಯುಧಗಳನ್ನೂ ಧರಿಸಿ, ಸಿಂಹದ ಮೇಲೆ ಕೂತುಕೊಂಡು, ಮದದಿಂದ ಗರ್ವವುಳ್ಳವಳಾಗಿ ಯಾರನ್ನೂ ಲೆಕ್ಕಿಸದೆ ಧ್ವನಿಯನ್ನು ಮಾಡುತ್ತಿರುವಳೆಂದು ಕಾಣಬರುತ್ತದೆ. ॥೫೦॥

ಅವಳು ಮದ್ಯಪಾನದಲ್ಲಿ ಹೆಚ್ಚಾಗಿ ಆಸಕ್ತಳಾಗಿರುತ್ತಾಳೆ. ಅವಳನ್ನು ನೋಡಿದರೆ ಮದುವೆಯಾಗಿರುವಂತೆ ತಿಳಿಯುವುದಿಲ್ಲ. ಮತ್ತು ದೇವತೆಗಳೆಲ್ಲರೂ ಅಂತರಿಕ್ಷದಲ್ಲಿದ್ದುಕೊಂಡು ಸಂತೋಷದಿಂದ ಅವಳನ್ನು ಸ್ತೋತ್ರಮಾಡುತ್ತಿರುವರು. ॥೫೧॥

ಜಯೇತಿ ಪಾಹಿ ನಶ್ಚೇತಿ ಜಹಿ ಶತ್ರುಮಿತಿ ಪ್ರಭೋ ।
ನ ಜಾನೇ ಕಾ ವರಾರೋಹಾ ಕಸ್ಯ ವಾ ಸಾ ಪರಿಗ್ರಹಃ ॥೫೨॥

ಕಿಮರ್ಥಮಾಗತಾ ಚಾತ್ರ ಕಿಂ ಚಿಕೀರ್ಷತಿ ಸುಂದರೀ
ದ್ರಷ್ಟುಂ ನೈವ ಸಮರ್ಥಾಃ ಸ್ಮಃ ತತ್ತೇಜಃ ಪರಿಧರ್ಷಿತಾಃ ॥೫೩॥

ಶೃಂಗಾರವೀರಹಾಸ್ಯಾಢ್ಯಾ ರೌದ್ರಾದ್ಭುತರಸಾನ್ವಿತಾ ।
ದೃಷ್ಟ್ವೈವಂವಿಧಾಂ ನಾರೀಮಸಂಭಾಷ್ಯ ಸಮಾಗತಾಃ ॥೫೪॥

ವಯಂ ತ್ವದಾಜ್ಞಯಾ ರಾಜನ್ ಕಿಂಕರ್ತವ್ಯಮತಃಪರಂ । ॥೫೫॥

---

"ಓ ದೇವಿಯೇ ನಿನಗೆ ಜಯವಾಗಲಿ, ನಮ್ಮ ಶತ್ರುಗಳನ್ನು ಹೊಡಿ, ನಮ್ಮನ್ನು ಕಾಪಾಡು" ಎಂದು ಮುಂತಾಗಿ ದೇವತೆಗಳು ಅವಳನ್ನು ಸ್ತೋತ್ರ ಮಾಡುತ್ತಿರುವರು. ಓ ಸ್ವಾಮಿಯೇ, ಆ ಉತ್ತಮ ಸ್ತ್ರೀಯು ಯಾರು ? ಯಾರಿಗೆ ಸಂಬಂಧಪಟ್ಟವಳು ? ಎಂಬುದೊಂದನ್ನೂ ನಾನು ತಿಳಿಯೆನು. ॥೫೨॥

ಸುಂದರಿಯಾಗಿರುವ ಆ ಹೆಂಗುಸು ಇಲ್ಲಿಗೆ ಏತಕ್ಕೆ ಬಂದಿರುವಳೋ ? ಏನನ್ನು ಮಾಡಲಿಚ್ಛೆಯುಳ್ಳವಳೋ ಎಂಬುದು ನಮಗೆ ಗೊತ್ತಾಗುವಂತಿಲ್ಲವು. ಏಕೆಂದರೆ ಆ ಹೆಂಗಸಿನ ತೇಜಸ್ಸಿನಿಂದ ತಿರಸ್ಕರಿಸಲ್ಪಟ್ಟವರಾಗಿ ನಾವು ಚನ್ನಾಗಿ ಅವಳನ್ನು ಪರೀಕ್ಷಿಸಿ ನೋಡುವುದಕ್ಕೂ ಸಮರ್ಥರಾಗಿಲ್ಲವು. ॥೫೩॥

ಆ ಹೆಂಗುಸು ಶೃಂಗಾರ, ವೀರ, ಹಾಸ್ಯ, ರೌದ್ರ, ಅದ್ಭುತ ಈ ರಸಗಳನ್ನು ಸೂಚಿಸುವ ನಡೆವಳಿಕೆ, ಆಕಾರಗಳಿಂದ ಕೂಡಿರುತ್ತಾಳೆ. ಸೌಂದರ್ಯ ಯೌವನಗಳಿಂದ ಶೃಂಗಾರರಸವೂ, ತೇಜಶ್ಶಕ್ತಿಗಳಿಂದ ವೀರರಸವೂ ರಾಕ್ಷಸರ ಮೋಹಕ್ಕಾಗಿ ಹಾಸ್ಯವೂ, ದುಷ್ಟರ ದಮನಕ್ಕಾಗಿ ರೌದ್ರವೂ, ಈ ಎಲ್ಲ ರಸಗಳು ಒಂದೆಡೆಯಲ್ಲಿ ಸಮಾವೇಶ ವಾಗಿರುವುದರಿಂದ ಅದ್ಭುತರಸವೂ ಸೂಚಿತವಾಗುತ್ತಿದ್ದುವೆಂಬುದು ಭಾವವು. ಹೀಗಿರುವ ಆ ಸ್ತ್ರೀಯನ್ನು ನೋಡಿ ನಾವು ಮಾತನಾಡಿಸಲೂ ಸಮರ್ಥರಾಗದೆ ಹಿಂತಿರುಗಿ ಬಂದೆವು. ॥೫೪॥

ನಾವುಗಳು ನಿನ್ನ ಆಜ್ಞೆಯಿಂದ ಹೋಗಿ ಅವಳನ್ನು ನೋಡಿ ಬಂದೆವು. ಮುಂದೆ ಮಾಡಬೇಕಾದುದೇನು ? ಎಂದು ಆ ದೂತರು ಮಹಿಷಾಸುರನಿಗೆ ವಿಜ್ಞಾಪಿಸಿ ಕೇಳಿದರು. ॥೫೫॥

|| ಮಹಿಷ ಉವಾಚ ||

**ಗಚ್ಛ ವೀರ ಮಯಾದಿಷ್ಟೋ ಮಂತ್ರಿಶ್ರೇಷ್ಠ ಬಲಾನ್ವಿತಃ ।**
**ಸಾಮಾದಿಭಿರುಪಾಯೈಸ್ತ್ವಂ ಸಮಾನಯ ಶುಭಾನನಾಂ ।**
**ನಾಯಾತಿ ಯದಿ ಸಾ ನಾರೀ ತ್ರಿಭಿಃಸಾಮಾದಿಭಿಸ್ತ್ವಿಹ ||೫೬||**

**ಅಹತ್ವಾ ತಾಂ ವರಾರೋಹಾಂ ತ್ವಮಾನಯ ಮಮಾಂತಿಕಂ ।**
**ಕರೋಮಿ ಪಟ್ಟಮಹಿಷೀಂ ತಾಮುರಾಲಭ್ರುವಂ ಮುದಾ ||೫೭||**

**ಪ್ರೀತಿಯುಕ್ತಾ ಸಮಾಯಾತಿ ಯದಿ ಸಾ ಮೃಗಲೋಚನಾ ।**
**ರಸಭಂಗೋ ಯಥಾ ನ ಸ್ಯಾತ್ತಥಾ ಕುರು ಮಮೇಪ್ಸಿತಂ ।**
**ಶ್ರವಣಾನ್ಮೋಹಿತೋಽಸ್ಮ್ಯದ್ಯ ತಸ್ಯಾ ರೂಪಸ್ಯ ಸಂಪದಾ ||೫೮||**

|| ವ್ಯಾಸ ಉವಾಚ ||

**ಮಹಿಷಸ್ಯ ವಚಃ ಶ್ರುತ್ವಾ ಪೇಶಲಂ ಮಂತ್ರಿಸತ್ತಮಃ ।**
**ಜಗಾಮ ತರಸಾ ಕಾಮಂ ಗಜಾಶ್ವರಥಸಂಯುತಃ ||೫೯||**

---

ಮಹಿಷಾಸುರನು ಹೇಳಿದನು—ಎಲೈ ವೀರನಾದ ಮಂತ್ರಿಶ್ರೇಷ್ಠನೇ, ನೀನು ನನ್ನ ಆಜ್ಞೆಯ ಪ್ರಕಾರ ಹೋಗಿ ಆ ಶುಭಾಂಗಿಯನ್ನು ಸಾಮ, ದಾನ, ಭೇದ ಎಂಬ ಉಪಾಯಗಳಿಂದ ವಶಪಡಿಸಿಕೊಂಡು ಇಲ್ಲಿಗೆ ಕರೆದುಕೊಂಡು ಬಾ. ||೫೬||

ಆ ಸ್ತ್ರೀಯು ಸಾಮವೇ ಮೊದಲಾದ ಮೂರು ಉಪಾಯಗಳ ಪ್ರಯೋಗದಿಂದಲೂ ವಶಳಾಗದೆ ಇಲ್ಲಿಗೆ ಬರದಿದ್ದಲ್ಲಿ ಆ ಹೆಂಗಸನ್ನು ಕೊಲ್ಲದೆ ಬಲಾತ್ಕಾರದಿಂದ ನನ್ನ ಹತ್ತಿರಕ್ಕೆ ಕರೆದುಕೊಂಡು ಬಾ. ವಕ್ರವಾದ ಹುಬ್ಬುಳ್ಳ ಆ ಸುಂದರಿಯನ್ನು ನಾನು ಸಂತೋಷದಿಂದ ನನ್ನ ಪಟ್ಟಮಹಿಷಿಯನ್ನಾಗಿ ಮಾಡಿಕೊಳ್ಳುವೆನು. ||೫೭||

ಜಿಂಕೆಯ ಕಣ್ಣಿನಂತೆ ಕಣ್ಣುಳ್ಳ ಆ ಸ್ತ್ರೀಯು ಪ್ರೀತಿಯಿಂದ ನನ್ನಲ್ಲಿ ಒಲಿವ ಹಾಗೆ ಮಾಡಿ, ರಸಭಂಗವಾಗದಂತೆ ಬುದ್ಧಿವಂತಿಕೆಯಿಂದ ಅವಳನ್ನು ಕರೆತಂದು ನನ್ನ ಇಷ್ಟವನ್ನು ನೆರವೇರಿಸು. ಈಗ ನಾನು ಆ ಮಹಿಳೆಯ ರೂಪಸೌಂದರ್ಯವನ್ನು ಕಿವಿಯಿಂದ ಕೇಳಿದಮಾತ್ರದಿಂದಲೇ ಆ ರಮಣಿಯಲ್ಲಿ ಮೋಹಗೊಂಡಿರುವೆನು. ||೫೮||

ವ್ಯಾಸಋಷಿಯು ಹೇಳಿದನು—ಮಹಿಷಾಸುರನು ದೈನ್ಯದಿಂದ ಹೇಳಿದ ಈ ಮೃದುವಾದ ಮಾತನ್ನು ಕೇಳಿ, ಅವನ ಮಂತ್ರಿಶ್ರೇಷ್ಠನು ಆನೆ, ಕುದುರೆ, ರಥ ಮೊದಲಾದ ಪರಿವಾರಗಳಿಂದ ಕೂಡಿ ಬೇಗನೆ ಹೊರಟನು. ||೫೯||

|| ಪ್ರಧಾನ ಉವಾಚ ||

ಗತ್ವಾ ದೂರತರಂ ಸ್ಥಿತ್ವಾ ತಾಮುವಾಚ ಮನಸ್ವಿನೀಂ ।
ವಿನಯಾವನತಃ ಶ್ಲಕ್ಷ್ಣಂ ಮಂತ್ರೀ ಮಧುರಯಾಗಿರಾ ||೬೦||

ಕಾಽಸಿ ತ್ವಂ ಮಧುರಾಽಽಲಾಪೇ ಕಿಮತ್ರಾಗಮನಂ ಕೃತಂ ।
ಪೃಚ್ಛತಿ ತ್ವಾಂ ಮಹಾಭಾಗೇ ಮನ್ಮುಖೇನ ಮಮ ಪ್ರಭುಃ ||೬೧||

ಸ ಜೇತಾ ಸರ್ವದೇವಾನಾಮವಧ್ಯಸ್ತು ನರೈಃ ಕಿಲ ।
ಬ್ರಹ್ಮಣೋ ವರದಾನೇನ ಗರ್ವಿತಶ್ಚಾರುಲೋಚನೇ ||೬೨||

ದೈತ್ಯೇಶ್ವರೋಽಸೌ ಬಲವಾನ್ ಕಾಮರೂಪಧರಸ್ಸದಾ ||೬೩||

ಶ್ರುತ್ವಾ ತ್ವಾಂ ಸಮುಪಾಯಾತಾಂ ಚಾರುವೇಷಾಂ ಮನೋಹರಾಂ ।
ದ್ರಷ್ಟುಮಿಚ್ಛತಿ ರಾಜಾ ಮೇ ಮಹಿಷೋ ನಾಮ ಪಾರ್ಥಿವಃ ||೬೪||

---

ಅವನು ಆ ದೇವಿಯು ಇದ್ದಲ್ಲಿಗೆ ಹೋಗಿ ದೂರದಲ್ಲೇ ನಿಂತುಕೊಂಡು ವಿನಯದಿಂದ ನಮ್ರನಾಗಿ ನಯವಾದ ಮಾತಿನಿಂದ ಆ ಸ್ತ್ರೀಯನ್ನು ಕುರಿತು ಮೆಲ್ಲನೆ ಹೀಗೆ ಹೇಳಿದನು. ||೬೦||

ಮಂತ್ರಿಯು ಹೇಳಿದನು--ಮಧುರವಾದ ಮಾತನ್ನಾಡುವ ಎಲೌ ಸ್ತ್ರೀಯೇ, ನೀನು ಯಾರು? ಇಲ್ಲಿಗೆ ಏತಕ್ಕಾಗಿ ಬಂದಿರುವೆ? ಎಲೌ ಪುಣ್ಯವಂತಳೇ, ನನ್ನ ಮುಖಾಂತರದಿಂದ ನಮ್ಮ ಪ್ರಭುವು ನಿನ್ನನ್ನು ಪ್ರಶ್ನೆಮಾಡುತ್ತಾನೆ. ||೬೧||

ಮನೋಹರವಾದ ಕಣ್ಣುಗಳುಳ್ಳ ಎಲೌ ನಾರಿಯೇ, ನಮ್ಮ ಪ್ರಭುವು ಮನುಷ್ಯರಿಗೆ ಅವಧ್ಯನಾಗಿರುವನು. ಎಲ್ಲ ದೇವತೆಗಳನ್ನೂ ಜಯಿಸಿರುವನು. ಬ್ರಹ್ಮನ ವರದ ಬಲದರ್ಪದಿಂದ ಅಹಂಕಾರವುಳ್ಳವನಾಗಿರುವನು. ||೬೨||

ಮತ್ತು ಆ ನಮ್ಮ ಸ್ವಾಮಿಯು ಯಾವಾಗ ಯಾವ ರೂಪವನ್ನು ಬೇಕಾದರೂ ಧರಿಸಲು ಸಮರ್ಥನಾಗಿಯೂ ತುಂಬ ಪರಾಕ್ರಮಶಾಲಿಯಾಗಿಯೂ ಇರುವನು. ಆದುದರಿಂದ ಇವನು ದೈತ್ಯರೆಲ್ಲರಿಗೂ ಮಹಾರಾಜನಾಗಿರುವನು. ||೬೩||

ಸುಂದರವಾದ ವೇಷಭೂಷಣಗಳ ಅಲಂಕಾರಗಳಿಂದ ಒಪ್ಪುತ್ತ ಮನೋಹರಳಾಗಿ ಇಲ್ಲಿಗೆ ನೀನು ಬಂದಿರುವುದನ್ನು ನಮ್ಮ ಒಡೆಯನಾದ ಮಹಿಷಾಸುರನೆಂಬ ದೊರೆಯು ಕೇಳಿ ನಿನ್ನನ್ನು ನೋಡಲು ಇಚ್ಛೆಪಡುತ್ತಾನೆ. ||೬೪||

ಮಾನುಷಂ ರೂಪಮಾದಾಯ ತ್ವತ್ಸಮೀಪಂ ಸಮೇಷ್ಯತಿ ।
ಯಥಾ ರುಚ್ಯೇತ ಚಾರ್ವಂಗಿ ತಥಾ ಮನ್ಯಾಮಹೇ ವಯಂ ॥೬೫॥

ತರ್ಹ್ಯೇಹಿ ಮೃಗಶಾವಾಕ್ಷಿ ಸಮೀಪಂ ತಸ್ಯ ಧೀಮತಃ ।
ನೋ ಚೇದಿಹಾನಯಾಮ್ಯೇನಂ ರಾಜಾನಂ ಭಕ್ತಿತತ್ಪರಂ ॥೬೬॥

ತಥಾ ಕರೋಮಿ ದೇವೀಶಿ ಯಥಾ ತೇ ಮನಸೇಪ್ಸಿತಂ ।
ವಶಗೋಽಸೌ ತವಾತ್ಯರ್ಥಂ ರೂಪಸಂಶ್ರವಣಾತ್ತವ ।
ಕರಭೋರು ವದಾಶು ತ್ವಂ ಸಂವಿಧೇಯಂ ಮಯಾ ತಥಾ ॥೬೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ನವಮೋಽಧ್ಯಾಯಃ.

---

ಆ ನಮ್ಮ ಪ್ರಭುವು ಮನುಷ್ಯನ ಆಕಾರವನ್ನು ಧರಿಸಿಕೊಂಡು ನಿನ್ನ ಸಮೀಪವನ್ನು ಪಡೆಯುವನು. ಎಲೌ ಸುಂದರಾಂಗಿಯೇ, ನಿನ್ನ ಅಭಿಲಾಷೆಯು ಹೇಗೆ ಇರುವುದೋ ನಾವುಗಳೂ ಅದನ್ನು ತಿಳಿದುಕೊಂಡು ಹಾಗೆಯೇ ನಡೆಯುವೆವು.॥೬೫॥

ಹುಲ್ಲೆಯ ಮರಿಯಂತೆ ಸುಂದರವಾದ ಕಣ್ಣುಗಳುಳ್ಳ ಎಲೌ ಮಹಿಳೆಯೇ, ನಿನಗೆ ಅಭಿರುಚಿಯಿದ್ದಲ್ಲಿ, ಬುದ್ಧಿವಂತನಾಗಿರುವ ನಮ್ಮ ರಾಜನ ಸಮೀಪಕ್ಕೆ ಬಂದು ಬಿಡು. ನಿನಗೆ ಬರುವುದಕ್ಕೆ ಆಗದಿದ್ದರೆ, ನಿನ್ನಲ್ಲಿ ಹೆಚ್ಚಾದ ಪ್ರೀತ್ಯಾದರದ ಆಸಕ್ತಿಯುಳ್ಳ ಆ ರಾಜನನ್ನೇ ಇಲ್ಲಿಗೆ ಕರೆದುಕೊಂಡುಬರುವೆನು. ॥೬೬॥

ಎಲೌ ಸ್ವಾಮಿನಿಯೇ, ನಿನ್ನ ಇಷ್ಟವು ಹೇಗೆ ಇರುವುದೋ ಅದನ್ನು ತಿಳಿಸು. ನಾನು ಅದರಂತೆ ಮಾಡುವೆನು. ಆನೆಯ ಸೊಂಡಿಲಿನಂತೆ ಇರುವ ತೊಡೆಗಳುಳ್ಳ ಎಲೌ ರಮಣಿಯೇ, ನಿನ್ನ ಸೌಂದರ್ಯವನ್ನು ಕಿವಿಯಿಂದ ಕೇಳಿದ ಮಾತ್ರದಿಂದಲೇ ಆ ನಮ್ಮ ರಾಜನು ನಿನ್ನಲ್ಲಿ ಆಸಕ್ತಿಯುಳ್ಳವನಾಗಿ ನಿನಗೆ ಅಧೀನನಾಗಿರುವನು. ಆದುದರಿಂದ ಬೇಗನೆ ನಿನ್ನ ಇಷ್ಟವನ್ನು ತಿಳಿಸು. ನಾನೂ ಅದರಂತೆಯೇ ನಡೆದುಕೊಳ್ಳಬೇಕಾಗಿದೆ. ॥೬೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ಪ್ರಹಸ್ಯ ಪ್ರಮದೋತ್ತಮಾ ।**
**ತಮುವಾಚ ಮಹಾರಾಜ ಮೇಘಗಂಭೀರಯಾ ಗಿರಾ ॥೧॥**

|| ದೇವ್ಯುವಾಚ ||

**ಮಂತ್ರಿವರ್ಯ ಸುರಾಣಾಂ ವೈ ಜನನೀಂ ವಿದ್ಧಿ ಮಾಂ ಕಿಲ ।**
**ಮಹಾಲಕ್ಷ್ಮೀಮಿತಿ ಖ್ಯಾತಾಂ ಸರ್ವದೈತ್ಯನಿಷೂದಿನೀಂ ॥೨॥**

**ಪ್ರಾರ್ಥಿತಾಽಹಂ ಸುರೈಃ ಸರ್ವೈರ್ಮಹಿಷಸ್ಯ ವಧಾಯ ಚ ।**
**ಪೀಡಿತೈರ್ದಾನವೇಂದ್ರೇಣ ಯಜ್ಞಭಾಗಬಹಿಷ್ಕೃತೈಃ ॥೩॥**

---

ವ್ಯಾಸಮಹರ್ಷಿಯು ಹೇಳಿದನು—ಎಲೈ ಜನಮೇಜಯರಾಜನೇ, ಕೇಳು. ಈ ರೀತಿಯಲ್ಲಿ ಹೇಳುತ್ತಿರುವ ಆ ಮಂತ್ರಿಯ ಮಾತನ್ನು ಕೇಳಿ ಸ್ತ್ರೀಯರಲ್ಲಿ ಶ್ರೇಷ್ಠಳಾದ ಆ ದೇವಿಯು, ಅವನ ಮಾತಿಗೆ ನಕ್ಕು, ಮೇಘದ ಧ್ವನಿಯಂತೆ ಗಂಭೀರವಾದ ಧ್ವನಿಯುಳ್ಳ ಮಾತಿನಿಂದ ಅವನಿಗೆ ಈ ರೀತಿಯಾಗಿ ಹೇಳಿದಳು. ||೧||

ದೇವಿಯು ಹೇಳಿದಳು–ಎಲೈ ಮಂತ್ರಿಶ್ರೇಷ್ಠನೇ, ನನ್ನನ್ನು ದೇವತೆಗಳ ತಾಯಿಯೆಂದು ತಿಳಿದುಕೋ. ನನ್ನ ಹೆಸರು ಮಹಾಲಕ್ಷ್ಮಿಯೆಂಬುದಾಗಿ ಪ್ರಸಿದ್ಧವಾಗಿದೆ. ನಾನು ದುಷ್ಟರಾಕ್ಷಸರೆಲ್ಲರನ್ನೂ ನಿರ್ಮೂಲಮಾಡುವವಳು, ಎಂದು ತಿಳಿ. ||೨||

ಎಲೈ ಮಂತ್ರಿಶ್ರೇಷ್ಠನೇ, ದೇವತೆಗಳ ಯಜ್ಞಭಾಗಗಳನ್ನು ಕಿತ್ತುಕೊಂಡು ಅವರನ್ನು ನಾನಾವಿಧವಾಗಿ ಹಿಂಸೆಪಡಿಸುತ್ತಿರುವ ನಿಮ್ಮ ರಾಜನಾದ ಮಹಿಷಾಸುರನ

ತಸ್ಮಾದಿಹಾಗತಾಸ್ಮ್ಯದ್ಯ ತದ್ವಧಾರ್ಥಂ ಕೃತೋದ್ಯಮಾ ।
ಏಕಾಕಿನೀ ನ ಸೈನ್ಯೇನ ಸಂಯುತಾ ಮಂತ್ರಿಸತ್ತಮ ॥೪॥

ಯತ್ತ್ವಯಾಽಹಂ ಸಾಮಪೂರ್ವಂ ಕೃತ್ವಾ ಸ್ವಾಗತಮಾದರಾತ್ ।
ಉಕ್ತಾ ಮಧುರಯಾ ವಾಚಾ ತೇನ ತುಷ್ಟಾಽಸ್ಮಿ ತೇಽನಘ ॥೫॥

ನೋ ಚೇದ್ಧನ್ಮಿ ದೃಶಾ ತ್ವಾಂ ವೈ ಕಾಲಾಗ್ನಿಸಮಯಾ ಕಿಲ ।
ಕಸ್ಯ ಪ್ರೀತಿಕರಂ ನ ಸ್ಯಾನ್ಮಾಧುರ್ಯವಚನಂ ಖಲು ॥೬॥

ಗಚ್ಛ ತಂ ಮಹಿಷಂ ಪಾಪ ವದ ಮದ್ವಚನಾದಿದಂ ।
ಗಚ್ಛ ಪಾತಾಲಮಧುನಾ ಜೀವಿತೇಚ್ಛಾ ಯದಸ್ತಿ ತೇ ॥೭॥

---

ಬಾಧೆಯನ್ನು ತಡೆಯಲಾರದೆ, ದೇವತೆಗಳು ಮಹಿಷಾಸುರನ ವಧೆಗೋಸ್ಕರ ನನ್ನನ್ನು ಪ್ರಾರ್ಥಿಸಿದರು. ॥೩॥

ಮಂತ್ರಿಗಳಲ್ಲಿ ಶ್ರೇಷ್ಠನಾದವನೇ, ಆದುದರಿಂದ ನಾನು ಸೇನೆ ಮುಂತಾದ ಯಾವ ಸಹಾಯವೂ ಇಲ್ಲದೆ, ಒಬ್ಬಂಟಿಗಳಾಗಿಯೇ ಅವನ ಸಂಹಾರಕ್ಕೋಸ್ಕರ ಉದ್ಯುಕ್ತಳಾಗಿ ಇಲ್ಲಿಗೆ ಈಗ ಬಂದಿರುವೆನು. ॥೪॥

ಎಲೈ ನಿರ್ದೋಷಿಯೇ, ನೀನು ಸಾಮೋಪಾಯದಿಂದ ಆದರಪೂರ್ವಕವಾಗಿ ಸುಖಾಗಮನವನ್ನು ಬಯಸುವ ಮೃದುವಾದ ಮಾತುಗಳನ್ನು ನನಗೆ ಹೇಳಿದೆ. ಆ ಮಾತಿನ ಮಾರ್ದವದಿಂದ ನಾನು ಬಹಳವಾಗಿ ಸಂತೋಷಪಟ್ಟಿದೇನೆ. ॥೫॥

ಇಲ್ಲದಿದ್ದರೆ ಪ್ರಳಯಕಾಲದ ಅಗ್ನಿಯಂತಿರುವ ಕ್ರೂರವಾದ ನನ್ನ ನೋಟ ದಿಂದಲೇ ನಿನ್ನನ್ನು ಸುಟ್ಟುಬಿಡಬಲ್ಲೆನು. ಲೋಕದಲ್ಲಿ ಮಧುರವಾದ ಮಾತುಗಳು ಯಾರಿಗೆತಾನೇ ಸಂತೋಷವನ್ನುಂಟುಮಾಡಲಾರವು ? ॥೬॥

ಎಲೈ ಪಾಪಕಾರ್ಯವನ್ನು ಸೂಚಿಸುವ ಪಾಪಿಷ್ಠನೇ, ನೀನು ಇಲ್ಲಿಂದ ಹೋಗಿ ಮಹಿಷನಿಗೆ ನಾನು ಹೇಳುವ ಈ ಮಾತನ್ನು ಹೇಳು—ಎಲೈ ಮಹಿಷನೇ, ನೀನು ಬದುಕಬೇಕೆಂಬ ಆಸೆಯಿದ್ದಲ್ಲಿ ಈಗಲೇ ಪಾತಾಳಲೋಕಕ್ಕೆ ಹೋಗು. ॥೭॥

ನೋ ಚೇತ್ಕೃತಾಽಽಗಸಂ ದುಷ್ಟಂ ಹನಿಷ್ಯಾಮಿ ರಣಾಂಗಣೇ ।
ಮದ್ಬಾಣಕ್ಷುಣ್ಣದೇಹಸ್ತ್ವಂ ಗಂತಾಸಿ ಯಮಸಾದನಂ ॥೮॥

ದಯಾಲುತ್ವಂ ಮಮೇದಂ ತ್ವಂ ವಿದಿತ್ವಾ ಗಚ್ಛ ಸತ್ವರಂ ।
ಹತೇ ತ್ವಯಿ ಸುರಾ ಮೂಢ ಸ್ವರ್ಗಂ ಪ್ರಾಪ್ಸ್ಯಂತಿ ಸತ್ವರಂ ॥೯॥

ತಸ್ಮಾದ್ಗಚ್ಛಸ್ವ ತ್ಯಕ್ತ್ವೈಕೋ ಮೇದಿನೀಂ ಚ ಸಸಾಗರಾಂ ।
ಪಾತಾಲಂ ತರಸಾ ಮಂದ ಯಾವದ್ಬಾಣಾ ನ ಮೇಽಪತನ್ ॥೧೦॥

ಯುದ್ಧೇಚ್ಛಾ ಚೇನ್ಮನಸಿ ತೇ ತರ್ಹ್ಯೇಹಿ ತ್ವರಿತೋಽಸುರ ।
ನೀರೈರ್ಮಹಾಬಲೈಃ ಸರ್ವೈರ್ನಯಾಮಿ ಯಮಸಾದನಂ ॥೧೧॥

ಯುಗೇ ಯುಗೇ ಮಹಾಮೂಢ ಹತಾಸ್ತ್ವತ್ಸದೃಶಾಃ ಕಿಲ ।
ಅಸಂಖ್ಯಾತಾಸ್ತಥಾ ತ್ವಾಂ ವೈ ಹನಿಷ್ಯಾಮಿ ರಣಾಂಗಣೇ ॥೧೨॥

---

ಇಲ್ಲದಿದ್ದರೆ ಅಪರಾಧವನ್ನು ಮಾಡಿ ದುಷ್ಟನಾಗಿರುವ ನಿನ್ನನ್ನು ಯುದ್ಧರಂಗದಲ್ಲಿ ಕೊಲ್ಲುವೆನು. ನನ್ನ ಬಾಣದಿಂದ ನಿನ್ನ ಶರೀರವು ಚೂರುಚೂರಾಗಲು, ಕಡೆಗೆ ನೀನು ಯಮನ ಮನೆಗೆ ಹೋಗುವೆ. ||೮||

ಯುದ್ಧವನ್ನು ಬಿಟ್ಟು ಹಿಂತಿರುಗಲು ಅವಕಾಶವನ್ನು ಕೊಡುತ್ತಿರುವ ನನ್ನ ಈ ದಯಾಳುತನವನ್ನು ತಿಳಿದುಕೊಂಡು ನೀನು ಬೇಗನೆ ಹೊರಟುಹೋಗು. ಎಲೈ ದಡ್ಡನೇ, ಹಾಗೆ ಮಾಡದೆ ನೀನು ಇಲ್ಲಿದ್ದರೆ, ನಿನ್ನ ಸಂಹಾರವು ನನ್ನಿಂದ ಆದಮೇಲೆ ದೇವತೆಗಳು ಬೇಗನೆ ತಮ್ಮ ಸ್ವರ್ಗವನ್ನು ಮತ್ತೆ ಹೊಂದುವರು. ||೯||

ಆದುದರಿಂದ ಎಲೈ ಮೂಢನೇ, ನನ್ನ ಬಾಣಗಳು ನಿನ್ನ ಮೇಲೆ ಬೀಳುವುದಕ್ಕೆ ಮುಂಚಿತವಾಗಿಯೇ, ಸಮುದ್ರದಿಂದ ಕೂಡಿರುವ ಭೂಮಂಡಲವೆಲ್ಲವನ್ನೂ ಬಿಟ್ಟು ಪಾತಾಳಲೋಕಕ್ಕೆ ಬೇಗನೆ, ಹೊರಟುಹೋಗು. ||೧೦||

ಎಲೈ ಅಸುರನೇ, ನಿನ್ನ ಮನಸ್ಸಿನಲ್ಲಿ ಯುದ್ಧಮಾಡಬೇಕೆಂಬ ಇಚ್ಛೆಯು ಇದ್ದಲ್ಲಿ ಬೇಗನೆ ಯುದ್ಧಕ್ಕೆ ಬಾ. ನಿನ್ನನ್ನೂ ನಿನ್ನೊಡನಿರುವ ಮಹಾಬಲಿಷ್ಠರಾದ ಶೂರರೆಲ್ಲರನ್ನೂ ಯಮಸದನಕ್ಕೆ ಕಳುಹಿಸುತ್ತೇನೆ. ||೧೧||

ಎಲೈ ತುಂಬ ದಡ್ಡನೇ, ಪ್ರತಿಯುಗದಲ್ಲಿಯೂ ನಿನ್ನಂಥವರು ಲೆಕ್ಕವಿಲ್ಲದಷ್ಟು

**ಸಾಫಲ್ಯಂ ಕುರು ಶಸ್ತ್ರಾಣಾಂ ಧಾರಣೇ ತು ಶ್ರಮೋಽನ್ಯಥಾ ।**
**ತದ್ಯುಧ್ಯಸ್ವ ಮಯಾ ಸಾರ್ಧಂ ಸಮರೇ ಸ್ಮರಪೀಡಿತಃ ॥೧೩॥**

**ಮಾ ಗರ್ವಂ ಕುರು ದುಷ್ಟಾತ್ಮನ್ ಯನ್ಮೇಽಸ್ತಿ ಬ್ರಹ್ಮಣೋ ವರಃ ।**
**ಸ್ತ್ರೀವಧ್ಯತ್ವೇ ತ್ವಯಾ ಮೂಢ ಪೀಡಿತಾಃ ಸುರಸತ್ತಮಾಃ ॥೧೪॥**

**ಕರ್ತವ್ಯಂ ವಚನಂ ಧಾತುಸ್ತೇನಾಹಂ ತ್ವಾಮುಪಾಗತಾ ।**
**ಸ್ತ್ರೀರೂಪಮತುಲಂ ಕೃತ್ವಾ ಸತ್ಯಂ ಹಂತುಂ ಕೃತಾಗಸಂ ॥೧೫॥**

**ಯಥೇಚ್ಛಂ ಗಚ್ಛ ವಾ ಮೂಢ ಪಾತಾಲಂ ಪನ್ನಗಾವೃತಂ ।**
**ಹಿತ್ವಾ ಭೂಸುರಸದ್ಮಾದ್ಯ ಜೀವಿತೇಚ್ಛಾ ಯದಸ್ತಿ ತೇ ॥೧೬॥**

---

ಜನರು ಸಂಹೃತರಾಗಿರುವರು. ಆದರಂತೆಯೇ ನಿನ್ನನ್ನೂ ಈಗ ಯುದ್ಧರಂಗದಲ್ಲಿ ಕೊಲ್ಲುವೆನು. ॥೧೨॥

ನೀನು ಆಯುಧಗಳನ್ನು ಧರಿಸಿದ್ದಕ್ಕೆ ಯುದ್ಧವನ್ನು ಮಾಡಿ ಅವನ್ನು ಸಾರ್ಥಕಗಳನ್ನಾಗಿ ಮಾಡು. ಇಲ್ಲದಿದ್ದರೆ, ಕಾಮಬಾಧೆಯುಳ್ಳವನಾದ ನೀನು ಆಯುಧಗಳನ್ನು ಧರಿಸಿರುವುದು ಕೇವಲ ಶ್ರಮವಲ್ಲದೆ ಮತ್ತೆ ಬೇರೆಯಲ್ಲ. ಆದುದರಿಂದ ನೀನು ನನ್ನೊಡನೆ ಯುದ್ಧವನ್ನು ಮಾಡು. ॥೧೩॥

ಎಲೈ ಮೂಢನೇ, "ನಾನು ಸ್ತ್ರೀಯಿಂದ ಮಾತ್ರ ವಧ್ಯನೆಂದು ಬ್ರಹ್ಮನು ವರವನ್ನು ಕೊಟ್ಟಿರುವನು." ಎಂದು ನೀನು ಹೆಮ್ಮೆಪಡಬೇಡ. ಈ ಅಹಂಕಾರದಿಂದಲೇ ನೀನು ದೇವತೆಗಳನ್ನು ಪೀಡಿಸುತ್ತಿರುವೆ. ॥೧೪॥

ಬ್ರಹ್ಮನ ಮಾತನ್ನು ನಿಜವನ್ನಾಗಿ ಮಾಡುವುದಕ್ಕಾಗಿ ನಾನು ಅನುಪಮವಾದ ಸ್ತ್ರೀರೂಪವನ್ನು ಧರಿಸಿಕೊಂಡು ದುಷ್ಕೃತ್ಯಗಳನ್ನು ಮಾಡುತ್ತಿರುವ ನಿನ್ನನ್ನು ಕೊಲ್ಲುವುದಕ್ಕಾಗಿಯೇ ಇಲ್ಲಿಗೆ ಬಂದಿದ್ದೇನೆ. ॥೧೫॥

ಎಲೈ ಮೂಢನೇ, ನೀನು ಜೀವಿಸಿರಬೇಕೆಂಬ ಇಚ್ಛೆಯಿದ್ದಲ್ಲಿ ಭೂಲೋಕವನ್ನೂ ಸ್ವರ್ಗವನ್ನೂ ಬಿಟ್ಟು ನಿನ್ನ ಮನಬಂದಂತೆ ಸರ್ಪಗಳಿಂದ ನಿಬಿಡವಾದ ಪಾತಾಳ ಲೋಕಕ್ಕೆ ಹೊರಟುಹೋಗು. ॥೧೬॥

|| ವ್ಯಾಸ ಉವಾಚ ||

**ಇತ್ಯುಕ್ತಃ ಸ ತತೋ ದೇವ್ಯಾ ಮಂತ್ರಿಶ್ರೇಷ್ಠೋ ಬಲಾನ್ವಿತಃ ।**
**ಪ್ರತ್ಯುವಾಚ ನಿಶಮ್ಯಾಸೌ ವಚನಂ ಹೇತುಗರ್ಭಿತಂ ॥೧೭॥**

**ದೇವಿ ಸ್ತ್ರೀಸದೃಶಂ ವಾಕ್ಯಂ ಬ್ರೂಷೇ ತ್ವಂ ಮದಗರ್ವಿತಾ ।**
**ಕ್ವಾಸೌ ಕ್ವ ತ್ವಂ ಕಥಂ ಯುದ್ಧಮಸಂಭಾವ್ಯಮಿದಂ ಕಿಲ ॥೧೮॥**

**ಏಕಾಕಿನೀ ಪುನರ್ಬಾಲಾ ಪ್ರಾರಬ್ಧಯೌವನಾ ಮೃದುಃ ।**
**ಮಹಿಷೋಽಸೌ ಮಹಾಕಾಯೋ ದುರ್ವಿಭಾವ್ಯಂ ಹಿ ಸಂಗತಂ ॥೧೯॥**

**ಸೈನ್ಯಂ ಬಹುವಿಧಂ ತಸ್ಯ ಹಸ್ತ್ಯಶ್ವರಥಸಂಕುಲಂ ।**
**ಪದಾತಿಗಣಸಂವಿದ್ಧಂ ನಾನಾಯುಧವಿರಾಜಿತಂ ॥೨೦॥**

---

ವ್ಯಾಸಮುನಿಯು ಇಂತೆಂದನು—ಸೇನಾಸಮೇತನಾದ ಆ ಮಂತ್ರಿಶ್ರೇಷ್ಠನು ಈ ರೀತಿಯಾಗಿ ದೇವಿಯು ಹೇಳಿದ ಮಾತನ್ನು ಕೇಳಿ, ಅವಳನ್ನು ಕುರಿತು ಕಾರಣ ಸಹಿತವಾಗಿರುವ ಈ ಮಾತನ್ನು ಪ್ರತಿಯಾಗಿ ಹೇಳಿದನು. ||೧೭||

ಎಲೌ ದೇವಿಯೇ ನೀನು ಹೆಂಗಸು, ಅದರಲ್ಲೂ ಯೌವನಮದದ ಅಹಂಕಾರ ದಿಂದ ಕೂಡಿರುವೆ. ನೀನು ಆಡುವ ಮಾತು ಹೆಂಗಸರಿಗೆ ತಕ್ಕಂತೆಯೇ ಇದೆ. ಏಕೆಂದರೆ ಇದು ಪೂರ್ವಾಪರವಿಚಾರವಿಲ್ಲದ ಮಾತಾಗಿದೆ. ನಮ್ಮ ದೊರೆಯಾದ ಆ ಮಹಿಷಾಸುರನೆಲ್ಲಿ ? ಒಬ್ಬೊಂಟಿಗಳಾಗಿರುವ ನೀನೆಲ್ಲಿ ? ನಿಮ್ಮಿಬ್ಬರಿಗೂ ಯುದ್ಧ ನಡೆಯುವುದು ಅಸಂಭವವೆಂದು ಊಹಿಸಬಹುದಲ್ಲವೇ ? ||೧೮||

ನೀನು ಒಬ್ಬೊಂಟಿಗಳು, ಅಲ್ಲದೆ ಇನ್ನೂ ಹುಡುಗಿಯು ; ನಿನಗೆ ಈಗೀಗ ಯೌವನವು ಬರುತ್ತಿದೆ. ನೀನು ಮೃದುಶರೀರವುಳ್ಳ ಕೋಮಲಾಂಗಿಯು. ಆ ಮಹಿ ಷಾಸುರನಾದರೋ ದೊಡ್ಡದಾದ ಮತ್ತು ಬಲವಾದ ಶರೀರವುಳ್ಳವನು. ಆದುದರಿಂದ ಈ ಯುದ್ಧಸಂಬಂಧವನ್ನು ಯೋಚಿಸುವುದಕ್ಕೇ ಆಗದು. ||೧೯||

ಅಲ್ಲದೆ ಅವನಿಗೆ ಆನೆ, ಕುದುರೆ, ರಥ, ಕಾಲಾಳುಗಳೆಂಬ ಚತುರಂಗಗಳಿಂದ ಕೂಡಿದ ಅನೇಕ ವಿಧವಾದ ಆಯುಧಗಳಿಂದ ಸಜ್ಜುಗೊಳಿಸಲ್ಪಟ್ಟು ಸಿದ್ಧವಾಗಿರುವ ಬಹುವಿಧವಾದ ಸೈನ್ಯವೂ ಇರುವುದು. ಹೀಗಿರುವಲ್ಲಿ ನಿಮ್ಮಿಬ್ಬರಿಗೂ ಯುದ್ಧವಾಗು ವುದು ಅಸಂಭವವೇ ಸರಿ. ||೨೦||

**ಕಃ ಶ್ರಮಃ ಕರಿರಾಜಸ್ಯ ಮಾಲತೀಪುಷ್ಪಮರ್ದನೇ ।**
**ಮಾರಣೇ ತವ ವಾಮೋರು ಮಹಿಷಸ್ಯ ತಥಾ ರಣೇ ॥೨೧॥**

**ಯದಿ ತ್ವಾಂ ಪರುಷಂ ವಾಕ್ಯಂ ಬ್ರವೀಮಿ ಸ್ವಲ್ಪಮಪ್ಯಹಂ ।**
**ಶೃಂಗಾರೇ ತದ್ವಿರುದ್ಧಂ ಹಿ ರಸಭಂಗಾದ್ಬಿಭೇಮ್ಯಹಂ ॥೨೨॥**

**ರಾಜಾಽಸ್ಮಾಕಂ ಸುರರಿಪುರ್ವರ್ತತೇ ತ್ವಯಿ ಭಕ್ತಿಮಾನ್ ।**
**ಸಾಮಮೇವ ಮಯಾ ವಾಚ್ಯಂ ದಾನಯುಕ್ತಂ ತಥಾ ವಚಃ ॥೨೩॥**

**ನೋ ಚೇದ್ಧನ್ಮ್ಯಹಮದ್ಯೈವ ಬಾಣೇನ ತ್ವಾಂ ಮೃಷಾವದಾಂ ।**
**ಮಿಥ್ಯಾಽಭಿಮಾನಚತುರಾಂ ರೂಪಯೌವನಗರ್ವಿತಾಂ ॥೨೪॥**

---

ದೊಡ್ಡದಾದ ಆನೆಗೆ ಜಾಜೀಹೂವನ್ನು ಕಾಲಿನಿಂದ ಹೊಸಗುವುದರಲ್ಲಿ ಆಯಾಸವೇನಾದರೂ ಉಂಟೇ ? ಅದರಂತೆಯೇ ಎಲೌ ಸುಂದರವಾದ ತೊಡೆಯುಳ್ಳ ನಾರಿಯೇ, ನಿನ್ನನ್ನು ಯುದ್ಧದಲ್ಲಿ ಕೊಲ್ಲುವ ವಿಚಾರದಲ್ಲಿ ಆ ಮಹಿಷಾಸುರನಿಗೂ ಅಷ್ಟೇ ಶ್ರಮವು. ಎಂದರೆ ಆ ಮಹಿಷಾಸುರನು ನಿನ್ನನ್ನು ಅನಾಯಾಸವಾಗಿ ಲೀಲಾ ಜಾಲದಂತೆ ಯುದ್ಧದಲ್ಲಿ ಕೊಲ್ಲುವನು. ॥೨೧॥

ನಾನು ನಿನಗೆ ಕೊಂಚ ಕಠಿಣವಾದ ಮಾತನ್ನಾಡಿದರೂ ಅದು ಶೃಂಗಾರರಸಕ್ಕೆ ವಿರುದ್ಧವಾಗಿ ರಸಭಂಗವಾಗುವುದೆಂದು ಹೆದರುತ್ತಾ ಕಠಿಣವಾದ ಮಾತುಗಳನ್ನಾಡಲು ಹಿಂಜರಿಯುತ್ತಿದೇನೆ. ॥೨೨॥

ದೇವ, ಗುರು, ಹಿರಿಯರಲ್ಲಿಡುವ ಪ್ರೇಮಕ್ಕೆ ಭಕ್ತಿ ಎಂದು ಹೆಸರು. ಸಮಾನ ರಲ್ಲಿಡುವ ಪ್ರೇಮಕ್ಕೆ ಪ್ರೀತಿ ಅಥವಾ ಅನುರಾಗವೆಂದು ಹೆಸರು. ಇಲ್ಲಿ ಭಕ್ತಿ ಪದಕ್ಕೆ ಪ್ರೀತಿ ಎಂಬ ಸಾಮಾನ್ಯಾರ್ಥವನ್ನು ಗ್ರಹಿಸಬೇಕು.

ದೇವತೆಗಳಿಗೆ ಶತ್ರುವಾದ ನಮ್ಮ ರಾಜನು ನಿನ್ನಲ್ಲಿ ಹೆಚ್ಚಾದ ಪ್ರೀತಿಯುಳ್ಳವ ನಾಗಿರುತ್ತಾನೆ. ಆದುದರಿಂದ ನಾನು ನಿನಗೆ ಸಾಮ ಹಾಗೆಯೇ ದಾನ ಇವುಗಳಿಂದ ಕೂಡಿದ ಮೃದುವಾಕ್ಯಗಳನ್ನು ಮಾತ್ರವೇ ಹೇಳಬೇಕಾಗಿದೆ. ॥೨೩॥

ಇಲ್ಲದಿದ್ದರೆ, ಸುಳ್ಳುಮಾತುಗಳನ್ನಾಡುತ್ತಲೂ, ಸೌಂದರ್ಯಯೌವನಗಳ ಹೆಮ್ಮೆಯಿಂದ ದುರಹಂಕಾರಪಡುತ್ತಲೂ ಇರುವ ನಿನ್ನನ್ನು ಈಗಲೇ ಬಾಣದಿಂದ ನಾನೇ ಕೊಂದುಬಿಡಬಲ್ಲೆನು. ॥೨೪॥

ಸ್ವಾಮಿನಾ ಮೇ ನೋಹಿತಃ ಶ್ರುತ್ವಾ ರೂಪಂ ತೇ ಭುವನಾತಿಗಂ ।
ತತ್ಪ್ರಿಯಾರ್ಥಂ ಪ್ರಿಯಂ ಕಾಮಂ ವಕ್ತವ್ಯಂ ತ್ವಯಿ ಯನ್ಮಯಾ ॥೨೫॥

ರಾಜ್ಯಂ ತವ ಧನಂ ಸರ್ವಂ ದಾಸಸ್ತೇ ಮಹಿಷಃ ಕಿಲ ।
ಕುರು ಭಾವಂ ವಿಶಾಲಾಕ್ಷಿ ತ್ಯಕ್ತ್ವಾ ರೋಷಂ ಮೃತಿಪ್ರದಂ ॥೨೬॥

ಪತಾಮಿ ಪಾದಯೋಸ್ತೇಽಹಂ ಭಕ್ತಿಭಾವೇನ ಭಾಮಿನಿ ।
ಪಟ್ಟರಾಜ್ಞೀ ಮಹಾರಾಜ್ಞೋ ಭವ ಶೀಘ್ರಂ ಶುಚಿಸ್ಮಿತೇ ॥೨೭॥

ತ್ರೈಲೋಕ್ಯವಿಭವಂ ಸರ್ವಂ ಪ್ರಾಪ್ಸ್ಯಸಿ ತ್ವಮನಾವಿಲಂ ।
ಸುಖಂ ಸಂಸಾರಜಂ ಸರ್ವಂ ಮಹಿಷಸ್ಯ ಪರಿಗ್ರಹಾತ್ ॥೨೮॥

---

ನಮ್ಮ ರಾಜನು, ಪ್ರಪಂಚಕ್ಕೆಲ್ಲ ಅತಿಶಯವಾಗಿರುವ ನಿನ್ನ ಸೌಂದರ್ಯ ವನ್ನು ಕೇಳಿ, ನಿನ್ನಲ್ಲಿ ಮೋಹಗೊಂಡಿರುವನು. ಅವನ ಹಿತಕ್ಕಾಗಿ ನಿನ್ನ ವಿಷಯ ದಲ್ಲಿ ನಾನು ಪ್ರೀತಿಯುಕ್ತವಾದ ಹಿತವಚನಗಳನ್ನು ಮಾತ್ರ ಆಡಬೇಕಾಗಿರು ವುದು. ॥೨೫॥

ಎಲೌ ವಿಸ್ತಾರವಾದ ಕಣ್ಣುಗಳುಳ್ಳ ದೇವಿಯೇ, ಮಹಿಷಾಸುರನ ರಾಜ್ಯವೂ ಧನವೂ ಸಹ ಎಲ್ಲವೂ ನಿನ್ನದಾಗುವುದು. ರಾಜನಾದ ಮಹಿಷಾಸುರನೂ ನಿನಗೆ ದಾಸನಾಗುವನು. ಆದುದರಿಂದ ಮರಣವನ್ನುಂಟುಮಾಡುವ ಈ ನಿನ್ನ ರೋಷ ವನ್ನು ಬಿಟ್ಟು ಅವನಲ್ಲಿ ನಿನ್ನ ಅನುರಾಗದ ಪ್ರೇಮಭಾವವನ್ನು ಇಡು. ॥೨೬॥

ಎಲೌ ಭಾಮಿನಿಯೇ, ನಾನು ಭಕ್ತಿಭಾವದಿಂದ ನಿನ್ನ ಕಾಲುಗಳಿಗೆ ಬಿದ್ದು ನಮಸ್ಕರಿಸುತ್ತೇನೆ. ಎಲೌ ಮನೋಹರವಾದ ನಿರ್ಮಲವಾದ ಮಂದಹಾಸದಿಂದ ಕೂಡಿದ ಮಹಿಳೆಯೇ, ನೀನು ಬೇಗನೆ ನಮ್ಮ ಮಹಾರಾಜನಿಗೆ ಪಟ್ಟಮಹಿಷಿ ಯಾಗು. ॥೨೭॥

ನೀನು ಮಹಿಷಾಸುರನನ್ನು ವರಿಸಿದರೆ, ದುಃಖಸಂಪರ್ಕವಿಲ್ಲದ ಮೂರು ಲೋಕದ ಐಶ್ವರ್ಯವೆಲ್ಲವನ್ನೂ ಹೊಂದುವುದಲ್ಲದೆ, ಸಂಸಾರದಲ್ಲಿ ಉಂಟಾಗುವ ಸುಖವೆಲ್ಲವನ್ನೂ ಸಹ ಪಡೆಯುವೆ. ॥೨೮॥

|| ದೇವ್ಯುವಾಚ ||

ಶೃಣು ಸಾಚಿವ ವಕ್ಷ್ಯಾಮಿ ವಾಕ್ಯಾನಾಂ ಸಾರಮುತ್ತಮಂ ।
ಶಾಸ್ತ್ರದೃಷ್ಟೇನ ಮಾರ್ಗೇಣ ಚಾತುರ್ಯಮನುಚಿಂತ್ಯ ಚ ॥೨೯॥

ಮಹಿಷಸ್ಯ ಪ್ರಧಾನಸ್ತ್ವಂ ಮಯಾ ಜ್ಞಾತಂ ಧಿಯಾ ಕಿಲ ।
ಪಶುಬುದ್ಧಿಸ್ವಭಾವೋಽಸಿ ವಚನಾತ್ತವ ಸಾಂಪ್ರತಂ ॥೩೦॥

ಮಂತ್ರಿಣಸ್ತ್ವಾದೃಶಾ ಯಸ್ಯ ಸ ಕಥಂ ಬುದ್ಧಿಮಾನ್ಭವೇತ್ ।
ಉಭಯೋಃ ಸದೃಶೋ ಯೋಗಃ ಕೃತೋಽಯಂ ವಿಧಿನಾ ಕಿಲ॥೩೧॥

ಯದುಕ್ತಂ ಸ್ತ್ರೀಸ್ವಭಾವಾಽಸಿ ತದ್ವಿಚಾರಯ ಮೂಢ ಕಿಂ ।
ಪುಮಾನ್ನಾಹಂ ತತ್ಸ್ವಭಾವಾಽಭವಂ ಸ್ತ್ರೀವೇಷಧಾರಿಣೀ ॥೩೨॥

---

ದೇವಿಯು ಹೇಳಿದಳು — ಎಲೈ ಮಂತ್ರಿಯೇ ಕೇಳು. ಶಾಸ್ತ್ರಗಳಲ್ಲಿ ಹೇಳಿರುವ ಮಾರ್ಗದಿಂದಲೂ, ಬುದ್ಧಿವಂತಿಕೆಯನ್ನುಪಯೋಗಿಸಿ ಆಲೋಚಿಸಿಯೂ ತಿಳಿದಿರುವ ಮಾತುಗಳ ಮುಖ್ಯ ಸಾರಾಂಶವನ್ನು ನಿನಗೆ ಹೇಳುತ್ತೇನೆ. ॥೨೯॥

ಎಲೈ ಮಂತ್ರಿಯೇ, ನಾನು ನಿನ್ನನ್ನು ಮಹಿಷನ ಮಂತ್ರಿಯೆಂದು ಬುದ್ಧಿಯಿಂದ ತಿಳಿದು ಇರುತ್ತೇನೆ. ಈಗ ನೀನು ಆಡುತ್ತಿರುವ ಮಾತುಗಳಿಂದ ನೀನು ಪಶುಗಳ ಬುದ್ಧಿ ಸ್ವಭಾವವುಳ್ಳವನೆಂಬುದು ವ್ಯಕ್ತವಾಗಿ ತೋರುತ್ತದೆ. ॥೩೦॥

ಯಾವ ರಾಜನಿಗೆ ನಿನ್ನಂಥವರು ಮಂತ್ರಿಗಳಾಗಿರುವರೋ ಅವನು ಹೇಗೆ ತಾನೇ ಬುದ್ಧಿವಂತನಾದಾನು? ನಿಮ್ಮಿಬ್ಬರಿಗೂ ಸರಿಯಾದ ಈ ಜೋಡಣೆಯು ಬ್ರಹ್ಮನಿಂದಲೇ ಮಾಡಲ್ಪಟ್ಟಿದೆಯಲ್ಲವೇ? ॥೩೧॥

ಎಲೈ ಮೂಢನೇ, ನೀನು ನನ್ನನ್ನು ಸ್ತ್ರೀ ಸ್ವಭಾವದವಳೆಂದು ಹೇಳಿದ್ದೀಯೆ, ಅಲ್ಲವೇ? ನೀನು ನನ್ನನ್ನು ಪುರುಷದೇಹಾಕಾರವಿಲ್ಲದವಳೆಂದು ತಿಳಿದಿದ್ದರೂ ಪುರುಷ ಸ್ವಭಾವದವಳೆಂತ ಏತಕ್ಕೆ ವಿಚಾರಮಾಡಿ ತಿಳಿಯಲಿಲ್ಲ? ಮಾಯಾವಿಶಿಷ್ಟಬ್ರಹ್ಮ ರೂಪಿಣಿಯಾಗಿರುವ ನನಗೆ ಸ್ತ್ರೀ-ಪುರುಷಸ್ವಭಾವಗಳೆರಡೂ ಇರುವುವು ಎಂದು ತಾತ್ಪರ್ಯವು. ಏಕೆಂದರೆ ಈ ಪ್ರಪಂಚದ ಸೃಷ್ಟಿಸ್ಥಿತಿಲಯಗಳೆಲ್ಲವೂ ದೇವಿಯಾದ ನನ್ನಿಂದಲೇ ನೆರವೇರುತ್ತಿರುತ್ತದೆ. ಅಲ್ಲದೆ ದೇವತೆಗಳ ಪ್ರಾರ್ಥನೆಯಂತೆಯೂ ಮಹಿಷಾಸುರನನ್ನು ಕೊಲ್ಲಲೂ ನಾನು ಸ್ತ್ರೀವೇಷವನ್ನು ಧರಿಸಿರುತ್ತೇನೆ. ॥೩೨॥

ಯಾಚಿತಂ ಮರಣಂ ಪೂರ್ವಂ ಸ್ತ್ರಿಯಾ ತ್ವತ್ಪ್ರಭುಣಾ ಯಥಾ ।
ತಸ್ಮಾನ್ಮನ್ಯೇಽತಿಮೂರ್ಖೋಽಸೌ ನ ವೀರರಸವಿತ್ತಮಃ ॥೩೩॥

ಕಾಮಿನ್ಯಾ ಮರಣಂ ಕ್ಲೀಬೇರತಿದಂ ಶೂರದುಃಖದಂ ।
ಪ್ರಾರ್ಥಿತಂ ಪ್ರಭುಣಾ ತೇನ ಮಹಿಷೇಣಾತ್ಮಬುದ್ಧಿನಾ ॥೩೪॥

ತಸ್ಮಾತ್ಸ್ತ್ರೀರೂಪಮಾಧಾಯ ಕಾರ್ಯಂ ಕರ್ತುಮುಪಾಗತಾ ।
ಕಥಂ ಬಿಭೇಮಿ ತ್ವದ್ವಾಕ್ಯೈರ್ಧರ್ಮಶಾಸ್ತ್ರವಿರೋಧಕೈಃ ॥೩೫॥

ವಿಪರೀತಂ ಯದಾ ದೈವಂ ತೃಣಂ ವಜ್ರಸಮಂ ಭವೇತ್ ।
ವಿಧಿಶ್ಚೇತ್ಸುಮುಖಃ ಕಾಮಂ ಕುಲಿಶಂ ತೂಲವತ್ತದಾ ॥೩೬॥

ಕಿಂ ಸೈನ್ಯೈರಾಯುಧೈಃ ಕಿಂ ವಾ ಪ್ರಪಂಚೈರ್ದುರ್ಗಸೇವನೈಃ ।
ಮರಣಂ ಸಾಂಪ್ರತಂ ಯಸ್ಯ ತಸ್ಯ ಸೈನ್ಯೈಸ್ತು ಕಿಂ ಫಲಂ ॥೩೭॥

---

ಪೂರ್ವದಲ್ಲಿ ನಿನ್ನ ಈ ಪ್ರಭುವು ತನಗೆ ಸ್ತ್ರೀಯಿಂದ ಮರಣವನ್ನು ಕೇಳಿ ಕೊಂಡಿರುತ್ತಾನೆ. ಆದುದರಿಂದ ಅವನು ವೀರರಸದ ರುಚಿಯನ್ನು ಸುತರಾಂ ತಿಳಿಯದ ದಡ್ಡನೆಂದು ನನಗೆ ತೋರುತ್ತದೆ. ॥೩೩॥

ಹೆಂಗುಸಿನಿಂದ ಮರಣವು ನಪುಂಸಕನಿಗೆ ಮಾತ್ರ ಸಂತೋಷವನ್ನುಂಟು ಮಾಡುವುದು, ಶೂರನಾದವನಿಗೆ ದುಃಖವನ್ನುಂಟುಮಾಡುವುದು. ಈ ರೀತಿಯ ಮರಣವನ್ನು ನಿನ್ನ ಪ್ರಭುವು ತನ್ನ ಸ್ವಂತ ಕೋಣನ ಬುದ್ಧಿಯಿಂದಲೇ ಬೇಡಿ ಕೊಂಡಿರುವನು. ॥೩೪॥

ಆದುದರಿಂದಲೇ ಸ್ತ್ರೀರೂಪವನ್ನು ಧರಿಸಿ ದೇವತೆಗಳ ಕಾರ್ಯಸಾಧನೆ ಗಾಗಿಯೇ ಇಲ್ಲಿಗೆ ನಾನು ಬಂದಿರುತ್ತೇನೆ. ನೀನು ಆಡುವ ಧರ್ಮಶಾಸ್ತ್ರವಿರುದ್ಧ ವಾದ, ಯುಕ್ತಿಯೂ ಇಲ್ಲದ, ಮಾತುಗಳಿಗೆ ನಾನು ಹೇಗೆ ಹೆದರುವೆನು? ॥೩೫॥

ಎಂಥವನಿಗೂ ದೈವಗತಿಯು ವಿರುದ್ಧವಾಗಿದ್ದರೆ ಹುಲ್ಲುಕಡ್ಡಿಯೂ ವಜ್ರಾ ಯುಧಕ್ಕೆ ಸಮನಾಗುವುದು. ವಿಧಿಯು ಅನುಕೂಲವಾಗಿದ್ದಲ್ಲಿ ವಜ್ರಾಯುಧವೂ ಸಹ ಹತ್ತಿಯ ಹಾಗೆ ಕಾರ್ಯಕಾರಿಯಾಗದೆ ಮೆತ್ತಗಾಗುವುದು. ॥೩೬॥

ಇನ್ನು ನಿಮ್ಮ ದೊರೆಗೆ ಸೇನೆ ಮುಂತಾದ ಸಹಾಯವಿರುವುದೆಂದು ಹೇಳಿದೆ ಯಲ್ಲವೇ? ಆಯುಧಗಳಿಂದಲೂ, ಸೇನೆಯಿಂದಲೂ ಬೇರೆ ಬೇರೆಯಾದ ಲೋಕ

ಯದಾ್ಽಯಂ ದೇಹಸಂಬಂಧೋ ಜೀವಸ್ಯ ಕಾಲಯೋಗತಃ ।
ತದೈವ ಲಿಖಿತಂ ಸರ್ವಂ ಸುಖಂ ದುಃಖಂ ತಥಾ ಮೃತಿಃ ॥೩೮॥

ಯಸ್ಯ ಯೇನ ಪ್ರಕಾರೇಣ ಮರಣಂ ದೈವನಿರ್ಮಿತಂ ।
ತಸ್ಯ ತೇನೈವ ಜಾಯೇತ ನಾನ್ಯಥೇತಿ ವಿನಿಶ್ಚಯಃ ॥೩೯॥

ಬ್ರಹ್ಮಾದೀನಾಂ ಯಥಾ ಕಾಲೇ ನಾಶೋತ್ಪತ್ತೀ ವಿನಿರ್ಮಿತೇ ।
ತಥೈವ ಭವತಃ ಕಾಮಂ ಕಿಮನ್ಯೇಷಾಂ ವಿಚಾರ್ಯತೇ ॥೪೦॥

ಯೇ ಮೃತ್ಯುಧರ್ಮಿಣಸ್ತೇಷಾಂ ವರದಾನೇನ ದರ್ಪಿತಾಃ ।
ಮರಿಷ್ಯಾಮೋ ನ ಮನ್ಯಂತೇ ತೇ ಮೂಢಾ ಮಂದಚೇತಸಃ ॥೪೧॥

---

ಗಳಿಂದಲೂ, ದುರ್ಗವನ್ನು ಆಶ್ರಯಿಸುವುದರಿಂದಲೂ ಇವೇ ಮುಂತಾದ ವಿವರ ವಿಸ್ತಾರಗಳ ಸಂಪತ್ತಿನಿಂದ ಏನು ಉಪಯೋಗವು ? ಯಾವನಿಗೆ ಮರಣವು ಸನ್ನಿಹಿತವಾಗಿರುತ್ತದೆಯೋ ಅವನಿಗೆ ಸೈನ್ಯಗಳಿಂದ ಪ್ರಯೋಜನವೇನು ? ॥೩೭॥

ಜೀವನಿಗೆ ಅವನ ಪ್ರಾರಬ್ಧಕರ್ಮವು ಫಲವನ್ನು ಕೊಡುವ ಕಾಲದ ಯೋಗದಿಂದ ದೇಹಸಂಬಂಧವುಂಟಾದಾಗಲೇ ಅವನಿಗೆ ಆ ದೇಹದಲ್ಲಿ ಸಂಭವಿಸುವ ಸುಖ, ದುಃಖ, ಮರಣ ಇವುಗಳೂ ಸಹ ಹೀಗೆ ಹೀಗೆಯೇ ಆಗಬೇಕೆಂಬುದು ನಿಶ್ಚಿತವಾಗಿ ಬರೆದಿರುವಂತೆ ಗೊತ್ತುಮಾಡಲ್ಪಟ್ಟಿರುತ್ತದೆ. ॥೩೮॥

ಜೀವನಿಗೆ ಯಾವ ರೀತಿಯಿಂದ ಮರಣವು ಸಂಭವಿಸಬೇಕೆಂದು ಅವನ ಜನ್ಮಾಂತರದ ಕರ್ಮವೆಂಬ ದೈವದಿಂದ ನಿಶ್ಚಯಿಸಲ್ಪಟ್ಟಿರುವುದೋ ಅವನಿಗೆ ಅದೇ ರೀತಿಯಿಂದಲೇ ಮರಣವುಂಟಾಗುತ್ತದೆಯೇ ಹೊರತು ಬೇರೆ ಇಲ್ಲವೆಂದು ಶಾಸ್ತ್ರ ನಿಶ್ಚಯವೂ ಅನುಭವವೂ ಇರುತ್ತದೆ. ॥೩೯॥

ಬ್ರಹ್ಮನೇ ಮೊದಲಾದ ದೊಡ್ಡವರಿಗೂ ಜನನಮರಣಗಳು ಕ್ಲಪ್ತವಾದ ಕಾಲಗಳಲ್ಲಿ ನಿಷ್ಕೃಷ್ಟವಾದ ರೀತಿಯಂತೆ ನಡೆಯುತ್ತವೆ. ಹೀಗಿರುವಾಗ ಇತರರ ವಿಷಯದಲ್ಲಿ ಅದು ಹಾಗೆಯೇ ಆಗುವುದೆಂದು ಬೇರೆ ಹೇಳತಕ್ಕದ್ದೇನು ? ॥೪೦॥

ಮರಣಕ್ಕೆ ತಾವೇ ಅಧೀನರಾಗಿರುವ ದೇವತೆಗಳಿಂದ ವರವನ್ನು ಪಡೆದು, ಯಾರು ಆ ವರದಾನದ ಹೆಮ್ಮೆಯಿಂದ ತಾವು ಮೃತಿಯನ್ನೈದುವುದಿಲ್ಲವೆಂದು ನಂಬಿಕೊಂಡು ಮೆರೆಯುವರೋ, ಅವರು ಅಲ್ಪ ಬುದ್ಧಿಯುಳ್ಳ ದಡ್ಡರು. ॥೪೧॥

ತಸ್ಮಾದ್ಗಚ್ಛ ನೃಪಂ ಬ್ರೂಹಿ ವಚನಂ ಮಮ ಸತ್ವರಂ ।
ಯದಾಜ್ಞಾಪಯತೇ ಭೂಪಸ್ತತ್ಕರ್ತವ್ಯಂ ತ್ವಯಾ ಕಿಲ ॥೪೨॥

ಮಘವಾ ಸ್ವರ್ಗಮಾಪ್ನೋತು ದೇವಾಃ ಸಂತು ಹವಿರ್ಭುಜಃ ।
ಯೂಯಂ ಪ್ರಯಾತ ಪಾತಾಲಂ ಯದಿ ಜೀವಿತುಮಿಚ್ಛಥ ॥೪೩॥

ಅನ್ಯಥಾ ಚೇನ್ಮತಿರ್ಮಂದ ಮಹಿಷಸ್ಯ ದುರಾತ್ಮನಃ ।
ತದ್ಯುಧ್ಯಸ್ವ ಮಯಾ ಸಾರ್ಧಂ ಮರಣಾಯ ಕೃತಾದರಃ ॥೪೪॥

ಮನ್ಯಸೇ ಸಂಗರೇ ಭಗ್ನಾ ದೇವಾ ವಿಷ್ಣುಪುರೋಗಮಾಃ ।
ದೈವಂ ಹಿ ಕಾರಣಂ ತತ್ರ ವರದಾನಂ ಪ್ರಜಾಪತೇಃ ॥೪೫॥

॥ ವ್ಯಾಸ ಉವಾಚ ॥

ಇತಿ ದೇವ್ಯಾ ವಚಃ ಶ್ರುತ್ವಾ ಚಿಂತಯಾಮಾಸ ದಾನವಃ ।
ಕಿಂ ಕರ್ತವ್ಯಂ ಮಯಾ ಯುದ್ಧಂ ಗಂತವ್ಯಂ ವಾ ನೃಪಂ ಪ್ರತಿ ॥೪೬॥

---

ಆದುದರಿಂದ ನೀನು ನಿನ್ನ ದೊರೆಯ ಸಮೀಪಕ್ಕೆ ಬೇಗನೆ ಹೋಗು, ನಾನು ಹೇಳಿದ ಈ ಮಾತುಗಳನ್ನು ಹೇಳು. ದೊರೆಯು ನಿನಗೆ ಏನನ್ನು ಆಜ್ಞಾಪಿಸುವನೋ ಅದನ್ನು ನೀನು ಮಾಡಬೇಕಾದುದು ನಿನ್ನ ಕರ್ತವ್ಯವಲ್ಲವೇ ? ॥೪೨॥

ಇಂದ್ರನು ಸ್ವರ್ಗವನ್ನು ಮುಂಚಿನಂತೆ ಸೇರಲಿ. ದೇವತೆಗಳು ಹವಿಸ್ಸನ್ನು ಭುಂಜಿಸುವವರಾಗಲಿ. ನೀವುಗಳು ಬದುಕಬೇಕೆಂಬ ಇಚ್ಛೆಯಿದ್ದಲ್ಲಿ ಪಾತಾಳಲೋಕಕ್ಕೆ ನಡೆಯಿರಿ. ॥೪೩॥

ಎಲೈ ಮಂದಮತಿಯೇ, ದುಷ್ಟನಾದ ಮಹಿಷಾಸುರನ ಬುದ್ಧಿಯು ನಾನು ಹೇಳಿದ ಮಾತಿಗೆ ವಿರುದ್ಧವಾಗಿದ್ದಲ್ಲಿ ಮತ್ತು ನಿನಗೂ ಮರಣದಲ್ಲಿಯೇ ಆಸಕ್ತಿಯಿದ್ದರೆ ನನ್ನ ಕೂಡ ನೀನು ಯುದ್ಧವನ್ನು ಮಾಡು. ॥೪೪॥

ಯುದ್ಧದಲ್ಲಿ ವಿಷ್ಣುವೇ ಮೊದಲಾದ ದೇವತೆಗಳು ಸೋತುಹೋದರೆಂದು ನೀನು ತಿಳಿದಿರುತ್ತೀಯೆ. ಈ ಅಪಜಯವಾಗಲು ಬ್ರಹ್ಮನು ಕೊಟ್ಟ ವರವೂ ದೈವವೂ ಕಾರಣವಾಗಿರುತ್ತವೆಯೇ ಹೊರತು, ನಿಮ್ಮ ಪರಾಕ್ರಮವೇ ಕಾರಣವಲ್ಲವು. ॥೪೫॥

ವ್ಯಾಸನು ಹೇಳಿದನು---ಹೀಗೆ ಹೇಳಿದ ದೇವಿಯ ಮಾತನ್ನು ಕೇಳಿ ಆ ದಾನವನು "ನಾನು ಈಗ ಯುದ್ಧವನ್ನು ಮಾಡತಕ್ಕದ್ದೇ ಅಥವಾ ದೊರೆಯಾದ

ವಿವಾಹಾರ್ಥಮಿಹಾಜ್ಞಪ್ತೋ ರಾಜ್ಞಾ ಕಾಮಾತುರೇಣ ವೈ ।
ತತ್ಕಥಂ ವಿರಸಂ ಕೃತ್ವಾ ಗಚ್ಛೇಯಂ ನೃಪಸನ್ನಿಧೌ ॥೪೭॥

ಇಯಂ ಬುದ್ಧಿಃ ಸಮೀಚೀನಾ ಯದ್ವ್ರಜಾಮಿ ಕಲಿಂ ವಿನಾ ।
ಯಥಾಗತಂ ತಥಾ ಶೀಘ್ರಂ ರಾಜ್ಞೇ ಸಂವೇದಯಾಮ್ಯಹಂ ॥೪೮॥

ಸ ಪ್ರಮಾಣಂ ಪುನಃ ಕಾರ್ಯೇ ರಾಜಾ ಮತಿಮತಾಂ ವರಃ ।
ಕರಿಷ್ಯತಿ ವಿಚಾರ್ಯೈವ ಸಚಿವೈರ್ನಿಪುಣೈಃ ಸಹ ॥೪೯॥

ಸಹಸಾ ನ ಮಯಾ ಯುದ್ಧಂ ಕರ್ತವ್ಯಮನಯಾ ಸಹ ।
ಜಯೇ ಪರಾಜಯೇ ವಾಽಪಿ ಭೂಪತೇರಪ್ರಿಯಂ ಭವೇತ್ ॥೫೦॥

---

ಮಹಿಷಾಸುರನ ಸಮೀಪಕ್ಕೆ ಹೋಗಿ ಈ ವಿಚಾರವನ್ನು ತಿಳಿಸತಕ್ಕದ್ದೇ" ಎಂಬುದಾಗಿ ಯೋಚಿಸಿದನು. ॥೪೬॥

ಕಾಮಾತುರನಾದ ದೊರೆಯಿಂದ, ವಿವಾಹಾರ್ಥವಾಗಿ ಈ ಸ್ತ್ರೀಯನ್ನು ಸಾಮ ದಾನೋಪಾಯಗಳಿಂದ ಕರೆತರಬೇಕೆಂದು ಆಜ್ಞಾಪಿಸಲ್ಪಟ್ಟು, ಇಲ್ಲಿಗೆ ಬಂದಿರುವ ನಾನು ಆ ಕೆಲಸವನ್ನು ಕೆಡಿಸಿ ದೊರೆಯ ಹತ್ತಿರಕ್ಕೆ ಹೇಗೆ ತಾನೇ ಹೋಗಲಿ? ॥೪೭॥

ಜಗಳವಿಲ್ಲದೆ ಬಂದ ಹಾಗೆ ಬೇಗನೆ ಹಿಂತಿರುಗಿ ಹೋಗುವುದೇ ಒಳ್ಳೆಯ ಬುದ್ಧಿವಂತಿಕೆಯ ಕೆಲಸವಾಗಿರುವುದರಿಂದ, ನಾನು ಹೋಗಿ ಇದನ್ನು ರಾಜನಿಗೆ ತಿಳಿಸುವೆನು. ॥೪೮॥

ಬುದ್ಧಿವಂತರಲ್ಲಿ ಶ್ರೇಷ್ಠನಾದ ಆ ರಾಜನು ಮಂತ್ರಾಲೋಚನೆಯಲ್ಲಿ ಕುಶಲ ರಾದ ಮಂತ್ರಿಗಳೊಡನೆ ಚನ್ನಾಗಿ ವಿಚಾರಮಾಡಿ ಈ ವಿಷಯದಲ್ಲಿ ಮಾಡಬೇಕಾದು ದನ್ನು ನಿಶ್ಚಯಿಸುವನು. ॥೪೯॥

ಆದುದರಿಂದ ನಾನು ಈ ಹೆಂಗುಸಿನೊಡನೆ ದುಡುಕಿ ಯುದ್ಧವನ್ನು ಮಾಡ ಬಾರದು. ನನಗೆ ಜಯವಾದರೂ, ಅಪಜಯವಾದರೂ, ಅದು ದೊರೆಯಾದ ಮಹಿ ಷಾಸುರನಿಗೆ ಅಹಿತಕರವೇ ಆಗಬಹುದು. ॥೫೦॥

ಯದಿ ಮಾಂ ಸುಂದರೀ ಹನ್ಯಾದಹಂ ವಾ ಹನ್ಮಿ ತಾಂ ಪುನಃ ।
ಯೇನ ಕೇನಾಪ್ಯುಪಾಯೇನ ಸ ಕುಪ್ಯೇತ್ಪಾರ್ಥಿವಃ ಕಿಲ ॥೫೧॥

ತಸ್ಮಾತ್ತತ್ರೈವ ಗತ್ವಾಽಹಂ ಬೋಧಯಿಷ್ಯಾಮಿ ತಂ ನೃಪಂ ।
ಯಥಾದ್ಯಾಭಿಹಿತಂ ದೇವ್ಯಾ ಯಥಾರುಚಿ ಕರೋತು ಸಃ ॥೫೨॥

॥ ವ್ಯಾಸ ಉವಾಚ ॥

ಇತಿ ಸಂಚಿಂತ್ಯ ಮೇಧಾವೀ ಜಗಾಮ ನೃಪಸನ್ನಿಧೌ ।
ಪ್ರಣಮ್ಯ ತಮುವಾಚೇದಂ ಕೃತಾಂಜಲಿರಮಾತ್ಯಜಃ ॥೫೩॥

॥ ಮಂತ್ರ್ಯುವಾಚ ॥

ರಾಜನ್ ದೇವೀ ವರಾರೋಹಾ ಸಿಂಹಸ್ಯೋಪರಿ ಸಂಸ್ಥಿತಾ ।
ಅಷ್ಟಾದಶಭುಜಾ ರಮ್ಯಾ ವರಾಯುಧಧರಾಪರಾ ॥೫೪॥

---

ಈ ಸುಂದರಿಯಾದ ಹೆಂಗುಸು ನನ್ನನ್ನು ಕೊಂದರೂ, ಅಥವಾ ಯಾವುದಾದರೂ ಒಂದು ಉಪಾಯದಿಂದ ನಾನೇ ಇವಳನ್ನು ಯುದ್ಧಮಾಡಿ ಕೊಂದರೂ, ಆ ನಮ್ಮ ದೊರೆಯು ಕೋಪಗೊಳ್ಳುವನಲ್ಲವೇ ? ॥೫೧॥

ಆದುದರಿಂದ ನಾನು ಅಲ್ಲಿಗೇ ಹೋಗಿ ಆ ದೊರೆಗೆ ಈ ದೇವಿಯು ಈಗ ಹೇಳಿದಂತೆಯೇ ಎಚ್ಚರಿಸಿ ತಿಳಿಯಹೇಳುವೆನು. ಬಳಿಕ ಅವನಿಗೆ ಇಷ್ಟವೆಂದು ತೋರಿದಂತೆ ಮಾಡಲಿ. ॥೫೨॥

ವ್ಯಾಸಮುನಿಯು ಹೇಳಿದನು—ಬುದ್ಧಿವಂತನಾದ ಆ ಮಂತ್ರಿಯು ಹೀಗೆ ಯೋಚಿಸಿಕೊಂಡು ದೊರೆಯಾದ ಮಹಿಷಾಸುರನ ಹತ್ತಿರಕ್ಕೆ ಹೋಗಿ ಅವನಿಗೆ ನಮಸ್ಕಾರಮಾಡಿ ಕೈಮುಗಿದುಕೊಂಡು ಈ ಮಾತನ್ನು ಹೇಳಿದನು. ॥೫೩॥

ಮಂತ್ರಿಯು ಹೇಳಿದನು—ಓ ಮಹಾರಾಜನೇ, ಆ ಉತ್ತಮ ಸ್ತ್ರೀಯಾದ ದೇವಿಯು ಹದಿನೆಂಟು ತೋಳುಗಳಿಂದ ಕೂಡಿ, ದಿವ್ಯಾಯುಧಗಳನ್ನು ಧರಿಸಿ ಸಿಂಹದ ಮೇಲೆ ಕುಳಿತು ಮನೋಹರವಾಗಿ ಒಪ್ಪುತ್ತಿರುವಳು. ॥೫೪॥

**ಸಾ ಮಯೋಕ್ತಾ ಮಹಾರಾಜ ಮಹಿಷಂ ಭಜ ಭಾಮಿನಿ ।**
**ಮಹಿಷೀ ಭವ ರಾಜ್ಞಸ್ತ್ವಂ ತ್ರೈಲೋಕ್ಯಾಧಿಪತೇಃ ಪ್ರಿಯಾ ॥೫೫॥**

**ಪಟ್ಟರಾಜ್ಞೀ ತ್ವಮೇವಾಸ್ಯ ಭವಿತಾ ನಾತ್ರ ಸಂಶಯಃ ।**
**ಸ ತವಾಜ್ಞಾಕರೋ ಜಾತೋ ವಶವರ್ತೀ ಭವಿಷ್ಯತಿ ॥೫೬॥**

**ತ್ರೈಲೋಕ್ಯವಿಭವಂ ಭುಕ್ತ್ವಾ ಚಿರಕಾಲಂ ವರಾನನೇ ।**
**ಮಹಿಷಂ ಪತಿಮಾಸಾದ್ಯ ಯೋಷಿತಾಂ ಸುಭಗಾ ಭವ ॥೫೭॥**

**ಇತಿ ಮದ್ವಚನಂ ಶ್ರುತ್ವಾ ಸಾ ಸ್ಮಯಾವೇಶಮೋಹಿತಾ ।**
**ಮಾಮುವಾಚ ವಿಶಾಲಾಕ್ಷೀ ಸ್ಮಿತಪೂರ್ವಮಿದಂ ವಚಃ ॥೫೮॥**

**ಮಹಿಷೀಗರ್ಭಸಂಭೂತಂ ಪಶೂನಾಮಧಮಂ ಕಿಲ ।**
**ಬಲಿಂ ದಾಸ್ಯಾಮ್ಯಹಂ ದೇವ್ಯೈ ಸುರಾಣಾಂ ಹಿತಕಾಮ್ಯಯಾ ॥೫೯॥**

---

ಓ ಮಹಾರಾಜನೇ, ನಾನು ಅವಳಿಗೆ ಹೀಗೆ ಹೇಳಿದೆನು—ಎಲೈ ಕಾಂತಿ ಸಂಪತ್ತಿನಿಂದ ಕೂಡಿರುವ ಭಾಮಿನಿಯೇ, ನೀನು ನಮ್ಮ ಮಹಾರಾಜನಾದ, ಮೂರು ಲೋಕಗಳಿಗೂ ಅಧಿಪತಿಯಾಗಿರುವ, ಮಹಿಷಾಸುರನನ್ನು ವರಿಸಿ ಅವನ ಪ್ರೀತಿಪಾತ್ರಳಾದ ಪಟ್ಟಮಹಿಷಿಯಾಗು. ||೫೫||

ನೀನೇ ಆ ನಮ್ಮ ಪ್ರಭುವಿಗೆ ಪಟ್ಟದ ರಾಣಿಯು ಆಗುವೆ. ಇದರಲ್ಲಿ ಸಂಶಯವಿಲ್ಲವು. ಅವನೂ ನಿನ್ನ ಆಜ್ಞೆಯನ್ನು ನಡೆಸುವವನಾಗಿ ನಿನ್ನ ಅಧೀನದಲ್ಲಿರುವನು.||೫೬||

ಎಲೈ ಉತ್ತಮವಾದ ಮುಖವುಳ್ಳ ಸುಂದರಿಯೇ, ನೀನು ಮಹಿಷನನ್ನು ಪತಿಯನ್ನಾಗಿ ಹೊಂದಿ ಮೂರುಲೋಕದ ಐಶ್ವರ್ಯವನ್ನೂ ಬಹಳ ಕಾಲದವರೆಗೂ ಅನುಭವಿಸಿ, ಸ್ತ್ರೀಯರೆಲ್ಲರಿಗಿಂತಲೂ ಸೌಭಾಗ್ಯಶಾಲಿನಿಯಾಗಿರು. ||೫೭||

ಹೀಗೆ ಹೇಳಿದ ನನ್ನ ಮಾತನ್ನು ಕೇಳಿ, ದೊಡ್ಡ ಕಣ್ಣುಗಳುಳ್ಳ ಆ ನಾರಿಯು ಗರ್ವದ ಆವೇಶದಿಂದ ಮೋಹಿತಳಾಗಿ ನನ್ನನ್ನು ಕುರಿತು ಮಂದಹಾಸಪೂರ್ವಕವಾಗಿ ಈ ಮಾತನ್ನು ಹೇಳಿದಳು. ||೫೮||

ಮಹಿಷೀಗರ್ಭದಲ್ಲಿ ಹುಟ್ಟಿದ, ಪಶುಗಳಲ್ಲೂ ಬಹಳ ಕೀಳಾದ ಆ ಕೋಣನಾದ ನೀಚನನ್ನು ನಾನು ದೇವತೆಗಳಿಗೆ ಹಿತವನ್ನು ಮಾಡುವ ಸಲುವಾಗಿ, ದೇವಿಗೆ ಬಲಿಯನ್ನು ಕೊಡುವೆನು. ||೫೯||

ಕಾ ಮೂಢಾ ಕಾಮಿನೀ ಲೋಕೇ ಮಹಿಷಂ ವೈ ಪತಿಂ ಭಜೇತ್ ।
ಮಾದೃಶೀ ಮಂದಬುದ್ಧೇ ಕಿಂ ಪಶುಭಾವಂ ಭಜೇದಿಹ ॥೬೦॥

ಮಹಿಷೀ ಮಹಿಷಂ ನಾಥಂ ಸಶೃಂಗಾ ಶೃಂಗಸಂಯುತಂ ।
ಕುರುತೇ ಕ್ರಂದಮಾನಾ ವೈ ನಾಹಂ ತತ್ಸದೃಶೀ ಶಠ ॥೬೧॥

ಕರಿಷ್ಯೇಽಹಂ ಮೃಧೇ ಯುದ್ಧಂ ಹನಿಷ್ಯೇ ತ್ವಾಂ ಸುರಾಪ್ರಿಯಂ ।
ಗಚ್ಛ ವಾ ದುಷ್ಟ ಪಾತಾಲಂ ಜೀವಿತೇಚ್ಛಾ ಯದಸ್ತಿ ತೇ ॥೬೨॥

ಪರುಷಂ ತು ತಯಾ ವಾಕ್ಯಮಿತ್ಯುಕ್ತಂ ನೃಪ ಮತ್ತಯಾ ।
ತಚ್ಛ್ರುತ್ವಾಽಹಂ ಸಮಾಯಾತಃ ಪ್ರತಿಚಿಂತ್ಯ ಪುನಃಪುನಃ ॥೬೩॥

---

ಲೋಕದಲ್ಲಿ ಯಾವ ಕಾಮಿನಿಯಾಗಲಿ ಅವಳು ಎಷ್ಟೇ ದಡ್ಡಳಾಗಿರಲಿ, ಅವಳು ಇಂತಹ ಕೋಣನಾಗಿರುವ ಮಹಿಷನನ್ನು ಪತಿಯನ್ನಾಗಿ ಪರಿಗ್ರಹಿಸುವಳೇ? ಎಲೈ ಬುದ್ಧಿಹೀನನೇ, ಹೀಗಿರುವಲ್ಲಿ ನನ್ನಂಥವಳು ಈ ಮಹಿಷನನ್ನು ವರಿಸಿ ಅವನಂತೆ ಪಶುಭಾವವನ್ನು ಹೊಂದುವಳೇ ? ||೬೦||

ಮಹಿಷಿಯು (ಎಮ್ಮೆಯು) ಕೊಂಬುಳ್ಳವಳು, ಅರಚುತ್ತಿರುವವಳು. ಇಂಥವಳು ಮಾತ್ರ ತನಗೆ ಅನುರೂಪನಾದ ಎಂದರೆ ಕೊಂಬುಗಳಿಂದ ಕೂಡಿ ಅರಚುತ್ತಿರುವ ಮಹಿಷನನ್ನು (ಕೋಣನನ್ನು) ಪತಿಯನ್ನಾಗಿ ಹೊಂದುವಳು. ಆದರೆ ಎಲೈ ನೀಚನೇ, ನಾನು ಅಂತಹ ಮಹಿಷನಿಗೆ ಸದೃಶಳಾದವಳಲ್ಲವು, ||೬೧||

ಎಲೈ ದುಷ್ಟನೇ, ನಾನು ರಣಾಂಗಣದಲ್ಲಿ ಯುದ್ಧವನ್ನು ಮಾಡುವೆನು. ದೇವತೆಗಳಿಗೆ ಶತ್ರುವಾದ ನಿನ್ನನ್ನು ಯುದ್ಧದಲ್ಲಿ ಕೊಲ್ಲುವೆನು. ನಿನಗೆ ಜೀವಿಸಿರಬೇಕೆಂಬ ಇಚ್ಛೆಯು ಇದ್ದಲ್ಲಿ ಪಾತಾಲಕ್ಕೆ ಹೋಗು ಎಂದು ಹೇಳಿದಳು. ||೬೧||

ಓ ದೊರೆಯೇ, ಮದಿಸಿದ ಆ ಸ್ತ್ರೀಯು ಕರ್ಣಕಠೋರವಾದ ಇಂಥಾ ಮಾತುಗಳನ್ನಾಡಿದಳು. ಅದನ್ನು ಕೇಳಿ ನಾನು ಅನೇಕಸಾರಿ ಯೋಚನೆಯನ್ನು ಮಾಡಿ ಹಿಂತಿರುಗಿ ಇಲ್ಲಿಗೆ ಬಂದಿರುವೆನು. ||೬೩||

ರಸಭಂಗಂ ವಿಚಿಂತ್ಯೈವ ನ ಯುದ್ಧಂ ತು ಮಯಾ ಕೃತಂ ।
ಆಜ್ಞಾಂ ವಿನಾ ತವಾತ್ಯಂತಂ ಕಥಂ ಕುರ್ಯಾಂ ವೃಥೋಽದ್ಯಮಂ ॥೬೪॥

ಸಾಽತೀವ ಚ ಬಲೋನ್ಮತ್ತಾ ವರ್ತತೇ ಭೂಪ ಭಾಮಿನೀ ।
ಭವಿತವ್ಯಂ ನ ಜಾನಾಮಿ ಕಿಂ ವಾ ಭಾವಿ ಭವಿಷ್ಯತಿ ॥೬೫॥

ಕಾರ್ಯೇಽಸ್ಮಿಂಸ್ತ್ವಂ ಪ್ರಮಾಣಂ ನೋ ಮಂತ್ರೋಽತೀವದುರಾಸದಃ ।
ಯುದ್ಧಂ ಪಲಾಯನಂ ಶ್ರೇಯೋ ನ ಜಾನೇಽಹಂ ವಿನಿಶ್ಚಯಂ ॥೬೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
॥ ದಶಮೋಽಧ್ಯಾಯಃ ॥

---

ರಸಭಂಗವಾದೀತೆಂದು ಯೋಚಿಸಿ ನಿನ್ನ ಅಪ್ಪಣೆಯಿಲ್ಲದೆ ನಾನು ಯುದ್ಧವನ್ನು ಮಾಡಲಿಲ್ಲ. ನಿನ್ನ ಕಡೆಯ ಅಪ್ಪಣೆ ಇಲ್ಲದೆ ವ್ಯರ್ಥವಾದ ಪ್ರಯತ್ನವನ್ನು ನಾನು ಹೇಗೆತಾನೆ ಮಾಡಲಿ ? ॥೬೪॥

ಓ ರಾಜನೇ, ತೇಜಸ್ಸಿನ ಸಂಪತ್ತುಳ್ಳ ಆ ಹೆಂಗುಸು ಬಲದಿಂದ ಬಹಳವಾಗಿ ಮದಿಸಿರುತ್ತಾಳೆ. ಮುಂದೆ ಏನು ಆಗಬೇಕಾಗಿರುವುದೋ ಅದನ್ನು ನಾನು ತಿಳಿಯಲಾರೆನು. ಏನು ಆಗುವುದೆಂದು ಕ್ಲೃಪ್ತವಾಗಿದೆಯೋ ಅದು ಅದೃಷ್ಟವನ್ನು ಅನುಸರಿಸಿ ಆಗಿಯೇ ಆಗುವುದು ! ॥೬೫॥

ಈ ಸಂದರ್ಭದಲ್ಲಿ ಮಂತ್ರಾಲೋಚನೆಯನ್ನು ಹೇಳುವುದು ನಮಗೆ ಬಹಳ ಕಷ್ಟಕರವಾಗಿರುವುದು. ಇದನ್ನು ನೀನೇ ನಿಶ್ಚಯಿಸಬೇಕು. ಯುದ್ಧಮಾಡುವುದೋ ಅಥವಾ ಓಡಿಹೋಗುವುದೋ ಇವೆರಡರಲ್ಲಿ ಯಾವುದನ್ನು ಮಾಡಿದರೆ ನಮಗೆ ನಿಶ್ಚಯವಾಗಿ ಒಳ್ಳೆಯದಾಗುವುದೆಂಬುದನ್ನು ನಾನು ತಿಳಿಯಲಾರೆನು. ॥೬೬॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ಮಹಿಷೋ ಮದವಿಹ್ವಲಃ ।**
**ಮಂತ್ರಿವೃದ್ಧಾನ್ ಸಮಾಹೂಯ ರಾಜಾ ವಚನಮಬ್ರವೀತ್ ||೧||**

|| ರಾಜೋವಾಚ ||

**ಮಂತ್ರಿಣಃ ಕಿಂಚ ಕರ್ತವ್ಯಂ ವಿಸ್ರಬ್ಧಂ ಬ್ರೂತ ಮಾಚಿರಂ ।**
**ಆಗತಾ ದೇವವಿಹಿತಾ ಮಾಯೇಯಂ ಶಾಂಬರೀವ ಕಿಂ ||೨||**

---

ವ್ಯಾಸಮಹರ್ಷಿಯು ಹೇಳಿದನು— ಓ ಜನಮೇಜಯರಾಜನೇ, ದೇವಿಗೆ ತಾನು ಹೇಳಿ ಕಳುಹಿಸಿದ್ದ ಸಂದೇಶವನ್ನು ತಿಳಿಸಲು ಹೋಗಿದ್ದು, ಅವಳಿಗೆ ಅದನ್ನು ತಿಳಿಸಿ, ಅವಳ ಉತ್ತರವನ್ನು ತಿಳಿದು ಹಿಂತಿರುಗಿ ಬಂದ ತನ್ನ ಮಂತ್ರಿಯು ಹೇಳಿದ ಆ ಮಾತುಗಳನ್ನು ಕೇಳಿ ಮದ್ಯದ ಮತ್ತಿನಿಂದ ಕೂಡಿದ ಆ ಮಹಿಷನೆಂಬ ಅಸುರ ರಾಜನು ತುಂಬ ತಿಳಿವಳಿಕೆಯುಳ್ಳ ತನ್ನ ಇತರ ಮಂತ್ರಿಗಳನ್ನೂ ಕರೆಯಿಸಿ ಈ ರೀತಿಯಲ್ಲಿ ಹೇಳಿದನು. ||೧||

ಮಹಿಷನೆಂಬ ದೈತ್ಯರಾಜನು ಹೇಳಿದನು— ಓ ಮಂತ್ರಿವರ್ಯರೇ, ಈಗ ನಾವು ಮಾಡತಕ್ಕದೇನು ? ಮುಚ್ಚುಮರೆಯಿಲ್ಲದೆ ವಿಶ್ವಾಸದಿಂದ ಹೇಳಿರಿ. ಕಾಲ ವಿಳಂಬವನ್ನು ಮಾಡಬೇಡಿರಿ. ನಮ್ಮ ವೈರಿಗಳಾದ ದೇವತೆಗಳಿಂದ ಸೃಷ್ಟಿಸಿ ಕಳುಹಿಸಲ್ಪಟ್ಟಿರುವ ಈ ಶಾಂಬರೀ ಮಾಯೆಯು ಎಂದರೆ, ಇವಳೇನು, ಆ ಶಂಬರಾಸುರನ ಮಾಯೆಯೋ ಎಂಬಂತೆ ತೋರುತ್ತಾ ಯುದ್ಧಕ್ಕಾಗಿಯೇ ಬಂದಿರುತ್ತಾಳೆ. ||೨||

ಕಾರ್ಯೇಽಸ್ಮಿನ್ನಿಪುಣಾ ಯೂಯಮುಪಾಯೇಷು ವಿಚಕ್ಷಣಾಃ ।
ಸಾಮಾದಿಷು ಚ ಕರ್ತವ್ಯಃ ಕೋಽತ್ರ ಮಹ್ಯಂ ಬ್ರುವಂತು ಚ ॥೩॥

॥ ಮಂತ್ರಿಣ ಊಚು ॥

ಸತ್ಯಂ ಸದೈವ ವಕ್ತವ್ಯಂ ಪ್ರಿಯಂ ಚ ನೃಪಸತ್ತಮ ।
ಕಾರ್ಯಂ ಹಿತಕರಂ ನೂನಂ ವಿಚಾರ್ಯ ವಿಬುಧೈಃ ಕಿಲ ॥೪॥

ಸತ್ಯಂ ಚ ಹಿತಕೃದ್ರಾಜನ್ ಪ್ರಿಯಂ ಚಾಹಿತಕೃದ್ಭವೇತ್ ।
ಯಥೌಷಧಂ ನೃಣಾಂ ಲೋಕೇ ಹ್ಯಪ್ರಿಯಂ ರೋಗನಾಶನಂ ॥೫॥

ಸತ್ಯಸ್ಯ ಶ್ರೋತಾ ಮಂತಾ ಚ ದುರ್ಲಭಃ ಪೃಥಿವೀಪತೇ ।
ವಕ್ತಾಽಪಿ ದುರ್ಲಭಃ ಕಾಮಂ ಬಹವಶ್ಚಾಟುಭಾಷಕಾಃ ॥೬॥

---

ಓ ಮಂತ್ರಿಗಳೇ, ಮಂತ್ರಾಲೋಚನೆಯಿಂದ ತಕ್ಕ ಸಲಹೆಯನ್ನು ಹೇಳುವ ಕೆಲಸದಲ್ಲಿ ನೀವು ಸಮರ್ಥರು. ಮತ್ತು ಸಾಮವೇ ಮೊದಲಾದ ಉಪಾಯಗಳಲ್ಲಿ ಯಾವುದನ್ನು ಯಾವಾಗ ಪ್ರಯೋಗಿಸಬೇಕೆಂಬುದನ್ನೂ ಬಲ್ಲವರಾಗಿರುವಿರಿ. ಈಗ ಸಾಮ, ದಾನ, ಭೇದ, ದಂಡ ಎಂಬ ಈ ಉಪಾಯಗಳಲ್ಲಿ ಯಾವುದನ್ನು ನಾನು ಮಾಡಬೇಕು ಎಂಬುದನ್ನು ನನಗೆ ಹೇಳಿರಿ. ॥೩॥

ಮಂತ್ರಿಗಳು ಹೇಳಿದರು— ರಾಜೋತ್ತಮನಾದ ಓ ಮಹಿಷಾಸುರನೇ, ನಿಜವಾಗಿಯೂ, ಪ್ರಿಯವಾಗಿಯೂ ಇರುವಂತಹ ಸಲಹೆಯನ್ನೇ ಯಾವಾಗಲೂ ಹೇಳಬೇಕು. ಮತ್ತು ಯಾವುದು ಪರಿಣಾಮದಲ್ಲಿ ಹಿತಕಾರಿಯಾಗುವುದೋ ಅಂತಹುದನ್ನೇ ತಿಳಿವಳಿಕೆಯುಳ್ಳವರು ವಿಮರ್ಶಿಸಿ ಮಾಡಬೇಕು. ॥೪॥

ಓ ರಾಜನೇ, ಸತ್ಯವಾದುದು ಪ್ರಕೃತದಲ್ಲಿ ಅಪ್ರಿಯವಾಗಿದ್ದರೂ ಕೊನೆಯಲ್ಲಿ ಅದು ಒಳ್ಳೆಯದನ್ನೇ ಮಾಡುತ್ತದೆ. ಆದರೆ, ಪ್ರಾರಂಭದಲ್ಲಿಯೇ ಪ್ರಿಯವಾಗಿರುವಂತಹುದು ಕೊನೆಗೆ ಕೆಟ್ಟದ್ದನ್ನೇ ಮಾಡುತ್ತದೆ. ಹೇಗೆಂದರೆ, ಔಷಧಿಯು ಕಹಿಯಾಗಿರುವುದರಿಂದ ರೋಗದಿಂದ ನರಳುತ್ತಿರುವಾಗ ಬೇಡವಾಗಿ ತೋರುತ್ತಿದ್ದರೂ ಮುಂದೆ ಅದೇ ರೋಗವನ್ನು ನಾಶಮಾಡುವುದರ ಮೂಲಕ ಒಳ್ಳೆಯದನ್ನೇ ಜನಗಳಿಗೆ ಮಾಡುತ್ತದೆ. ॥೫॥

ಓ ರಾಜನೇ, ಪ್ರಿಯವಲ್ಲದ ಹಿತವಾಕ್ಯಗಳನ್ನು ಸಹನೆ ವಿವೇಕಗಳಿಂದ ಕೇಳತಕ್ಕವನೂ, ಧೈರ್ಯದಿಂದ ಹೇಳತಕ್ಕವನೂ ಸಿಕ್ಕಲಾರರು. ಪ್ರಭುವಿನ ಮನಸ್ಸಿಗೆ

**ಕಥಂ ಬ್ರೂವೋಽತ್ರ ನೃಪತೇ ವಿಚಾರೇ ಗಹನೇ ತ್ವಿಹ ।**
**ಶುಭಂ ವಾಪ್ಯಶುಭಂ ವಾಪಿ ಕೋ ವೇತ್ತಿ ಭುವನತ್ರಯೇ ॥೭॥**

॥ ರಾಜೋವಾಚ ॥

**ಸ್ವಸ್ವಮತ್ಯನುಸಾರೇಣ ಬ್ರುವಂತ್ವದ್ಯ ಪೃಥಕ್ಪೃಥಕ್ ।**
**ಯೇಷಾಂ ಹಿ ಯಾದೃಶೋ ಭಾವಸ್ತಚ್ಛ್ರುತ್ವಾ ಚಿಂತಯಾಮ್ಯಹಂ ॥೮॥**

**ಬಹೂನಾಂ ಮತಮಾಜ್ಞಾಯ ವಿಚಾರ್ಯ ಚ ಪುನಃಪುನಃ ।**
**ಯಚ್ಛ್ರೇಯಸ್ತದ್ಧಿ ಕರ್ತವ್ಯಂ ಕಾರ್ಯಂ ಕಾರ್ಯವಿಚಕ್ಷಣೈಃ ॥೯॥**

॥ ವ್ಯಾಸ ಉವಾಚ ॥

**ತಸ್ಯೈವಂ ವಚನಂ ಶ್ರುತ್ವಾ ವಿರೂಪಾಕ್ಷೋ ಮಹಾಬಲಃ ।**
**ಉವಾಚ ತರಸಾ ವಾಕ್ಯಂ ರಂಜಯನ್ಪೃಥಿವೀಪತಿಂ ॥೧೦॥**

---

ಸಂತೋಷವಾಗುವಂತಹ ಸಟೆಯನ್ನಾದರೂ ಹೇಳತಕ್ಕ ಜನಗಳು ಹೇರಳವಾಗಿರುತ್ತಾರೆ.

ಆದುದರಿಂದ ಓ ಮಹಿಷರಾಜನೇ, ವಿಮರ್ಶಿಸಿ ನಿಶ್ಚಯಿಸಲಸಾಧ್ಯವಾದ ಈ ವಿಷಯದಲ್ಲಿ ನಾವು ಏನನ್ನು ಹೇಳೋಣ? ಒಳ್ಳೆಯದಾಗಲಿ, ಕೆಟ್ಟದ್ದಾಗಲಿ ಇಂತಹುದೇ ಆಗುವುದೆಂದು ಈ ಮೂರು ಲೋಕಗಳಲ್ಲಿ ಯಾರು ತಾನೇ ತಿಳಿದಿರುವರು? ॥೭॥

ಮಹಿಷರಾಜನು ಹೇಳಿದನು—ಓ ಮಂತ್ರಿವರ್ಯರೇ, ಈಗ ನೀವುಗಳು ನಿಮ್ಮ ನಿಮ್ಮ ಬುದ್ಧಿಶಕ್ತಿಗನುಸಾರವಾಗಿ ಅಭಿಪ್ರಾಯವನ್ನು ಪ್ರತ್ಯೇಕವಾಗಿ ಕೊಡಿರಿ. ನಿಮ್ಮಲ್ಲಿ ಯಾರಯಾರ ಅಭಿಪ್ರಾಯವು ಹೇಗಿರುವುದೋ ಅದನ್ನು ಕೇಳಿ ಮುಂದೆ ಮಾಡಬೇಕಾದುದನ್ನು ನಾನೇ ಆಲೋಚಿಸುತ್ತೇನೆ. ॥೮॥

ಕಾರ್ಯಗಳನ್ನು ಸಾಧಿಸುವುದರಲ್ಲಿ ಸಮರ್ಥರಾಗುವವರು ತಿಳಿವಳಿಕೆಯುಳ್ಳ ಅನೇಕ ಜನಗಳ ಅಭಿಪ್ರಾಯಗಳನ್ನೂ ಕೇಳಿ ತಿಳಿದು, ಅಮೇಲೆ ಚನ್ನಾಗಿ ವಿಮರ್ಶಿಸಿ ಯಾವುದು ಶ್ರೇಯಸ್ಕರವೋ ಅಂತಹುದನ್ನೇ ಮಾಡಬೇಕಲ್ಲವೇ? ॥೯॥

ವ್ಯಾಸಮುನಿಯು ಹೇಳಿದನು—ಮಹಿಷಾಸುರನ ಈ ಮಾತುಗಳನ್ನು ಕೇಳಿ ತುಂಬ ಬಲಶಾಲಿಯಾದ ವಿರೂಪಾಕ್ಷನೆಂಬ ಮಂತ್ರಿದೈತ್ಯನು ಆ ಕೂಡಲೇ ಆ ಮಹಿಷ ರಾಜನಿಗೆ ಮನೋರಂಜನೆಯಾಗುವಂತೆ ಹೀಗೆ ಹೇಳಿದನು. ॥೧೦॥

|| ವಿರೂಪಾಕ್ಷ ಉವಾಚ ||

ರಾಜನ್ನಾರೀ ವರಾಕೀಯಂ ಸಾ ಬ್ರೂತೇ ಮದಗರ್ವಿತಾ ।
ಬಿಭೀಷಿಕಾಮಾತ್ರಮಿದಂ ಜ್ಞಾತವ್ಯಂ ವಚನಂ ತ್ವಯಾ ॥೧೧॥

ಕೋ ಬಿಭೇತಿ ಸ್ತ್ರಿಯೋ ವಾಕ್ಯೈರ್ದುರುಕ್ತ್ಯೈ ರಣದುರ್ಮದೈಃ ।
ಅನೃತಂ ಸಾಹಸಂ ಚೇತಿ ಜಾನನ್ನಾರೀ ವಿಚೇಷ್ಟಿತಂ ॥೧೨॥

ಜಿತ್ವಾ ತ್ರಿಭುವನಂ ರಾಜನ್ನದ್ಯ ಕಾಂತಾಭಯೇನ ವೈ ।
ದೀನತ್ವೇಽಪ್ಯಯಶೋ ನೂನಂ ವೀರಸ್ಯ ಭುವನೇ ಭವೇತ್ ॥೧೩॥

ತಸ್ಮಾದ್ಯಾಮ್ಯಹಮೇಕಾಕೀ ಯುದ್ಧಾಯ ಚಂಡಿಕಾಂ ಪ್ರತಿ ।
ಹನಿಷ್ಯೇ ತಾಂ ಮಹಾರಾಜ ನಿರ್ಭಯೋ ಭವ ಸಾಂಪ್ರತಂ ॥೧೪॥

---

ವಿರೂಪಾಕ್ಷನು ಹೇಳಿದನು—ಓ ಮಹಿಷರಾಜನೇ, ಅಲ್ಪಳಾದ ಈ ಸ್ತ್ರೀಯು ತಿಳಿವಳಿಕೆಯಿಲ್ಲದೆ ಬುದ್ಧಿಗೆಟ್ಟು ಅಹಂಕಾರದ ಮದದಿಂದ ಕೊಬ್ಬಿ ಹೀಗೆ ಹೇಳುತ್ತಲಿದ್ದಾಳೆ. ಆದುದರಿಂದ ಇವಳ ಮಾತುಗಳೆಲ್ಲವೂ ಬರಿಯ ಹೆದರಿಸುವಿಕೆಯೇ ವಿನಾ ಮತ್ತೇನೂ ಅಲ್ಲವು, ಎಂದು ನೀನು ತಿಳಿಯಬೇಕು. ||೧೧||

ಸ್ತ್ರೀಯ ವ್ಯವಹಾರವೂ ನಡವಳಿಕೆಯೂ ಕೇವಲ ನಟನೆಯಿಂದ ಕೂಡಿ ಸುಳ್ಳಾದುದು, ಮತ್ತು ಸಾಹಸ ಎಂದರೆ ಅಪಾಯವನ್ನೊಳಕೊಂಡಿರಬಹುದಾದ ದುಡುಕತನದಿಂದ ಕೂಡಿದುದು, ಎಂದು ತಿಳಿದವರು ಯಾರುತಾನೇ ಅಂತಹ ಸ್ತ್ರೀಯ ದುರಹಂಕಾರದಿಂದ ಕೂಡಿದ, ಜಗಳದಲ್ಲಿ ಕೆಟ್ಟ ಉತ್ಸಾಹವನ್ನು ಸೂಚಿಸುವ, ಹೆದರಿಕೆಯ ಮಾತುಗಳಿಂದ ಅಂಜಿಯಾರು ? ||೧೨||

ಅಲ್ಲದೆ, ಓ ಮಹಿಷರಾಜನೆ, ಇಷ್ಟು ದಿವಸ ಮೂರು ಲೋಕಗಳನ್ನೂ ಜಯಿಸಿದ್ದು, ಈಗ ಈ ಹೆಂಗಸಿನ ಹೆದರಿಕೆಯ ಮಾತುಗಳಿಂದ ನಾವು ದೈನ್ಯವನ್ನು ಸ್ವೀಕರಿಸುವುದೇ ಆದರೆ ವೀರನಾಗಿದ್ದ ನಿನ್ನಂಥವನಿಗೂ ಎಲ್ಲೆಡೆಯಲ್ಲಿಯೂ ಅಪಯಶಸ್ಸು ಉಂಟಾಗುವುದು. ||೧೩||

ಆದುದರಿಂದ ಓ ಪ್ರಭುವೇ, ಈಗ ನಾನೊಬ್ಬನೇ ಆ ಚಂಡಿಕೆಯೊಡನೆ ಯುದ್ಧವನ್ನು ಮಾಡುವುದಕ್ಕಾಗಿ ಹೋಗುವೆನು. ಮತ್ತು ಆ ಯುದ್ಧದಲ್ಲಿ ಆ

ಸೇನಾವೃತೋಽಹಂ ಗತ್ವಾ ತಾಂ ಶಸ್ತ್ರಾಸ್ತ್ರೈರ್ವಿವಿಧೈಃ ಕಿಲ ।
ನಿಷೂದಯಾಮಿ ದುರ್ಮರ್ಷಾಂ ಚಂಡಿಕಾಂ ಚಂಡವಿಕ್ರಮಾಂ॥೧೫॥

ಬಧ್ವಾ ಸರ್ಪಮಯೈಃ ಪಾಶೈರಾನಯಿಷ್ಯೇ ತವಾಂತಿಕಂ ।
ವಶಗಾ ತು ಸದಾ ತೇ ಸ್ಯಾತ್ಪಶ್ಯ ರಾಜನ್ಬಲಂ ಮಮ ॥೧೬॥

॥ ವ್ಯಾಸ ಉವಾಚ ॥

ವಿರೂಪಾಕ್ಷವಚಃ ಶ್ರುತ್ವಾ ದುರ್ಧರೋ ವಾಕ್ಯಮಬ್ರವೀತ್ ।
ಸತ್ಯಮುಕ್ತಂ ವಚೋ ರಾಜನ್ವಿರೂಪಾಕ್ಷೇಣ ಧೀಮತಾ ॥೧೭॥

ಮಮಾಪಿ ವಚನಂ ಶ್ಲಕ್ಷ್ಣಂ ಶ್ರೋತವ್ಯಂ ಧೀಮತಾ ತ್ವಯಾ ।
ಕಾಮಾತುರೈಷಾ ಸುದತೀ ಲಕ್ಷ್ಯತೇಽಪ್ಯನುಮಾನತಃ ॥೧೮॥

---

ಚಂಡಿಕೆಯನ್ನು ಖಂಡಿತವಾಗಿಯೂ ಕೊಲ್ಲುವೆನು. ಆದುದರಿಂದ ಪ್ರಕೃತದಲ್ಲಿ ನೀನು ಯಾವ ಹೆದರಿಕೆಯೂ ಇಲ್ಲದವನಾಗಿರು. ॥೧೪॥

ಅಲ್ಲದೆ, ನಾನು ಸೈನ್ಯಗಳಿಂದ ಸಹಿತನಾಗಿಯಾದರೂ ಆ ಚಂಡಿಕೆಯಿರುವೆಡೆಗೆ ಹೋಗಿ ಅಲ್ಲಿ ಭಯಂಕರವಾದ ಪರಾಕ್ರಮವುಳ್ಳವಳೂ, ಸಹಿಸಲಸಾಧ್ಯಳೂ ಆದ ಅವಳನ್ನು ನಾನಾ ಬಗೆಯ ಆಯುಧಗಳಿಂದಲೂ, ಮಂತ್ರಾಸ್ತ್ರಗಳಿಂದಲೂ ಸಂಹರಿಸುತ್ತೇನೆ ॥೧೫॥

ಅಥವಾ ಅವಳನ್ನು ಸರ್ಪರೂಪವಾದ ನಾಗಪಾಶಗಳೆಂಬ ಮಂತ್ರಾಸ್ತ್ರಗಳಿಂದ ಕಟ್ಟಿ ನಿನ್ನೆಡೆಗೆ ಒಯ್ದು ತರುತ್ತೇನೆ. ಆಗ ಅವಳು ಯಾವಾಗಲೂ ನಿನ್ನ ಅಧೀನಳಾಗಿರುವಳು. ಓ ಪ್ರಭುವೇ, ನನ್ನ ಬಲವನ್ನು ಪರೀಕ್ಷಿಸಿನೋಡು. ॥೧೬॥

ವ್ಯಾಸಮುನಿಯು ಹೇಳಿದನು—ವಿರೂಪಾಕ್ಷನ ಈ ಮಾತುಗಳನ್ನು ಕೇಳಿ ದುರ್ಧರನೆಂಬ ಇನ್ನೊಬ್ಬ ಮಂತ್ರಿದೈತ್ಯನು ಹೀಗೆ ಹೇಳಿದನು. ಓ ಮಹಿಷರಾಜನೇ, ಬುದ್ಧಿವಂತನಾದ ವಿರೂಪಾಕ್ಷನು ತನಗೆ ನಿಜವೆಂದು ತೋರಿದ ಮಾತುಗಳನ್ನೇ ನಿಜವಾಗಿ ಹೇಳಿರುತ್ತಾನೆ. ॥೧೭॥

ಆದರಂತೆಯೇ ಬುದ್ಧಿವಂತನಾದ ನೀನು ಅರ್ಥಗರ್ಭಿತವಾದ ನನ್ನ ಮಾತುಗಳನ್ನೂ ಕೇಳಬೇಕು. ಊಹಿಸಿನೋಡಿದರೆ ಸುಂದರವಾದ ದಂತಪಂಙ್ತಿಗಳುಳ್ಳ ಆ ಸುಂದರಿಯು ಮನ್ಮಥಾಭಿಲಾಷೆಯುಳ್ಳವಳಾಗಿಯೂ ತೋರುತ್ತಾಳೆ. ಏಕೆಂದರೆ ॥೧೮॥

ಭವತ್ಯೇವಂವಿಧಾ ಕಾಮಂ ನಾಯಿಕಾ ರೂಪಗರ್ವಿತಾ ।
ಭೀಷಯಿತ್ವಾ ವರಾರೋಹಾ ತ್ವಾಂ ವಶೇ ಕರ್ತುಮಿಚ್ಛತಿ ॥೧೯॥

ಹಾವೋಽಯಂ ಮಾನಿನೀನಾಂ ವೈ ತಂ ವೇತ್ತಿ ರಸವಿತ್ತಮಃ ।
ವಕ್ರೋಕ್ತಿರೇಷಾ ಕಾಮಿನ್ಯಾಃ ಪ್ರಿಯಂ ಪ್ರತಿ ಪರಾಯಣಂ ॥೨೦॥

ವೇತ್ತಿ ಕೋಽಪಿ ನರಃ ಕಾಮಂ ಕಾಮಶಾಸ್ತ್ರವಿಚಕ್ಷಣಃ ।
ಯದುಕ್ತಂ ನಾಮ ಬಾಣೈಸ್ತ್ವಾಂ ವಧಿಷ್ಯೇ ರಣಮೂರ್ಧನಿ ॥೨೧॥

ಹೇತುಗರ್ಭಮಿದಂ ವಾಕ್ಯಂ ಜ್ಞಾತವ್ಯಂ ಹೇತುವಿತ್ತಮೈಃ ।
ಬಾಣಾಸ್ತು ಮಾನಿನೀನಾಂ ವೈ ಕಟಾಕ್ಷಾ ಏವ ವಿಶ್ರುತಾಃ ॥೨೨॥

---

ಬಹುಶಃ ಅವಳು ಇಂತಹ ಶೃಂಗಾರನಾಯಿಕೆಯಾಗಿಯೇ ಇರಬೇಕು. ಮತ್ತು ಸೌಂದರ್ಯದಿಂದ ಹೆಮ್ಮೆಗೊಂಡಿರುವ ಆ ಉತ್ತಮಸ್ತ್ರೀಯು ಅದಕ್ಕಾಗಿಯೇ ಹೆದರಿಸಿ ನಿನ್ನನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಬೇಕೆಂದು ಇಚ್ಛಿಸುತ್ತಾಳೆ. ||೧೯||

ಪ್ರಣಯಕೋಪರೂಪವಾದ ಈ ಸಿಟ್ಟಿನ ಬೆದರಿಕೆಯು ಸ್ತ್ರೀಯರಿಗೆ ಸ್ವಾಭಾವಿಕವಾದ ಅನುರಾಗಭಾವದಿಂದುಂಟಾಗುವ ವ್ಯಾಪಾರವಿಶೇಷರೂಪವಾದ ವಿಲಾಸವು. ಅದು ಪುರುಷನಲ್ಲಿ ತನ್ನಿಷ್ಟವನ್ನು ಸೂಚಿಸತಕ್ಕುದು. ಈ ತತ್ತ್ವವನ್ನು ಶೃಂಗಾರ ರಸದ ಆಸ್ವಾದನೆಯಲ್ಲಿ ನುರಿತ ರಸಿಕನು ಮಾತ್ರ ತಿಳಿಯಬಲ್ಲನು. ಈ ಹೆದರಿಕೆಯ ಮಾತು ತನ್ನ ಪ್ರಿಯನಿಗೆ ಪ್ರಣಯವನ್ನು ಸೂಚಿಸುವ ಬೇರೆ ಬಗೆಯ ವಕ್ರೋಕ್ತಿಯು. ಅದು ಅವನಿಗೆ ಸಂಬೋಧಕವಾಗಿ ಸುಖಕರವಾದುದು. ||೨೦||

ಇಂತಹ ಸ್ತ್ರೀಯ ವಕ್ರೋಕ್ತಿಯನ್ನು, ಎಂದರೆ ವಿಲಕ್ಷಣವಾದ ಮಾತಿನ ಬಗೆಯನ್ನು, ಕಾಮಶಾಸ್ತ್ರರಹಸ್ಯವನ್ನು ಬಲ್ಲ ಯಾವನೋ ಒಬ್ಬ ರಸಿಕನು ಮಾತ್ರ ಚನ್ನಾಗಿ ತಿಳಿಯಬಲ್ಲನು. ಅಲ್ಲದೆ, ಬಾಣಗಳಿಂದ ರಣಾಗ್ರಭೂಮಿಯಲ್ಲಿ ನಿನ್ನನ್ನು ಕೊಲ್ಲುವೆನೆಂದು ಅವಳು ಯಾವ ಮಾತನ್ನು ಹೇಳಿರುವಳೋ ||೨೧||

ಅದು ಬೇರೆ ಅಭಿಪ್ರಾಯವಿಶೇಷವುಳ್ಳದ್ದೆಂದು ಪರಾಭಿಪ್ರಾಯದ ಕಾರಣ ವಿಶೇಷಗಳನ್ನು ಗೊತ್ತುಮಾಡುವುದರಲ್ಲಿ ಕುಶಲರಾದವರು ತಿಳಿಯಬೇಕು. ಹೇಗೆಂದರೆ ಕಾಮಿನಿಯರಿಗೆ ಅವರ ನೋಟಗಳೇ ಬಾಣಗಳೆಂಬುದು ಈ ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆಯಲ್ಲವೇ ? ||೨೨||

**ಪುಷ್ಪಾಂಜಲಿಮಯಾಶ್ಚಾನ್ಯೇ ವ್ಯಂಗ್ಯಾನಿ ವಚನಾನಿ ಚ ।**
**ಕಾ ಶಕ್ತಿರನ್ಯಬಾಣಾನಾಂ ಪ್ರೇರಣೇ ತ್ವಯಿ ಪಾರ್ಥಿವ ॥೨೩॥**

**ತಾದೃಶೀನಾಂ ನ ಸಾ ಶಕ್ತಿರ್ಬ್ರಹ್ಮವಿಷ್ಣುಹರಾದಿಷು ।**
**ಯಯೋಕ್ತಂ ನೇತ್ರಬಾಣೈಸ್ತ್ವಾಂ ಹನಿಷ್ಯೇ ಮಂದಪಾರ್ಥಿವಂ॥೨೪॥**

**ವಿಪರೀತಂ ಪರಿಜ್ಞಾತಂ ತೇನಾsರಸವಿದಾ ಕಿಲ ।**
**ಪಾತಯಿಷ್ಯಾಮಿ ಶಯ್ಯಾಯಾಂ ರಣಮಯ್ಯಾಂ ಪತಿಂ ತವ ॥೨೫॥**

**ವಿಪರೀತರತಿಕ್ರೀಡಾ ಭಾಷಣಂ ಜ್ಞೇಯಮೇವ ತತ್ ।**
**ಕರಿಷ್ಯೇ ವಿಗತಪ್ರಾಣಂ ಯದುಕ್ತಂ ವಚನಂ ತಯಾ ॥೨೬॥**

---

ಅದರಂತೆಯೇ, ಇನ್ನು ಕೆಲವರು ಸ್ತ್ರೀಯರು ಪುಷ್ಪಾಂಜಲಿರೂಪವಾದ ಮತ್ತು ಗೂಢವಾಗಿ ಅಭಿಪ್ರಾಯವಿಶೇಷವನ್ನು ಸೂಚಿಸುವ ವಿಲಕ್ಷಣಬಗೆಯ ವಾಕ್ಯರೂಪವಾದ ಬಾಣಗಳಿಂದಲೂ ಪ್ರಹರಿಸುವುದುಂಟು. ಎಂದಮೇಲೆ ಓ ಮಹಿಷರಾಜನೇ, ಪ್ರಿಯನಾದ ನಿನ್ನಲ್ಲಿ ಅಬಲೆಯಾದ ಆ ಚಂಡಿಕೆಗೆ ಬೇರೆಯಾದ ವಾಸ್ತವವಾದ ದಾರು ಲೋಹಮಯವಾದ ಬಾಣಗಳನ್ನು ಬಿಡಲು ಶಕ್ತಿಯು ಎಲ್ಲಿಂದ ಬಂದೀತು? ||೨೩||

ಅಲ್ಲದೆ ಅಂತಹ ಶಕ್ತಿಯು ಬ್ರಹ್ಮ ವಿಷ್ಣು ಮತ್ತು ಶಿವ ಮೊದಲಾದವರಲ್ಲಿಯೂ ಇಲ್ಲವೇ ಇಲ್ಲವು. ಇನ್ನು ಅಬಲೆಯಾದ ಆ ಸ್ತ್ರೀಯಲ್ಲಿ ಹೇಗೆ ಇದ್ದೀತು? ಆದುದರಿಂದ ಯಾವ ಆ ಚಂಡಿಕೆಯು ವ್ಯಾಜದಿಂದ ನೇತ್ರಬಾಣಗಳಿಂದ ತಿಳಿವಳಿಕೆಯಿಲ್ಲದ ನಿಮ್ಮ ಮಹಿಷರಾಜನನ್ನು ಹಿಂಸಿಸುತ್ತೇನೆ ಎಂದು ಹೇಳಿದಳೋ ಆ ಮಾತಿಗೆ ಬೇರೆ ತಾತ್ಪರ್ಯವಿದೆ. ಆದರೂ ||೨೪||

ಆ ದೂತನು ರಸಿಕನಲ್ಲವಾದುದರಿಂದ ತಿಳಿಯಲಾರನು. "ನಿನ್ನ ಒಡೆಯನನ್ನು ಸಂಗ್ರಾಮಶಯ್ಯೆಯಲ್ಲಿ ಕೆಡಹುತ್ತೇನೆ" ಎಂಬ ಚಂಡಿಕೆಯ ವಾಕ್ಯಕ್ಕೆ ತಪ್ಪಾದ ಅರ್ಥವನ್ನೂ ಮಾಡಿಕೊಂಡಿರುತ್ತಾನೆ. ಆವಾಕ್ಯದ ತಾತ್ಪರ್ಯವೇನೆಂದರೆ, ||೨೫||

ಆ ಚಂಡಿಕೆಯು "ರಣಶಯ್ಯೆಯಲ್ಲಿ ನಿನ್ನ ಒಡೆಯನನ್ನು ಮಲಗುವಂತೆ ಮಾಡುವೆನು" ಎಂದು ಏನು ಹೇಳಿದಳೋ ಅದು ನಿನ್ನೊಂದಿಗೆ ಪುರುಷಾಯತವೆಂಬ ವಿಪರೀತಸಂಭೋಗದ ಕ್ರಮವನ್ನು ಸೂಚಿಸುವಮಾತಾಗಿರುತ್ತದೆ. ಅಲ್ಲದೆ ಅವಳು ಆ ದೂತನನ್ನು ಕುರಿತು "ನಿನ್ನೊಡೆಯನನ್ನು ವಿಗತಪ್ರಾಣ ಎಂದರೆ ನಷ್ಟವಾದ

ವೀರ್ಯಂ ಪ್ರಾಣಾ ಇತಿ ಪ್ರೋಕ್ತಂ ತದ್ವಿಹೀನಂ ನ ಚಾನ್ಯಥಾ ।
ವ್ಯಂಗ್ಯಾಧಿಕ್ಯೇನ ವಾಕ್ಯೇನ ವರಯತ್ಯುತ್ತಮಾ ನೃಪ ॥೨೭॥

ತದ್ವೈ ವಿಚಾರತೋ ಜ್ಞೇಯಂ ರಸಗ್ರಂಥವಿಚಕ್ಷಣೈಃ ।
ಇತಿ ಜ್ಞಾತ್ವಾ ಮಹಾರಾಜ ಕರ್ತವ್ಯಂ ರಸಸಂಯುತಂ ॥೨೮॥

ಸಾಮದಾನದ್ವಯಂ ತಸ್ಯಾ ನಾನ್ಯೋಽಪಾಯೋಽಸ್ತಿ ಭೂಪತೇ ।
ರುಷ್ಟಾ ವಾ ಗರ್ವಿತಾ ವಾಪಿ ವಶಗಾ ಮಾನಿನೀ ಭವೇತ್ ॥೨೯॥

---

ಪ್ರಾಣವುಳ್ಳವನನ್ನಾಗಿ ಮಾಡುವೆನು" ಎಂದು ಹೇಳಿದ ಮಾತಿಗೂ ಬೇರೆಯಾದ ರಹಸ್ಯಾರ್ಥವಿದೆ. ಹೇಗೆಂದರೆ, ||೨೬||

ರೇತಸ್ಸೇ ಪ್ರಾಣವೆಂದು ಹೇಳಿರುತ್ತದೆ. ಅದರಂತೆ ಗತಪ್ರಾಣನೆಂದರೆ ಆ ವಿಪರೀತಸಂಭೋಗದಿಂದ ನಿನ್ನನ್ನು ನಿರ್ವೀರ್ಯನನ್ನಾಗಿ ಎಂದರೆ ಚಲಿಸಿದ ವೀರ್ಯವುಳ್ಳವನನ್ನಾಗಿ ಮಾಡುವೆನೆಂದು ಅವಳ ಅಭಿಪ್ರಾಯವೇ ಹೊರತು, ಬೇರೆ ಅಲ್ಲವು. ಆದುದರಿಂದ ಇಂತಹ ತಾತ್ಪರ್ಯವುಳ್ಳ ತುಂಬ ವ್ಯಂಗ್ಯಾರ್ಥದಿಂದ ಕೂಡಿರುವ ಮಾತುಗಳಿಂದ ಓ ಪ್ರಭುವೇ, ಆ ಉತ್ತಮಸ್ತ್ರೀಯು ನಿನ್ನನ್ನು ಪತಿಯಾಗಿ ವರಿಸಲಿಚ್ಛಿಸುತ್ತಾಳೆ. ||೨೭||

ಅವಳ ಈ ಅಭಿಪ್ರಾಯವನ್ನು, ಹೀಗೆಂದು ವಿವರಿಸುತ್ತಿರುವ ನನ್ನ ವಿವರಣೆಯು ಸರಿಯೋ ಅಲ್ಲವೋ ಎಂಬುದನ್ನು ಕಾಮಶಾಸ್ತ್ರವನ್ನು ಬಲ್ಲವರು ವಿಮರ್ಶಿಸಿ ನಿಶ್ಚಯಿಸಬೇಕು. ಆದುದರಿಂದ ಓ ಮಹಾರಾಜನೇ, ಅದರಂತೆ ನಿಶ್ಚಯಿಸಿ ಅವಳ ಅಭಿಪ್ರಾಯಕ್ಕನುಕೂಲವಾಗಿ ನಾವೂ ಮುಂದೆ ಕಾರ್ಯವನ್ನು ವಿರೋಧವಾಗದಂತೆ ಬುದ್ಧಿಕೌಶಲದಿಂದ ಮಾಡಬೇಕೇ ಹೊರತು ಕೆಲಸವನ್ನು ಕೆಡಿಸಿಕೊಳ್ಳಬಾರದು. ||೨೮||

ಆದುದರಿಂದ ಓ ಪ್ರಭುವೇ, ಅವಳನ್ನು ವಶಪಡಿಸಿಕೊಳ್ಳಲು, ಸಾಮ ಮತ್ತು ದಾನ ಇವೆರಡೇ ಉಪಾಯಗಳು. ಇನ್ನಾವ ಉಪಾಯವೂ ನಡೆಯಲಾರದು. ಓ ರಾಜನೇ, ಈ ಎರಡು ಉಪಾಯಗಳಿಂದಲೇ ಪ್ರಣಯಕೋಪವುಳ್ಳ ಅಥವಾ ಸೌಂದರ್ಯದಿಂದ ಗರ್ವಿತಳಾದ ಆ ಸ್ತ್ರೀಯು ನಿನ್ನ ಅಧೀನಳಾಗುವಳು. (ಆದರೆ ಒಲುಮೆಯುಳ್ಳವಳ ವಿಷಯದಲ್ಲಿ ಸಾಮದಾನಗಳ ಆವಶ್ಯಕತೆಯಾಗಲಿ ಔಚಿತ್ಯವಾಗಲಿ ಇಲ್ಲವೆಂಬುದನ್ನು ಗಮನಿಸಬಹುದು.) ||೨೯||

ತಾದೃಶೈರ್ನರ್ಮಧುರೈರ್ವಾಕ್ಯೈರಾನಯಿಷ್ಯೇ ತವಾಂತಿಕಂ ।
ಕಿಂ ಬಹೂಕ್ತೇನ ಮೇ ರಾಜನ್ಕರ್ತವ್ಯಾ ವಶವರ್ತಿನೀ ॥೩೦॥
ಗತ್ವಾ ಮಯ್ಯಾಽಧುನೈವೇಯಂ ಕಿಂಕರೀವ ಸದೈವ ತೇ ।

॥ ವ್ಯಾಸ ಉವಾಚ ॥

ಇತ್ಥಂ ನಿಶಮ್ಯ ತದ್ವಾಕ್ಯಂ ತಾಮ್ರಸ್ತತ್ತ್ವವಿಚಕ್ಷಣಃ

ಉವಾಚ ವಚನಂ ರಾಜನ್ ನಿಶಾಮಯ ಮಯೋದಿತಂ ।
ಹೇತುಮದ್ಧರ್ಮಸಹಿತಂ ರಸಯುಕ್ತಂ ನಯಾನ್ವಿತಂ ॥೩೨॥

ನೈಷಾ ಕಾಮಾತುರಾ ಬಾಲಾ ನಾನುರಕ್ತಾ ವಿಚಕ್ಷಣಾ ।
ವ್ಯಂಗ್ಯಾನಿ ನೈವ ವಾಕ್ಯಾನಿ ತಯೋಕ್ತಾನಿ ತು ಮಾನದ ॥೩೩॥

---

ಆದುದರಿಂದ ನಾನು ಮಧುರವಾದ ಅಂತಹ ಮಾತುಗಳಿಂದಲೇ ಅವಳನ್ನು ನಿನ್ನೆಡೆಗೆ ಒಲಿದು ಬರುವಂತೆ ಮಾಡಿ ಕರೆದುಕೊಂಡು ಬರುವೆನು. ಓ ರಾಜನೇ, ಹೆಚ್ಚು ಹೇಳಿ ಪ್ರಯೋಜನವೇನು? ಹೇಗಾದರೂ ಮಾಡಿ ಅವಳನ್ನು ನಾವು ನಿನ್ನ ಅಧೀನಳಾಗಿರುವಂತೆ ಮಾಡಬೇಕು. ॥೩೦॥

ಆದುದರಿಂದ ಈಗಲೇ ಹೋಗಿ ನಾನು, ಅವಳು ನಿನಗೆ ಯಾವಾಗಲೂ ಸೇವಕಳಾಗಿರುವಂತೆ ಮಾಡುವೆನು. (ದೊರೆಯ ಮನೋವಿಕಾರವನ್ನನುಸರಿಸಿ ತಿಳಿಗೇಡಿಯಾದ ಅವಿವೇಕಿಯಾದ ಮಂತ್ರಿಯ ಸಲಹೆಯು ಇದೆಂಬುದನ್ನೂ ಗಮನಿಸಬಹುದು.)

ವ್ಯಾಸಮುನಿಯು ಹೇಳಿದನು--ಹೀಗೆ ಹೇಳಿದ ಆ ದುರ್ಧರನ ಮಾತುಗಳನ್ನು ಕೇಳಿ, ತತ್ತ್ವವನ್ನು ಚನ್ನಾಗಿ ಬಲ್ಲ ತಾಮ್ರನೆಂಬ ಇನ್ನೊಬ್ಬ ದೈತ್ಯ ಮಂತ್ರಿಯು ಮಹಿಷನನ್ನು ಕುರಿತು ಹೀಗೆ ಹೇಳಿದನು—ಓ ರಾಜನೇ, ತಾತ್ಪರ್ಯ ಗರ್ಭಿತವೂ, ಧರ್ಮ ಮತ್ತು ನೀತಿ ಇವುಗಳಿಂದ ಕೂಡಿರುವುದೂ ಮತ್ತು ಸರಸವೂ ಆದ ನನ್ನ ಮಾತುಗಳನ್ನು ಕೇಳು. ॥೩೧-೩೨॥

ತುಂಬ ಮರ್ಯಾದೆವಂತನಾದ, ಎದುರಾಳಿಯ ಅಭಿಮಾನವನ್ನು ನಾಶ ಮಾಡಬಲ್ಲ ಓ ಪ್ರಭುವೇ, ಬಾಲೆಯಾದ ಬುದ್ಧಿಕೌಶಲ್ಯವುಳ್ಳ, ಗಟ್ಟಿಗಳಾದ ಈ ಚಂಡಿಕೆಯು ಮನ್ಮಥಾಭಿಲಾಷೆಯಿಂದ ಕೂಡಿಲ್ಲವು. ಮತ್ತು ನಿನ್ನಲ್ಲಿ ಅನುರಕ್ತಳೂ

ಚಿತ್ರಮತ್ರ ಮಹಾಬಾಹೋ ಯದೇಕಾ ವರವರ್ಣಿನೀ ।
ನಿರಾಲಂಬಾ ಸಮಾಯಾತಿ ಚಿತ್ರರೂಪಾ ಮನೋಹರಾ ॥೩೪॥

ಅಷ್ಟಾದಶಭುಜಾ ನಾರೀ ನ ಶ್ರುತಾ ನ ಚ ವೀಕ್ಷಿತಾ ।
ಕೇನಾಪಿ ತ್ರಿಷು ಲೋಕೇಷು ಪರಾಕ್ರಮವತೀ ಶುಭಾ ॥೩೫॥

ಆಯುಧಾನ್ಯಪಿ ತಾವಂತಿ ಧೃತಾನಿ ಬಲವಂತಿ ಚ ।
ವಿಪರೀತಮಿದಂ ಮನ್ಯೇ ಸರ್ವಂ ಕಾಲಕೃತಂ ನೃಪ ॥೩೬॥

ಸ್ವಪ್ನಾನಿ ದುರ್ನಿಮಿತ್ತಾನಿ ಮಯಾ ದೃಷ್ಟಾನಿ ವೈ ನಿಶಿ ।
ತೇನ ಜಾನಾಮ್ಯಹಂ ನೂನಂ ವೈಶಸಂ ಸಮುಪಾಗತಂ ॥೩೭॥

---

ಆಗಿಲ್ಲವು. ಅಲ್ಲದೆ ಅವಳು ಹೇಳಿದ ವಾಕ್ಯಗಳು ನಿನ್ನೊಡನೆ ಕ್ರೀಡಾಭಿಲಾಷೆಯನ್ನು ಸೂಚಿಸುವ ವ್ಯಂಗ್ಯಾರ್ಥವುಳ್ಳ ವಾಕ್ಯಗಳೂ ಅಲ್ಲವು. ಮತ್ತೇನೆಂದರೆ, ॥೩೩॥

ಓ ತುಂಬ ಬಾಹುಬಲಶಾಲಿಯಾದ ಮಹಿಷನೇ, ಇಲ್ಲಿ ಇದೊಂದು ಅಂಶವು ಆಶ್ಚರ್ಯಕರವಾದುದು. ಮತ್ತು ನಾವು ಚನ್ನಾಗಿ ವಿಮರ್ಶಿಸಬೇಕಾದುದು. ಅದಾವುದೆಂದರೆ, ಆ ಉತ್ತಮಸ್ತ್ರೀಯಾದ ಚಂಡಿಕೆಯು ಓರ್ವಳೇ ಆದರೂ ಯಾವ ಸಹಾಯ ಬೆಂಬಲಗಳ ಆಶ್ರಯವೂ ಇಲ್ಲದೆ ನಾನಾ ಬಗೆಯ ರೂಪವುಳ್ಳವಳಾಗಿಯೂ ಮನೋಹರಳಾಗಿಯೂ ಇರುವಂತೆ ನಮಗೆ ಕಾಣಬರುತ್ತಾಳೆ. ಹೇಗೆಂದರೆ, ॥೩೪॥

ಇಂತಹ ಪರಾಕ್ರಮಶಾಲಿನಿಯಾದ ಮಂಗಳಕರಳಾದ ಹದಿನೆಂಟು ತೋಳುಗಳುಳ್ಳ ಸ್ತ್ರೀಯನ್ನು ಮೂರು ಲೋಕಗಳಲ್ಲಿ ಯಾರೂ ನೋಡಿಯೂ ಇಲ್ಲವು, ಕೇಳಿಯೂ ಇಲ್ಲವು. ॥೩೫॥

ಅಲ್ಲದೆ ಅಷ್ಟೇ ಸಂಖ್ಯೆಯ ಎಂದರೆ ಹದಿನೆಂಟು ಬಲವಾದ ಆಯುಧಗಳನ್ನೂ ಅವಳು ಧರಿಸಿರುತ್ತಾಳೆ. ಆದುದರಿಂದ ಓ ರಾಜನೇ, ಈ ವಿಪರೀತವೆಲ್ಲವೂ ನಮ್ಮ ದುರ್ದೈವದಿಂದಲೇ, ಎಂದರೆ ದುಷ್ಕರ್ಮಗಳು ಫಲಕೊಡಲು ಪ್ರಾರಂಭಿಸಿರುವ ಕಾಲದ ಪ್ರಭಾವದಿಂದಲೇ. ಉಂಟಾಗಿರುತ್ತದೆ ಎಂದು ತಿಳಿಯುತ್ತೇನೆ. ॥೩೬॥

ಅಷ್ಟೇ ಅಲ್ಲದೆ, ಓ ಪ್ರಭುವೇ, ನಾನೂ ರಾತ್ರಿಯಲ್ಲಿ ದುಃಸ್ವಪ್ನಗಳನ್ನೂ, ಅಪಶಕುನಗಳನ್ನೂ ಕಂಡೆನು. ಆದುದರಿಂದ ನಾನು ನಮಗೇನೋ ಅನಿಷ್ಟವು ಈ ರೂಪದಲ್ಲಿ ಬಂದೊದಗಿರುವುದೆಂದು ತಿಳಿದಿರುತ್ತೇನೆ. ॥೩೭॥

**ಕೃಷ್ಣಾಂಬರಧರಾ ನಾರೀ ರುದತೀ ಚ ಗೃಹಾಂಗಣೇ ।**
**ದೃಷ್ಟ್ವಾ ಸ್ವಪ್ನೇಽಪ್ಯುಷಃಕಾಲೇ ಚಿಂತಿತವ್ಯಸ್ತದತ್ಯಯಃ ॥೩೮॥**

**ವಿಕೃತಾಃ ಪಕ್ಷಿಣೋ ರಾತ್ರೌ ರೋರುವಂತಿ ಗೃಹೇ ಗೃಹೇ ।**
**ಉತ್ಪಾತಾ ವಿವಿಧಾ ರಾಜನ್ಪ್ರಭವಂತಿ ಗೃಹೇ ಗೃಹೇ ॥೩೯॥**

**ತೇನ ಜಾನಾಮ್ಯಹಂ ನೂನಂ ಕಾರಣಂ ಕಿಂಚಿದೇವ ಹಿ ।**
**ಯತ್ತ್ವಾಂ ಪ್ರಾರ್ಥಯತೇ ಬಾಲಾ ಯುದ್ಧಾಯ ಕೃತನಿಶ್ಚಯಾ ॥೪೦॥**

**ನೈಷಾಽಸ್ತಿ ಮಾನುಷೀ ನೋ ವಾ ಗಾಂಧರ್ವೀ ನ ತಥಾಽಽಸುರೀ ।**
**ದೇವೈಃ ಕೃತೇಯಂ ಜ್ಞಾತವ್ಯಾ ಮಾಯಾ ಮೋಹಕರೀ ವಿಭೋ ॥೪೧॥**

---

ಅದೇನೆಂದರೆ, ಓ ರಾಜನೇ, ನಾನು ಬೆಳಗಿನ ಜಾವದ ಸಮಯದಲ್ಲಿ, ಕರಿಯ ಬಟ್ಟೆಯನ್ನುಟ್ಟು ಓರ್ವ ಸ್ತ್ರೀಯು ಮನೆಯ ಮುಂಭಾಗದಲ್ಲಿ ನಿಂತು ಅಳುತ್ತಿರುವಂತೆ ಕೆಟ್ಟ ಸ್ವಪ್ನವೊಂದನ್ನು ಕಂಡೆನು. ಅದರ ದುಷ್ಫಲವನ್ನು ನಿವಾರಿಸಲು ಅದಕ್ಕೆ ತಕ್ಕ ಶಾಂತಿಯನ್ನು ಆಲೋಚಿಸಬೇಕಾಗಿದೆ. ||೩೮||

ಅಲ್ಲದೆ ರಾತ್ರಿಯಲ್ಲಿ ಗೂಬೆಯೇ ಮೊದಲಾದ ಪಕ್ಷಿಗಳು ಮನೆಮನೆಗಳಲ್ಲಿಯೂ ವಿಕಾರವಾಗಿ ಕೂಗುತ್ತಲಿವೆ. ಪ್ರತಿಯೊಂದು ಮನೆಯಲ್ಲಿಯೂ ಅನೇಕ ಬಗೆಯ ಅನಿಷ್ಟ ಶಕುನಗಳೂ ಕಾಣಬರುತ್ತಲಿವೆ. ||೩೯||

ಈ ಎಲ್ಲ ಅನಿಷ್ಟಗಳಿಂದಲೂ ನಾನು ನಮ್ಮ ಕೆಡಕಿಗಾಗಿಯೇ ಏನೋ ಒಂದು ಸ್ತ್ರೀಯೊಡನೆ ಯುದ್ಧದಂತಹ ಕಾರಣವುಂಟಾಗಿದೆಯೆಂದು ತಿಳಿಯುತ್ತೇನೆ. ಆದುದರಿಂದಲೇ ಬಾಲಿಕೆಯಾದರೂ ಈ ಚಂಡಿಕೆಯು ನಿನ್ನನ್ನು ಯುದ್ಧಕ್ಕೋಸ್ಕರ ನಿಶ್ಚಯದಿಂದ ಕೂಡಿದವಳಾಗಿ ಖಂಡಿತವಾದ ಮಾತಿನಿಂದ ಕರೆಯುತ್ತಿದ್ದಾಳೆ. ||೪೦||

ಅಲ್ಲದೆ, ಓ ಪ್ರಭುವೇ, ಈ ಸ್ತ್ರೀಯು ಮನುಷ್ಯಳಲ್ಲವು. ಅಥವಾ ಗಂಧರ್ವಯುವತಿಯಲ್ಲವು. ಹಾಗೆಯೇ, ಅಸುರಯುವತಿಯೂ ಅಲ್ಲವು. ನಮಗೆಲ್ಲರಿಗೂ ಹೆಚ್ಚಾದ ಮೋಹವನ್ನುಂಟುಮಾಡುವುದಕ್ಕಾಗಿ ದೇವತೆಗಳು ಸೃಷ್ಟಿಸಿ ಕಳುಹಿಸಿರುವ ಇವಳು ಮಾಯಾರೂಪಿಣಿಯು ಎಂದು ತಿಳಿಯಬೇಕು. ಏಕೆಂದರೆ ಇವಳು ವಿಲಕ್ಷಣವಾದ ತೇಜಸ್ಸು, ರೂಪ, ಶಕ್ತಿ, ಆಯುಧಗಳನ್ನು ಪಡೆದಿರುವುದಾಗಿ ಗೊತ್ತಾಗುತ್ತಿದೆ. ||೪೧||

**ಕಾತರತ್ವಂ ನ ಕರ್ತವ್ಯಂ ಮನ್ಯೈತನ್ಮತಮಿತ್ಯಲಂ ।**
**ಕರ್ತವ್ಯಂ ಸರ್ವಥಾ ಯುದ್ಧಂ ಯದ್ಭಾವ್ಯಂ ತದ್ಭವಿಷ್ಯತಿ ॥೪೨॥**

**ಕೋ ವೇದ ದೈವಕರ್ತವ್ಯಂ ಶುಭಂ ವಾಽಪ್ಯಶುಭಂ ತಥಾ ।**
**ಅವಲಂಬ್ಯ ಧಿಯಾ ಧೈರ್ಯಂ ಸ್ಥಾತವ್ಯಂ ವೈ ವಿಚಕ್ಷಣೈಃ ॥೪೩॥**

**ಜೀವಿತಂ ಮರಣಂ ಪುಂಸಾಂ ದೈವಾಧೀನಂ ನರಾಧಿಪ ।**
**ಕೋಽಪಿ ನೈವಾನ್ಯಥಾಕರ್ತುಂ ಸಮರ್ಥೋಽ ಭುವನತ್ರಯೇ ॥೪೪॥**

॥ ಮಹಿಷ ಉವಾಚ ॥

**ಗಚ್ಛ ತಾಮ್ರ ಮಹಾಭಾಗ ಯುದ್ಧಾಯ ಕೃತನಿಶ್ಚಯಃ ।**
**ತಾಮಾನಯ ವರಾರೋಹಾಂ ಜಿತ್ವಾ ಧರ್ಮೇಣ ಮಾನಿನೀಂ ॥೪೫॥**

---

ಆದುದರಿಂದ ಈಗ ನಾವು ದೈನ್ಯ ಎಂದರೆ ಹೇಡಿತನವನ್ನು ಅಥವಾ ಗಾಬರಿ ಗೊಂಡಿರುವಿಕೆಯನ್ನು ತೋರಿಸುವ ಕಾರ್ಯವನ್ನು ಖಂಡಿತವಾಗಿ ಮಾಡಬಾರದು. ಇದು ನನ್ನ ಅಭಿಪ್ರಾಯವು. ಏನೇ ಆಗಲಿ ಯುದ್ಧವನ್ನು ಮಾಡತಕ್ಕದ್ದು. ಮುಂದೇನಾಗುವುದಿದೆಯೋ ಅದು ಆಗಿಯೇ ಆಗುವುದು. ॥೪೨॥

ಅದೃಷ್ಟದ ಪ್ರಾಬಲ್ಯದಿಂದ ಮುಂದಾಗತಕ್ಕ ಒಳ್ಳೆಯದನ್ನಾಗಲಿ, ಕೆಟ್ಟದ್ದ ನ್ನಾಗಲಿ ಯಾರು ತಿಳಿಯಬಲ್ಲರು? ಆದುದರಿಂದ ತಿಳಿವಳಿಕೆಯುಳ್ಳವರು ಮನಸ್ಸಿನಲ್ಲಿ ಧೈರ್ಯವನ್ನವಲಂಬಿಸಿರಬೇಕು. ॥೪೩॥

ಓ ದೊರೆಯೇ, ಮನುಷ್ಯರ ಬದುಕುವಿಕೆಯೂ ಮರಣವೂ ಅವರವರ ಅದೃಷ್ಟಕ್ಕೆ ಒಳಪಟ್ಟು ಆಗತಕ್ಕುದು. ಆ ಅದೃಷ್ಟದ ಬೆಂಬಲವನ್ನು ಬಿಟ್ಟು ಒಬ್ಬನೂ ಈ ಜಗತ್ತಿನಲ್ಲಿ ಏನನ್ನು ಮಾಡಲೂ ಅಥವಾ ಅದನ್ನು ಬದಲಾಯಿಸಲೂ ಶಕ್ತನಾಗ ಲಾರನು. ॥೪೪॥

ಮಹಿಷಾಸುರನು ಹೇಳಿದನು—ಎಲೈ ಪುಣ್ಯಶಾಲಿಯಾದ ತಾಮ್ರಾಸುರನೇ, ಯುದ್ಧಕ್ಕೆ ನಿಶ್ಚಯವನ್ನೂ ಸಿದ್ಧತೆಯನ್ನೂ ಮಾಡಿಕೊಂಡು ಹೋಗು. ಅಭಿಮಾನ ವುಳ್ಳ ಉತ್ತಮಸ್ತ್ರೀಯಾದ ಆ ಚಂಡಿಕೆಯನ್ನು ಧರ್ಮಯುದ್ಧದಲ್ಲಿ ಜಯಿಸಿ ನನ್ನಲ್ಲಿಗೆ ಕರೆದುಕೊಂಡುಬಾ. ॥೪೫॥

ನ ಭವೇದ್ವಶಗಾ ನಾರೀ ಸಂಗ್ರಾಮೇ ಯದಿ ಸಾ ತವ ।
ಹಂತವ್ಯಾ ನಾನ್ಯಥಾ ಕಾಮಂ ಮಾನನೀಯಾ ಪ್ರಯತ್ನತಃ ॥೪೬॥

ವೀರಸ್ತ್ವಮಸಿ ಸರ್ವಜ್ಞ ಕಾಮಶಾಸ್ತ್ರವಿಶಾರದಃ ।
ಯೇನ ಕೇನಾಪ್ಯುಪಾಯೇನ ಜೇತವ್ಯಾ ವರವರ್ಣಿನೀ ॥೪೭॥

ತ್ವರನ್ವೀರ ಮಹಾಬಾಹೋ ಸೈನ್ಯೇನ ಮಹತಾ ವೃತಃ ।
ತತ್ರ ಗತ್ವಾ ತ್ವಯಾ ಜ್ಞೇಯಾ ವಿಚಾರ್ಯ ಚ ಪುನಃ ಪುನಃ ॥೪೮॥

ಕಿಮರ್ಥಮಾಗತಾ ಚೇಯಂ ಜ್ಞಾತವ್ಯಂ ತದ್ಧಿ ಕಾರಣಂ ।
ಕಾಮಾದ್ವಾ ವೈರಭಾವಾದ್ವಾ ಮಾಯಾ ಕಸ್ಯೇಯಮಿತ್ಯುತ ॥೪೯॥

---

ಒಂದುವೇಳೆ ಯುದ್ಧದಲ್ಲಿ ಅವಳು ನಿನ್ನ ಅಧೀನಳಾಗದಿದ್ದರೆ, ಅವಳನ್ನು ನೀನು ಕೋಪದಿಂದ ದುಡುಕಿ ಕೊಲ್ಲಬಾರದು. ಮತ್ತೇನೆಂದರೆ ಬೇರೆ ರೀತಿಯಲ್ಲಿ ಒಲಿಸಿ ಅವಳನ್ನು ಪ್ರಯತ್ನಪೂರ್ವಕವಾಗಿ ಗೌರವಿಸಿ ಕರೆತರಬೇಕು. ॥೪೬॥

ಎಲೈ ತಾಮ್ರನೇ, ನೀನು ವೀರನಾಗಿರುವೆ. ಅಲ್ಲದೆ, ಎಲ್ಲವನ್ನೂ ತಿಳಿದವನಾಗಿಯೂ ಇರುತ್ತೀಯೆ. ಮೇಲಾಗಿ ಕಾಮತಂತ್ರದ ರಹಸ್ಯವನ್ನೂ ತಿಳಿದಿರುತ್ತೀಯೆ. ಯಾವುದಾದರೊಂದು ಉಪಾಯದಿಂದ ಉತ್ತಮಸುಂದರಿಯಾದ ಆ ಚಂಡಿಕೆಯನ್ನು ಜಯಿಸಬೇಕು. ॥೪೭॥

ನೀಳವಾಗಿಯೂ ಪುಷ್ಟವಾಗಿಯೂ ಇರುವ ಬಾಹುಗಳುಳ್ಳ ಮತ್ತು ಪರಾಕ್ರಮಶಾಲಿಯಾದ ಎಲೈ ತಾಮ್ರನೇ, ಜಾಗ್ರತೆಯಾಗಿ ದೊಡ್ಡ ಸೈನ್ಯದೊಂದಿಗೆ ಆ ಚಂಡಿಕೆಯಿರುವಲ್ಲಿಗೆ ಹೋಗಿ ಮುಂದೆ ಹೇಳುವಂತೆ ಪುನಃ ವಿಮರ್ಶಿಸಿ ಅವಳ ಸ್ಥಿತಿಯನ್ನು ತಿಳಿದುಕೊಳ್ಳಬೇಕು. ॥೪೮॥

ಅದೇನೆಂದರೆ, ಈ ಚಂಡಿಕೆಯು, ಏತಕ್ಕೋಸ್ಕರ ಬಂದಿರುತ್ತಾಳೆ? ಎಂದು ವಿಚಾರಿಸಿ ಆ ಕಾರಣವನ್ನು ತಿಳಿದುಕೊಳ್ಳಬೇಕು. ಅವಳು ನಮ್ಮಲ್ಲಿ ಕಾಮನೆಯಿಂದಲಾಗಲಿ ಅಥವಾ ದ್ವೇಷದಿಂದಲಾಗಲಿ ಬಂದಿರುತ್ತಾಳೆಯೇ? ಇವಳು ಯಾರು ಸೃಷ್ಟಿಸಿ ಕಳುಹಿಸಿದ ಮಾಯೆಯು? ಎಂಬುದನ್ನೂ ತಿಳಿಯಬೇಕು. ॥೪೯॥

ಆದೌ ತನ್ನಿಶ್ಚಯಂ ಕೃತ್ವಾ ಜ್ಞಾತವ್ಯಂ ತಚ್ಚಿಕೀರ್ಷಿತಂ ।
ಪಶ್ಚಾದ್ಯುದ್ಧಂ ಪ್ರಕರ್ತವ್ಯಂ ಯಥಾಯೋಗ್ಯಂ ಯಥಾಬಲಂ ॥೫೦॥

ಕಾತರತ್ವಂ ನ ಕರ್ತವ್ಯಂ ನಿರ್ದಯತ್ವಂ ತಥಾ ನ ಚ ।
ಯಾದೃಶಂ ಹಿ ಮನಸ್ತಸ್ಯಾಃ ಕರ್ತವ್ಯಂ ತಾದೃಶಂ ತ್ವಯಾ ॥೫೧॥

॥ ವ್ಯಾಸ ಉವಾಚ ॥

ಇತಿ ತದ್ಭಾಷಿತಂ ಶ್ರುತ್ವಾ ತಾಮ್ರಃ ಕಾಲವಶಂಗತಃ ।
ನಿರ್ಗತಃ ಸೈನ್ಯಸಂಯುಕ್ತಃ ಪ್ರಣಮ್ಯ ಮಹಿಷಂ ನೃಪಂ ॥೫೨॥

ಗಚ್ಛನ್ಮಾರ್ಗೇ ದುರಾತ್ಮಾಽಸೌ ಶಕುನಾನ್ವೀಕ್ಷ್ಯ ದಾರುಣಾನ್ ।
ವಿಸ್ಮಯಂ ಚ ಭಯಂ ಪ್ರಾಪ ಯಮಮಾರ್ಗಪ್ರದರ್ಶಕಾನ್ ॥೫೩॥

---

ಓ ತಾಮ್ರಾಸುರನೇ, ಮೊದಲು ಇದೆಲ್ಲವನ್ನೂ ನಿಶ್ಚಯಿಸಿ ಗೊತ್ತಾದಮೇಲೆ ಮುಂದೆ ಅವಳು ಮಾಡಲಿರುವ ಕಾರ್ಯವನ್ನೂ ತಿಳಿದುಕೊಂಡು ಅನಂತರದಲ್ಲಿ ಆ ಕಾಲಸಂದರ್ಭಗಳಿಗೆ ತಕ್ಕಂತೆಯೂ ನಿನ್ನ ಮತ್ತು ಅವಳ ಬಲಕ್ಕನುಸಾರವಾಗಿಯೂ ಯುದ್ಧವನ್ನು ಮಾಡಬೇಕು. ॥೫೦॥

ಹೆದರಿಕೆ ಅಥವಾ ಗಾಬರಿಯನ್ನು ತೋರಿಸುವ ಕಾರ್ಯವನ್ನು ಮಾಡಲಾಗದು. ಹಾಗೆಯೇ, ಕೊಲ್ಲುವಿಕೆಯಂತಹ ಕ್ರೂರತನದ ಕೃತ್ಯವನ್ನೂ ಮಾಡಕೂಡದು. ಆ ಚಂಡಿಕೆಯ ಮನಸ್ಸು ಯುದ್ಧವಾಗಲಿ ಕಾಮವಾಗಲಿ ಇವುಗಳಲ್ಲಿ ಯಾವ ಅಭಿಪ್ರಾಯವುಳ್ಳದ್ದಾಗಿರುವುದೋ ಅದರಂತೆ ನೀನೂ ಕಾರ್ಯವನ್ನು ಮಾಡ ತಕ್ಕದ್ದು. ॥೫೧॥

ವ್ಯಾಸಮುನಿಯು ಹೇಳಿದನು—ಓ ಜನಮೇಜಯನೇ, ಹೀಗೆ ಹೇಳಿದ ಆ ಮಹಿಷಾಸುರನ ಮಾತುಗಳನ್ನು ಕೇಳಿ, ಮರಣಕಾಲವು ಸಮೀಪಿಸಿರುವ ಆ ತಾಮ್ರಾಸುರನು ಮಹಿಷನನ್ನು ವಂದಿಸಿ ಸೈನ್ಯದೊಡನೆ ದೇವಿಯಿದ್ದೆಡೆಗೆ ಹೊರಟನು. ॥೫೨॥

ಹೋಗುತ್ತಾ ದಾರಿಯಲ್ಲಿ, ದುಷ್ಟನಾದ ಆ ತಾಮ್ರನು ತನ್ನ ಮೃತ್ಯುವನ್ನು ಸೂಚಿಸುವ ಭಯಂಕರವಾದ ಅನೇಕ ಕೆಟ್ಟಶಕುನಗಳನ್ನು ನೋಡಿ ತುಂಬ ಆಶ್ಚರ್ಯವನ್ನೂ ಹೆದರಿಕೆಯನ್ನೂ ಹೊಂದಿದನು. ॥೫೩॥

ಸ ಗತ್ವಾ ತಾಂ ಸಮಾಲೋಕ್ಯ ದೇವೀಂ ಸಿಂಹೋಪರಿ ಸ್ಥಿತಾಂ ।
ಸ್ತೂಯಮಾನಾಂ ಸುರೈಃ ಸರ್ವೈಃ ಸರ್ವಾಯುಧವಿಭೂಷಿತಾಂ ॥೫೪॥

ತಾಮುವಾಚ ವಿನೀತಃ ಸನ್ವಾಕ್ಯಂ ಮಧುರಯಾ ಗಿರಾ ।
ಸಾಮಭಾವಂ ಸಮಾಶ್ರಿತ್ಯ ವಿನಯಾವನತಃ ಸ್ಥಿತಃ ॥೫೫॥

ದೇವಿ ದೈತ್ಯೇಶ್ವರಃ ಶೃಂಗೀ ತ್ವದ್ರೂಪಗುಣಮೋಹಿತಃ ।
ಸ್ಪೃಹಾಂ ಕರೋತಿ ಮಹಿಷಸ್ತ್ವತ್ಪಾಣಿಗ್ರಹಣಾಯ ಚ ॥೫೬॥

ಭಾವಂ ಕುರು ವಿಶಾಲಾಕ್ಷಿ ತಸ್ಮಿನ್ನಮರದುರ್ಜಯೇ ।
ಪತಿಂ ತಂ ಪ್ರಾಪ್ಯ ಮೃದ್ವಂಗಿ ನಂದನೇ ವಿಹರಾದ್ಭುತೇ ॥೫೭॥

ಸರ್ವಾಂಗಸುಂದರಂ ದೇಹಂ ಪ್ರಾಪ್ಯ ಸರ್ವಸುಖಾಸ್ಪದಂ ।
ಸುಖಂ ಸರ್ವಾತ್ಮನಾ ಗ್ರಾಹ್ಯಂ ದುಃಖಂ ಹೇಯಮಿತಿ ಸ್ಥಿತಿಃ ॥೫೮॥

---

ಅವನು ದೇವಿಯಿದ್ದೆಡೆಗೆ ಹೋಗಿ, ಮೃಗರಾಜನಾದ ಸಿಂಹದ ಮೇಲೆ ಕುಳಿತಿರುವ, ಎಲ್ಲ ದೇವತೆಗಳಿಂದಲೂ ಸ್ತುತಿಸಲ್ಪಡುತ್ತಲಿರುವ ಮತ್ತು ಎಲ್ಲ ಆಯುಧಗಳಿಂದಲೂ ಶೋಭಿಸುತ್ತಲಿರುವ ಆ ದೇವಿಯನ್ನು ನೋಡಿದನು. ॥೫೪॥

ಆ ದೇವಿಯನ್ನು ನೋಡಿ ತಾಮ್ರಾಸುರನು ವಿನಯದಿಂದ ಬಗ್ಗಿ ಮತ್ತು ಮನಸ್ಸಮಾಧಾನದಿಂದ ಕೂಡಿ ಅವಳನ್ನು ಕುರಿತು ಮಧುರವಾದ ಮಾತುಗಳನ್ನು ಹೀಗೆ ಹೇಳಿದನು. ॥೫೫॥

ಓ ದೇವಿಯೇ, ದೈತ್ಯರಿಗೆಲ್ಲ ಒಡೆಯನಾದ ಮತ್ತು ತೀಕ್ಷ್ಣವಾದ ಶೃಂಗಗಳುಳ್ಳ ನಮ್ಮ ಪ್ರಭುವಾದ ಮಹಿಷಾಸುರನು ನಿನ್ನ ಸೌಂದರ್ಯ ಮತ್ತು ಗುಣಗಳಲ್ಲಿ ಮೋಹಗೊಂಡವನಾಗಿ ನಿನ್ನನ್ನು ಮದುವೆಮಾಡಿಕೊಳ್ಳಲು ಇಚ್ಛಿಸುತ್ತಾನೆ. ॥೫೬॥

ವಿಶಾಲವಾದ ನಯನಗಳುಳ್ಳ ಓ ಸುಂದರಿಯೇ, ದೇವತೆಗಳಿಂದಲೂ ಜಯಿಸಲಶಕ್ಯನಾದ ಆ ಮಹಿಷನಲ್ಲಿ ನೀನೂ ಸಹ ಪ್ರೇಮವುಳ್ಳವಳಾಗಿ ಅವನನ್ನು ವರಿಸು. ಮತ್ತು ಮೃದುವಾದ ಅವಯವಗಳುಳ್ಳ ಓ ದೇವಿಯೇ, ಅವನನ್ನು ಪತಿಯಾಗಿ ಪಡೆದು ಆಶ್ಚರ್ಯಕರವಾದ ನಂದನವನದಲ್ಲಿ ಅವನೊಡನೆ ವಿಹರಿಸು. ॥೫೭॥

ಎಲ್ಲ ಅಂಗಗಳಿಂದಲೂ ಸುಂದರವಾಗಿರುವ, ಎಲ್ಲ ಬಗೆಯ ಸುಖಗಳಿಗೆ ಸ್ಥಾನವಾಗಿರುವ ದೇಹವನ್ನು ಹೊಂದಿ, ಎಲ್ಲ ರೀತಿಯಿಂದಲೂ ಸುಖವನ್ನನುಭವಿಸ

ಕರಭೋರು ಕಿಮರ್ಥಂ ತೇ ಗೃಹೀತಾನ್ಯಾಯುಧಾನ್ಯಲಂ ।
ಪುಷ್ಪಕಂದುಕಯೋಗ್ಯಾಸ್ತೇ ಕರಾಃ ಕಮಲಕೋಮಲಾಃ ॥೫೯॥

ಭ್ರೂಚಾಪೇ ವಿದ್ಯಮಾನೇಽಪಿ ಧನುಷಾ ಕಿಂ ಪ್ರಯೋಜನಮ್ ।
ಕಟಾಕ್ಷಾ ವಿಶಿಖಾಃ ಸಂತಿ ಕಿಂ ಬಾಣೈರ್ನಿಷ್ಪ್ರಯೋಜನೈಃ ॥೬೦॥

ಸಂಸಾರೇ ದುಃಖದಂ ಯುದ್ಧಂ ನ ಕರ್ತವ್ಯಂ ವಿಜಾನತಾ ।
ಲೋಭಾಸಕ್ತಾಃ ಪ್ರಕುರ್ವಂತಿ ಸಂಗ್ರಾಮಂ ಚ ಪರಸ್ಪರಮ್ ॥೬೧॥

ಪುಷ್ಪೈರಪಿ ನ ಯೋದ್ಧವ್ಯಂ ಕಿಂ ಪುನರ್ನಿಶಿತೈಃ ಶರೈಃ ।
ಭೇದನಂ ನಿಜಗಾತ್ರಾಣಾಂ ಕಸ್ಯ ತಜ್ಜಾಯತೇ ಮುದೇ ॥೬೨॥

---

ಬೇಕು. ದುಃಖವನ್ನು ನಿವಾರಿಸಿಕೊಳ್ಳಬೇಕು. ಇದು ಬುದ್ಧಿವಂತರ ವಿವೇಕದ ನಡೆವಳಿಕೆಯಾಗಿರುತ್ತದೆ. ॥೫೮॥

ಆನೆಯ ಸೊಂಡಲಿನಂತಿರುವ ತೊಡೆಗಳುಳ್ಳ ಓ ಸುಂದರಿಯೇ, ನೀನು ಈ ಕೈಗಳಿಂದ ಕಠಿಣವಾದ ಆಯುಧಗಳನ್ನು ಏಕೆ ಹಿಡಿದಿರುವೆ? ತಾವರೆಯ ಹೂವಿನಂತೆ ಮೃದುವಾದ ನಿನ್ನ ಕೈಗಳು ಹೂವಿನ ಚಂಡನ್ನು ಹಿಡಿದುವಿಹರಿಸಲು ಯೋಗ್ಯವಾದವುಗಳು. ॥೫೯॥

ಭ್ರೂ (ಎಂದರೆ ಹುಬ್ಬುಗಳು) ಎಂಬ ಧನುಸ್ಸೇ ಇರುತ್ತಿರಲು ಈ ನೀನು ಹಿಡಿದಿರುವ ಧನುಸ್ಸಿನಿಂದ ಫಲವೇನು? ನಿನ್ನ ಕುಡಿನೋಟಗಳೆಂಬ ಶರಗಳೇ ಇರುವಾಗ, ಇನ್ನು ಬೇರೆ ಬಾಣಗಳಿಂದ ಯಾವ ಪ್ರಯೋಜನವೂ ಇಲ್ಲದಿರುವುದರಿಂದ ಈ ಬಾಣಗಳೇಕೆ? ॥೬೦॥

ಈ ಸಂಸಾರದಲ್ಲಿ ಎಂದರೆ ಪ್ರಾಪಂಚಿಕವಾದ ವ್ಯವಹಾರದಲ್ಲಿ ಯುದ್ಧವೆಂಬುದು ದುಃಖವನ್ನು ಮಾತ್ರ ಉಂಟುಮಾಡತಕ್ಕದ್ದಾಗಿರುತ್ತದೆ. ಆದುದರಿಂದ ತಿಳಿವಳಿಕೆಯುಳ್ಳವರು ಯುದ್ಧವನ್ನು ಮಾಡಬಾರದು. ಆದರೂ ದುರಾಶೆಯಿಂದ ಕೆಲವರು ಮಾತ್ರ ಪರಸ್ಪರವಾಗಿ ಯುದ್ಧವನ್ನು ಮಾಡುತ್ತಾರೆ. ॥೬೧॥

ಅತ್ಯಂತ ಮೃದುವಾದ ಹೂಗಳಿಂದಲೂ ಸಹ ಪರಸ್ಪರ ಹೊಡೆದಾಡಿಕೊಳ್ಳಬಾರದು. ಹೀಗಿರುವಲ್ಲಿ ತುಂಬ ಹರಿತವಾದ ಬಾಣಗಳಿಂದ ಯುದ್ಧವನ್ನು ಮಾಡ

ತಸ್ಮಾತ್ತ್ವಮಸಿ ತನ್ವಂಗಿ ಪ್ರಸಾದಂ ಕರ್ತುಮರ್ಹಸಿ ।
ಭರ್ತಾರಂ ಭಜ ಮೇ ನಾಥಂ ದೇವದಾನವಪೂಜಿತಂ ॥೬೩॥

ಸ ತೇಽತ್ರ ವಾಂಛಿತಂ ಸರ್ವಂ ಕರಿಷ್ಯತಿ ಮನೋರಥಂ ।
ತ್ವಂ ಪಟ್ಟಮಹಿಷೀ ರಾಜ್ಞಃ ಸರ್ವಥಾ ನಾತ್ರ ಸಂಶಯಃ ॥೬೪॥

ವಚನಂ ಕುರು ಮೇ ದೇವಿ ಪ್ರಾಪ್ಸ್ಯಸೇ ಸುಖಮುತ್ತಮಂ ।
ಸಂಗ್ರಾಮೇ ಜಯಸಂದೇಹಃ ಕಷ್ಟಂ ಪ್ರಾಪ್ಯ ನ ಸಂಶಯಃ ॥೬೫॥

ಜಾನಾಸಿ ರಾಜನೀತಿಂ ತ್ವಂ ಯಥಾವದ್ವರವರ್ಣಿನಿ ।
ಭುಂಕ್ಷ್ವ ರಾಜ್ಯಸುಖಂ ಪೂರ್ಣಂ ವರ್ಷಾಣಾಮಯುತಾಯುತಂ ॥೬೬॥

---

ಬಾರದೆಂದು ಹೇಳಬೇಕಾದುದೇನು ? ಏಕೆಂದರೆ ಅಂತಹ ನಿಶಿತಬಾಣಗಳಿಂದ ತಮ್ಮ ದೇಹವನ್ನು ಸಿಗಿದುಕೊಳ್ಳುವಿಕೆಯು ಯಾವನಿಗೆ ತಾನೇ ಸಂತೋಷವನ್ನುಂಟು ಮಾಡೀತು ? ॥೬೨॥

ಆದುದರಿಂದ ಮೃದುವಾದ ಶರೀರವುಳ್ಳ ಓ ಸುಂದರಿಯೇ, ನೀನೂ ಕೋಪ ವನ್ನು ಬಿಟ್ಟು ಪ್ರಸನ್ನಳಾಗು. ದೇವತೆಗಳಿಂದಲೂ ರಾಕ್ಷಸರಿಂದಲೂ ಗೌರವಿಸಲ್ಪ ಡುತ್ತಲಿರುವ ನಮ್ಮ ಒಡೆಯನಾದ ಮಹಿಷಾಸುರನನ್ನು ನಿನ್ನ ಪತಿಯನ್ನಾಗಿ ಸ್ವೀಕರಿಸು. ॥೬೩॥

ಅವನು ನಿನ್ನ ಎಲ್ಲ ಅಭಿಲಾಷೆಗಳನ್ನೂ ಈಡೇರಿಸುವನು. ನೀನು ಎಲ್ಲ ಭಾಗದಲ್ಲೂ ಅವನ ಪಟ್ಟದ ರಾಣಿಯಾಗುವೆ. ಇದರಲ್ಲಿ ಸ್ವಲ್ಪವೂ ಸಂಶಯ ವಿಲ್ಲವು. ॥೬೪॥

ಆದುದರಿಂದ ಓ ದೇವಿಯೇ, ನನ್ನ ಮಾತನ್ನು ನಡೆಯಿಸು. ಆದರಿಂದ ನೀನು ಉತ್ತಮವಾದ ಸುಖವನ್ನು ಪಡೆಯುವೆ. ಹಾಗಲ್ಲದೆ ನೀನು ಯುದ್ಧವನ್ನು ಮಾಡಿದರೆ, ಅದರಲ್ಲಿ ತುಂಬ ಕಷ್ಟವನ್ನನುಭವಿಸುವೆ. ಅಲ್ಲದೆ, ಅದರಲ್ಲಿ ನಿನಗೇ ಜಯವಾಗುತ್ತದೆಯೋ ಇಲ್ಲವೋ ಎಂಬ ಸಂದೇಹವೇ ಖಂಡಿತವಾಗಿಯೂ ಇರು ತ್ತದೆ. ॥೬೫॥

ಶ್ರೇಷ್ಠಸ್ತ್ರೀಯಾದ ಓ ದೇವಿಯೇ, ನೀನೂ ರಾಜನೀತಿಯನ್ನು ಚನ್ನಾಗಿ ತಿಳಿ ದಿರುತ್ತೀಯೆ. ಆದುದರಿಂದ ಸರಿಯಾದುದನ್ನು ಆರಿಸಿಕೊಳ್ಳುವಳಾಗು ಮತ್ತು

**ಪುತ್ರಸ್ತೇ ಭವಿತಾ ಕಾಂತಃ ಸೋಽಪಿ ರಾಜಾ ಭವಿಷ್ಯತಿ ।**
**ಯೌವನೇ ಕ್ರೀಡಯಿತ್ವಾಂತೇ ವಾರ್ಧಕ್ಯೇ ಸುಖಮಾಪ್ಸ್ಯಸಿ ॥೬೭॥**
**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ಏಕಾದಶೋಽಧ್ಯಾಯಃ.**

---

ಮಹಿಷನೊಂದಿಗೆ ಹತ್ತುಸಾವಿರಗಟ್ಟಲೆಯ ವರ್ಷಗಳವರೆಗೆ ಆ ರಾಜ್ಯಸುಖವನ್ನು ಪೂರ್ಣವಾಗಿ ಅನುಭವಿಸು. ||೬೬||

ಮುಂದೆ ನಿನಗೆ ಮನೋಹರನಾದ ಮಗನೂ ಹುಟ್ಟುವನು. ಅವನೂ ರಾಜನಾಗುವನು. ಯೌವನದಲ್ಲಿ ಚನ್ನಾಗಿ ಪತಿಯೊಂದಿಗೆ ಸಂತೋಷದೊಡನೆ ವಿಹರಿಸಿ, ಕೊನೆಗೆ ಮುಪ್ಪಿನಲ್ಲಿಯೂ ಆ ಪುತ್ರನಿಂದಲೂ ಸುಖವನ್ನು ಹೊಂದುವೆ. ||೬೭||

ರಾಕ್ಷಸರು ತಮ್ಮ ಸ್ವಭಾವಕ್ಕೆ ತಕ್ಕಂತೆ ಕಾಮ್ಯವಾದ ತಪಸ್ಸನ್ನು ಆಚರಿಸಿದ್ದರು. ಕಾಮ್ಯವಾದ ಧರ್ಮಾಚರಣೆಯನ್ನು ಮಾಡಲು ದೇವರ ಅನುಗ್ರಹದಿಂದ ರಾಜ್ಯಸುಖವನ್ನು ಪಡೆದರು. ರಾಜ್ಯಸಂಪಾದನೆಯಲ್ಲೂ ಅದನ್ನು ಆಳುವಾಗಲೂ ಕ್ರೌರ್ಯ, ದುರಾಶೆಗಳು ಮುಂದಾಗುವುದು ಅನಿವಾರ್ಯವಾದುದು. ಹೀಗೆ ಪುನಃ ಬೆಳೆದ ಅಧರ್ಮದಿಂದ ಧರ್ಮಕ್ಕೆ ಗ್ಲಾನಿಯುಂಟಾಯಿತು. ಅತ್ತಲಾಗಿ ದೇವತೆಗಳೂ ದುಃಖಾನುಭವ, ಪಶ್ಚಾತ್ತಾಪಗಳಿಂದ ಪಾಪಗಳನ್ನು ಕಳೆದುಕೊಂಡು ತಪಸ್ಸಿನಿಂದ ಶುದ್ಧರಾಗಿರುತ್ತಾರೆ. ಈ ಲೋಕದಲ್ಲೂ ಕ್ಷೇಮವನ್ನುಂಟುಮಾಡಬೇಕಾಗಿರುತ್ತದೆ. ಇವೆಲ್ಲದರ ಪರಿಣಾಮವಾಗಿ ದುಷ್ಟನಿಗ್ರಹ ಶಿಷ್ಟರಕ್ಷಣೆಗಳಿಂದ ಧರ್ಮವನ್ನು ಪುನಃ ಸ್ಥಾಪಿಸುವುದರಿಂದ ಲೋಕರಕ್ಷಣೆಯು ಆಗಬೇಕಾಗಿದೆ. ಅಂಶಾಂಶರಿಂದಲೇ ನಿರ್ವಾಹವಾಗದಿರುವ ಈ ಮಹಾಕಾರ್ಯದ ನಿರ್ವಾಹಕ್ಕೆ ಎಲ್ಲಕ್ಕೂ ಮೂಲಕಾರಣಳಾದ ಪರಾಶಕ್ತಿಯೇ ಅವತರಿಸಿರುತ್ತಾಳೆ. ಎಲ್ಲರಿಗೂ ತಾಯಿಯಾದ ವಿಶ್ವಜನನಿಯಲ್ಲೂ ಮಹಿಷನು ದುಷ್ಕಾಮನೆಯನ್ನು ತೋರುತ್ತಾನೆ. ಅವನ ಪುಣ್ಯವೂ ಮುಗಿದು ಹೋಗಿ ಪಾಪವು ಮುಂದಾಗಿರುತ್ತದೆ. ಅವನ ಅನುಯಾಯಿಗಳೂ ಅವನ ಅಧರ್ಮಾಚರಣೆಗೆ ಸಹಾಯಕರಾಗುತ್ತಾರೆ. ಇವೆಲ್ಲದರ ಫಲವಾಗಿ ರಾಕ್ಷಸರು ಪಾತಾಳಕ್ಕೆ ಹೋಗಬೇಕೆಂಬುದೂ, ದೇವತೆಗಳು ಸ್ವರ್ಗವನ್ನು ಪಡೆಯಬೇಕೆಂಬುದೂ, ಮಾನವರು ಧರ್ಮಾಚರಣೆಯಲ್ಲಿರಬೇಕೆಂಬುದೂ ಆವಶ್ಯಕವಾಗುತ್ತದೆ.

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

॥ ದ್ವಾದಶೋಽಧ್ಯಾಯಃ ॥

### ಹನ್ನೆರಡನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ತನ್ನಿಶಮ್ಯ ವಚಸ್ತಸ್ಯ ತಾಮ್ರಸ್ಯ ಜಗದಂಬಿಕಾ ।**
**ಮೇಘಗಂಭೀರಯಾ ವಾಚಾ ಹಸಂತೀ ತಮುವಾಚ ಹ ॥೧॥**

॥ ದೇವ್ಯುವಾಚ ॥

**ಗಚ್ಛ ತಾಮ್ರ ಪತಿಂ ಬ್ರೂಹಿ ಮುಮೂರ್ಷುಂ ಮಂದಚೇತಸಂ ।**
**ಮಹಿಷಂ ಚಾತಿಕಾಮಾರ್ತಂ ಮೂಢಂ ಜ್ಞಾನವಿವರ್ಜಿತಂ ॥೨॥**

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ, ಹೀಗೆ ಹೇಳಿದ ಆ ತಾಮ್ರಾಸುರನ ಮಾತುಗಳನ್ನು ಕೇಳಿ ಜಗತ್ತಿಗೇ ಮಾತೆಯಾದ ದೇವಿಯು ಮೇಘಧ್ವನಿಯಂತೆ ಗಂಭೀರವಾದ ಧ್ವನಿಯಿಂದ ಕೂಡಿರುವ ಮಾತುಗಳಿಂದ ಮುಗುಳುನಗೆಯನ್ನು ಸೂಸುತ್ತ ಅವನನ್ನು ಕುರಿತು ಹೀಗೆ ಕಡೆಯ ಎಚ್ಚರಿಕೆಯ ಬುದ್ಧಿವಾದವನ್ನು ಹೇಳಿದಳು. ॥೧॥

ದೇವಿಯು ಹೇಳಿದಳು—ಎಲೈ ತಾಮ್ರಾಸುರನೇ, ಹೋಗು. ಸಾವನ್ನಪೇಕ್ಷಿಸುತ್ತಿರುವ, ವಿವೇಚನೆಯ ತಿಳಿವಳಿಕೆಯಿಲ್ಲದ, ಜಯೋನ್ಮತ್ತನಾಗಿ ತುಂಬ ಕಾಮಪೀಡಿನಾಗಿರುವ ಮತ್ತು ಆ ಕಾರಣದಿಂದಲೇ ಅವಿವೇಕಿಯೂ ಜ್ಞಾನರಹಿತನೂ ಆಗಿರುವ ನಿನ್ನೊಡೆಯನಾದ ಆ ಮಹಿಷನನ್ನು ಕುರಿತು ಹೀಗೆ ಹೇಳು. ॥೨॥

ಯಥಾ ತೇ ಮಹಿಷೀ ಮಾತಾ ಪ್ರೌಢಾ ಯವಸಭಕ್ಷಿಣೀ ।
ನಾಹಂ ತಥಾ ಶೃಂಗವತೀ ಲಂಬಪುಚ್ಛಾ ಮಹೋದರೀ ॥೩॥

ನ ಕಾಮಯೇಽಹಂ ದೇವೇಶಂ ನೈವ ವಿಷ್ಣುಂ ನ ಶಂಕರಂ ।
ಧನದಂ ವರುಣಂ ನೈವ ಬ್ರಹ್ಮಾಣಂ ನ ಚ ಪಾವಕಂ ॥೪॥

ಏತಾನ್ದೇವಗಣಾನ್ ಹಿತ್ವಾ ಪಶುಂ ಕೇನ ಗುಣೇನ ವೈ ।
ವೃಣೋಮ್ಯಹಂ ವೃಥಾ ಲೋಕೇ ಗರ್ಹಣಾ ಮೇ ಭವೇದಿತಿ ॥೫॥

ನಾಹಂ ಪತಿಂವರಾ ನಾರೀ ವರ್ತತೇ ಮೇ ಪತಿಃ ಪ್ರಭುಃ ।
ಸರ್ವಕರ್ತಾ ಸರ್ವಸಾಕ್ಷೀ ಹ್ಯಕರ್ತಾ ನಿಃಸ್ಪೃಹಃ ಸ್ಥಿರಃ ॥೬॥

---

ಓ ಮಹಿಷಾಸುರನೇ, ಹುಲ್ಲನ್ನು ಮೇಯುವ, ಕೊಂಬುಗಳುಳ್ಳ, ಜೋಲಾಡುವ ಬಾಲವುಳ್ಳ, ದೊಡ್ಡ ಹೊಟ್ಟೆಯುಳ್ಳ ನಿನ್ನ ತಾಯಿಯಂತೆ ನಾನು ಎಮ್ಮೆಯ ಜಾತಿಯವಳಲ್ಲವು. ||೩||

ನಾನು ದೇವತೆಗಳಿಗೊಡೆಯನಾದ ದೇವೇಂದ್ರನನ್ನೂ, ವಿಷ್ಣುವನ್ನೂ ಕಾಮಿಸೆನು. ಅದರಂತೆಯೇ ಶಿವನನ್ನೂ, ಕುಬೇರನನ್ನೂ, ಬ್ರಹ್ಮನನ್ನೂ ಅಗ್ನಿಯನ್ನೂ ಮತ್ತು ಇಂತಹ ದೊಡ್ಡವರನ್ನೂ ಸಹ ಎಂದಿಗೂ ಕಾಮಿಸೆನು. ||೪||

ಇಂತಹ ದೇವತೆಗಳನ್ನೇ ವರಿಸದಿರುವ ನಾನು ಕೇವಲ ಪಶು ಎಂದರೆ ಕೋಣನಾಗಿರುವ ಮಹಿಷಾಸುರನನ್ನು ಯಾವ ಗುಣದಿಂದ ವರಿಸಲಿ? ಹಾಗಿಲ್ಲದೆ ನಾನು ಪಶುವಾದ ನಿನ್ನನ್ನು ವರಿಸಿದ್ದೇ ಆದರೆ ನನಗೆ ಖಂಡಿತವಾಗಿ ಲೋಕ ನಿಂದೆಯೂ ಬಂದೇಬರುವುದು. ||೫||

ನಾನು ಪತಿಯನ್ನು ವರಿಸಲಪೇಕ್ಷಿಸಿ ಬಂದಿರುವ ಸ್ತ್ರೀಯಲ್ಲವು. ಈ ಜಗತ್ತಿಗೇ ಒಡೆಯನಾದಂತಹ ಪತಿಯು ನನಗೆ ಇರುವನು. ಅವನು ಶಕ್ತಿರೂಪಳಾದ ನನ್ನ ದ್ವಾರಾ ಸರ್ವವನ್ನೂ ಸೃಷ್ಟಿಸುವವನೂ, ಆದುದರಿಂದಲೇ ಈ ಜಗತ್ತಿನ ಆಗುಹೋಗುಗಳೆಲ್ಲವನ್ನೂ ತಾನು ಆಸಕ್ತನಲ್ಲದೆ ರಾಗದ್ವೇಷಗಳ ಲೇಪವಿಲ್ಲದೆಯೇ ತನ್ನ ಸನ್ನಿಧಾನಸ್ಥಿತಿಯ ಮಾತ್ರದಿಂದಲೇ ನಡೆಸತಕ್ಕ ಸಾಕ್ಷಿಸ್ವರೂಪನೂ, ಸ್ವತಃ ಯಾವ ವಿಕಾರಗಳೂ ಇಲ್ಲದುದರಿಂದ ಕರ್ತೃತ್ವರಹಿತನೂ, ಆಪ್ತಕಾಮನಾದುದರಿಂದ ಯಾವ ಆಶೆಯೂ ಇಲ್ಲದವನೂ ನಿತ್ಯನೂ ಆಗಿರುವನು. ||೬||

**ನಿರ್ಗುಣೋ ನಿರ್ಮಮೋಽನಂತೋ ನಿರಾಲಂಬೋ ನಿರಾಶ್ರಯಃ ।**
**ಸರ್ವಜ್ಞಃ ಸರ್ವಗಃ ಸಾಕ್ಷೀ ಪೂರ್ಣಃ ಪೂರ್ಣಾಶಯಃ ಶಿವಃ ॥೭॥**

**ಸರ್ವಾವಾಸಃ ಕ್ಷಮಃ ಶಾಂತಃ ಸರ್ವದೃಕ್ಸರ್ವಭಾವನಃ ।**
**ತಂ ತ್ಯಕ್ತ್ವಾ ಮಹಿಷಂ ಮಂದಂ ಕಥಂ ಸೇವಿತುಮುತ್ಸಹೇ ॥೮॥**

**ಪ್ರಬುಧ್ಯ ಯುಧ್ಯತಾಂ ಕಾಮಂ ಕರೋಮಿ ಯಮವಾಹನಂ ।**
**ಅಥವಾ ಮನುಜಾನಾಂ ವೈ ಕರಿಷ್ಯೇ ಜಲವಾಹಕಂ ॥೯॥**

---

ಮತ್ತು ಅವನು ಮಾಯಿಕವಾದ ಸತ್ತ್ವರಜಸ್ತಮೋರೂಪಗಳಾದ ಗುಣಗಳ ಸಂಬಂಧವಿಲ್ಲದವನೂ, ಮಮತೆಯಿಲ್ಲದವನೂ, ತನ್ನನ್ನು ಬಿಟ್ಟು ಇನ್ನಾವ ಅವ ಲಂಬನೆಯ ಅಪೇಕ್ಷೆಯೂ ಇಲ್ಲದವನೂ, ತಾನೇ ಎಲ್ಲಕ್ಕೂ ಆಶ್ರಯನಾದುದರಿಂದ ಸ್ವತಃ ತಾನು ಆಶ್ರಯಿಸಬಹುದಾದ ವಸ್ತುವೇ ಇಲ್ಲದವನೂ, ಎಲ್ಲವನ್ನೂ ಬಲ್ಲ ವನೂ, ವ್ಯಾಪಕನೂ, ಜಗತ್ತಿನಲ್ಲಿ ಮಾಯೆಯಿಂದ ನಡೆಯತಕ್ಕ ಎಲ್ಲ ಕಾರ್ಯ ಗಳನ್ನೂ ನಾನು ನನ್ನದೆಂಬ ಅಭಿಮಾನವಿಲ್ಲದ ರೀತಿಯಿಂದ ನೋಡುವ ಸಾಕ್ಷಿಯೂ, ಜಗತ್ತಿನಲ್ಲೂ, ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವವನೂ, ಆಪ್ತಕಾಮನೂ, ಮಂಗಳ ಸ್ವರೂಪನೂ ಆಗಿರುವನು. ||೭||

ಮತ್ತು ಅವನು ಕಲ್ಪಿತವಾದ ಈ ಜಗತ್ತಿಗೆಲ್ಲ ಅಧಿಷ್ಠಾನಸ್ವರೂಪನೂ ಸರ್ವ ಕಾರ್ಯನಿರ್ವಾಹದಲ್ಲಿ ಸಮರ್ಥನೂ, ದೋಷರಹಿತನೂ, ಎಲ್ಲವನ್ನೂ ಸಾಕ್ಷಿರೂಪ ವಾಗಿ ನೋಡತಕ್ಕವನೂ ಅಥವಾ ಎಲ್ಲರಲ್ಲಿಯೂ ಇರುವ ದೃಕ್ಸ್ವರೂಪನೂ, ಎಲ್ಲ ವನ್ನೂ ಇರುವಂತೆ ಮಾಡತಕ್ಕವನೂ ಆಗಿರುತ್ತಾನೆ. ಅಂತಹವನನ್ನು ಬಿಟ್ಟು ತಿಳಿ ವಳಿಕೆಯಿಲ್ಲದ ಕೋಣನಾದವನನ್ನು ನಾನು ಸೇವಿಸಲು ಹೇಗೆ ಆದರವುಳ್ಳವಳಾಗು ವೆನು ? ||೮||

ಆದುದರಿಂದ ನೀನು ಚನ್ನಾಗಿ ತಿಳಿದು ಎಚ್ಚರಗೊಂಡು ನನ್ನೊಡನೆ ಯುದ್ಧ ವನ್ನು ಮಾಡು. ಆ ಯುದ್ಧದಲ್ಲಿ ಕೋಣನಾದ ನಿನ್ನನ್ನು ಯಮನ ವಾಹನವಾದ ಕೋಣವನ್ನಾಗಿಯೇ ಮಾಡುವೆನು ಎಂದರೆ ನಿನ್ನನ್ನು ಕೊಂದು ಯಮಲೋಕಕ್ಕೆ ಕಳುಹಿಸುವೆನು. ಅಥವಾ ಭೂಲೋಕದಲ್ಲಿ ಮನುಷ್ಯರಿಗಾಗಿ ಜಲವನ್ನು ಹೊರುವ ಕೋಣನನ್ನಾಗಿಯಾದರೂ ಮಾಡುವೆನು. ಹೇಗೂ ನಿನ್ನನ್ನು ಜಯಿಸುವೆನು, ಅಧರ್ಮ ವನ್ನು ಧರ್ಮವು ಜಯಿಸುವುದು ಖಂಡಿತವು, ಎಂದು ತಾತ್ಪರ್ಯಾರ್ಥವು. ||೯||

**ಜೀವಿತೇಚ್ಛಾಽಸ್ತಿ ಚೇತ್ಪಾಪ ಗಚ್ಛ ಪಾತಾಲಮಾಶು ವೈ ।**
**ಸಮಸ್ತೈರ್ದಾನವೈರ್ಯುಕ್ತಸ್ತ್ವನ್ಯಥಾ ಹನ್ಮಿ ಸಂಗರೇ ॥೧೦॥**

**ಕಾಮಂ ಸದೃಶಯೋರ್ಯೋಗಃ ಸಂಸಾರೇ ಸುಖದೋ ಭವೇತ್ ।**
**ಅನ್ಯಥಾ ದುಃಖದೋ ಭೂಯಾದಜ್ಞಾನಾದ್ಯದಿ ಕಲ್ಪಿತಃ ॥೧೧॥**

**ಮೂರ್ಖಸ್ತ್ವಮಸಿ ಯದ್ಬ್ರೂಷೇ ಪತಿಂ ಮೇ ಭಜ ಭಾಮಿನಿ ।**
**ಕ್ವಾಹಂ ಕ್ವ ಮಹಿಷಃ ಶೃಂಗೀ ಸಂಬಂಧಃ ಕೀದೃಶೋ ದ್ವಯೋಃ ॥೧೨॥**

**ಗಚ್ಛ ಯುಧ್ಯಸ್ವ ವಾ ಕಾಮಂ ಹನಿಷ್ಯೇಽಹಂ ಸಬಾಂಧವಂ ।**
**ಯಜ್ಞಭಾಗಂ ದೇವಲೋಕಂ ನೋ ಚೇತ್ತ್ಯಕ್ತ್ವಾ ಸುಖೀ ಭವ ॥೧೩॥**

---

ಆದುದರಿಂದ ಪಾಪಿಯಾದ ಓ ಮಹಿಷನೇ, ನಿನಗೆ ಬದುಕಿರಬೇಕೆಂಬ ಆಶೆ ಇದ್ದುದೇ ಆದರೆ ಈಗಲೇ ಎಲ್ಲ ರಾಕ್ಷಸರೊಡನೆ ಪಾತಾಳಕ್ಕೆ ಹೊರಟುಹೋಗು. ಹಾಗಿಲ್ಲದಿದ್ದರೆ, ಯುದ್ಧದಲ್ಲಿ ನಿನ್ನನ್ನು ನಾನು ಖಂಡಿತವಾಗಿಯೂ ಕೊಲ್ಲುವೆನು. ||೧೦||

ಅಲ್ಲದೆ. ಜಾತಿ-ಗುಣ ಮುಂತಾದ ಲಕ್ಷಣಗಳಿಂದ ಅನುರೂಪರಾದ ಸ್ತ್ರೀಪುರುಷರ ಸಂಬಂಧವೇ ಸಂಸಾರದಲ್ಲಿ ಸುಖದಾಯಕವಾಗುವುದು. ಅದಿಲ್ಲದೆ ಅಜ್ಞಾನದಿಂದ ಅನ್ಯೋನ್ಯವಾಗಿ ಅನುರೂಪರಲ್ಲದ ಸ್ತ್ರೀಪುರುಷರಿಗೆ ಸಂಬಂಧವನ್ನು ಕಲ್ಪಿಸಿದರೆ ಅದೆಂದಿಗೂ ಸುಖದಾಯಕವಾಗಲಾರದು, ದುಃಖದಾಯಕವೇ ಆಗುವುದು. ||೧೧||

ಹೀಗಿದ್ದರೂ ನೀನು, ಕಾಂತಿಯ ಐಶ್ವರ್ಯವುಳ್ಳ ಓ ಸುಂದರಿಯೇ, ನನ್ನ ಒಡೆಯನನ್ನು ಪತಿಯನ್ನಾಗಿ ವರಿಸೆಂದು ಹೇಳುತ್ತಿರುವೆ. ಆದುದರಿಂದ ನೀನೂ ಶುದ್ಧಮೂರ್ಖನೇ ಸರಿ. ನಾನೆಲ್ಲಿ? ಕೋಡುಳ್ಳ ಪಶುವಾದ ಮಹಿಷನೆಲ್ಲಿ? ಹೀಗೆ ಅನುರೂಪರಲ್ಲದ ನಮ್ಮಿಬ್ಬರಿಗೆ ಸಂಬಂಧವೆಂತಹುದು ? ||೧೨||

ಆದುದರಿಂದ ಈಗಲೇ ನೀನು ಇಲ್ಲಿಂದ ನಿನ್ನ ಸ್ಥಳವಾದ ಪಾತಾಳಕ್ಕೆ ಹೋಗು. ಇಲ್ಲದಿದ್ದರೆ ನನ್ನೊಡನೆ ಯುದ್ಧವನ್ನಾದರೂ ಮಾಡು. ಆಗ ಬಂಧು ಸಮೇತನಾಗಿ ನಿನ್ನನ್ನು ನಾನು ಕೊಲ್ಲುವೆನು. ಅದಿಲ್ಲದೆ ಬದುಕಬೇಕೆಂದಿದ್ದರೆ ಈಗಲೇ ಯಜ್ಞಯಾಗಗಳಲ್ಲಿ ಬಲಾತ್ಕಾರದಿಂದ ತೆಗೆದುಕೊಳ್ಳುತ್ತಿರುವ ಹವಿಸ್ಸಿನ ಭಾಗಗಳನ್ನೂ, ದೇವಲೋಕವನ್ನೂ ದೇವತೆಗಳಿಗೆ ಬಿಟ್ಟು ನಿನ್ನ ಸ್ಥಳಕ್ಕೆ ಹೋಗಿ ಸುಖವಾಗಿರು. ||೧೩||

|| ವ್ಯಾಸ ಉವಾಚ ||

**ಇತ್ಯುಕ್ತ್ವಾ ಸಾ ತದಾ ದೇವೀ ಜಗರ್ಜ ಭೃಶಮದ್ಭುತಂ ।**
**ಕಲ್ಪಾಂತಸದೃಶಂ ನಾದಂ ಚಕ್ರೇ ದೈತ್ಯಭಯಾವಹಂ ॥೧೪॥**

**ಚಕಂಪೇ ವಸುಧಾ ಚೇಲುಸ್ತೇನ ಶಬ್ದೇನ ಭೂಧರಾಃ ।**
**ಗರ್ಭಾಶ್ಚ ದೈತ್ಯಪತ್ನೀನಾಂ ಸಸ್ರಂಸುರ್ಗರ್ಜಿತಸ್ವನಾತ್ ॥೧೫॥**

**ತಾಮ್ರಃ ಶ್ರುತ್ವಾ ಚ ತಂ ಶಬ್ದಂ ಭಯತ್ರಸ್ತಮನಾಸ್ತದಾ ।**
**ಪಲಾಯನಂ ತತಃ ಕೃತ್ವಾ ಜಗಾಮ ಮಹಿಷಾಂತಿಕಂ ॥೧೬॥**

**ನಗರೇ ತಸ್ಯ ಯೇ ದೈತ್ಯಾಸ್ತೇಽಪಿ ಚಿಂತಾಮವಾಪ್ನುವನ್ ।**
**ಬಧಿರೀಕೃತಕರ್ಣಾಶ್ಚ ಪಲಾಯನಪರಾ ನೃಪ ॥೧೭॥**

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ, ಹೀಗೆ ಆ ತಾಮ್ರಾಸುರನಿಗೆ ಹೇಳಿ ದೇವಿಯು ಆಗ ತುಂಬ ಆಶ್ಚರ್ಯಕರವಾದ ಮತ್ತು ದೈತ್ಯ ರಿಗೆ ಭಯವನ್ನುಂಟುಮಾಡುವ ಮತ್ತು ಪ್ರಳಯಕಾಲದ ಗರ್ಜನೆಯಂತಿರುವ ಸಿಂಹ ನಾದವನ್ನು ಮಾಡಿದಳು. ||೧೪||

ಆ ಗರ್ಜನಧ್ವನಿಯಿಂದ ಭೂಮಿಯು ನಡುಗಿತು. ಪರ್ವತಗಳೂ ಚಲಿಸಿ ದುವು. ಮತ್ತು ಆ ಸಿಂಹನಾದದಿಂದ ದೈತ್ಯಸ್ತ್ರೀಯರ ಗರ್ಭಗಳು ಇಳಿದು ಹೋದುವು, ಎಂದರೆ ನಷ್ಟವಾದುವು. ||೧೫||

ಆಗ ತಾಮ್ರನೆಂಬ ಆ ಅಸುರನೂ ದೇವಿಯ ಆ ಗರ್ಜನೆಯನ್ನು ಕೇಳಿ ತುಂಬ ಹೆದರಿದ ಮನಸ್ಸುಳ್ಳವನಾಗಿ ಅಲ್ಲಿಂದ ಓಡಿ ತನ್ನೊಡೆಯನಾದ ಮಹಿಷಾ ಸುರನ ಸಮೀಪವನ್ನೈದಿದನು. ||೧೬||

ಅಲ್ಲದೆ, ಓ ಜನಮೇಜಯರಾಜನೇ, ಆ ಮಹಿಷನ ನಗರದಲ್ಲಿ ಯಾವ ರಾಕ್ಷಸರಿದ್ದರೋ ಅವರೂ ಸಹ ಈ ಶಬ್ದವನ್ನು ಕೇಳಿ ಅದರಿಂದ ಕಿವುಡಾದ ಕಿವಿ ಗಳುಳ್ಳವರಾಗಿ ತುಂಬ ಚಿಂತೆಗೊಳಗಾದರು. ಮತ್ತು ಅಲ್ಲಿಂದ ಪಲಾಯನ ಮಾಡಲೂ ಸಿದ್ಧರಾದರು. ||೧೭||

ತದಾ ಕ್ರೋಧೇನ ಸಿಂಹೋಽಪಿ ನನಾದ ಭೃಶಮುತ್ಸಟಃ ।
ತೇನ ನಾದೇನ ದೈತೇಯಾ ಭಯಂ ಜಗ್ಮುರಪಿ ಸ್ಫುಟಂ ॥೧೮॥

ತಾಮ್ರಂ ಸಮಾಗತಂ ದೃಷ್ಟ್ವಾ ಹಯಾರಿರಪಿ ಮೋಹಿತಃ ।
ಚಿಂತಯಾಮಾಸ ಸಚಿವೈಃ ಕಿಂ ಕರ್ತವ್ಯಮತಃ ಪರಂ ॥೧೯॥

ದುರ್ಗಗ್ರಹೋ ವಾ ಕರ್ತವ್ಯೋ ಯುದ್ಧಂ ನಿರ್ಗತ್ಯ ವಾ ಪುನಃ ।
ಪಲಾಯನೇ ಕೃತೇ ಶ್ರೇಯೋ ಭವೇದ್ವಾ ದಾನವೋತ್ತಮಾಃ ॥೨೦॥

ಬುದ್ಧಿಮಂತೋ ದುರಾಧರ್ಷಾಃ ಸರ್ವೇ ಶಾಸ್ತ್ರವಿಶಾರದಾಃ ।
ಮಂತ್ರಃ ಖಲು ಪ್ರಕರ್ತವ್ಯಃ ಸುಗುಪ್ತಃ ಕಾರ್ಯಸಿದ್ಧಯೇ ॥೨೧॥

---

ಮತ್ತು ಆಗ ದೇವಿಯ ವಾಹನವಾದ ಸಿಂಹವೂ ಸಹ ಸಿಟ್ಟಿನಿಂದ ತನ್ನ ಕೇಸರಗಳನ್ನು ಕೆದರಿಕೊಂಡು ತುಂಬ ಗಟ್ಟಿಯಾಗಿ ಗರ್ಜಿಸಿತು. ಅದರ ಆ ಗರ್ಜನೆ ಯಿಂದಲೂ ಆ ರಾಕ್ಷಸರು ಸ್ಪಷ್ಟವಾಗಿ ಕಾಣುವಂತೆಯೂ ಭಯಗೊಂಡರು. ||೧೮||

ಹೀಗೆ ಆ ತಾಮ್ರನೂ ಹಿಂತಿರುಗಿ ಬಂದುದನ್ನು ನೋಡಿ, ಕುದುರೆಗೆ ಶತ್ರು ವಾದ ಕೋಣನ ರೂಪವುಳ್ಳ ಮಹಿಷಾಸುರನು ದಿಕ್ಕೇ ತೋಚದವನಾಗಿ ಮಂತ್ರಿ ಗಳೊಂದಿಗೆ ಹೀಗೆ ಆಲೋಚಿಸಿದನು. ಓ ಮಂತ್ರಿಗಳೇ, ಇನ್ನು ಮುಂದೆ ನಾವು ಏನನ್ನು ಮಾಡತಕ್ಕದು ? ||೧೯||

ಈಗ ರಕ್ಷಣೆಗಾಗಿ ಯಾವುದಾದರೂ ದುರ್ಗವನ್ನು ಆಶ್ರಯಿಸಬೇಕೇ ? ಅಥವಾ ಯುದ್ಧವನ್ನೇ ಮಾಡಬೇಕೇ ? ಈಗ ಇಲ್ಲಿಂದ ಪಲಾಯನವನ್ನು ಮಾಡಿದು ದಾದರೆ ಒಳ್ಳೆಯದಾಗುತ್ತದೆಯೇ ? ರಾಕ್ಷಸಶ್ರೇಷ್ಠರೇ, ವಿಮರ್ಶಿಸಿ ತಿಳಿದು ಹೇಳಿರಿ. ||೨೦||

ಅಲ್ಲದೆ, ಎಲೈ ಮಂತ್ರಿಗಳೇ, ನೀವೆಲ್ಲರೂ ಯಾರಿಂದಲೂ ಪ್ರತಿಭಟಿಸಿ ಸಹಿಸ ಲಶಕ್ಯರೂ, ಬುದ್ಧಿವಂತರೂ, ಎಲ್ಲ ಶಾಸ್ತ್ರಗಳನ್ನೂ ಚೆನ್ನಾಗಿ ಬಲ್ಲವರೂ ಆಗಿರುವಿರಿ. ಆದುದರಿಂದ, ತುಂಬ ರಹಸ್ಯವಾಗಿರುವಂತೆ ಕಾರ್ಯಸಿದ್ಧಿಗಾಗಿ ಆಲೋಚನೆಯನ್ನು ಮಾಡಿ ಹೇಳಿರಿ. ||೨೧||

ಮಂತ್ರಮೂಲಂ ಸ್ಮೃತಂ ರಾಜ್ಯಂ ಯದಿ ಸ ಸ್ಯಾತ್ಸುರಕ್ಷಿತಃ ।
ಮಂತ್ರಿಭಿಶ್ಚ ಸದಾಚಾರ್ಯೈರ್ವಿಧೇಯಃ ಸರ್ವಥಾ ಬುಧೈಃ ॥೨೨॥

ಮಂತ್ರಭೇದೇ ವಿನಾಶಃ ಸ್ಯಾದ್ರಾಜ್ಯಸ್ಯ ಭೂಪತೇಸ್ತಥಾ ।
ತಸ್ಮಾದ್ಭೇದಭಯಾದ್ಗುಪ್ತಃ ಕರ್ತವ್ಯೋ ಭೂತಿಮಿಚ್ಛತಾ ॥೨೩॥

ತದತ್ರ ಮಂತ್ರಿಭಿರ್ವಾಚ್ಯಂ ವಚನಂ ಹೇತುಮದ್ಧಿತಂ ।
ಕಾಲದೇಶಾನುಸಾರೇಣ ವಿಚಿಂತ್ಯ ನೀತಿನಿರ್ಣಯಂ ॥೨೪॥

ಯಾ ಯೋಷಾತ್ರ ಸಮಾಯಾತಾ ಪ್ರಬಲಾ ದೇವನಿರ್ಮಿತಾ ।
ಏಕಾಕಿನೀ ನಿರಾಲಂಬಾ ಕಾರಣಂ ತದ್ವಿಚಿಂತ್ಯತಾಂ ॥೨೫॥

---

ರಾಜ್ಯದಾಡಳಿತವು ಮಂತ್ರಾಲೋಚನೆಯ ಮೂಲಕವಾಗಿ ನಡೆಯುವುದು. ಅದನ್ನು ನಾವು ಚನ್ನಾಗಿ ರಹಸ್ಯವಾಗಿರುವಂತೆ ಕಾಪಾಡಿಕೊಂಡಿರುತ್ತಾ ಕೆಲಸಗಳನ್ನು ಮಾಡಿದರೆ ಆಗ ರಾಜ್ಯವೂ ರಕ್ಷಿತವಾಗುತ್ತದೆ. ಆದುದರಿಂದ ಒಳ್ಳೆಯ ನಡತೆಯುಳ್ಳವರಾದ ಮಂತ್ರಿಗಳು ಆ ಮಂತ್ರವನ್ನು ಬಯಲಾಗದಂತೆ ಚನ್ನಾಗಿ ರಕ್ಷಿಸಬೇಕು. ||೨೨||

ಮಂತ್ರವು ಎಂದರೆ ಗುಪ್ತಾಲೋಚನೆಯು ಬಯಲಾದುದೇ ಆದರೆ ರಾಜ್ಯವೂ ಹಾಳಾಗುವುದು. ಹಾಗೆಯೇ ರಾಜನಿಗೂ ನಾಶವುಂಟಾಗುವುದು. ಆದುದರಿಂದ ಮಂತ್ರಭೇದದಿಂದುಂಟಾಗುವ ಭಯದಿಂದ ಕಾಪಾಡಲು ಆ ಮಂತ್ರವನ್ನು ಜಾಗರೂಕತೆಯಿಂದ ರಹಸ್ಯವಾಗಿಡಬೇಕು. ||೨೩||

ಪ್ರಕೃತದಲ್ಲಿ ಈಗ ಇಲ್ಲಿ ನೀವು ಗುಪ್ತವಾಗಿ ಉಪಾಯಗಳನ್ನು ನಿಶ್ಚಯಿಸಿ, ಆಲೋಚಿಸಿ, ಯುಕ್ತಿಯುಕ್ತವಾಗಿಯೂ, ಹಿತವಾಗಿಯೂ ಇರುವ ಮಾತುಗಳನ್ನು ಪ್ರಕೃತ ಕಾಲ, ದೇಶ, ಸನ್ನಿವೇಶಗಳಿಗನುಕೂಲವಾಗಿ ಹೇಳತಕ್ಕುದು. ||೨೪||

ಅಸಹಾಯಳೂ, ಬೇರೆ ಯಾವ ಅವಲಂಬನೆಯ ಸಹಾಯವೂ ಇಲ್ಲದವಳೂ, ತುಂಬ ಬಲಿಷ್ಠಳೂ ಆದ ಯಾವ ಈ ಸ್ತ್ರೀಯು ದೇವತೆಗಳಿಂದ ಸೃಷ್ಟಿಸಿ ಕಳುಹಿಸಲ್ಪಟ್ಟು ಇಲ್ಲಿ ತೋರಿರುವಳೋ ಅವಳು ಏತಕ್ಕಾಗಿ ಬಂದಿರುವಳು ? ಇದಕ್ಕೆ ಕಾರಣವೇನೆಂದು ಆಲೋಚಿಸಿರಿ. ||೨೫||

ಯುದ್ಧಂ ಪ್ರಾರ್ಥಯತೇ ಬಾಲಾ ಕಿಮಾಶ್ಚರ್ಯಮತಃ ಪರಂ ।
ಶ್ರೇಯೋಽತ್ರ ವಿಪರೀತಂ ವಾ ಕೋ ವೇತ್ತಿ ಭುವನತ್ರಯೇ ॥೨೬॥

ನ ಬಹೂನಾಂ ಜಯೋಽಪ್ಯಸ್ತಿ ನೈಕಸ್ಯ ಚ ಪರಾಜಯಃ ।
ದೈವಾಧೀನೌ ಸದಾ ಜ್ಞೇಯೌ ಯುದ್ಧೇಜಯಪರಾಜಯೌ ॥೨೭॥

ಉಪಾಯವಾದಿನಃ ಪ್ರಾಹುರ್ದೈವಂ ಕಿಂ ಕೇನ ವೀಕ್ಷಿತಂ ।
ಅದೃಷ್ಟಮಿತಿ ಯನ್ನಾಮ ಪ್ರವದಂತಿ ಮನೀಷಿಣಃ ॥೨೮॥

ತತ್ಸತ್ತ್ವೇಽಪಿ ಪ್ರಮಾಣಂ ಕಿಂ ಕಾತರಾಶಾವಲಂಬನಂ ।
ನ ಸಮರ್ಥಜನಾನಾಂ ಹಿ ದೈವಂ ಕುತ್ರಾಪಿ ಲಕ್ಷ್ಯತೇ ॥೨೯॥

---

ಈ ಚಂಡಿಕೆಯು ಇನ್ನೂ ಬಾಲಿಕೆಯು. ಆದರೂ ಇವಳು ನಮ್ಮೊಡನೆ ಯುದ್ಧವನ್ನಪೇಕ್ಷಿಸುತ್ತಾಳೆ. ಇದಕ್ಕಿಂತಲೂ ಹೆಚ್ಚಾದ ಆಶ್ಚರ್ಯವುಂಟೇ ? ಇದರಿಂದ ಮುಂದೆ ನಮಗೆ ಒಳ್ಳೆಯದಾಗುವುದೋ ಕೆಡುಕಾಗುವುದೋ ಎಂಬುವುದನ್ನು ಮೂರು ಲೋಕದಲ್ಲಿರುವವರಲ್ಲಿ ಯಾರುತಾನೇ ತಿಳಿಯಬಲ್ಲರು ? ||೨೬||

ಹೆಚ್ಚು ಸಂಖ್ಯೆಯ ಜನಗಳಿದ್ದಮಾತ್ರಕ್ಕೇ ಯುದ್ಧದಲ್ಲಿ ಜಯವಾಗುವುದೆಂಬುದು ನಿಶ್ಚಿತವಾಗಿ ಇರುವುದಿಲ್ಲ. ಹಾಗೆಯೇ, ಒಬ್ಬನೇ ಇದ್ದರೂ ಅವನಿಗೆ ಅಪಜಯವೇ ಆಗುತ್ತದೆ ಎಂಬ ನಿಯಮವೂ ಇಲ್ಲವು. ಯುದ್ಧದಲ್ಲಿ ಜಯಾಪಜಯಗಳು ಅವರವರ ಅದೃಷ್ಟದಂತೆ ಆಗತಕ್ಕವುಗಳೆಂದು ತಿಳಿಯಬೇಕು. ||೨೭||

ಆದರೆ, ಉಪಾಯವೇ ಎಂದರೆ ಪುರುಷಪ್ರಯತ್ನವೇ ಮುಖ್ಯವಾದುದು ಎಂದು ಹೇಳುವ ಕೆಲವರು ಪೌರುಷವಾದಿಗಳು ಹೀಗೆ ವಾದಿಸುವರು. ತಿಳಿದವರೆನ್ನಿಸಿಕೊಂಡಿರುವವರು ಅದೃಷ್ಟವೆಂದು ಯಾವುದನ್ನು ಹೇಳುವರೋ ಅದಾವುದು ? ಅದನ್ನು ಯಾರು ನೋಡಿರುವರು ? ||೨೮||

ಆ ಅದೃಷ್ಟವು ಇರುವುದೆಂಬುದರಲ್ಲಿ ಪ್ರಮಾಣವೇನು ? ಆದುದರಿಂದ ಅದು ವಾಸ್ತವವಾಗಿ ಇಲ್ಲವೇ ಇಲ್ಲವು. ಆದರೆ ಕೆಲವರು ಕೈಲಾಗದ ಹೇಡಿಗಳೂ, ಅಂಜುಬುರುಕರೂ, ಅದೃಷ್ಟವು ನಮಗೆ ಎಲ್ಲವನ್ನೂ ಕೊಡುವುದೆಂದು ತಮ್ಮ ಆಶೆಗನುಸಾರವಾಗಿ ಅದನ್ನು ಕಲ್ಪಿಸಿಕೊಂಡಿರುತ್ತಾರೆ. ಶಕ್ತಿವಂತರಾದ ಜನಗಳಿಗೆ ಅದೃಷ್ಟವೆಂಬುದು ಇಲ್ಲವೇ ಇಲ್ಲವು. ಅದನ್ನು ಯಾರೂ ಎಲ್ಲಿಯೂ ನೋಡಿ ತಿಳಿದಿಲ್ಲವು.||೨೯||

ಉದ್ಯಮೋ ದೈವಮೇತೌ ಹಿ ಶೂರಕಾತರಯೋರ್ಮತಂ ।
ವಿಚಿಂತ್ಯಾದ್ಯ ಧಿಯಾ ಸರ್ವಂ ಕರ್ತವ್ಯಂ ಕಾರ್ಯಮಾದರಾತ್ ॥೩೦॥

॥ ವ್ಯಾಸ ಉವಾಚ ॥

ಇತಿ ರಾಜ್ಞೋ ವಚಃ ಶ್ರುತ್ವಾ ಹೇತುಗರ್ಭಂ ಮಹಾಯಶಾಃ ।
ಬಿಡಾಲಾಖ್ಯೋ ಮಹಾರಾಜಮಿತ್ಯುವಾಚ ಕೃತಾಂಜಲಿಃ ॥೩೧॥

ರಾಜನ್ನೇಷಾ ವಿಶಾಲಾಕ್ಷೀ ಜ್ಞಾತವ್ಯಾ ಯತ್ನತಃ ಪುನಃ ।
ಕಿಮರ್ಥಮಿಹ ಸಂಪ್ರಾಪ್ತಾ ಕುತಃ ಕಸ್ಯ ಪರಿಗ್ರಹಃ ॥೩೨॥

ಮರಣಂ ತೇ ಪರಿಜ್ಞಾಯ ಸ್ತ್ರಿಯಾಃ ಸರ್ವಾತ್ಮನಾ ಸುರೈಃ ।
ಪ್ರೇಷಿತಾ ಪದ್ಮಪತ್ರಾಕ್ಷೀ ಸಮುತ್ಪಾದ್ಯ ಸ್ವತೇಜಸಾ ॥೩೩॥

---

ಉದ್ಯೋಗವೇ ಮುಖ್ಯವಾದುದೆಂದು ಶೂರರ ಮತವು. ಅದೃಷ್ಟವೇ ಮುಖ್ಯವಾದುದೆಂದು ಹೇಡಿಗಳ ಮತವು ಎಂದು ಪೌರುಷವಾದಿಗಳು ಹೇಳುತ್ತಾರೆ. ಆದುದರಿಂದ ಈ ಎಲ್ಲ ಅಂಶಗಳನ್ನೂ ಮಿಮರ್ಶಿಸಿ ಈಗ ಯಾವುದು ಯುಕ್ತವಾದುದೋ ಅದನ್ನು ಆಲೋಚಿಸಿ ನಿರ್ಣಯಿಸಿ ಅದನ್ನು ಆದರದಿಂದ ಮಾಡಬೇಕು. ॥೩೦॥

ವ್ಯಾಸಮುನಿಯು ಹೇಳಿದನು—ಹೀಗೆ ಯುಕ್ತಿಯುಕ್ತವಾದ ಆ ಮಹಿಷರಾಜನ ಮಾತುಗಳನ್ನು ಕೇಳಿ, ತುಂಬ ಯಶೋವಂತನಾದ ಬಿಡಾಲನೆಂಬ ರಾಕ್ಷಸನು ಕೈಗಳನ್ನು ಜೋಡಿಸಿಕೊಂಡು ಆ ಮಹಿಷಾಸುರನನ್ನು ಕುರಿತು ಹೀಗೆ ಹೇಳಿದನು. ॥೩೧॥

ಓ ರಾಜನೇ, ವಿಶಾಲವಾದ ನಯನಗಳುಳ್ಳ ಈ ಚಂಡಿಕೆಯು ಏತಕ್ಕೋಸ್ಕರ ಇಲ್ಲಿಗೆ ಬಂದಿರುತ್ತಾಳೆ ? ಎಲ್ಲಿಂದ ಬಂದಿರುತ್ತಾಳೆ ? ಇವಳು ಯಾರ ಗೃಹಿಣಿಯು ? ಎಂಬಿವೆಲ್ಲವನ್ನೂ ಇನ್ನೊಂದುಸಲ ಪ್ರಯತ್ನಪಟ್ಟು ತಿಳಿದುಕೊಳ್ಳಬೇಕು. ॥೩೨॥

ಬ್ರಹ್ಮನ ವರದ ಪ್ರಕಾರವಾಗಿ ನಿನಗೆ ಸ್ತ್ರೀಯಿಂದಲೇ ಮರಣವೆಂಬುದನ್ನು ತಿಳಿದು ಪ್ರಾಯಶಃ ದೇವತೆಗಳು ತುಂಬ ಶ್ರಮಪಟ್ಟು, ಪದ್ಮದಳದಂತೆ ಇರತಕ್ಕ ನಯನಗಳುಳ್ಳ ಇವಳನ್ನು ತಮ್ಮ ಎಲ್ಲರ ತೇಜಸ್ಸಿನಿಂದ ಸೃಷ್ಟಿಮಾಡಿ ಇಲ್ಲಿಗೆ ಕಳುಹಿಸಿರಬಹುದು. ॥೩೩॥

ತೇಽಪಿ ಧನ್ಯಾಃ ಸ್ಥಿತಾಃ ಹ್ಯತ್ರ ಸರ್ವೇ ಯುದ್ಧದಿದೃಕ್ಷವಃ ।
ಸಮಯೇಽಸ್ಯಾಃ ಸಹಾಯಾಸ್ತೇ ಭವಿಷ್ಯಂತಿ ಯುಯುತ್ಸವಃ ॥೩೪॥

ಪುರತಃ ಕಾಮಿನೀಂ ಕೃತ್ವಾ ತೇ ವೈ ವಿಷ್ಣುಪುರೋಗಮಾಃ ।
ವಧಿಷ್ಯಂತಿ ಚ ನಃ ಸರ್ವಾನ್ನಾಸ ತ್ವಾಂ ಯುದ್ಧೇ ಹನಿಷ್ಯತಿ ॥೩೫॥

ಏತಚ್ಚಿಕೀರ್ಷಿತಂ ತೇಷಾಂ ಮಯಾ ಜ್ಞಾತಂ ನರಾಧಿಪ ।
ಭವಿತವ್ಯಸ್ಯ ನ ಜ್ಞಾನಂ ವರ್ತತೇ ಮಮ ಸರ್ವಥಾ ॥೩೬॥

ಯೋದ್ಧವ್ಯಂ ನ ತ್ವಯಾಽದ್ಯೇತಿ ನಾಹಂ ವಕ್ತುಂ ಕ್ಷಮಃ ಪ್ರಭೋ ।
ಪ್ರಮಾಣಂ ತ್ವಂ ಮಹಾರಾಜ ಕಾರ್ಯೇಽತ್ರ ದೇವನಿರ್ಮಿತೇ ॥೩೭॥

---

ಆ ದೇವತೆಗಳೂ ಸಹ ಯುದ್ಧವನ್ನು ನೋಡಲಪೇಕ್ಷೆಯುಳ್ಳವರಾಗಿ ಇಲ್ಲಿಯೇ ಆಕಾಶದಲ್ಲಿ ಕಾಣದಂತೆ ಮರೆಯಾಗಿ ಇರುತ್ತಾರೆ. ಯುದ್ಧವನ್ನು ಮಾಡಲಪೇಕ್ಷೆಯುಳ್ಳ ಅವರು ಈ ಚಂಡಿಕೆಗೆ ಮುಂದೆ ಸಮಯದಲ್ಲಿ ಸಹಾಯಕರಾಗಿ ನಿಲ್ಲುವರು. ||೩೪||

ವಿಷ್ಣುವೇ ಮೊದಲಾದ ಆ ದೇವತೆಗಳು ಈ ಸ್ತ್ರೀಯನ್ನು ಮುಂದಿಟ್ಟುಕೊಂಡು ನಮ್ಮೆಲ್ಲರನ್ನೂ ಸಂಹರಿಸುವರು. ಪುರುಷರಿಗೆ ಅವಧ್ಯನಾದ ನಿನ್ನನ್ನು ಸ್ತ್ರೀಯಾದ ಈ ಚಂಡಿಕೆಯು ಕೊಲ್ಲುವಳು. ||೩೫||

ಓ ಪ್ರಭುವೇ, ಆ ದೇವತೆಗಳು ಸಂಕಲ್ಪಿಸಿರುವ ಕಾರ್ಯಕ್ರಮವು ಇದೇ ಆಗಿರುತ್ತದೆ ಎಂಬ ಇಷ್ಟನ್ನು ನಾನು ತಿಳಿದುಕೊಂಡಿರುತ್ತೇನೆ. ಆದರೆ ಇದರಿಂದ ಮುಂದೆ ಏನಾಗಬಹುದೆಂಬುದರ ತಿಳಿವಳಿಕೆಯು ಮಾತ್ರ ನನಗೆ ಇಲ್ಲವು. ||೩೬||

ಆದರೆ ನೀನು ಈಗ ಯುದ್ಧಮಾಡಲಾಗದೆಂದೂ ಹೇಳಲು ನಾನು ಶಕ್ತನಲ್ಲವು. ಆದುದರಿಂದ ಓ ಪ್ರಭುವೇ, ದೇವತೆಗಳಿಂದ ಏರ್ಪಡಿಸಲ್ಪಟ್ಟಿರುವ ಈ ಸಂದರ್ಭದಲ್ಲಿ ಮಾಡಬೇಕಾದ ಕಾರ್ಯದ ವಿಷಯವನ್ನು ನಿರ್ಧರಿಸಲು ನೀನೇ ಪ್ರಮಾಣವು. ನೀನೇ ಯೋಚಿಸಿ, ಸೂಕ್ತವಾಗಿ ತೋರಿದಂತೆ ಮಾಡತಕ್ಕದ್ದು. ||೩೭||

ತ್ವದರ್ಥೇಽಸ್ಮಾಭಿರನಿಶಂ ಮರ್ತವ್ಯಂ ಕಾರ್ಯಗೌರವಾತ್ ।
ವಿಹರ್ತವ್ಯಂ ತ್ವಯಾ ಸಾರ್ಧಮೇಷ ಧರ್ಮೋಽನುಜೀವಿನಾಮ್ ॥೩೮॥

ವಿಚಾರೋಽತ್ರ ಮಹಾನಸ್ತಿ ಯದೇಕಾ ಕಾಮಿನೀ ನೃಪ ।
ಯುದ್ಧಂ ಪ್ರಾರ್ಥಯತೇಽಸ್ಮಾಭಿಃ ಸಸೈನ್ಯೈರ್ಬಲದರ್ಪಿತೈಃ ॥೩೯॥

॥ ದುರ್ಮುಖ ಉವಾಚ ॥

ರಾಜನ್ ಯುದ್ಧೇ ಜಯೋ ನೋಽದ್ಯ ಭವಿತಾ ವೇದ್ಮ್ಯಹಂ ಕಿಲ ।
ಪಲಾಯನಂ ನ ಕರ್ತವ್ಯಂ ಯಶೋಹಾನಿಕರಂ ನೃಣಾಮ್ ॥೪೦॥

ಇಂದ್ರಾದೀನಾಂ ಸಂಯುಗೇಽಪಿ ನ ಕೃತಂ ಯಜ್ಜುಗುಪ್ಸಿತಮ್ ।
ಏಕಾಕಿನೀಂ ಸ್ತ್ರಿಯಂ ಪ್ರಾಪ್ಯ ಕೋ ಹಿ ಕುರ್ಯಾತ್ಪಲಾಯನಮ್ ॥೪೧॥

---

ಇಂತಹ ದೊಡ್ಡ ದೊಡ್ಡ ಕಾರ್ಯಗಳು ಪ್ರಾಪ್ತವಾದರೆ ನಿನಗಾಗಿ ನಾವುಗಳು ಯಾವಾಗಲೂ ಪ್ರಾಣವನ್ನು ಬಿಡಲೂ ಸಿದ್ಧರಾಗಿರಬೇಕು. ಪ್ರಾಣಾಪಾಯವನ್ನೂ ಗಣಿಸದೆ ಕಾರ್ಯವನ್ನು ಸಾಧಿಸಬೇಕು. ಅದರಂತೆಯೇ ಸುಖವು ಪ್ರಾಪ್ತವಾದಲ್ಲಿ ನಿನ್ನೊಡನೆ ಸಂತೋಷದಿಂದ ವಿಹರಿಸಲೂ ಬೇಕು. ಇದು ಪ್ರಭುಗಳನ್ನಾಶ್ರಯಿಸಿ ಜೀವಿಸುವ ನಮ್ಮಂತಹವರ ಕರ್ತವ್ಯವು ಮತ್ತು ಧರ್ಮವು. ॥೩೮॥

ಆದರೆ ಇಲ್ಲಿ ವಿಚಾರಮಾಡತಕ್ಕದ್ದು ಬೇಕಾದಷ್ಟಿದೆ. ಏಕೆಂದರೆ, ಓ ರಾಜನೇ, ಯಾವ ಸಹಾಯವೂ ಇಲ್ಲದ ಓರ್ವ ಸ್ತ್ರೀಯು ತುಂಬ ಬಲಿಷ್ಠರಾಗಿಯೂ ಸೈನ್ಯದಿಂದ ಕೂಡಿದವರಾಗಿಯೂ ಇರುವ ನಮ್ಮೊಡನೆ ಯುದ್ಧವನ್ನು ಅಪೇಕ್ಷಿಸುತ್ತಿದಾಳೆ! ಎಂದು ಬಿಡಾಲನು ವಿಜ್ಞಾಪಿಸಿದನು. ॥೩೯॥

ದುರ್ಮುಖನೆಂಬ ದೈತ್ಯನು ಹೇಳಿದನು—ಓ ಪ್ರಭುವೇ, ಈ ಯುದ್ಧದಲ್ಲಿ ನಮಗೆ ಜಯವು ಖಂಡಿತವಾಗಿ ಉಂಟಾಗುವುದೆಂದು ನಾನು ತಿಳಿಯುತ್ತೇನೆ. ಅಲ್ಲದೆ ಯಾವಾಗಲೂ ಪಲಾಯನವನ್ನು ಮಾತ್ರ ಮಾಡಕೂಡದು. ಏಕೆಂದರೆ ಅದು ಜನರ ಯಶಸ್ಸನ್ನು ಹೋಗಲಾಡಿಸುವುದಲ್ಲದೆ ಕೆಟ್ಟ ಹೆಸರನ್ನೂ ತರುತ್ತದೆ. ॥೪೦॥

ಇದಲ್ಲದೆ ಇಂದ್ರನೇ ಮೊದಲಾದ ದೇವತೆಗಳೊಡನೆ ಯುದ್ಧವಾದಾಗಲೂ ಸಹ ನಿಂದ್ಯವಾದ ಪಲಾಯನವನ್ನು ಯಾವ ನಾವು ಮಾಡಲಿಲ್ಲವೋ ಅಂತಹ ನಾವು ಈಗ ಓರ್ವಳೇ ಆದ ಸ್ತ್ರೀಯೊಡನೆಯೂ ಯುದ್ಧಮಾಡಲಾರದೆ ಓಡಿ ಹೋಗುವೆವೇ? ಅಂತಹ ಅಪಮಾನಕರವಾದ ಪಲಾಯನವನ್ನು ಯಾರುತಾನೇ ಮಾಡಿಯಾರು? ॥೪೧॥

ತಸ್ಮಾದ್ಯುದ್ಧಂ ಪ್ರಕರ್ತವ್ಯಂ ಮರಣಂ ವಾ ರಣೇ ಜಯಃ ।
ಯದ್ಭಾವಿ ತದ್ಭವತ್ಯೇವ ಕಾऽತ್ರ ಚಿಂತಾ ವಿಪಶ್ಚಿತಃ ॥೪೨॥

ಮರಣೇऽತ್ರ ಯಶಃಪ್ರಾಪ್ತಿರ್ಜೀವನೇ ಚ ತಥಾ ಸುಖಂ ।
ಉಭಯಂ ಮನಸಾ ಕೃತ್ವಾ ಕರ್ತವ್ಯಂ ಯುದ್ಧಮುದ್ಯ ವೈ ॥೪೩॥

ಪಲಾಯನೇ ಯಶೋಹಾನಿರ್ಮರಣಂ ಚಾಯುಷಃ ಕ್ಷಯೇ ।
ತಸ್ಮಾಚ್ಛೋಕೋ ನ ಕರ್ತವ್ಯೋ ಜೀವಿತೇ ಮರಣೇ ವೃಥಾ ॥೪೪॥

॥ ವ್ಯಾಸ ಉವಾಚ ॥

ದುರ್ಮುಖಸ್ಯ ವಚಃ ಶ್ರುತ್ವಾ ಬಾಷ್ಕಲೋ ವಾಕ್ಯಮಬ್ರವೀತ್ ।
ಪ್ರಣತಃ ಪ್ರಾಂಜಲಿರ್ಭೂತ್ವಾ ರಾಜಾನಂ ವಾಕ್ಯಕೋವಿದಃ ॥೪೫॥

---

ಓ ಸ್ವಾಮಿಯೇ, ಆದುದರಿಂದ ಯುದ್ಧವನ್ನೇ ಮಾಡಬೇಕು. ಯುದ್ಧದಲ್ಲಿ ಮರಣವಾಗಲಿ ಜಯವಾಗಲಿ ಯಾವುದು ಆಗಬೇಕಾಗಿರುವುದೋ ಅದೇ ಆಗುತ್ತದೆ. ಹೆಚ್ಚಾದ ತಿಳಿವಳಿಕೆಯುಳ್ಳವನಿಗೆ ಇಲ್ಲಿ ಚಿಂತೆಯೇನು ? ॥೪೨॥

ಅಲ್ಲದೆ, ಈ ಯುದ್ಧದಲ್ಲಿ ಮರಣವಾದರೆ ಹಿಮ್ಮೆಟ್ಟದ ಪರಾಕ್ರಮದಿಂದ ಯಶಸ್ಸು ಲಭಿಸುವುದು. ಇಲ್ಲದೆ ಬದುಕಿದ್ದು ಜಯವಾದರೆ ಸಾಮ್ರಾಜ್ಯಕೀರ್ತಿಗಳಿಂದ ಸುಖವುಂಟಾಗುವುದು. ಇವೆರಡನ್ನೂ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಈಗ ನಾವು ಯುದ್ಧವನ್ನೇ ಮಾಡಬೇಕು. ॥೪೩॥

ಅದಲ್ಲದೆ ಈಗ ಪಲಾಯನ ಮಾಡಿದರೆ ಅಪಯಶಸ್ಸುಂಟಾಗುವುದು. ಮುಂದಾದರೂ ಆಯುಸ್ಸು ತೀರಿದ ಮೇಲೆ ಒಂದು ದಿನ ಸಾಯಲೇ ಬೇಕು. ಆದುದರಿಂದ ನಿಯತವಾಗಿರುವ ಮರಣದ ವಿಷಯವಾಗಿಯಾಗಲಿ, ಅನಿತ್ಯವಾಗಿರುವ ಜೀವಿಕೆಯ ವಿಷಯದಲ್ಲಿಯಾಗಲಿ ವ್ಯರ್ಥವಾಗಿ ಶೋಕವನ್ನು ಮಾಡಲಾಗದು. ॥೪೪॥

ವ್ಯಾಸಮುನಿಯು ಹೇಳಿದನು—ಓ ಜನಮೇಜಯರಾಜನೇ, ಈ ರೀತಿಯಾಗಿ ದುರ್ಮುಖನ ಮಾತುಗಳನ್ನು ಕೇಳಿ, ಮಾತನಾಡುವುದರಲ್ಲಿ ನಿಪುಣನಾದ ಬಾಷ್ಕಲನೆಂಬ ಇನ್ನೊಬ್ಬ ದೈತ್ಯನು ಕೈಜೋಡಿಸಿ ಭಕ್ತಿಯಿಂದ ಬಗ್ಗಿದವನಾಗಿ ಮಹಿಷಾಸುರನನ್ನು ಕುರಿತು ಹೀಗೆ ಹೇಳಿದನು. ॥೪೫॥

|| ಬಾಷ್ಕಲ ಉವಾಚ ||

ರಾಜಂಶ್ಚಿಂತಾ ನ ಕರ್ತವ್ಯಾ ಕಾರ್ಯೇಽಸ್ಮಿನ್ನಾತುರಾಽಪ್ರಿಯೇ ।
ಅಹಮೇಕೋ ಹನಿಷ್ಯಾಮಿ ಚಂಡೀಂ ಚಂಚಲಲೋಚನಾಂ ||೪೬||

ಉತ್ಸಾಹಸ್ತು ಪ್ರಕರ್ತವ್ಯಃ ಸ್ಥಾಯಿಭಾವೋ ರಸಸ್ಯ ಚ ।
ಭಯಾನಕೋ ಭವೇದ್ವೈರೀ ವೀರಸ್ಯ ನೃಪಸತ್ತಮ ||೪೭||

ತಸ್ಮಾತ್ತ್ಯಕ್ತ್ವಾ ಭಯಂ ಭೂಪ ಕರಿಷ್ಯೇ ಯುದ್ಧಮದ್ಭುತಂ ।
ನಯಿಷ್ಯಾಮಿ ನರೇಂದ್ರಾಹಂ ಚಂಡಿಕಾಂ ಯಮಸಾದನಂ ||೪೮||

ನ ಬಿಭೇಮಿ ಯಮಾದಿಂದ್ರಾತ್ಕುಬೇರಾದ್ವರುಣಾದಪಿ ।
ವಾಯೋರ್ವಹ್ನೇಸ್ತಥಾ ವಿಷ್ಣೋಃ ಶಂಕರಾಚ್ಛಶಿನೋ ರವೇಃ ||೪೯||

---

ಓ ಪ್ರಭುವೇ, ಹೇಡಿಗಳಿಗೆ ಮಾತ್ರ ಅನಿಷ್ಟವಾದ ಈ ಯುದ್ಧವೆಂಬ ಕಾರ್ಯ ದಲ್ಲಿ ನೀನು ಆತಂಕದಿಂದ ಕೂಡಿ ಚಿಂತಿಸಬಾರದು. ನಾನೊಬ್ಬನೇ ಚಂಚಲವಾದ ನೋಟವುಳ್ಳ ಆ ಚಂಡಿಕೆಯನ್ನು ಕೊಲ್ಲುವೆನು. ||೪೬||

ವೀರರಸಕ್ಕೆ ಮುಖ್ಯವಾದ ಸ್ಥಾಯೀಭಾವವು ಉತ್ಸಾಹವು. ಅದನ್ನು ಹೃದಯ ದಲ್ಲಿ ಅಚ್ಚಳಿಯದಂತೆ ಉಳಿಸಿ ಬೆಳೆಯಿಸಬೇಕು. ಓ ರಾಜಶ್ರೇಷ್ಠನೇ, ಆ ವೀರ ರಸಕ್ಕೆ ಹೇಡಿತನವನ್ನುಂಟುಮಾಡುವ ಭಯಾನಕರಸವು ವಿರುದ್ಧವಾದುದು. ಅದನ್ನು ಬಲವುಳ್ಳದ್ದಾಗದಂತೆಯೂ ಮಾಡಬೇಕು. ||೪೭||

ಆದುದರಿಂದ ಓ ಪ್ರಭುವೇ, ನಾನು ಹೆದರಿಕೆಯನ್ನು ಬಿಟ್ಟು ಆ ಚಂಡಿಕೆ ಯೊಂದಿಗೆ ಯುದ್ಧವನ್ನು ಮಾಡುವೆನು—ಓ ರಾಜನೇ, ಆ ಯುದ್ಧದಲ್ಲಿ ಅವಳನ್ನು ಯಮನ ಮನೆಗೆ ಕಳುಹಿಸುವೆನು. ||೪೮||

ನಾನು ಯಮ, ಇಂದ್ರ, ಕುಬೇರ, ವರುಣ, ವಾಯು, ಅಗ್ನಿ, ಶಿವ, ವಿಷ್ಣು, ಸೂರ್ಯ, ಚಂದ್ರ ಮುಂತಾದ ದೊಡ್ಡ ದೇವತೆಗಳಿಗೂ ಹೆದರತಕ್ಕವನಲ್ಲ. ಹೀಗಿರು ವಾಗ, ||೪೯||

ಏಕಾಕಿನೀ ತಥಾ ನಾರೀ ಕಿಂ ಪುನರ್ಮದಗರ್ವಿತಾ ।
ಅಹಂ ತಾಂ ನಿಹನಿಷ್ಯಾಮಿ ವಿಶಿಖೈಶ್ಚ ಶಿಲಾಶಿತೈಃ ॥೫೦॥

ಪಶ್ಯ ಬಾಹುಬಲಂ ಮೇಽದ್ಯ ವಿಹರಸ್ವ ಯಥಾಸುಖಂ ।
ಭವತಾಽತ್ರ ನ ಗಂತವ್ಯಂ ಸಂಗ್ರಾಮೇಽಪ್ಯನಯಾ ಸಮಂ ॥೫೧॥

॥ ವ್ಯಾಸ ಉವಾಚ ॥

ಏವಂ ಬ್ರುವತಿ ರಾಜೇಂದ್ರಂ ಬಾಷ್ಕಲೇ ಮದಗರ್ವಿತೇ ।
ಪ್ರಣಮ್ಯ ನೃಪತಿಂ ತತ್ರ ದುರ್ಧರೋ ವಾಕ್ಯಮಬ್ರವೀತ್ ॥೫೨॥

॥ ದುರ್ಧರ ಉವಾಚ ॥

ಮಹಿಷಾಹಂ ವಿಜೇಷ್ಯಾಮಿ ದೇವೀಂ ದೇವವಿನಿರ್ಮಿತಾಂ ।
ಅಷ್ಟಾದಶಭುಜಾಂ ರಮ್ಯಾಂ ಕಾರಣಾಚ್ಚ ಸಮಾಗತಾಂ ॥೫೩॥

---

ಈಗ ಬಂದಿರತಕ್ಕ ವೈರಿಯು ಓರ್ವ ಸ್ತ್ರೀಯಾಗಿರುತ್ತಾಳೆ. ಅದರಲ್ಲೂ ಅಸಹಾಯಳು. ಆದರೆ ವ್ಯರ್ಥವಾದ ಅಹಂಕಾರದಿಂದ ಕೊಬ್ಬಿರುತ್ತಾಳೆ. ಆದರೇನು ? ಇಂತಹವಳನ್ನು ನಾನು ಹರಿತವಾದ ಬಾಣಗಳಿಂದ ಸಂಹರಿಸುವೆನು. ॥೫೦॥

ನೋಡು, ಇಂದು ನನ್ನ ಭುಜಬಲವನ್ನು ಪರೀಕ್ಷಿಸು. ನೀನು ಮನೆಯಲ್ಲಿಯೇ ಸಂತೋಷದಿಂದ ವಿಹರಿಸು. ಆ ಚಂಡಿಕೆಯೊಡನೆ ಯುದ್ಧಕ್ಕಾಗಿಯೂ ಅಲ್ಲಿಗೆ ನೀನು ಬರಬೇಕಾದುದಿಲ್ಲವು. ॥೫೧॥

ವ್ಯಾಸಮುನಿಯು ಹೇಳಿದನು—ಹೀಗೆ ಆ ಮಹಿಷರಾಜನನ್ನು ಕುರಿತು ಅಹಂಕಾರದಿಂದ ಕೊಬ್ಬಿದ ಬಾಷ್ಕಲನೆಂಬ ಅಸುರನು ಹೇಳುತ್ತಿರಲು, ಅಲ್ಲಿ ದುರ್ಧರನೆಂಬ ಇನ್ನೊಬ್ಬ ದೈತ್ಯನು ರಾಜನನ್ನು ನಮಸ್ಕರಿಸಿ ಹೀಗೆ ಹೇಳಿದನು. ॥೫೨॥

ದುರ್ಧರನು ಹೇಳಿದನು—ಓ ಮಹಿಷಾಸುರನೇ, ಹದಿನೆಂಟು ತೋಳುಗಳುಳ್ಳ, ಮನೋಹರಳಾದ, ದೇವತೆಗಳಿಂದ ಸೃಷ್ಟಿಸಿ ಕಳುಹಿಸಲ್ಪಟ್ಟಿರುವ ಮತ್ತು ನಮ್ಮನ್ನು ಸಂಹರಿಸುವ ಕಾರಣದಿಂದ ಬಂದಿರತಕ್ಕ ಆ ಚಂಡಿಕಾದೇವಿಯನ್ನು ನಾನು ಜಯಿಸುವೆನು. ॥೫೩॥

ರಾಜನ್ಭೀಷಯಿತುಂ ತ್ವಾಂ ವೈ ಮಾಯೈಷಾ ನಿರ್ಮಿತಾ ಸುರೈಃ ।
ಬಿಭೀಷಿಕೇಯಂ ವಿಜ್ಞಾಯ ತ್ಯಜ ಮೋಹಂ ಮನೋಗತಂ ॥೫೪॥

ರಾಜನೀತಿರಿಯಂ ರಾಜನ್ಮಂತ್ರಿಕೃತ್ಯಂ ತಥಾ ಶೃಣು ।
ಸಾತ್ತ್ವಿಕಾ ರಾಜಸಾಃ ಕೇಚಿತ್ತಾಮಸಾಶ್ಚ ತಥಾಪರೇ ॥೫೫॥

ಮಂತ್ರಿಣಸ್ತ್ರಿವಿಧಾ ಲೋಕೇ ಭವಂತಿ ದಾನವಾಧಿಪ ।
ಸಾತ್ತ್ವಿಕಾಃ ಪ್ರಭುಕಾರ್ಯಾಣಿ ಸಾಧಯಂತಿ ಸ್ವಶಕ್ತಿಭಿಃ ॥೫೬॥

ಆತ್ಮಕೃತ್ಯಂ ಪ್ರಕುರ್ವಂತಿ ಸ್ವಾಮಿಕಾರ್ಯಾವಿರೋಧತಃ ।
ಏಕಚಿತ್ತಾ ಧರ್ಮಪರಾ ಮಂತ್ರಶಾಸ್ತ್ರವಿಶಾರದಾಃ ॥೫೭॥

ರಾಜಸಾ ಭಿನ್ನಚಿತ್ತಾಶ್ಚ ಸ್ವಕಾರ್ಯನಿರತಾಃ ಸದಾ ।
ಕದಾಚಿತ್ಸ್ವಾಮಿಕಾರ್ಯಂ ತೇ ಪ್ರಕುರ್ವಂತಿ ಯದೃಚ್ಛಯಾ ॥೫೮॥

---

ಮತ್ತು ಓ ರಾಜನೇ, ನಿನ್ನನ್ನು ಹೆದರಿಸಲು ದೇವತೆಗಳು ಈ ಮಾಯೆಯನ್ನು ಸೃಷ್ಟಿಸಿರುತ್ತಾರೆ. ಇದು ಬರಿಯ ಹೆದರಿಸುವಿಕೆಯೆಂದು ತಿಳಿದು ನಿನ್ನ ಮನಸ್ಸಿನಲ್ಲಿರುವ ಅಜ್ಞಾನದ ಆತಂಕವನ್ನು ತೊಲಗಿಸು. ॥೫೪॥

ಈಗ ಹೇಳಿದುದು ದೊರೆಯಾದ ನಿನ್ನಂತಹವರು ಮಾಡಬೇಕಾದುದು ಆಯಿತು. ಓ ರಾಜನೇ, ಇನ್ನು ಮಂತ್ರಿಯಾದ ನನ್ನಂಥವನು ನೆರವೇರಿಸಬೇಕಾದ ಕರ್ತವ್ಯಧರ್ಮವನ್ನು ಕೇಳು. ಮಂತ್ರಿಗಳು ಸಾತ್ತ್ವಿಕ, ರಾಜಸ, ತಾಮಸರೆಂದು ಮೂರು ವಿಧವಾಗಿರುತ್ತಾರೆ. ॥೫೫॥

ಹೀಗೆ ಮೂರು ಬಗೆಯವರಾದ ಮಂತ್ರಿಗಳಲ್ಲಿ, ಓ ರಾಕ್ಷಸೇಶ್ವರನೇ, ಸಾತ್ವಿಕರಾದ ಮಂತ್ರಿಗಳು ತಮ್ಮ ಶಕ್ತಿಯಿಂದ ಸ್ವಾಮಿಯ ಕಾರ್ಯಗಳನ್ನು ಮೊದಲು ಸಾಧಿಸುತ್ತಾರೆ. ॥೫೬॥

ಮತ್ತು ಅವರು ತಮ್ಮ ಕಾರ್ಯವನ್ನೂ ಸ್ವಾಮಿಯ ಕಾರ್ಯಗಳಿಗೆ ವಿರೋಧ ಬರದಂತೆ ಸಾಧಿಸಿಕೊಳ್ಳುತ್ತಾರೆ. ಅಂತಹವರು ಸ್ವಾಮಿಭಕ್ತಿಯಲ್ಲಿ ಅವಿಚಲಿತವಾದ ಮನಸ್ಸುಳ್ಳವರೂ ಧರ್ಮನಿಷ್ಠರೂ ರಾಜನೀತಿನಿಪುಣರೂ ಆಗಿರುತ್ತಾರೆ. ॥೫೭॥

ರಜೋಗುಣವೇ ಪ್ರಧಾನವಾಗಿ ಉಳ್ಳ ಸಚಿವರು ಚಂಚಲವಾದ ಮನಸ್ಸುಳ್ಳವರೂ, ತಮ್ಮ ಕಾರ್ಯಗಳಲ್ಲಿಯೇ ಯಾವಾಗಲೂ ಆಸಕ್ತರೂ ಆಗಿದ್ದು ಒಮ್ಮೆ ಸ್ವಾಮಿ

ತಾಮಸಾ ಲೋಭನಿರತಾಃ ಸ್ವಕಾರ್ಯನಿರತಾಃ ಸದಾ ।
ಪ್ರಭುಕಾರ್ಯಂ ವಿನಾಶ್ಯೈವ ಸ್ವಕಾರ್ಯಂ ಸಾಧಯಂತಿ ತೇ ॥೫೯॥

ಸಮಯೇ ತೇ ವಿಭಿದ್ಯಂತೇ ಪರೈಸ್ತು ಪರಿವಂಚಿತಾಃ ।
ಸ್ವಚ್ಛಿದ್ರಂ ಶತ್ರುಪಕ್ಷೀಯಾನ್ನಿರ್ದಿಶಂತಿ ಗೃಹಸ್ಥಿತಾಃ ॥೬೦॥

ಕಾರ್ಯಭೇದಕರಾ ನಿತ್ಯಂ ಕೋಶಗುಪ್ತಾಸಿವತ್ಸದಾ ।
ಸಂಗ್ರಾಮೇಽಥ ಸಮುತ್ಪನ್ನೇ ಭೀಷಯಂತಿ ಪ್ರಭುಂ ಸದಾ ॥೬೧॥

ವಿಶ್ವಾಸಸ್ತು ನ ಕರ್ತವ್ಯಸ್ತೇಷಾಂ ರಾಜನ್ಕದಾಚನ ।
ವಿಶ್ವಾಸೇ ಕಾರ್ಯಹಾನಿಃ ಸ್ಯಾನ್ಮಂತ್ರಹಾನಿಃ ಸದೈವ ಹಿ ॥೬೨॥

---

ಕಾರ್ಯದಿಂದ ತಮ್ಮ ಕಾರ್ಯವೂ ಆಕಸ್ಮಿಕವಾಗಿ ಆಗುವಂತಿದ್ದರೆ ಆಗ ಸ್ವಾಮಿಕಾರ್ಯವನ್ನು ಮಾಡತಕ್ಕವರಾಗಿಯೂ ಇರುತ್ತಾರೆ. ||೫೮||

ತಮೋಗುಣಪ್ರಧಾನರಾದ ಮಂತ್ರಿಗಳು ದುರಾಶೆಯುಳ್ಳವರಾಗಿಯೂ, ಯಾವಾಗಲೂ ತಮ್ಮ ಕಾರ್ಯದಲ್ಲಿಯೇ ಆಸಕ್ತರಾಗಿಯೂ ಇದ್ದು ಸ್ವಾಮಿಯ ಕಾರ್ಯಗಳನ್ನು ನಾಶಮಾಡಿಯೇ ತಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳುತ್ತಾರೆ. ||೫೯||

ಮತ್ತು ಅವರು ತಮ್ಮ ಸ್ವಾಮಿಯ ಸಂಕಟಸಮಯದಲ್ಲಿಯೇ ಶತ್ರುಗಳಿಂದ ಮೋಸಗೊಳಿಸಲ್ಪಟ್ಟವರಾಗಿ ತಮ್ಮ ಸ್ವಾಮಿಗೆ ದ್ರೋಹವನ್ನೆಸಗುವರು. ಮತ್ತು ಮನೆಯಲ್ಲಿಯೇ ಇದ್ದು ತಮ್ಮ ರಹಸ್ಯವನ್ನು ಶತ್ರುಪಕ್ಷದವರಿಗೆ ತಿಳಿಸುತ್ತಾರೆ. ||೬೦||

ಅಲ್ಲದೆ ಅವರು ಯಾವಾಗಲೂ ಒರೆಯಲ್ಲಿರುವ ಖಡ್ಗದಂತೆ ಕಾರ್ಯಭೇದವನ್ನೇ ಮಾಡತಕ್ಕವರು ಎಂದರೆ ರಾಜಕಾರ್ಯವನ್ನು ಹಾಳುಮಾಡುತ್ತಾರೆ. ಶತ್ರುಗಳೊಡನೆ ಯುದ್ಧವೊದಗಲು ಅವರು ಸ್ವಾಮಿಯನ್ನು ವ್ಯರ್ಥವಾಗಿ ಭಯಕಾರಣಗಳನ್ನೂ ಇಲ್ಲದಿದ್ದುದನ್ನೇ ಹೇಳಿ ಹೆದರಿಸುತ್ತಾರೆ. ||೬೧||

ಓ ಪ್ರಭುವೇ, ಅಂತಹವರಲ್ಲಿ ಯಾವಾಗಲೂ ವಿಶ್ವಾಸವನ್ನು ಮಾಡಬಾರದು. ಮಾಡಿದುದೇ ಆದರೆ ನಮ್ಮ ಕಾರ್ಯಹಾನಿಯೂ ಮಂತ್ರರಹಸ್ಯದ ಬಯಲಾಗುವಿಕೆಯೂ ಸಂಭವಿಸುವುವು. ||೬೨||

**ಖಲಾಃ ಕಿಂ ಕಿಂ ನ ಕುರ್ವಂತಿ ವಿಶ್ವಸ್ತಾ ಲೋಭತತ್ಪರಾಃ ।**
**ತಾಮಸಾಃ ಪಾಪನಿರತಾ ಬುದ್ಧಿಹೀನಾಃ ಶಠಾಸ್ತಥಾ ॥೬೩॥**

**ತಸ್ಮಾತ್ಕಾರ್ಯಂ ಕರಿಷ್ಯಾಮಿ ಗತ್ವಾಽಹಂ ರಣಮಸ್ತಕೇ ।**
**ಚಿಂತಾ ತ್ವಯಾ ನ ಕರ್ತವ್ಯಾ ಸರ್ವಥಾ ನೃಪಸತ್ತಮ ॥೬೪॥**

**ಗೃಹೀತ್ವಾ ತಾಂ ದುರಾಚಾರಾಮಾಗಮಿಷ್ಯಾಮಿ ಸತ್ವರಃ ।**
**ಪಶ್ಯ ಮೇಽದ್ಯ ಬಲಂ ಧೈರ್ಯಂ ಪ್ರಭುಕಾರ್ಯಂ ಸ್ವಶಕ್ತಿತಃ ॥೬೫॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**॥ ದ್ವಾದಶೋಽಧ್ಯಾಯಃ ॥**

---

ದುರಾಶೆಯುಳ್ಳವರೂ, ಪಾಪಿಗಳೂ, ದುರ್ಬುದ್ಧಿಗಳೂ, ಮೂರ್ಖರೂ ಆದ ಆ ತಮೋಗುಣಪ್ರಧಾನರು ತಮ್ಮ ಸ್ವಾಮಿಯ ವಿಶ್ವಾಸಕ್ಕೆ ಪಾತ್ರರಾಗಿದ್ದರೆ ಯಾವ ಅನಿಷ್ಟವನ್ನು ತಾನೇ ಮಾಡಲಾರರು ? ॥೬೩॥

ಆದುದರಿಂದ ಓ ರಾಜೋತ್ತಮನೇ, ನಾನು ಈಗಲೇ ಹೋಗಿ ಯುದ್ಧರಂಗದ ಅಗ್ರಭಾಗದಲ್ಲಿ ಕಾರ್ಯವನ್ನು ನಿರ್ವಹಿಸುತ್ತೇನೆ. ನೀನು ಸ್ವಲ್ಪವೂ ಯಾವವಿಧವಾದ ಚಿಂತೆಯನ್ನೂ ಮಾಡಬೇಕಾಗಿಲ್ಲವು. ॥೬೪॥

ಮತ್ತು ಕೆಟ್ಟ ನಡತೆಯುಳ್ಳ ಆ ಚಂಡಿಕೆಯನ್ನು ಸೆರೆಹಿಡಿದುಕೊಂಡು ಜಾಗ್ರತೆಯಾಗಿ ಹಿಂತಿರುಗಿ ಬರುತ್ತೇನೆ. ಇಂದು ನನ್ನ ಬಲವನ್ನೂ ಧೈರ್ಯವನ್ನೂ ಪರೀಕ್ಷಿಸಿ ನೋಡು. ನನ್ನ ಶಕ್ತಿಯಿಂದಲೇ ಸ್ವಾಮಿಯಾದ ನಿನ್ನ ಕಾರ್ಯವನ್ನು ಸಾಧಿಸುತ್ತೇನೆ, ಎಂದು ದುರ್ಧರನು ಹೇಳಿದನು. ॥೬೫॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### ॥ ತ್ರಯೋದಶೋಽಧ್ಯಾಯಃ ॥

### ಹದಿಮೂರನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ತೌ ಮಹಾಬಾಹೂ ದೈತ್ಯೌ ಬಾಷ್ಕಲದುರ್ಮುಖೌ ।**
**ಜಗ್ಮತುರ್ಮದದಿಗ್ಧಾಂಗೌ ಸರ್ವಶಸ್ತ್ರಾಸ್ತ್ರಕೋವಿದೌ ॥೧॥**

**ತೌ ಗತ್ವಾ ಸಮರೇ ದೇವೀಮೂಚತುರ್ವಚನಂ ತದಾ ।**
**ದಾನವೌ ಚ ಮದೋನ್ಮತ್ತೌ ಮೇಘಗಂಭೀರಯಾ ಗಿರಾ ॥೨॥**

**ದೇವಿ ದೇವಾ ಜಿತಾ ಯೇನ ಮಹಿಷೇಣ ಮಹಾತ್ಮನಾ ।**
**ವರಯ ತ್ವಂ ವರಾರೋಹೇ ಸರ್ವದೈತ್ಯಾಧಿಪಂ ನೃಪಂ ॥೩॥**

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ, ಕೇಳು, ದುರ್ಧರನು ಹೀಗೆ ಹೇಳಿ ಮುಗಿಸಿದ ಮೇಲೆ, ಹೆಚ್ಚಾದ ಶಕ್ತಿಯಿಂದ ಕೂಡಿದ ತೋಳುಗಳುಳ್ಳ, ಮದದಿಂದ ಕೊಬ್ಬಿದ ಶರೀರವುಳ್ಳ ಮತ್ತು ಎಲ್ಲ ಆಯುಧ, ಮಂತ್ರಾಸ್ತ್ರಗಳಲ್ಲಿ ನಿಪುಣರಾದ ಬಾಷ್ಕಲ ಮತ್ತು ದುರ್ಮುಖರೆಂಬ ರಾಕ್ಷಸರು ದೇವಿಯೊಡನೆ ಯುದ್ಧಕ್ಕಾಗಿ ಅಲ್ಲಿಂದ ಹೊರಟರು. ॥೧॥

ಹೀಗೆ ದೇವಿಯೊಡನೆ ಯುದ್ಧಕ್ಕಾಗಿ ಹೊರಟ, ಮದದಿಂದ ಕೊಬ್ಬಿದ ಆ ರಾಕ್ಷಸರು ದೇವಿಯಿರುವಲ್ಲಿಗೆ ಹೋಗಿ ಅವಳನ್ನು ಕುರಿತು ಆಗ ಮೇಘಧ್ವನಿಯಂತೆ ಗಂಭೀರವಾದ ಧ್ವನಿಯಿಂದ ಹೀಗೆ ಹೇಳಿದರು. ॥೨॥

ಉತ್ತಮ ಸ್ತ್ರೀಯಾದ ಎಲೌ ದೇವಿಯೇ, ಯಾವ ಮಹಾತ್ಮನಾದ ದಾನವೇಶ್ವರನಿಂದ ದೇವತೆಗಳೂ ಸಹ ಜಯಿಸಲ್ಪಟ್ಟಿರುವರೋ ಅಂಥಾ ಎಲ್ಲ ರಾಕ್ಷಸರಿಗೂ ಚಕ್ರವರ್ತಿಯಾದ ಮಹಿಷಾಸುರನನ್ನು ನೀನು ವರಿಸು. ॥೩॥

ಸ ಕೃತ್ವಾ ಮಾನುಷಂ ರೂಪಂ ಸರ್ವಲಕ್ಷಣಸಂಯುತಂ ।
ಭೂಷಿತಂ ಭೂಷಣೈರ್ದಿವ್ಯೈಸ್ತ್ವಾಮೇಷ್ಯತಿ ರಹಃ ಕಿಲ ॥೪॥

ತ್ರೈಲೋಕ್ಯವಿಭವಂ ಕಾಮಂ ತ್ವಮೇಷ್ಯಸಿ ಶುಚಿಸ್ಮಿತೇ ।
ಮಹಿಷೇ ಪರಮಂ ಭಾವಂ ಕುರು ಕಾಂತೇ ಮನೋಗತಂ ॥೫॥

ಕೃತ್ವಾ ಪತಿಂ ಮಹಾವೀರಂ ಸಂಸಾರಸುಖಮುದ್ಭುತಂ ।
ತ್ವಂ ಪ್ರಾಪ್ಸ್ಯಸಿ ಪಿಕಾಲಾಪೇ ಯೋಷಿತಾಂ ಖಲು ವಾಂಛಿತಂ ॥೬॥

॥ ಶ್ರೀದೇವ್ಯುವಾಚ ॥

ಜಾಲ್ಮ ತ್ವಂ ಕಿಂ ವಿಜಾನಾಸಿ ನಾರೀಯಂ ಕಾಮಮೋಹಿತಾ ।
ಮಂದಬುದ್ಧಿಬಲಾತ್ಯರ್ಥಂ ಭಜೇಯಂ ಮಹಿಷಂ ಶಠಂ ॥೭॥

---

ಆ ನಮ್ಮ ಪ್ರಭುವು ಎಲ್ಲ ಲಕ್ಷಣಗಳಿಂದಲೂ ಕೂಡಿರುವ, ಪ್ರಕಾಶ ಮಾನವಾದ ಆಭರಣಗಳಿಂದ ಅಲಂಕರಿಸಲ್ಪಟ್ಟ, ಸುಂದರವಾದ ಮನುಷ್ಯ ರೂಪ ವನ್ನು ತಾಳಿ ನಿನ್ನೊಡನೆ ಏಕಾಂತದಲ್ಲಿ ಕ್ರೀಡೆಗಾಗಿ ಬರುವನು. ॥೪॥

ಶುಭ್ರವಾದ ಮಂದಹಾಸವುಳ್ಳ ಓ ದೇವಿಯೇ, ನೀನು ಅವನನ್ನು ವರಿಸಿ ದುದೇ ಆದರೆ ಮೂರು ಲೋಕದಲ್ಲಿರುವ ಎಲ್ಲ ಇಷ್ಟಾರ್ಥವನ್ನೂ ಹೊಂದುವೆ. ಆದುದರಿಂದ ಎಲೌ ದೇವಿಯೇ, ಆ ಮನೋಹರನಾದ ಮಹಿಷನಲ್ಲಿ ಮನಃಪೂರ್ವಕ ವಾಗಿ ಅನುರಾಗವುಳ್ಳವಳಾಗು. ॥೫॥

ಕೋಗಿಲೆಯಂತೆ ಇಂಪಾದ ಧ್ವನಿಯುಳ್ಳ ಎಲೌ ದೇವಿಯೇ, ತುಂಬ ಪರಾ ಕ್ರಮಿಯಾದ ಅವನನ್ನು ಪತಿಯಾಗಿ ಪಡೆದುದೇ ಆದರೆ, ಸ್ತ್ರೀಯರಿಗೆ ಪ್ರಿಯವಾದ ವಿಷಯಸುಖವನ್ನು ಬೇಕಾದಂತೆ ಅನುಭವಿಸುವೆ. ॥೬॥

ದೇವಿಯು ಹೇಳಿದಳು—ಎಲೈ ಮೂಢನೇ, ನಾನು ಕಾಮಾತುರಳಾದ ಸ್ತ್ರೀ ಎಂದು ತಿಳಿದಿರುವೆಯಾ ? ತುಂಬ ಕಡಿಮೆಯಾದ ತಿಳಿವಳಿಕೆಯ ಬಲವುಳ್ಳ ಎಲೈ ದೈತ್ಯನೇ, ಗುಟ್ಟಾಗಿ ಕೆಡುಕನ್ನುಂಟುಮಾಡುವ ಮೂರ್ಖನಾದ ಆ ಮಹಿಷನನ್ನು ನಾನು ವರಿಸುವೆನೆಂದು ನೀನು ತಿಳಿದಿರುವೆಯಾ ? ॥೭॥

ಕುಲಶೀಲಗುಣೈಸ್ತುಲ್ಯಂ ತಂ ಭಜಂತಿ ಕುಲಸ್ತ್ರಿಯಃ ।
ಅಧಿಕಂ ರೂಪಚಾತುರ್ಯಬುದ್ಧಿಶೀಲಲಕ್ಷಮಾದಿಭಿಃ ॥೮॥

ಕಾ ನು ಕಾಮಾತುರಾ ನಾರೀ ಭಜೇಚ್ಛ ಪಶುರೂಪಿಣಂ ।
ಪಶೂನಾಮಧಮಂ ನೂನಂ ಮಹಿಷಂ ದೇವರೂಪಿಣೀ ॥೯॥

ಗಚ್ಛತಂ ಮಹಿಷಂ ತೂರ್ಣಂ ಭೂಪಂ ಬಾಷ್ಕಲದುರ್ಮುಖೌ ।
ವದತಂ ತದ್ವಚೋ ದೈತ್ಯಂ ಗಜತುಲ್ಯಂ ವಿಷಾಣಿನಂ ॥೧೦॥

ಪಾತಾಲಂ ಗಚ್ಛ ವಾಽಭ್ಯೇತ್ಯ ಸಂಗ್ರಾಮಂ ಕುರು ವಾ ಮಯಾ ।
ರಣೇ ಜಾತೇ ಸಹಸ್ರಾಕ್ಷೋ ನಿರ್ಭಯಃ ಸ್ಯಾದಿತಿ ಧ್ರುವಂ ॥೧೧॥

---

ಒಳ್ಳೆಯ ಕುಲದಲ್ಲಿ ಹುಟ್ಟಿದ ಸ್ತ್ರೀಯರು, ವಂಶ, ಶೀಲ, ಗುಣಗಳಿಂದ ಅನುರೂಪರಾದಂತಹ ಪುರುಷರನ್ನೂ ಮತ್ತು ರೂಪ, ಚತುರತೆ, ಬುದ್ಧಿ, ಸ್ವಭಾವ, ಶಾಂತಿ ಇವುಗಳಲ್ಲಿ ತಮಗಿಂತಲೂ ಉತ್ತಮರಾದಂತಹ ಪುರುಷರನ್ನೂ ವರಿಸಿ ಸೇವಿಸುವರು. ||೮||

ಕಾಮಮೋಹಿತಳಾಗಿದ್ದರೂ ಯಾವ ಸ್ತ್ರೀಯು ತಾನೇ ಪಶುವನ್ನು ವರಿಸಿ ಸೇವಿಸುವಳು ? ಹೀಗಿರಲು ವಿಶೇಷವಾಗಿ ಪಶುಗಳಲ್ಲಿಯೂ ನೀಚನಾದ ಆ ಮಹಿಷ ನನ್ನು ದೇವತೆಗಳಂತೆ ಗುಣರೂಪವುಳ್ಳ ನಾನು ವರಿಸುವೆನೇ ? ||೯||

ಆದುದರಿಂದ ಎಲೈ ಬಾಷ್ಕಲದುರ್ಮುಖರೇ ಹಿಂತಿರುಗಿ ಹೋಗಿರಿ. ಆನೆ ಯಂತೆ ದೊಡ್ಡ ಶರೀರವುಳ್ಳ ಮತ್ತು ಕೊಂಬುಗಳುಳ್ಳ ಕೋಣನಾದ ನಿಮ್ಮೊಡೆಯ ನಾದ ಆ ಮಹಿಷನನ್ನು ಕುರಿತು ನಾನು ಮುಂದೆ ಹೇಳುವಂತೆ ಹೇಳಿರಿ. ||೧೦||

ಎಲೈ ಮಹಿಷನೇ, ಯುದ್ಧಮಾಡಲಾಗದಿದ್ದರೆ, ಇಲ್ಲಿಂದ ಪಾತಾಳಕ್ಕೆ ಹೊರಟು ಹೋಗು. ಅದಿಲ್ಲದಿದ್ದರೆ ಎದುರಿಗೆ ಬಂದು ನನ್ನೊಡನೆ ಯುದ್ಧವನ್ನು ಮಾಡು. ನನ್ನೊಡನೆ ಯುದ್ಧ ಮಾಡಿದರೆ ನಿನ್ನಿಂದ ತೊಂದರೆಯನ್ನನುಭವಿಸುತ್ತ ಲಿರುವ ಇಂದ್ರನು ಖಂಡಿತವಾಗಿ ನಿನ್ನ ಹೆದರಿಕೆಯಿಲ್ಲದವನಾಗುವನು. ಎಂದರೆ, ಯುದ್ಧದಲ್ಲಿ ನಿಶ್ಚಯವಾಗಿಯೂ ನೀನು ಸಾಯುವೆ. ||೧೧||

ಹತ್ವಾಽಹಂ ತ್ವಾಂ ಗಮಿಷ್ಯಾಮಿ ನಾನ್ಯಥಾ ಗಮನಂ ಮಮ ।
ಇತ್ಥಂ ಜ್ಞಾತ್ವಾ ಸುದುರ್ಬುದ್ಧೇ ಯಥೇಚ್ಛಸಿ ತಥಾ ಕುರು ॥೧೨॥

ಮಾಮನಿರ್ಜಿತ್ಯ ಭೂಭಾಗೇ ನ ಸ್ಥಾನಂ ತೇ ಕದಾಚನ ।
ಭವಿಷ್ಯತಿ ಚತುಷ್ಪಾದ ದಿವಿ ವಾ ಗಿರಿಕಂದರೇ ॥೧೩॥

॥ ವ್ಯಾಸ ಉವಾಚ ॥

ಇತ್ಯುಕ್ತೌ ತೌ ತಯಾ ದೈತ್ಯೌ ಕೋಪಾಕುಲಿತಲೋಚನೌ ।
ಧನುರ್ಬಾಣಧರೌ ವೀರೌ ಯುದ್ಧಕಾಮೌ ಬಭೂವತುಃ ॥೧೪॥

ಕೃತ್ವಾ ಸುವಿಪುಲಂ ನಾದಂ ದೇವೀ ಸಾ ನಿರ್ಭಯಾ ಸ್ಥಿತಾ ।
ಉಭೌ ಚ ಚಕ್ರತುಸ್ತೀವ್ರಾಂ ಬಾಣವೃಷ್ಟಿಂ ಕುರೂದ್ವಹ ॥೧೫॥

---

ಎಲೈ ಮಹಿಷನೇ, ನಾನು ನಿನ್ನನ್ನು ಕೊಂದೇ ಹೋಗುವೆನು, ಕೊಲ್ಲದೆ ಹೋಗತಕ್ಕವಳಲ್ಲವು ಎಂಬ ನನ್ನ ನಿಶ್ಚಯವನ್ನು ನೀನು ಚನ್ನಾಗಿ ತಿಳಿದುಕೊಂಡು ಎಲೈ ಕೆಟ್ಟಬುದ್ಧಿಯುಳ್ಳವನೇ, ನಿನಗೆ ಸೂಕ್ತತೋರಿದಂತೆ ಮುಂದೆ ಮಾಡು. ||೧೨||

ಅಲ್ಲದೆ ನನ್ನನ್ನು ಜಯಿಸದೆ ಈ ಭೂಮಂಡಲದಲ್ಲಿಯೇ ನಿನಗೆ ಇರುವುದಕ್ಕೆ ಸ್ಥಾನವು ಸಿಗಲಾರದು. ಮತ್ತು ಎಲೈ ನಾಲ್ಕು ಕಾಲುಗಳುಳ್ಳ ಪಶುವೇ, ಸ್ವರ್ಗದಲ್ಲಿಯೂ ಬೆಟ್ಟಗಳ ಗುಹೆಗಳಲ್ಲಿಯೂ ಸಹ ನಿನಗೆ ಸ್ಥಾನವು ದೊರೆಯದು ಎಂದು ನಿಮ್ಮೊಡೆಯನಾದ ಮಹಿಷನಿಗೆ ಹೇಳಿರಿ. ||೧೩||

ವ್ಯಾಸಮುನಿಯು ಹೇಳಿದನು–ಹೀಗೆ ಆ ರಾಕ್ಷಸರು ದೇವಿಯಿಂದ ಯಾವಾಗ ಹೇಳಲ್ಪಟ್ಟರೋ ಆಗ ಅವರು ಸಿಟ್ಟಿನಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಅವಳೊಡನೆ ಯುದ್ಧಮಾಡಲು ಸಿದ್ಧರಾದರು. ||೧೪||

ಓ ದೊರೆಯೇ, ಆಗ ದೇವಿಯು ದೊಡ್ಡದಾದ ಸಿಂಹನಾದವನ್ನು ಮಾಡಿ ಧೈರ್ಯದಿಂದ ಯುದ್ಧಮಾಡಲು ಸಿದ್ಧಳಾಗಿ ನಿಂತಳು. ಕುರುಶ್ರೇಷ್ಠನಾದ ಜನಮೇಜಯನೇ ಕೇಳು, ದೇವಿಯ ಮೇಲೆ ಆ ಇಬ್ಬರು ದೈತ್ಯರೂ ಬಾಣಗಳ ಮಳೆಯನ್ನು ಸುರಿಸಿದರು. ||೧೫||

ಭಗವತ್ಯಪಿ ಬಾಣೌಘಾನ್ಮುಮೋಚ ದಾನವೌ ಪ್ರತಿ ।
ಕೃತ್ವಾऽತಿಮಧುರಂ ನಾದಂ ದೇವಕಾರ್ಯಾರ್ಥಸಿದ್ಧಯೇ ॥೧೬॥

ತಯೋಸ್ತು ಬಾಷ್ಕಲಸ್ತೂರ್ಣಂ ಸಂಮುಖೋऽಭೂದ್ರಣಾಂಗಣೇ ।
ದುರ್ಮುಖಃ ಪ್ರೇಕ್ಷಕಸ್ತತ್ರ ದೇವೀಮಭಿಮುಖಃ ಸ್ಥಿತಃ ॥೧೭॥

ತಯೋರ್ಯುದ್ಧಮಭೂದ್ಘೋರಂ ದೇವೀಬಾಷ್ಕಲಯೋಸ್ತದಾ ।
ಬಾಣಾಸಿಪರಿಘಾಘಾತೈರ್ಭಯದಂ ಮಂದಚೇತಸಾಂ ॥೧೮॥

ತತಃ ಕ್ರುದ್ಧಾ ಜಗನ್ಮಾತಾ ದೃಷ್ಟ್ವಾ ತಂ ಯುದ್ಧದುರ್ಮದಂ ।
ಜಘಾನ ಪಂಚಭಿರ್ಬಾಣೈಃ ಕರ್ಣಾಕೃಷ್ಟೈಃ ಶಿಲಾಶಿತೈಃ ॥೧೯॥

ದಾನವೋऽಪಿ ಶರಾನ್ದೇವ್ಯಾಶ್ಚಿಚ್ಛೇದ ನಿಶಿತೈಃ ಶರೈಃ ।
ಸಪ್ತಭಿಸ್ತಾಡಯಾಮಾಸ ದೇವೀಂ ಸಿಂಹೋಪರಿ ಸ್ಥಿತಾಂ ॥೨೦॥

---

ಪೂಜ್ಯಳಾದ ದೇವಿಯೂ ಸಹ ತುಂಬ ಗಂಭೀರವಾದ ಸಿಂಹನಾದವನ್ನು ಮಾಡಿ ಇಂದ್ರಾದಿದೇವತೆಗಳ ಕಾರ್ಯವಾದ ಶತ್ರುನಾಶವು ಕೈಗೂಡುವುದಕ್ಕಾಗಿ ಆ ದೈತ್ಯರ ಮೇಲೆ ತಾನೂ ಬಾಣಸಮೂಹಗಳನ್ನು ಬಿಟ್ಟಳು. ||೧೬||

ಆ ದೈತ್ಯರೀರ್ವರಲ್ಲಿ ಬಾಷ್ಕಲನು ಯುದ್ಧಭೂಮಿಯಲ್ಲಿ ಮೊದಲು ದೇವಿಗೆ ಎದುರಾದನು. ದುರ್ಮುಖನು ದೇವಿಯ ಮುಂಭಾಗದಲ್ಲಿರುತ್ತಾ ಅವರೀರ್ವರ ಯುದ್ಧಚಮತ್ಕಾರವನ್ನು ನೋಡುತ್ತಲಿದ್ದನು. ||೧೭||

ಅಗ ಆ ದೇವಿಗೂ ಬಾಷ್ಕಲನಿಗೂ ತುಂಬ ಭಯಂಕರವಾಗಿ, ಶರ, ಖಡ್ಗ, ಪರಿಘ, ಇವುಗಳ ಹೊಡೆತಗಳಿಂದ ಕೂಡಿ, ಹೇಡಿಗಳಿಗೆ ಹೆದರಿಕೆಯನ್ನುಂಟುಮಾಡು ವಂತಹ ಯುದ್ಧವು ನಡೆಯಿತು. ||೧೮||

ಆಮೇಲೆ ಜಗತ್ತಿಗೆ ಮಾತೆಯಾದ ದೇವಿಯು ಯುದ್ಧದಲ್ಲಿ ಕೊಬ್ಬಿದ ಆ ದುರ್ಮು ಖನನ್ನು ನೋಡಿ ಕೋಪಗೊಂಡು ಧನುಸ್ಸಿನ ಹೆದೆಯನ್ನು ಕಿವಿಯವರೆಗೂ ಎಳೆದು ಬಿಡಲ್ಪಟ್ಟಿರುವ ಮತ್ತು ಹರಿತವಾದ ಐದು ಬಾಣಗಳಿಂದ ಅವನನ್ನು ಹೊಡೆದಳು.||೧೯||

ಆ ಬಾಷ್ಕಲನೆಂಬ ದೈತ್ಯನೂ ಸಹ ದೇವಿಯು ಬಿಟ್ಟ ಆ ಐದು ಬಾಣಗಳನ್ನು ತನ್ನ ಹರಿತವಾದ ಬಾಣಗಳಿಂದ ಕತ್ತರಿಸಿದನು. ಮತ್ತು ಸಿಂಹದ ಮೇಲೆ ಕುಳಿತಿ ರುವ ದೇವಿಯನ್ನು ಏಳು ಬಾಣಗಳಿಂದ ಹೊಡೆದನು. ||೨೦||

ಸಾಪಿ ತಂ ದಶಭಿಸ್ತೀಕ್ಷ್ಣೈಃ ಸುಪೀತೈಃ ಸಾಯಕೈಃ ಖಲಂ ।
ಜಘಾನ ತಚ್ಛರಾಂಶ್ಛಿತ್ವಾ ಜಹಾಸ ಚ ಮುಹುರ್ಮುಹುಃ ॥೨೦॥

ಅರ್ಧಚಂದ್ರೇಣ ಬಾಣೇನ ಚಿಚ್ಛೇದ ಚ ಶರಾಸನಂ ।
ಬಾಷ್ಕಲೋಽಪಿ ಗದಾಂ ಗೃಹ್ಯ ದೇವೀಂ ಹಂತುಮುಪಾಯಯೌ ॥೨೨॥

ಆಗಚ್ಛಂತಂ ಗದಾಪಾಣಿಂ ದಾನವಂ ಮದಗರ್ವಿತಂ ।
ಚಂಡಿಕಾ ಸ್ವಗದಾಪಾತೈಃ ಪಾತಯಾಮಾಸ ಭೂತಲೇ ॥೨೩॥

ಬಾಷ್ಕಲಃ ಪತಿತೋ ಭೂಮೌ ಮುಹೂರ್ತಾದುತ್ಥಿತಃ ಪುನಃ ।
ಚಿಕ್ಷೇಪ ಚ ಗದಾಂ ಸೋಽಪಿ ಚಂಡಿಕಾಂ ಚಂಡವಿಕ್ರಮಃ ॥೨೪॥

ತಮಾಗಚ್ಛಂತಮಾಲೋಕ್ಯ ದೇವೀ ಶೂಲೇನ ವಕ್ಷಸಿ ।
ಜಘಾನ ಬಾಷ್ಕಲಂ ಕ್ರುದ್ಧಾ ಪಪಾತ ಚ ಮಮಾರ ಸಃ ॥೨೫॥

---

ಆ ದೇವಿಯೂ ಕೂಡ ರಕ್ತಪಾನವನ್ನು ಮಾಡಿರತಕ್ಕ ಮತ್ತು ತುಂಬ ಹರಿತವಾದ ಹತ್ತು ಬಾಣಗಳಿಂದ ಮೂರ್ಖನಾದ ಆ ಬಾಷ್ಕಲನನ್ನು ಹೊಡೆದಳು. ಮತ್ತು ಅವನು ಬಿಟ್ಟ ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿ ಪುನಃ ಪುನಃ ಸಂತೋಷದಿಂದ ನಗುತ್ತಾ ವಿಜೃಂಭಿಸಿದಳು. ॥೨೦॥

ಅಲ್ಲದೆ ಅರ್ಧಚಂದ್ರಾಕಾರವಾದ ಬಾಣದಿಂದ ಬಾಷ್ಕಲನ ಧನುಸ್ಸನ್ನೂ ಕತ್ತರಿಸಿದಳು. ಆಗ ಬಾಷ್ಕಲನು ಗದೆಯನ್ನು ತೆಗೆದುಕೊಂಡು ದೇವಿಯನ್ನು ಹೊಡೆಯಲು ಮುಂದೆ ಬಂದನು. ॥೨೨॥

ಹೀಗೆ ಕೈಯ್ಯಲ್ಲಿ ಗದೆಯನ್ನು ಹಿಡಿದುಕೊಂಡು ಬರುತ್ತಲಿರುವ ಮದದಿಂದ ಕೊಬ್ಬಿದ ಆ ಬಾಷ್ಕಲನೆಂಬ ದೈತ್ಯನನ್ನು ಚಂಡಿಕೆಯು ತನ್ನ ಗದೆಯ ಪ್ರಹಾರಗಳಿಂದ ಭೂಮಿಯಲ್ಲಿ ಕೆಡಹಿದಳು. ॥೨೩॥

ದೇವಿಯ ಗದಾಪ್ರಹಾರದಿಂದ ಭೂಮಿಯಲ್ಲಿ ಬಿದ್ದ ಆ ಬಾಷ್ಕಲನು ಸ್ವಲ್ಪ ಹೊತ್ತಿನಲ್ಲಿಯೇ ತಿರುಗಿ ಎದ್ದು ಹೆಚ್ಚಾಗಿ ಪರಾಕ್ರಮಿಯಾದ ಅವನು ದೇವಿಯನ್ನು ಪ್ರಹರಿಸಲು ತನ್ನ ಗದೆಯನ್ನು ಪ್ರಯೋಗಿಸಿದನು. ॥೨೪॥

ಗದೆಯಿಂದ ಪ್ರಹರಿಸಲು ಬರುತ್ತಲಿರುವ ಆ ಬಾಷ್ಕಲನನ್ನು ನೋಡಿ ದೇವಿಯು ಕೋಪಗೊಂಡು ತನ್ನ ಶೂಲದಿಂದ ಅವನ ಎದೆಯಲ್ಲಿ ಇರಿದು ಪ್ರಹರಿಸಿದಳು. ಆದರಿಂದ ಅವನು ಭೂಮಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನು. ॥೨೫॥

ಪತಿತೇ ಬಾಷ್ಕಲೇ ಸೈನ್ಯಂ ಭಗ್ನಂ ತಸ್ಯ ದುರಾತ್ಮನಃ ।
ಜಯೇತಿ ಚ ಮುದಾ ದೇವಾಶ್ಚುಕ್ರುಶುರ್ಗಗನೇ ಸ್ಥಿತಾಃ ॥೨೬॥

ತಸ್ಮಿಂಶ್ಚ ನಿಹತೇ ದೈತ್ಯೇ ದುರ್ಮುಖೋಽತಿಬಲಾನ್ವಿತಃ ।
ಆಜಗಾಮ ರಣೇ ದೇವೀಂ ಕ್ರೋಧಸಂರಕ್ತಲೋಚನಃ ॥೨೭॥

ತಿಷ್ಠ ತಿಷ್ಠಾಬಲೇ ಸೋಽಪಿ ಭಾಷಮಾಣಃ ಪುನಃ ಪುನಃ ।
ಧನುರ್ಬಾಣಧರಃ ಶ್ರೀಮಾನ್ ರಥಸ್ಥಃ ಕವಚಾವೃತಃ ॥೨೮॥

ತಮಾಗಚ್ಛಂತಮಾಲೋಕ್ಯ ದೇವೀ ಶಂಖಮವಾದಯತ್ ।
ಕೋಪಯಂತೀ ದಾನವಂ ತಂ ಜ್ಯಾಘೋಷಂ ಚ ಚಕಾರ ಹ ॥೨೯॥

ಸೋಽಪಿ ಬಾಣಾನ್ಮುಮೋಚಾಶು ತೀಕ್ಷ್ಣಾನಾಶೀವಿಷೋಪಮಾನ್ ।
ಸ್ವಬಾಣೈಸ್ತಾನ್ಮಹಾಮಾಯಾ ಚಿಚ್ಛೇದ ಚ ನನಾದ ಚ ॥೩೦॥

---

ಹೀಗೆ ಗತಪ್ರಾಣನಾಗಿ ಬಾಷ್ಕಲನು ಭೂಮಿಯಲ್ಲಿ ಬೀಳಲು ಆ ದುಷ್ಟನ ಸೈನ್ಯವೆಲ್ಲವೂ ಚದರಿ ಭಗ್ನವಾಯಿತು. ಗಗನದಲ್ಲಿದ್ದ ದೇವತೆಗಳು ದೇವಿಯನ್ನು ಕುರಿತು ಜಯಜಯ ಎಂದು ಸಂತೋಷದಿಂದ ಧ್ವನಿಯನ್ನು ಮಾಡಿದರು. ॥೨೬॥

ಹೀಗೆ ಆ ಬಾಷ್ಕಲನೆಂಬ ಅಸುರನು ಮೃತನಾಗಲು ತುಂಬ ಬಲಶಾಲಿಯಾದ ದುರ್ಮುಖನೆಂಬ ಇನ್ನೊಬ್ಬ ದೈತ್ಯನು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಯುದ್ಧದಲ್ಲಿ ದೇವಿಯ ಎದುರಾಗಿ ಬಂದು ನಿಂತನು. ॥೨೭॥

ಮತ್ತು ಅವನು ಧನುರ್ಬಾಣಗಳನ್ನು ಧರಿಸಿ ಕವಚದಿಂದ ರಕ್ಷಿಸಲ್ಪಟ್ಟ ಶರೀರವುಳ್ಳವನಾಗಿ, ವೀರಶ್ರೀಯಿಂದ ಕೂಡಿದವನಾಗಿ ರಥವನ್ನೇರಿ ದೇವಿಯನ್ನು ಕುರಿತು, ಎಲೌ ಅಬಲೆಯೇ, ನಿಲ್ಲು ನಿಲ್ಲು, ಎಂದು ಬಾರಿಬಾರಿಗೂ ಹೇಳುತ್ತಾ ಅವಳೆದುರಾಗಿ ಯುದ್ಧಕ್ಕೆ ಬಂದನು. ॥೨೮॥

ಅವನು ಹೀಗೆ ಬರುತ್ತಲಿರುವುದನ್ನು ನೋಡಿ, ದೇವಿಯು ಅವನನ್ನು ಇನ್ನೂ ಸಿಟ್ಟಿಗೆಬ್ಬಿಸುವವಳಾಗಿ ಶಂಖಧ್ವನಿಯನ್ನೂ ಧನುಷ್ಟಂಕಾರವನ್ನೂ ಮಾಡಿದಳು ॥೨೯॥

ಆ ದುರ್ಮುಖನೂ ಸಹ ದೇವಿಯ ಮೇಲೆ ಸರ್ಪಸದೃಶವಾದ ಮತ್ತು ಹರಿತವಾದ ಅನೇಕ ಬಾಣಗಳನ್ನು ಬಿಟ್ಟನು. ಆಗ ದೇವಿಯು ತನ್ನ ಬಾಣಗಳಿಂದ ಅವನ್ನು ಕತ್ತರಿಸಿದಳು ಮತ್ತು ಸಿಂಹನಾದವನ್ನು ಮಾಡಿದಳು. ॥೩೦॥

ತಯೋಃ ಪರಸ್ಪರಂ ಯುದ್ಧಂ ಬಭೂವ ತುಮುಲಂ ನೃಪ ।
ಬಾಣಶಕ್ತಿಗದಾಘಾತೈರ್ಮುಸಲೈಸ್ತೋಮರೈಸ್ತಥಾ ॥೩೧॥

ರಣಭೂಮೌ ತದಾ ಜಾತಾ ರುಧಿರೌಘವಹಾ ನದೀ ।
ಪತಿತಾನಿ ತದಾ ತೀರೇ ಶಿರಾಂಸಿ ಪ್ರಬಭುಸ್ತದಾ ॥೩೨॥

ಯಥಾ ಸಂತರಣಾರ್ಥಾಯ ಯಮಕಿಂಕರನಾಯಕೈಃ ।
ತುಂಬೀಫಲಾನಿ ನೀತಾನಿ ನವಶಿಕ್ಷಾಪರೈರ್ಮುದಾ ॥೩೩॥

ರಣಭೂಮಿಸ್ತದಾ ಘೋರಾ ಬಭೂವಾತೀವ ದುರ್ಗಮಾ ।
ಶರೀರೈಃ ಪತಿತೈರ್ಭೂಮೌ ಖಾದ್ಯಮಾನೈರ್ವೃಕಾದಿಭಿಃ ॥೩೪॥

ಗೋಮಾಯುಸಾರಮೇಯಾಶ್ಚ ಕಾಕಾಃ ಕಂಕಾ ಅಯೋಮುಖಾಃ ।
ಗೃಧ್ರಾಃ ಶ್ಯೇನಾಶ್ಚ ಖಾದಂತಿ ಶರೀರಾಣಿ ದುರಾತ್ಮನಾಂ ॥೩೫॥

---

ಓ ಜನಮೇಜಯರಾಜನೇ, ಹೀಗೆ ಆ ದೇವೀ—ದುರ್ಮುಖರಿಗೆ ಅಲ್ಲಿ ಪರಸ್ಪರ ವಾಗಿ ತುಮುಲಯುದ್ಧವು ಶರಗಳಿಂದಲೂ ಶಕ್ತ್ಯಾಯುಧಗಳಿಂದಲೂ ಗದಾಪ್ರಹಾರ ಗಳಿಂದಲೂ ಮುಸಲಾಯುಧಗಳಿಂದಲೂ ಮತ್ತು ತೋಮರಾಯುಧಗಳಿಂದಲೂ ಭಯಂಕರವಾಗಿ ನಡೆಯಿತು. ||೩೧||

ಮತ್ತು ಆ ರಣಭೂಮಿಯಲ್ಲಿ ಆಗ ರಕ್ತದ ಪ್ರವಾಹದಿಂದ ಒಂದು ನದಿಯೇ ಹರಿಯಿತು. ಆ ನದಿಯ ತೀರದಲ್ಲಿ ಬಿದ್ದ ಸೈನಿಕರ ತಲೆಗಳು ಹೀಗೆ ಕಾಣುತ್ತಿದ್ದವು.||೩೨||

ಹೇಗೆಂದರೆ, ವೈತರಣೀನದಿಯನ್ನು ಈಜಿ ದಾಟುವುದನ್ನು ಕಲಿಯಲು ಹೊಸದಾಗಿ ಶಿಕ್ಷಣದಲ್ಲಿ ನಿರತರಾಗಿದ್ದ ಯಮಭಟರ ಮುಂದಾಳುಗಳು ತಂದಿರುವ ಸೋರೆಬುರುಡೆಗಳಂತೆ ಆ ರುಂಡಗಳು ಕಾಣಬರುತ್ತಿದ್ದುವು. ||೩೩||

ಮತ್ತು ಆಗ ಆ ರಣಭೂಮಿಯು ಸತ್ತು ಬಿದ್ದಿರತಕ್ಕ, ನಾಯಿ-ನರಿ ಮೊದ ಲಾದವುಗಳಿಂದ ಕಿತ್ತು ತಿನ್ನಲ್ಪಡುತ್ತಲಿರುವ, ವೀರರ ಶರೀರಗಳಿಂದ ಭಯಂಕರವೂ ತಿರುಗಾಡುವುದಕ್ಕೆ ಅಶಕ್ಯಕವಾದುದೂ ಆಯಿತು. ||೩೪||

ನರಿ, ನಾಯಿ, ಕಾಗೆ, ರಣಹದ್ದು, ಗೃಧ್ರ, ಬಕ, ಅಯೋಮುಖ, ಗಿಡುಗ ಮುಂತಾದ ಮೃಗಪಕ್ಷಿಗಳು ದುಷ್ಟರಾದ ಆ ರಾಕ್ಷಸರ ಮೃತಶರೀರಗಳನ್ನು ಕಿತ್ತು ಕಿತ್ತು ತಿನ್ನುತ್ತವೆ. ||೩೫||

ವವೌ ವಾಯುಶ್ಚ ದುರ್ಗಂಧೋ ಮೃತಾನಾಂ ದೇಹಸಂಗತಃ ।
ಅಭೂತ್ಕಿಲಕಿಲಾಶಬ್ದಃ ಖಗಾನಾಂ ಪಲಭಕ್ಷಿಣಾಂ ॥೩೬॥

ತದಾ ಚುಕೋಪ ದುಷ್ಟಾತ್ಮಾ ದುರ್ಮುಖಃ ಕಾಲಮೋಹಿತಃ ।
ದೇವೀಮುವಾಚ ಗರ್ವೇಣ ಕೃತ್ವಾ ಚೋರ್ಧ್ವಂ ಕರಂ ಶುಭಂ ॥೩೭॥

ಗಚ್ಛ ಚಂಡಿ ಹನಿಷ್ಯಾಮಿ ತ್ವಾಮದ್ಯೈವ ಸುಬಾಲಿಶೇ ।
ದೈತ್ಯಂ ವಾ ಭಜ ವಾಮೋರು ಮಹಿಷಂ ಮದಗರ್ವಿತಂ ॥೩೮॥

॥ ದೇವ್ಯುವಾಚ ॥

ಆಸನ್ನಮರಣಃ ಕಾಮಂ ಪ್ರಲಪಸ್ಯದ್ಯ ಮೋಹಿತಃ ।
ಅದ್ಯೈವ ತ್ವಾಂ ಹನಿಷ್ಯಾಮಿ ಯಥಾಽಯಂ ಬಾಷ್ಕಲೋ ಹತಃ ॥೩೯॥

---

ಸತ್ತವರ ಕೊಳೆತ ದೇಹಗಳ ಸಂಬಂಧದಿಂದ ಗಾಳಿಯು ದುರ್ಗಂಧಪೂರಿತವಾದುದಾಗಿ ಬೀಸಿತು. ಶರೀರದ ಮಾಂಸವನ್ನು ತಿನ್ನುವ ಹದ್ದು ಮೊದಲಾದ ಪಕ್ಷಿಗಳ ಕಿಲಕಿಲಶಬ್ದವೂ ತುಂಬ ಹೆಚ್ಚಾಗಿ ಆಯಿತು. ॥೩೬॥

ಆಗ ದುರಾತ್ಮನಾದ ದುರ್ಮುಖನು ಸಮೀಪವಾಗಿದ್ದ ತನ್ನ ಮರಣಕಾಲದಿಂದ ಮೋಹಗೊಳಿಸಲ್ಪಟ್ಟವನಾಗಿ ತುಂಬ ಕೋಪಗೊಂಡು, ದೇವಿಯನ್ನು ಕುರಿತು ಹೆಚ್ಚಿದ ಗರ್ವದಿಂದ ಧಷ್ಟಪುಷ್ಟವಾದ ತನ್ನ ದಕ್ಷಿಣ ಹಸ್ತವನ್ನು ಮೇಲಕ್ಕೆತ್ತಿಕೊಂಡು ಹೀಗೆ ಹೇಳಿದನು. ॥೩೭॥

ಹೋಗು, ಎಲೌ ಚಂಡಿಕೆಯೇ, ಮೂರ್ಖಳೇ, ನಿನ್ನನ್ನು ನಾನೀಗಲೇ ಕೊಲ್ಲುವೆನು. ಇಲ್ಲದಿದ್ದರೆ, ಎಲೈ ಸುಂದರವಾದ ತೊಡೆಗಳುಳ್ಳ ದೇವಿಯೇ, ಮದದಿಂದ ಕೊಬ್ಬಿದ ನನ್ನೊಡೆಯ ಮಹಿಷಾಸುರನನ್ನು ವರಿಸು. ॥೩೮॥

ದೇವಿಯು ಹೇಳಿದಳು—ಎಲೈ ದೈತ್ಯನೇ, ನಿನಗೆ ಮೃತ್ಯುವು ಸಮೀಪಿಸುತ್ತಲಿದೆ. ಆದುದರಿಂದಲೇ, ತಿಳಿವಳಿಕೆಯಿಲ್ಲದೆ ಮನಬಂದಂತೆ ಹರಟುತ್ತಿರುವೆ-- ಈಗಲೇ ನಾನು ಬಾಷ್ಕಲನನ್ನು ಕೊಂದಂತೆ, ನಿನ್ನನ್ನೂ ಸಂಹರಿಸುವೆನು. ॥೩೯॥

ಗಚ್ಛ ವಾ ತಿಷ್ಠ ವಾ ಮಂದ ಮರಣಂ ಯದಿ ರೋಚತೇ ।
ಹತ್ವಾ ತ್ವಾಂ ವೈ ವಧಿಷ್ಯಾಮಿ ಬಾಲಿಶಂ ಮಹಿಷೀಸುತಂ ॥೪೦॥

ತಚ್ಛ್ರುತ್ವಾ ವಚನಂ ತಸ್ಯಾ ದುರ್ಮುಖೋ ಮರ್ತುಮುದ್ಯತಃ ।
ಮುಮೋಚ ಬಾಣವೃಷ್ಟಿಂ ತು ಚಂಡಿಕಾಂ ಪ್ರತಿ ದಾರುಣಾಂ ॥೪೧॥

ಸಾಽಪಿ ತಾಂ ತರಸಾ ಛಿತ್ವಾ ಬಾಣವೃಷ್ಟಿಂ ಶಿತೈಃ ಶರೈಃ ।
ಜಘಾನ ದಾನವಂ ಕ್ರುದ್ಧಾ ವೃತ್ರಂ ವಜ್ರಧರೋ ಯಥಾ ॥೪೨॥

ತಯೋಃ ಪರಸ್ಪರಂ ಯುದ್ಧಂ ಸಂಜಾತಂ ಚಾತಿಕರ್ಕಶಂ ।
ಭಯದಂ ಕಾತರಾಣಾಂ ಚ ಶೂರಾಣಾಂ ಬಲವರ್ಧನಂ ॥೪೩॥

ದೇವೀ ಚಿಚ್ಛೇದ ತರಸಾ ಧನುಸ್ತಸ್ಯ ಕರೇ ಸ್ಥಿತಂ ।
ತಥೈವ ಪಂಚಭಿರ್ಬಾಣೈರ್ಬಭಂಜ ರಥಮುತ್ತಮಂ ॥೪೪॥

---

ಎಲೈ ದುರ್ಮುಖನೇ, ಬದುಕಬೇಕೆಂದಿದ್ದರೆ ಇಲ್ಲಿಂದ ಹಿಂತಿರುಗಿ ಹೊರಟು ಹೋಗು. ಅಥವಾ ಸಾಯಬೇಕೆಂದಿದ್ದರೆ ನಿಲ್ಲು. ನಿನ್ನನ್ನು ಕೊಂದು, ಎಮ್ಮೆಯ ಮಗನಾದ ಕೋಣನಂತಿರುವ ಮೂರ್ಖನಾದ ಆ ಮಹಿಷನನ್ನೂ ಕೊಲ್ಲುವೆನು. ॥೪೦॥

ದೇವಿಯ ಆ ಮಾತುಗಳನ್ನು ಕೇಳಿ ಸಾಯಲು ಸಿದ್ಧನಾಗಿದ್ದ ಆ ದುರ್ಮುಖನು ಚಂಡಿಕೆಯ ಮೇಲೆ ಕ್ರೂರವಾದ ಬಾಣಗಳ ಮಳೆಯನ್ನು ಸುರಿಸಿದನು ॥೪೧॥

ಆಗ ದೇವಿಯೂ ಕೂಡ ದುರ್ಮುಖನ ಆ ಬಾಣಗಳನ್ನು ತನ್ನ ಹರಿತವಾದ ಶರಗಳಿಂದ ಕತ್ತರಿಸಿ, ತಿರುಗಿ ಅವನನ್ನು ಬಾಣಗಳಿಂದ, ವಜ್ರಾಯುಧಧರನಾದ ಇಂದ್ರನು ವೃತ್ರನನ್ನು ಪ್ರಹರಿಸಿದಂತೆ, ಹೊಡೆದಳು. ॥೪೨॥

ಹೀಗೆ ಆ ದೇವೀ-ದುರ್ಮುಖರಿಗೆ ಪರಸ್ಪರವಾಗಿ, ಹೇಡಿಗಳಿಗೆ ಭಯವನ್ನುಂಟುಮಾಡುವಂತಹ ಮತ್ತು ಶೂರರಿಗೆ ಬಲವನ್ನು ಹೆಚ್ಚಿಸುವಂತಹ, ಯುದ್ಧವು ತುಂಬ ಭಯಂಕರವಾಗಿ ನಡೆಯಿತು. ॥೪೩॥

ಆಗ ದೇವಿಯು ತ್ವರೆಯಿಂದ ಆ ದುರ್ಮುಖನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದಳು. ಮತ್ತು ಐದು ಬಾಣಗಳಿಂದ ಅವನ ಶ್ರೇಷ್ಠವಾದ ರಥವನ್ನೂ ಚೂರುಚೂರು ಮಾಡಿದಳು. ॥೪೪॥

ರಥೇ ಭಗ್ನೇ ಮಹಾಬಾಹುಃ ಪದಾತಿರ್ದುರ್ಮುಖಸ್ತದಾ ।
ಗದಾಂ ಗೃಹೀತ್ವಾ ದುರ್ಧರ್ಷಾಂ ಜಗಾಮ ಚಂಡಿಕಾಂ ಪ್ರತಿ ॥೪೫॥

ಚಕಾರ ಸ ಗದಾಘಾತಂ ಸಿಂಹಮೌಲೌ ಮಹಾಬಲಾತ್ ।
ನ ಚಚಾಲ ಹರಿಃ ಸ್ಥಾನಾತ್ತಾಡಿತೋಽಪಿ ಮಹಾಬಲಃ ॥೪೬॥

ಅಂಬಿಕಾ ತಂ ಸಮಾಲೋಕ್ಯ ಗದಾಪಾಣಿಂ ಪುರಃ ಸ್ಥಿತಂ ।
ಖಡ್ಗೇನ ಶಿತಧಾರೇಣ ಶಿರಶ್ಚಿಚ್ಛೇದ ಮೌಲಿಮತ್ ॥೪೭॥

ಛಿನ್ನೇ ಚ ಮಸ್ತಕೇ ಭೂಮೌ ಪಪಾತ ದುರ್ಮುಖೋ ಮೃತಃ ।
ಜಯಶಬ್ದಂ ತದಾ ಚಕ್ರುರ್ಮುದಿತಾ ನಿರ್ಜರಾ ಭೃಶಂ ॥೪೮॥

ತುಷ್ಟುವುಸ್ತಾಂ ತದಾ ದೇವೀಂ ದುರ್ಮುಖೇ ನಿಹತೇಽಸುರಾಃ ।
ಪುಷ್ಪವೃಷ್ಟಿಂ ತಥಾ ಚಕ್ರುರ್ಜಯಶಬ್ದಂ ನಭಸ್ಸ್ಥಿತಾಃ ॥೪೯॥

---

ಹೀಗೆ ತನ್ನ ರಥವು ಭಗ್ನವಾಗಲು, ದುರ್ಮುಖನು ಆಗ ಕಾಲುನಡಿಗೆ ಯಲ್ಲಿಯೇ ಸಹಿಸಲಶಕ್ಯವಾದ ತನ್ನ ಗದೆಯನ್ನು ಹಿಡಿದುಕೊಂಡು ಚಂಡಿಕೆಯನ್ನು ಹೊಡೆಯಲು ಎದುರಾಗಿ ಬಂದನು. ॥೪೫॥

ಮುಂದೆ ಬಂದು ಅವನು ದೇವಿಯ ವಾಹನವಾದ ಸಿಂಹದ ಶಿರಸ್ಸಿನಲ್ಲಿ ತುಂಬ ಬಲವಾದ ಗದೆಯ ಪ್ರಹಾರವನ್ನು ಮಾಡಿದನು. ಹೀಗೆ ಗದೆಯಿಂದ ಹೊಡೆಯಲ್ಪಟ್ಟರೂ ತುಂಬ ಬಲಿಷ್ಠವಾಗಿದ್ದುದರಿಂದ ಏಟನ್ನು ಲೆಕ್ಕಿಸದ ಆ ಸಿಂಹವು ತಾನಿದ್ದ ಸ್ಥಾನದಿಂದ ಚಲಿಸಲೇ ಇಲ್ಲವು. ॥೪೬॥

ಆಗ ಅಂಬಿಕೆಯು ಎದುರಿನಲ್ಲಿ ಗದೆಯನ್ನು ಹಿಡಿದು ನಿಂತಿರುವ ಆ ದುರ್ಮುಖನ ಸಮೀಪಕ್ಕೆ ಬಂದು ತನ್ನ ಹರಿತವಾದ ಧಾರೆಯುಳ್ಳ ಖಡ್ಗದಿಂದ ಅವನ ಕಿರೀಟ ಯುಕ್ತವಾದ ಶಿರಸ್ಸನ್ನು ಕತ್ತರಿಸಿದಳು. ॥೪೭॥

ಹೀಗೆ ಶಿರಸ್ಸು ಕತ್ತರಿಸಲ್ಪಡಲು ದುರ್ಮುಖನು ಗತಪ್ರಾಣನಾಗಿ ಭೂಮಿ ಯಲ್ಲಿ ಬಿದ್ದನು. ಆಗ ಆಕಾಶದಲ್ಲಿದ್ದ ದೇವತೆಗಳು ಸಂತುಷ್ಟರಾಗಿ ಗಟ್ಟಿಯಾಗಿ ದೇವಿ ಯನ್ನು ಕುರಿತು ಜಯಘೋಷವನ್ನು ಮಾಡಿದರು. ॥೪೮॥

ಮತ್ತು ಆ ದೇವತೆಗಳು, ಹೀಗೆ ದುರ್ಮುಖನು ಹತನಾಗಲು, ಆಗ ದೇವಿ ಯನ್ನು ಸ್ತೋತ್ರಮಾಡಿದರು. ಅಲ್ಲದೆ ಆಕಾಶದಲ್ಲಿದ್ದ ಅವರು ದೇವಿಯ ಮೇಲೆ

ಋಷಯಃ ಸಿದ್ಧಗಂಧರ್ವಾಃ ಸವಿದ್ಯಾಧರಕಿನ್ನರಾಃ ।
ಜಹೃಷುಸ್ತಂ ಹತಂ ದೃಷ್ಟ್ವಾ ದಾನವಂ ರಣಮಸ್ತಕೇ ॥೫೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ತ್ರಯೋದಶೋಽಧ್ಯಾಯಃ.

---

ಹೂವುಗಳ ಮಳೆಯನ್ನು ಸುರಿಸಿದರು. ಹಾಗೂ ಜಯಧ್ವನಿಯನ್ನೂ ಮಾಡಿದರು. ||೪೯||

ಹಾಗೆಯೇ ಋಷಿಗಳು, ಸಿದ್ಧರು, ಗಂಧರ್ವರು, ವಿದ್ಯಾಧರರು, ಕಿನ್ನರರು ಇವರೆಲ್ಲರೂ ರಣಭೂಮಿಯ ಮುಂಭಾಗದಲ್ಲಿ ಹತನಾಗಿ ಬಿದ್ದಿರುವ ಆ ದುರ್ಮುಖಾಸುರನನ್ನು ನೋಡಿ ತುಂಬ ಸಂತೋಷಗೊಂಡರು. ||೫೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### ॥ ಚತುರ್ದಶೋಽಧ್ಯಾಯಃ ॥

### ಹದಿನಾಲ್ಕನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ದುರ್ಮುಖಂ ನಿಹತಂ ಶ್ರುತ್ವಾ ಮಹಿಷಃ ಕ್ರೋಧಮೂರ್ಛಿತಃ ।**
**ಉವಾಚ ದಾನವಾನ್ಸರ್ವಾನ್ ಕಿಂ ಜಾತಮಿತಿ ಚಾಸಕೃತ್ ॥೧॥**

**ನಿಹತೌ ದಾನವೌ ಶೂರೌ ರಣೇ ದುರ್ಮುಖಬಾಷ್ಕಲೌ ।**
**ತನ್ವ್ಯಾ ತತ್ಪರಮಾಶ್ಚರ್ಯಂ ಪಶ್ಯಂತು ದೈವಚೇಷ್ಟಿತಂ ॥೨॥**

**ಕಾಲೋ ಹಿ ಬಲವಾನ್ಕರ್ತಾ ಸತತಂ ಸುಖದುಃಖಯೋಃ ।**
**ನರಾಣಾಂ ಪರತಂತ್ರಾಣಾಂ ಪುಣ್ಯಪಾಪಾನುಯೋಗತಃ ॥೩॥**

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ ಕೇಳು. ದುರ್ಮುಖನು ದೇವಿಯಿಂದ ಹತನಾದನೆಂದು ಚಾರರಿಂದ ಕೇಳಿ ತುಂಬ ಕೋಪದಿಂದ ನಷ್ಟವಾದ ವಿವೇಕವುಳ್ಳವನಾಗಿ ಆ ಮಹಿಷಾಸುರನು ಎಲ್ಲ ರಾಕ್ಷಸರನ್ನೂ ಕುರಿತು ಇದೇನಾಯಿತು ! ಎಂದು ಬಾರಿಬಾರಿಗೂ ಕೇಳಿದನು. ॥೧॥

ಎಲೈ ರಾಕ್ಷಸರೇ, ಶೂರರಾದ ಬಾಷ್ಕಲದುರ್ಮುಖರು ಯುದ್ಧದಲ್ಲಿ ಓರ್ವ ಸ್ತ್ರೀಯಿಂದ ಹತರಾದರು ! ನೋಡಿ, ಇದು ತುಂಬ ಆಶ್ಚರ್ಯಕರವಾದುದು. ಇದು ನಮ್ಮ ದುರ್ದೈವದ ವ್ಯಾಪಾರವೇ ವಿನಾ ಮತ್ತೇನೂ ಅಲ್ಲವು. ಏಕೆಂದರೆ, ॥೨॥

ಪ್ರತಿಯೊಬ್ಬರಿಗೂ ಅವರವರ ಕರ್ಮವು ಫಲವನ್ನು ಕೊಡುವ ಕಾಲವು ತುಂಬ ಬಲಿಷ್ಠವಾದುದು. ಅದೇ ಯಾವಾಗಲೂ ಪರಾಧೀನರಾದ ಮನುಷ್ಯರಿಗೆ ಅವರವರ ಪುಣ್ಯ ಮತ್ತು ಪಾಪಗಳಿಗನುಸಾರವಾಗಿ ಸುಖದುಃಖಗಳನ್ನು ಒದಗಿಸಿಕೊಡುತ್ತಿರುವುದು. ॥೩॥

ನಿಹತೌ ದಾನವಶ್ರೇಷ್ಠೌ ಕಿಂ ಕರ್ತವ್ಯಮತಃ ಪರಂ ।
ಬ್ರುವಂತು ಮಿಲಿತಾಃ ಸರ್ವೇ ಯದ್ಯುಕ್ತಂ ಕಾರ್ಯಸಂಕಟೇ ॥೪॥

॥ ವ್ಯಾಸ ಉವಾಚ ॥

ಏವಂ ಬ್ರುವತಿ ರಾಜೇಂದ್ರೇ ಮಹಿಷೇಽತಿಬಲಾನ್ವಿತೇ ।
ಚಿಕ್ಷುರಾಖ್ಯಸ್ತು ಸೇನಾನೀಸ್ತಮುವಾಚ ಮಹಾರಥಃ ॥೫॥

ರಾಜನ್ನಹಂ ಹನಿಷ್ಯಾಮಿ ಕಾ ಚಿಂತಾ ಸ್ತ್ರೀವಿಹಿಂಸನೇ ।
ಇತ್ಯುಕ್ತ್ವಾ ಸ್ವಬಲೈರ್ಯುಕ್ತಃ ಪ್ರಯಯೌ ರಥಸಂಯುತಃ ॥೬॥

ದ್ವಿತೀಯಂ ಪಾರ್ಷ್ಣಿರಕ್ಷಂ ತು ಕೃತ್ವಾ ತಾಮ್ರಂ ಮಹಾಬಲಂ ।
ಮಹತಾ ಸೈನ್ಯಘೋಷೇಣ ಪೂರಯನ್ ಗಗನಂ ದಿಶಃ ॥೭॥

ತಮಾಽಽಗಚ್ಛಂತಮಾಲೋಕ್ಯ ದೇವೀ ಭಗವತೀ ಶಿವಾ ।
ಚಕಾರ ಶಂಖಜ್ಯಾಘೋಷಂ ಘಂಟಾನಾದಂ ಮಹಾದ್ಭುತಂ ॥೮॥

---

ಶೂರರೂ ದೈತ್ಯಶ್ರೇಷ್ಠರೂ ಆದ ಬಾಷ್ಕಲದುರ್ಮುಖರು ಹತರಾದರು! ಇನ್ನು ಮುಂದೆ ನಾವೇನನ್ನು ಮಾಡಬೇಕು? ಇಲ್ಲಿ ಸೇರಿರುವ ನೀವೆಲ್ಲರೂ ಈ ಇಕ್ಕಟ್ಟಿನ ಸಮಯದಲ್ಲಿ ಯಾವುದು ಯೋಗ್ಯವಾದುದೋ ಅದನ್ನು ಹೇಳಿರಿ. ॥೪॥

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯರಾಜನೇ, ಹೀಗೆ ತುಂಬ ಬಲಿಷ್ಠನಾದ ಮಹಿಷಾಸುರನು ಹೇಳುತ್ತಿರಲು, ಮಹಾವೀರನೂ ಸೈನ್ಯಾಧಿಪತಿಯೂ ಆದ ಚಿಕ್ಷುರನೆಂಬ ದೈತ್ಯನು ಆ ಮಹಿಷನನ್ನು ಕುರಿತು ಹೀಗೆ ಹೇಳಿದನು. ॥೫॥

ಓ ರಾಜನೇ, ಆ ಸ್ತ್ರೀಯನ್ನು ನಾನು ಕೊಲ್ಲುವೆನು. ಓರ್ವ ಸ್ತ್ರೀಯನ್ನು ಕೊಲ್ಲುವುದರಲ್ಲಿ ಆತಂಕದ ಆಲೋಚನೆಯೇನು? ಹೀಗೆಂದು ಹೇಳಿ ಆ ಚಿಕ್ಷುರನು ತನ್ನ ಸೈನ್ಯದಿಂದೊಡಗೂಡಿ ರಥವೇರಿ, ದೇವಿಯಿದ್ದೆಡೆಗೆ ಹೊರಟನು. ॥೬॥

ಅವನು ಎಡಬಲಗಳನ್ನು ರಕ್ಷಿಸುವುದಕ್ಕಾಗಿ ತಾಮ್ರನೆಂಬ ಬಲಿಷ್ಠನಾದ ಅಸುರನನ್ನು ನಿಯೋಜಿಸಿಕೊಂಡು ದೊಡ್ಡದಾದ ಸೈನ್ಯದ ವೀರಘೋಷಗಳಿಂದ ದಿಗಂತರಗಳನ್ನೆಲ್ಲವನ್ನೂ ತುಂಬುತ್ತಾ ಹೊರಟನು. ॥೭॥

ಸರ್ವಸಮರ್ಥಳೂ, ತೇಜೋರೂಪಳೂ ಮತ್ತು ಮಂಗಳಸ್ವರೂಪಳೂ ಆದ ದೇವಿಯು, ಆ ಚಿಕ್ಷುರನು ಸೈನ್ಯದೊಡನೆ ಬರುತ್ತಿರುವುದನ್ನು ನೋಡಿ ತುಂಬ

ತತ್ರಸುಸ್ತೇನ ಶಬ್ದೇನ ತೇ ಚ ಸರ್ವೇ ಸುರಾರಯಃ ।
ಕಿಮೇತದಿತಿ ಭಾಷಂತೋ ದುದ್ರುವುರ್ಭಯಕಂಪಿತಾಃ ॥೯॥

ಚಿಕ್ಷುರಾಖ್ಯಸ್ತು ತಾನ್ದೃಷ್ಟ್ವಾ ಪಲಾಯನಪರಾಯಣಾನ್ ।
ಉವಾಚಾತೀವ ಸಂಕ್ರುದ್ಧಃ ಕಿಂ ಭಯಂ ವಃ ಸಮಾಗತಂ ॥೧೦॥

ಅದ್ಯೈವಾಹಂ ಹನಿಷ್ಯಾಮಿ ಬಾಣೈರ್ಬಾಲಾಂ ಮದೋನ್ನತಾಂ ।
ತಿಷ್ಠಂತ್ವತ್ರ ಭಯಂ ತ್ಯಕ್ತ್ವಾ ದೈತ್ಯಾಃ ಸಮರಮೂರ್ಧನಿ ॥೧೧॥

ಇತ್ಯುಕ್ತ್ವಾ ದಾನವಶ್ರೇಷ್ಠಶ್ಚಾಪಪಾಣಿರ್ಬಲಾನ್ವಿತಃ ।
ಆಗತ್ಯ ಸಂಗರೇ ದೇವೀಮಿತ್ಯುವಾಚ ಗತವ್ಯಥಃ ॥೧೨॥

ಕಿಂ ಗರ್ಜಸಿ ವಿಶಾಲಾಕ್ಷಿ ಭೀಷಯನ್ಕಾತರಾನ್ನರಾನ್ ।
ನಾಹಂ ಬಿಭೇಮಿ ತನ್ವಂಗಿ ಶ್ರುತ್ವಾ ತೇಽದ್ಯ ವಿಚೇಷ್ಟಿತಂ ॥೧೩॥

---

ಅದ್ಭುತವಾಗಿ ಶಂಖಧ್ವನಿಯನ್ನೂ ಧನುಷ್ಟಂಕಾರವನ್ನೂ ಘಂಟಾಧ್ವನಿಯನ್ನೂ ಮಾಡಿದಳು. ||೮||

ಆ ಶಬ್ದಗಳಿಂದ ಅಲ್ಲಿದ್ದ ದೈತ್ಯರೆಲ್ಲರೂ ಹೆದರಿಕೊಂಡರು. ಮತ್ತು ತುಂಬ ನಡುಗುತ್ತ, ಇದೇನು, ಎಂದು ಹೇಳುವವರಾಗಿ ಪಲಾಯನ ಮಾಡತೊಡಗಿದರು. ||೯||

ಓಡಿಹೋಗುತ್ತಲಿರುವ ಆ ರಾಕ್ಷಸರನ್ನು ನೋಡಿ ಚಿಕ್ಷುರನೆಂಬ ಆ ಸೇನಾ ಪತಿಯು ತುಂಬ ಕೋಪಗೊಂಡವನಾಗಿ ಹೀಗೆ ಹೇಳಿದನು—ಎಲೈ ದೈತ್ಯರೇ, ನಿಮಗೆ ಇದೇಕೆ ಹೀಗೆ ಭಯವುಂಟಾಗಿರುತ್ತದೆ ? ||೧೦||

ಈಗಲೇ ನಾನು ಮದದಿಂದ ಅಮಲೇರಿರುವ ಈ ಸ್ತ್ರೀಯನ್ನು ಬಾಣಗಳಿಂದ ಕೊಲ್ಲುವೆನು. ಆದುದರಿಂದ ನೀವು ಹೆದರಿಕೆಯನ್ನು ಬಿಟ್ಟು ಈ ರಣಾಗ್ರಭೂಮಿ ಯಲ್ಲಿ ಸಿದ್ಧರಾಗಿರಿ. ||೧೧||

ದೈತ್ಯಶ್ರೇಷ್ಠನಾದ ಆ ಚಿಕ್ಷುರನು ಹೀಗೆ ಹೇಳಿ ಧನುಸ್ಸನ್ನು ಹಿಡಿದುಕೊಂಡು ತನ್ನ ಸೈನ್ಯದೊಡನೆ ಬಂದು ದೇವಿಯನ್ನು ಕುರಿತು ನಿರ್ಯೋಚನೆಯ ಧೈರ್ಯದಿಂದ ಹೀಗೆ ಹೇಳಿದನು. ||೧೨||

ಅಗಲವಾದ ಕಣ್ಣುಗಳುಳ್ಳ, ಓ ಚಂಡಿಕೆಯೇ, ಸಾಮಾನ್ಯರಾದ ಇತರ ಹೇಡಿ ಗಳಾದ ಜನರನ್ನು ಹೆದರಿಸುವಂತಹ ಈ ಗರ್ಜನೆಯನ್ನು ಏಕೆ ಮಾಡುವೆ ? ಕೃಶ

ಸ್ತ್ರೀವಧೇ ದೂಷಣಂ ಜ್ಞಾತ್ವಾ ತಥೈವಾಽಕೀರ್ತಿಸಂಭವಂ ।
ಉಪೇಕ್ಷಾಂ ಕುರುತೇ ಚಿತ್ತಂ ಮದೀಯಂ ವಾಮಲೋಚನೇ ॥೧೪॥

ಸ್ತ್ರೀಣಾಂ ಯುದ್ಧಂ ಕಟಾಕ್ಷೈಶ್ಚ ತಥಾ ಹಾವೈಶ್ಚ ಸುಂದರಿ ।
ನ ಶಸ್ತ್ರೈರ್ವಿಹಿತಂ ಕ್ವಾಪಿ ತ್ವಾದೃಶೀನಾಂ ಕದಾಚನ ॥೧೫॥

ಪುಷ್ಪೈರಪಿ ನ ಯೋದ್ಧವ್ಯಂ ಕಿಂ ಪುನರ್ನಿಶಿತೈಃಶರೈಃ ।
ಭವಾದೃಶೀನಾಂ ದೇಹೇಷು ದುನೋತಿ ಮಾಲತೀದಲಂ ॥೧೬॥

ಧಿಗ್ಜನ್ಮ ಮಾನುಷೇ ಲೋಕೇ ಕ್ಷಾತ್ರಧರ್ಮಾನುಜೀವಿನಾಂ ।
ಲಾಲಿತೋಽಯಂ ಪ್ರಿಯೋ ದೇಹಃ ಕೃಂತನೀಯಃ ಶಿತೈಃ ಶರೈಃ ॥೧೭॥

---

ವಾದ ಶರೀರವುಳ್ಳ ಎಲೈ ದೇವಿಯೇ, ನಾನು ನಿನ್ನ ಈ ಗರ್ಜನೆಯ ವ್ಯಾಪಾರವನ್ನು ಕೇಳಿ ಹೆದರತಕ್ಕವನಲ್ಲವು. ॥೧೩॥

ಆದರೆ ಸ್ತ್ರೀವಧೆಯು ಪಾಪಕರವಾದುದು, ಅದನ್ನು ಮಾಡಿದರೆ ಹಾಗೆಯೇ ತುಂಬ ಅಪಯಶಸ್ಸೂ ಬರುತ್ತದೆ, ಎಂದು ತಿಳಿದು ನನ್ನ ಮನಸ್ಸು, ಸುಂದರವಾದ ನಯನಗಳುಳ್ಳ ಓ ಸುಂದರಿಯೇ, ನಿನ್ನನ್ನು ಕೊಲ್ಲುವ ವಿಷಯದಲ್ಲಿ ಉದಾಸೀನ ಭಾವವನ್ನು ತಾಳುತ್ತಲಿದೆ. ॥೧೪॥

ಮತ್ತು ಎಲೌ ಸುಂದರಿಯೇ, ನಿನ್ನಂತಹ ಸ್ತ್ರೀಯರಿಗೆ ಯುದ್ಧವು ಮನೋಹರ ವಾದ ನೋಟಗಳಿಂದಲೂ ವಿಭ್ರಮವಿಲಾಸಗಳಿಂದಲೂ ಆಗತಕ್ಕದು. ಆದರೆ ಈ ಕ್ರೂರವಾದ ಶಸ್ತ್ರಗಳಿಂದ ಯುದ್ಧವು ವಿಶೇಷವಾಗಿ ನಿನ್ನಂತಹ ಸುಂದರಿಯರಿಗೆ ಎಲ್ಲೂ ವಿಹಿತವಾಗಿರುವುದಿಲ್ಲವು ಮತ್ತು ಒಪ್ಪುವುದಿಲ್ಲವು. ॥೧೫॥

ಹೂವುಗಳಿಂದಲೂ ಸಹ ನಿನ್ನಂತಹ ಸ್ತ್ರೀಯರೊಡನೆ ಯುದ್ಧವನ್ನು ಮಾಡ ಕೂಡದು. ಇನ್ನು ಹರಿತವಾದ ಬಾಣಗಳಿಂದ ಯುದ್ಧಮಾಡುವುದೆಂದರೇನು ? ನಿನ್ನಂತಹ ಸುಂದರಿಯರ ಮೃದುವಾದ ಶರೀರವನ್ನು ಮಾಲತೀಪುಷ್ಪವೂ ಸಹ ನೋವನ್ನುಂಟುಮಾಡುತ್ತದೆ! ಆದುದರಿಂದ ॥೧೬॥

ಮನುಷ್ಯಲೋಕದಲ್ಲಿ ಕ್ಷತ್ರಿಯ ಧರ್ಮವನ್ನು ಅನುಸರಿಸಿ ಜೀವಿಸುವವರ ಜನ್ಮಕ್ಕೆ ನಿಂದೆಯಿರಲಿ ! ಏಕೆಂದರೆ, ಅಂಥವರಲ್ಲಿ ಒಬ್ಬನಾಗಿರುವ ನಾನು ಆ ಧರ್ಮವನ್ನು ಅನುಸರಿಸಿದುದರ ಫಲವಾಗಿ ಈಗ ಪ್ರೀತಿಯಿಂದ ಪೋಷಿಸಿ ಕೋಮಲವಾಗಿ ಬೆಳದಿ

**ತೈಲಾಭ್ಯಂಗೈಃ ಪುಷ್ಪವಾತೈಸ್ತಥಾ ಮಿಷ್ಟಾನ್ನಭೋಜನೈಃ ।**
**ಪೋಷಿತೋಽಯಂ ಪ್ರಿಯೋ ದೇಹೋ ಘಾತನೀಯಃ ಪರೇಷುಭಿಃ ॥೧೮॥**

**ದೇಹಂ ಛಿತ್ವಾಽಸಿಧಾರಾಭಿರ್ಧನಭೃಜ್ಜಾಯತೇ ನರಃ ।**
**ಧಿಗ್ಧನಂ ದುಃಖದಂ ಪೂರ್ವಂ ಪಶ್ಚಾತ್ಕಿಂ ಸುಖದಂ ಭವೇತ್ ॥೧೯॥**

**ತ್ವಮುಪ್ಯಜ್ಞ್ಯೈವ ವಾಮೋರು ಯುದ್ಧಮಾಕಾಂಕ್ಷಸೇ ಯತಃ ।**
**ಸುಖಂ ಸಂಭೋಗಜಂ ತ್ಯಕ್ತ್ವಾ ಕಂ ಗುಣಂ ವೇತ್ಸಿ ಸಂಗರೇ ॥೨೦॥**

**ಖಡ್ಗಪಾತಂ ಗದಾಘಾತಂ ಭೇದನಂ ಚ ಶಿಲೀಮುಖೈಃ ।**
**ಮರಣಾಂತೇ ತು ಸಂಸ್ಕಾರೋ ಗೋಮಾಯುಮುಖಕರ್ಷಣಂ ॥೨೧॥**

---

ರುವ ಈ ನಿನ್ನ ಶರೀರವನ್ನು ಕಠಿನವೂ ಹರಿತವೂ ಆದ ಬಾಣಗಳಿಂದ ಕತ್ತರಿಸಬೇಕಾಗಿ ಬಂದಿದೆ! ||೧೭||

ಒಳ್ಳೆಯ ಪರಿಮಳವುಳ್ಳ ಎಣ್ಣೆಯ ಅಭ್ಯಂಜನದಿಂದಲೂ, ಹೂವಿನ ಪರಿಮಳವುಳ್ಳ ಗಾಳಿಯಿಂದಲೂ ಮೃಷ್ಟಾನ್ನದ ಭೋಜನಗಳಿಂದಲೂ ಪೋಷಿಸಲ್ಪಟ್ಟ ಪ್ರಿಯವಾದ ಈ ನಿನ್ನ ಶರೀರವು ಶತ್ರುಗಳ ಕೂರಂಬುಗಳಿಂದಾಗುವ ಹಿಂಸೆಗೆ ಗುರಿಯಾಗಬೇಕಾಗಿರುತ್ತದೆ! ||೧೮||

ಮನುಷ್ಯನು ಮೊದಲು ಇಂತಹ ಪ್ರಿಯವಾದ ಶರೀರವನ್ನು ಖಡ್ಗಧಾರೆಗಳಿಂದ ಕತ್ತರಿಸಿ ಧನವಂತನಾಗುತ್ತಾನೆ. ಎಂಬುದು ನಿಜವಾದರೂ ಹೀಗೆ ದುಃಖದಿಂದ ಬರುವ ಧನಕ್ಕೆ ನಿಂದೆಯಿರಲಿ. ಏಕೆಂದರೆ ಮೊದಲೂ ದಯೆಯಿಲ್ಲದ ಕ್ರೂರತನದಿಂದ ದುಃಖವನ್ನು ಕೊಡುವ ಆ ಸಂಪತ್ತು ಆಮೇಲೆಯೂ ಆ ಕ್ರೌರ್ಯದುಃಖಗಳ ನೆನಪಿನಿಂದ ಕೂಡಿರುವುದಾಗುವುದರಿಂದ ಸುಖವನ್ನು ಕೊಡಬಲ್ಲುದೇ ? ||೧೯||

ಸುಂದರವಾದ ತೊಡೆಗಳುಳ್ಳ ಎಲೈ ಸುಂದರಿಯೇ, ಹೀಗೆ ಯುದ್ಧದಲ್ಲಿ ಇಷ್ಟು ದುಃಖವಿದ್ದರೂ ಅದನ್ನೂ ಅಪೇಕ್ಷಿಸುವ ನಿನಗೂ ಏನೂ ತಿಳಿವಳಿಕೆಯಿಲ್ಲವು ಎಂದು ಹೇಳಬೇಕಾಗಿದೆ! ಏಕೆಂದರೆ, ರತಿಕ್ರೀಡೆಯಿಂದುಂಟಾಗುವ ಸುಖವನ್ನು ಬಿಟ್ಟು ಈ ಯುದ್ಧದಲ್ಲಿ ಅದಾವ ಗುಣವಿರುವುದೆಂದು ತಿಳಿದು ಅದನ್ನು ಅಪೇಕ್ಷಿಸುತ್ತಿರುವೆ ?||೨೦||

ಈ ಯುದ್ಧದಲ್ಲಿ ಪ್ರಾಣವಿರುವವರೆಗೂ ಕತ್ತಿಗಳ ಪ್ರಹಾರಗಳು, ಗದೆಗಳ ಹೊಡೆತಗಳು ಮತ್ತು ಹರಿತವಾದ ಬಾಣಗಳಿಂದ ಭೇದನವು, ಘೋರವಾದ ಗಾಯಗಳೂ ರಕ್ತಪಾತವೂ, ಸಹಿಸಲಾಗದಷ್ಟು ಯಾತನೆಯೂ, ಇವೆಲ್ಲವೂ ಆಗುತ್ತವೆ.

ತಸ್ಯೈವ ಕವಿಭಿರ್ಧೂರ್ತೈಃ ಕೃತಂ ಚಾತೀವ ಶಂಸನಂ ।
ರಣೇ ಮೃತಾನಾಂ ಸ್ವಃಪ್ರಾಪ್ತಿರರ್ಥವಾದೋಽಸ್ತಿ ಕೇವಲಃ ॥೨೨॥

ತಸ್ಮಾದ್ಗಚ್ಛ ವರಾರೋಹೇ ಯತ್ರ ತೇ ರಮತೇ ಮನಃ ।
ಭಜ ವಾ ಭೂಪತಿಂ ನಾಥಂ ಹಯಾರಿಂ ಸುರಮರ್ದನಂ ॥೨೩॥

॥ ವ್ಯಾಸ ಉವಾಚ ॥

ಏವಂ ಬ್ರುವಾಣಂ ತಂ ದೈತ್ಯಂ ಪ್ರೋವಾಚ ಜಗದಂಬಿಕಾ ।
ಕಿಂ ವೃಥಾ ಭಾಷಸೇ ಮೂಢ ಬುದ್ಧಿಮಾನಿವ ಪಂಡಿತಃ ॥೨೪॥

ನೀತಿಶಾಸ್ತ್ರಂ ನ ಜಾನಾಸಿ ವಿದ್ಯಾಂ ಚಾನ್ವೀಕ್ಷಿಕೀಂ ತಥಾ ।
ನ ಸೇವಿತಾಸ್ತ್ವಯಾ ವೃದ್ಧಾ ನ ಧರ್ಮೇ ಮತಿರಸ್ತಿ ತೇ ॥೨೫॥

---

ಮತ್ತು ಈ ಎಲ್ಲ ದುಃಖಗಳಲ್ಲದೆ ಕಡೆಗೆ ಮರಣವಾದಮೇಲೂ ಈ ದೇಹಕ್ಕೆ ಲಭಿಸುವ ಸಂಸ್ಕಾರವು ನರಿಗಳು ಬಾಯಿಯಿಂದ ಕಚ್ಚಿ ತಿನ್ನುವುದೇ ಆಗುತ್ತದೆ. ॥೨೧॥

ಇಷ್ಟು ದುಃಖದಾಯಕವಾದ ಯುದ್ಧವನ್ನೇ ಮೂರ್ಖರೂ ವಂಚಕರೂ ಆದ ಕವಿಗಳು ತುಂಬ ಹೊಗಳಿ ವರ್ಣಿಸಿರುತ್ತಾರೆ. ಯುದ್ಧದಲ್ಲಿ ಮಡಿದವರಿಗೆ ಸ್ವರ್ಗವು ಸಿಕ್ಕುವುದೆಂಬ ಮಾತು ಬರಿಯ ಅರ್ಥವಾದವು, ಎಂದರೆ ಯುದ್ಧವನ್ನು ಮಾಡುವಂತೆ ರುಚಿಯನ್ನು ಹುಟ್ಟಿಸುವ ಮಾತಾಗಿದೆಯೇ ಹೊರತು ವಾಸ್ತವವಾಗಿ ಅದು ಸದ್ಗತಿಯನ್ನುಂಟುಮಾಡಲಾರದು ! ॥೨೨॥

ಆದುದರಿಂದ ಉತ್ತಮಸ್ತ್ರೀಯಾದ ಎಲೈ ಚಂಡಿಕೆಯೇ, ನಿನ್ನ ಮನಸ್ಸು ಎಲ್ಲಿ ರಮಿಸುವುದೋ ಅಲ್ಲಿಗೆ ಹೊರಡು, ಅದಿಲ್ಲದಿದ್ದರೆ, ನಮ್ಮೊಡೆಯನಾದ, ದೇವತೆಗಳನ್ನೂ ಶಿಕ್ಷಿಸುವವನಾದ, ಮಹಿಷರಾಜನನ್ನು ಪತಿಯಾಗಿ ವರಿಸು. ॥೨೩॥

ವ್ಯಾಸಮುನಿಯು ಹೇಳಿದನು—ಹೀಗೆ ಹೇಳುತ್ತಲಿರುವ ಆ ಚಿಕ್ಷುರನೆಂಬ ದೈತ್ಯನನ್ನು ಕುರಿತು ಜಗತ್ತಿಗೆ ಮಾತೆಯಾದ ದೇವಿಯು ಹೀಗೆ ಹೇಳಿದಳು. ಎಲೈ ಮೂಢನೇ, ಸುಮ್ಮನೆ ವ್ಯರ್ಥವಾಗಿ ಒಳ್ಳೆಯ ಬುದ್ಧಿವಂತನಾದ ಪಂಡಿತನಂತೆ ಏಕೆ ಮಾತನ್ನಾಡುತ್ತಿರುವೆ ? ॥೨೪॥

ನೀನು ರಾಜನೀತಿಯನ್ನಾಗಲೀ, ನ್ಯಾಯವಿದ್ಯೆಯನ್ನಾಗಲಿ ತಿಳಿದಿರುವುದಿಲ್ಲವು. ತಿಳಿವಳಿಕೆಯುಳ್ಳ ಗುರುಹಿರಿಯರನ್ನು ನೀನು ಸೇವಿಸಿಯೇ ಇಲ್ಲವು. ನಿನಗೆ ಧರ್ಮದ ಆಚರಣೆಯಲ್ಲಿಯೂ ಆದರದ ಬುದ್ಧಿಯೂ ಇಲ್ಲವು. ॥೨೫॥

ಮೂರ್ಖಸೇವಾಪರೋ ಯಸ್ಮಾತ್ತಸ್ಮಾತ್ತ್ವಂ ಮೂರ್ಖ ಏವ ಹಿ ।
ರಾಜಧರ್ಮಂ ನ ಜಾನಾಸಿ ಕಿಂ ಬ್ರವೀಷಿ ಮಮಾಗ್ರತಃ ॥೨೬॥

ಸಂಗ್ರಾಮೇ ಮಹಿಷಂ ಹತ್ವಾ ಕೃತ್ವಾ ರುಧಿರಕರ್ದಮಂ ।
ಯಶಸ್ತಂಭಂ ಸ್ಥಿರಂ ಕೃತ್ವಾ ಗಮಿಷ್ಯಾಮಿ ಯಥಾಸುಖಂ ॥೨೭॥

ದೇವಾನಾಂ ದುಃಖದಾತಾರಂ ದಾನವಂ ಮದಗರ್ವಿತಂ ।
ಹನಿಷ್ಯೇಽಹಂ ದುರಾಚಾರಂ ಯುದ್ಧಂ ಕುರು ಸ್ಥಿರೋ ಭವ ॥೨೮॥

ಜೀವಿತೇಚ್ಛಾಽಸ್ತಿ ಚೇನ್ಮೂಢ ಮಹಿಷಸ್ಯ ತಥಾ ತವ ।
ತದಾ ಗಚ್ಛಂತು ಪಾತಾಲಂ ದಾನವಾಃ ಸರ್ವ ಏವ ತೇ ॥೨೯॥

ಮುಮೂರ್ಷಾ ಯದಿ ವಶ್ಚಿತ್ತೇ ಯುದ್ಧಂ ಕುರ್ವಂತು ಸತ್ವರಾಃ ।
ಸರ್ವಾನೇವ ವಧಿಷ್ಯಾಮಿ ನಿಶ್ಚಯೋಽಯಂ ಮಮಾಧುನಾ ॥೩೦॥

---

ಮತ್ತು ನೀನು ಮೂರ್ಖನಾದ ಆ ಮಹಿಷನ ಸೇವೆಯನ್ನು ಮಾಡುತ್ತಿರುವುದರಿಂದ ನೀನೂ ಮೂರ್ಖನೇ ಸರಿ. ನಿನಗೆ ರಾಜರ ಧರ್ಮವೇನೆಂಬುದೇ ತಿಳಿಯದು. ಇಂತಹವನು ನನ್ನೆದುರಿಗೆ ಏನನ್ನೋ ಹೇಳುತ್ತಿರುವೆ! ಏಕೆಂದರೆ, ॥೨೬॥

ನಾನು ಯುದ್ಧದಲ್ಲಿ ಆ ದುಷ್ಟನಾದ ಮಹಿಷನನ್ನು ಕೊಂದು, ನಿಮ್ಮೆಲ್ಲರ ರಕ್ತದಿಂದ ರಣಭೂಮಿಯನ್ನು ಕೆಸರುಳ್ಳದ್ದನ್ನಾಗಿ ಮಾಡಿ, ನನ್ನ ಯಶಸ್ಸಿನ ಸ್ತಂಭವನ್ನು ಸ್ಥಿರವಾಗಿ ಸ್ಥಾಪಿಸಿ, ಸುಖವಾಗಿ ಹೊರಟುಹೋಗುವೆನು. ಮತ್ತು ದೇವತೆಗಳಿಗೆ ದುಃಖವನ್ನು ಕೊಡುತ್ತಿರುವ, ಮದದಿಂದ ಕೊಬ್ಬಿದ ಕೆಟ್ಟ ನಡತೆಯುಳ್ಳ, ನಿಮ್ಮೊಡೆಯನಾದ ಆ ಮಹಿಷಾಸುರನನ್ನು ಕೊಲ್ಲುವೆನು. ಆದುದರಿಂದ ಎಲೈ ದೈತ್ಯನೇ, ಸ್ಥಿರವಾಗಿದ್ದು ಯುದ್ಧವನ್ನು ಮಾಡು. ॥೨೮॥

ಎಲೈ ಮೂಢನೇ, ಹಾಗಲ್ಲದೆ ನೀನೂ ನಿನ್ನೊಡೆಯ ಮಹಿಷನೂ ಬದುಕಬೇಕೆಂದಿದ್ದರೆ ಈ ಕೂಡಲೇ ಎಲ್ಲ ರಾಕ್ಷಸರೊಡನೆ ಇಲ್ಲಿರದೆ ಪಾತಾಳಕ್ಕೆ ನಡೆಯಿರಿ. ॥೨೯॥

ಅಥವಾ ನೀವುಗಳೆಲ್ಲರೂ ಸಾಯಲೇಬೇಕೆಂದು ನಿಮ್ಮ ಮನಸ್ಸಿನಲ್ಲಿದ್ದರೆ ಜಾಗ್ರತೆಯಾಗಿ ನನ್ನೊಡನೆ ಯುದ್ಧವನ್ನು ಮಾಡಿರಿ. ಆಗ ನಿಮ್ಮೆಲ್ಲರನ್ನೂ ಕೊಲ್ಲುವೆನು. ಇದು ನನ್ನ ಈಗಿನ ನಿಶ್ಚಯವು. ॥೩೦॥

|| ವ್ಯಾಸ ಉವಾಚ ||

ತಚ್ಛ್ರುತ್ವಾ ವಚನಂ ತಸ್ಯಾ ದಾನವೋ ಬಲದರ್ಪಿತಃ ।
ಮುಮೋಚ ಬಾಣವೃಷ್ಟಿಂ ತಾಂ ಘನವೃಷ್ಟಿಮಿವಾಪರಾಂ ॥೩೦॥

ಚಿಚ್ಛೇದ ತಸ್ಯ ಸಾ ಬಾಣಾನ್ಸ್ವಬಾಣೈರ್ನಿಶಿತೈಸ್ತದಾ ।
ಜಘಾನ ತಂ ತಥಾ ಘೋರೈರಾಶೀವಿಷಸಮೈಃ ಶರೈಃ ॥೩೨॥

ಯುದ್ಧಂ ಪರಸ್ಪರಂ ತತ್ರ ಬಭೂವ ವಿಸ್ಮಯಪ್ರದಂ ।
ಗದಯಾ ಘಾತಯಾಮಾಸ ತಂ ರಥಾಜ್ಜಗದಂಬಿಕಾ ॥೩೩॥

ಮೂರ್ಚ್ಛಾಂ ಪ್ರಾಪ ಸ ದುಷ್ಟಾತ್ಮಾ ಗದಯಾಽಭಿಹತೋ ಭೃಶಂ ।
ಮುಹೂರ್ತದ್ವಯಮಾತ್ರಂ ತು ರಥೋಪಸ್ಥ ಇವಾಚಲಃ ॥೩೪॥

---

ವ್ಯಾಸಮುನಿಯು ಹೇಳಿದನು—ದೇವಿಯ ಈ ಮಾತುಗಳನ್ನು ಕೇಳಿ ಬಲದಿಂದ ಕೊಬ್ಬಿದ ಆ ಚಿಕ್ಷುರನೆಂಬ ದೈತ್ಯನು ಆ ದೇವಿಯ ಮೇಲೆ ಮೋಡಗಳಿಂದ ಬೀಳುತ್ತಿರುವ ಇನ್ನೊಂದು ಮಳೆಯೋ ಎಂಬಂತೆ ಕಾಣುತ್ತಿದ್ದ ಬಾಣಗಳ ಮಳೆಯನ್ನೇ ಕರೆದನು. ॥೩೦॥

ಆಗ ದೇವಿಯು ಹರಿತವಾದ ತನ್ನ ಬಾಣಗಳಿಂದ ಆ ದೈತ್ಯನು ಬಿಟ್ಟ ಬಾಣಗಳನ್ನು ಕತ್ತರಿಸಿದಳು. ಮತ್ತು ಸರ್ಪಗಳಂತಿರತಕ್ಕ ಕೆಲವು ಕ್ರೂರವಾದ ಬಾಣಗಳಿಂದ ಅವನನ್ನು ಹೊಡೆದಳು. ॥೩೨॥

ಹೀಗೆ ಅಲ್ಲಿ ಆ ಚಿಕ್ಷುರ, ದೇವೀ ಇವರಿಗೆ ಪರಸ್ಪರವಾಗಿ ತುಂಬ ಆಶ್ಚರ್ಯವನ್ನುಂಟುಮಾಡುವಂತಹ ಯುದ್ಧವಾಯಿತು. ಆಗ ಜಗನ್ಮಾತೆಯಾದ ದೇವಿಯು ಆ ರಾಕ್ಷಸನನ್ನು ಗದೆಯಿಂದ ಪ್ರಹರಿಸಿ ರಥದಿಂದ ಕೆಳಕ್ಕೆ ಕೆಡಹಿದಳು. ॥೩೩॥

ಹೀಗೆ ದೇವಿಯ ಗದೆಯಿಂದ ಹೊಡೆಯಲ್ಪಟ್ಟ ದುರಾತ್ಮನಾದ ಆ ಚಿಕ್ಷುರನು ರಥದಿಂದ ಕೆಳಗೆ ಉರುಳಿ ಅದರ ಸಮೀಪದಲ್ಲಿಯೇ ಮೂರ್ಛೆಗೊಂಡು ಪರ್ವತದಂತೆ ಚಲಿಸದೆ ನಾಲ್ಕು ಘಳಿಗೆಗಳ ಎಂದರೆ ಸ್ವಲ್ಪಕಾಲದವರೆಗೆ ಬಿದ್ದು ಇದ್ದನು. ॥೩೪॥

ತಂ ತಥಾ ಮೂರ್ಚ್ಛಿತಂ ದೃಷ್ಟ್ವಾ ತಾಮ್ರಃ ಪರಬಲಾರ್ದನಃ ।
ಆಜಗಾಮ ರಣೇ ಯೋದ್ಧುಂ ಚಂಡಿಕಾಂ ಪ್ರತಿ ಚಾಪಲಾತ್ ॥೩೫॥

ಆಗಚ್ಛಂತಂ ತು ತಂ ವೀಕ್ಷ್ಯ ಹಸಂತೀ ಪ್ರಾಹ ಚಂಡಿಕಾ ।
ಏಹ್ಯೇಹಿ ದಾನವಶ್ರೇಷ್ಠ ಯಮಲೋಕಂ ನಯಾಮ್ಯಹಂ ॥೩೬॥

ಕಿಂ ಭವದ್ಭಿಃ ಸಮಾಯಾತೈರಬಲೈಶ್ಚ ಗತಾಯುಷೈಃ ।
ಮಹಿಷಃ ಕಿಂ ಗೃಹೇ ಮೂಢಃ ಕರೋತಿ ಜೀವನೋದ್ಯಮಂ ॥೩೭॥

ಕಿಂ ಭವದ್ಭಿರ್ಹತೈರ್ಮಂದೈರ್ಮಮಾಪಿ ವಿಫಲಃ ಶ್ರಮಃ ।
ಅಹತೇ ಮಹಿಷೇ ಪಾಪೇ ಸುರಶತ್ರೌ ದುರಾತ್ಮನಿ ॥೩೮॥

---

ಹಾಗೆ ಆ ಚಿಕ್ಷುರನು ಮೂರ್ಛಿತನಾಗಿ ಬಿದ್ದಿರುವುದನ್ನು ನೋಡಿ, ಶತ್ರು ಸೈನ್ಯವನ್ನು ಹಿಂಸಿಸುವುದರಲ್ಲಿ ನಿಪುಣನಾದ ತಾಮ್ರಾಸುರನೂ ಚಂಡಿಕೆಯೊಡನೆ ಯುದ್ಧ ಮಾಡುವ ಚಾಪಲ್ಯದಿಂದ ದೇವಿಗೆ ಎದುರಾದನು. ॥೩೫॥

ತನ್ನೊಡನೆ ಯುದ್ಧಕ್ಕಾಗಿ ಬರುತ್ತಲಿರುವ ಆ ತಾಮ್ರನನ್ನು ನೋಡಿ, ಚಂಡಿಕೆಯು ಅವನನ್ನು ಕುರಿತು ನಗುತ್ತಾ ಹೀಗೆ ಹೇಳಿದಳು. ಎಲೈ ರಾಕ್ಷಸೋತ್ತಮನೇ, ಬಾ, ನನ್ನೊಡನೆ ಯುದ್ಧಕ್ಕೆ ಬಾ. ಆ ಯುದ್ಧದಲ್ಲಿ ನಿನ್ನನ್ನು ಯಮನ ಲೋಕವಾದ ನರಕಕ್ಕೆ ಕಳುಹಿಸುತ್ತೇನೆ. ॥೩೬॥

ಆಯುಸ್ಸು ತೀರಿದ ಎಲೈ ದಾನವರೇ, ನಿಮ್ಮಂತಹ ಬಲವಿಲ್ಲದ ಜನಗಳು ನನ್ನೆದುರಿನಲ್ಲಿ ಯುದ್ಧಕ್ಕೆ ಬರುವುದರಿಂದ ಏನು ಫಲವು? ನಿಮ್ಮೊಡೆಯನಾದ ಮೂರ್ಖನಾದ ಆ ಮಹಿಷನು ನಿಮ್ಮಂತಹ ದುರ್ಬಲರನ್ನು ಯುದ್ಧಕ್ಕೆ ಮುಂದು ಮಾಡಿ ಕಳುಹಿಸಿ ಮನೆಯಲ್ಲಿ ತಾನು ಬದುಕುವಿಕೆಗೆ ಉಪಾಯದ ಪ್ರಯತ್ನವನ್ನು ಮಾಡುತ್ತಲಿರುವನೇನು? ॥೩೭॥

ಮತ್ತು ದುಷ್ಟಸ್ವಭಾವವುಳ್ಳವನೂ, ದೇವತೆಗಳಿಗೆ ಶತ್ರುವೂ, ಪಾಪಿಯೂ ಆದ ಆ ಮಹಿಷನನ್ನು ಕೊಲ್ಲದೆ, ತಿಳಿವಳಿಕೆಯಿಲ್ಲದ ನಿಮ್ಮನ್ನು ಕೊಂದು ನನಗೆ ತಾನೇ ಏನು ಪ್ರಯೋಜನ? ಕೇವಲವಾಗಿ ನನ್ನ ಶ್ರಮವೂ ಮುಖ್ಯಪ್ರಯೋಜನವಿಲ್ಲದೆ ವ್ಯರ್ಥವಾಗುತ್ತಿರುವುದು! ॥೩೮॥

ತಸ್ಮಾದ್ಯೂಯಂ ಗೃಹಂ ಗತ್ವಾ ಮಹಿಷಂ ಪ್ರೇಷಯಂತ್ವಿಹ ।
ಪಶ್ಯೇನ್ಮಾಂ ಸೋಽಪಿ ಮಂದಾತ್ಮಾ ಯಾದೃಶೀಂ ತಾದೃಶೀಂ ಸ್ಥಿತಾಂ ॥೩೯॥

ತಾಮ್ರಸ್ತದ್ವಚನಂ ಶ್ರುತ್ವಾ ಬಾಣವೃಷ್ಟಿಂ ಚಕಾರ ಹ ।
ಚಂಡಿಕಾಂ ಪ್ರತಿ ಕೋಪೇನ ಕರ್ಣಾಕೃಷ್ಟಶರಾಸನಃ ॥೪೦॥

ಭಗವತ್ಯಪಿ ತಾಮ್ರಾಕ್ಷೀ ಸಮಾಕೃಷ್ಯ ಶರಾಸನಂ ।
ಬಾಣಾನ್ಮುಮೋಚ ತರಸಾ ಹಂತುಕಾಮಾ ಸುರಾಹಿತಂ ॥೪೧॥

ಚಿಕ್ಷುರಾಖ್ಯೋಽಪಿ ಬಲವಾನ್ಮೂರ್ಛಾಂ ತ್ಯಕ್ತ್ವೋತ್ಥಿತಃ ಪುನಃ ।
ಗೃಹೀತ್ವಾ ಸಶರಂ ಚಾಪಂ ತಸ್ಥೌ ತತ್ಸಮ್ಮುಖಃ ಕ್ಷಣಾತ್ ॥೪೨॥

ಚಿಕ್ಷುರಾಖ್ಯಶ್ಚ ತಾಮ್ರಶ್ಚ ದ್ವಾವಪ್ಯತಿಬಲೋತ್ಕಟೌ ।
ಯುಯುಧಾತೇ ಮಹಾವೀರೌ ಸಹ ದೇವ್ಯಾ ರಣಾಂಗಣೇ ॥೪೩॥

---

ಆದುದರಿಂದ ಎಲೈ ದೈತ್ಯರೇ, ನೀವು ಮನೆಗೆ ಹೋಗಿ ನಿಮ್ಮೊಡೆಯ ಆ ಮಹಿಷನನ್ನು ಇಲ್ಲಿಗೆ ಕಳುಹಿಸಿರಿ. ಅವನೂ ಸಹ ಶತ್ರುನಾಶಕವಾದ ರೂಪವನ್ನು ತಾಳಿರುವ ನನ್ನನ್ನು ಈಗ ಹೇಗೆ ಇರುವೆನೋ ಅದರಂತೆಯೇ ನೋಡಲಿ. ॥೩೯॥

ತಾಮ್ರನೆಂಬ ಆ ದೈತ್ಯನೂ ದೇವಿಯ ಆ ಮಾತುಗಳನ್ನು ಕೇಳಿ ತುಂಬ ಕೋಪಗೊಂಡು, ಕಿವಿಯವರೆಗೆ ಧನುಸ್ಸಿನ ಹೆದೆಯನ್ನು ಎಳೆದು ಬಾಣಗಳ ಮಳೆಯನ್ನೇ ದೇವಿಯ ಮೇಲೆ ಸುರಿಸಿದನು. ॥೪೦॥

ರಕ್ತವರ್ಣವಾದ ನೇತ್ರಗಳುಳ್ಳ ಪೂಜ್ಯಳಾದ ದೇವಿಯೂ ಸಹ ತನ್ನ ಧನುಸ್ಸಿನ ಹೆದೆಯನ್ನು ಕಿವಿಯ ವರೆಗೆ ಎಳೆದು ದೇವತೆಗಳಿಗೆ ಶತ್ರುವಾದ ಆ ಅಸುರನನ್ನು ಕೊಲ್ಲಲಪೇಕ್ಷೆಯಿಂದ ಅವನನ್ನು ಕುರಿತು ಬಾಣಗಳನ್ನು ಪ್ರಯೋಗಿಸಿದಳು. ॥೪೧॥

ಹಿಂದೆ ದೇವಿಯ ಗದಾಪ್ರಹಾರದಿಂದ ಮೂರ್ಛೆಗೊಂಡಿದ್ದ ಚಿಕ್ಷುರನೆಂಬ ಬಲಿಷ್ಠನಾದ ದೈತ್ಯನು ಇಷ್ಟು ಹೊತ್ತಿಗೆ ಮೂರ್ಛೆಯಿಂದ ಬಿಡಲ್ಪಟ್ಟವನಾಗಿ ಎಚ್ಚೆತ್ತು ತಿರುಗಿ ಬಾಣಗಳಿಂದ ಸಹಿತವಾಗಿರುವ ಧನುಸ್ಸನ್ನು ಹಿಡಿದುಕೊಂಡು ಆ ಕೂಡಲೇ ದೇವಿಯ ಎದುರಿನಲ್ಲಿ ಯುದ್ಧಕ್ಕೆ ಸಿದ್ಧನಾಗಿ ಬಂದು ನಿಂತನು. ॥೪೨॥

ಆಮೇಲೆ, ತುಂಬ ಬಲಿಷ್ಠರೂ ಮತ್ತು ವೀರರೂ ಆದ ಆ ತಾಮ್ರಚಿಕ್ಷುರರಿಬ್ಬರೂ ಆ ರಣಭೂಮಿಯಲ್ಲಿ ದೇವಿಯೊಡನೆ ಯುದ್ಧವನ್ನು ಮಾಡಿದರು. ॥೪೩॥

ಕುಪಿತಾ ಚ ಮಹಾಮಾಯಾ ವವರ್ಷ ಶರಸಂತತಿಂ ।
ಚಕಾರ ದಾನವಾನ್ಸರ್ವಾನ್ಬಾಣಕ್ಷತತನುಚ್ಛದಾನ್ ॥೪೪॥

ಅಸುರಾಃ ಕ್ರೋಧಸಂಮೂಢಾ ಬಭೂವುಃ ಶರತಾಡಿತಾಃ ।
ಚಿಕ್ಷಿಪುಃ ಶರಜಾಲಾನಿ ದೇವೀಂ ಪ್ರತಿ ರುಷಾನ್ವಿತಾಃ ॥೪೫॥

ಬಭುಸ್ತೇ ರಾಕ್ಷಸಾಸ್ತತ್ರ ಕಿಂಶುಕಾ ಇವ ಪುಷ್ಪಿಣಃ ।
ಶಿಲೀಮುಖಕ್ಷತಾಃ ಸರ್ವೇ ವಸಂತೇ ಚ ವನೇ ರಣೇ ॥೪೬॥

ಬಭೂವ ತುಮುಲಂ ಯುದ್ಧಂ ತಾಮ್ರೇಣ ಸಹ ಸಂಯುಗೇ ।
ವಿಸ್ಮಯಂ ಪರಮಂ ಜಗ್ಮುರ್ದೇವಾ ಯೇ ಪ್ರೇಕ್ಷಕಾಃ ಸ್ಥಿತಾಃ ॥೪೭॥

ತಾಮ್ರೋ ಮುಸಲಮಾದಾಯ ಲೋಹಜಂ ದಾರುಣಂ ದೃಢಂ ।
ಜಘಾನ ಮಸ್ತಕೇ ಸಿಂಹಂ ಜಹಾಸ ಚ ನನರ್ದ ಚ ॥೪೮॥

---

ಆಗ ತುಂಬ ಕೋಪಗೊಂಡವಳಾಗಿ ಆದಿಮಾಯೆಯಾದ ಆ ದೇವಿಯು ಬಾಣಗಳ ದೊಡ್ಡಮಳೆಯನ್ನೇ ಸುರಿಸಿದಳು. ಮತ್ತು ಎಲ್ಲ ರಾಕ್ಷಸರನ್ನೂ ತನ್ನ ಬಾಣಗಳ ಹೊಡೆತದಿಂದ ಗಾಯವಾದ ಶರೀರ ಕವಚಗಳುಳ್ಳವರನ್ನಾಗಿ ಮಾಡಿದಳು. ||೪೪||

ಹೀಗೆ ದೇವಿಯ ಬಾಣಗಳಿಂದ ಹೊಡೆಯಲ್ಪಟ್ಟವರಾಗಿ ಆ ರಾಕ್ಷಸರೂ ತುಂಬ ಕೋಪವುಳ್ಳವರಾದರು. ಮತ್ತು ಸಿಟ್ಟಿನಿಂದ ಅವರು ದೇವಿಯನ್ನು ಕುರಿತು ತಾವು ಬಾಣಸಮೂಹವನ್ನು ಬಿಟ್ಟು ಪ್ರಹರಿಸಿದರು. ||೪೫||

ಮತ್ತು ಆ ರಾಕ್ಷಸರು ಆ ರಣಭೂಮಿಯಲ್ಲಿ ದೇವಿಯ ಬಾಣಗಳಿಂದ ಹೊಡೆಯಲ್ಪಟ್ಟು ಅದರಿಂದುಂಟಾದ ಗಾಯಗಳ ರಕ್ತದಿಂದ ಚಿತ್ರಿತವಾದ ಶರೀರವುಳ್ಳವರಾಗಿ, ವಸಂತಋತುವಿನಲ್ಲಿ ತುಂಬ ಅರಳಿದ ಹೂವುಗಳುಳ್ಳ ಮುತ್ತುಗದ ಮರಗಳಂತೆ ಕಾಣಬರುತ್ತಿದ್ದರು. ||೪೬||

ಆಗ ರಣಭೂಮಿಯಲ್ಲಿ ತಾಮ್ರಾಸುರ–ದೇವಿಯರಿಗೆ ಪರಸ್ಪರ ಸಂಕುಲವೂ ಭೀಕರವೂ ಆದ ಯುದ್ಧವಾಯಿತು. ಈ ಯುದ್ಧವನ್ನು ಆಕಾಶದಲ್ಲಿ ಪ್ರೇಕ್ಷಕರಾಗಿ ಬಂದಿದ್ದ ದೇವತೆಗಳು ನೋಡಿ ತುಂಬ ಆಶ್ಚರ್ಯಗೊಂಡರು. ||೪೭||

ಅಲ್ಲದೆ ಆಗ ತಾಮ್ರನು ಒನಕೆಯಂತಿರತಕ್ಕ ಉಕ್ಕಿನಿಂದ ಮಾಡಿದ ಮತ್ತು ದೃಢವೂ ಭಯಂಕರವೂ ಆದ ಮುಸಲವೆಂಬ ಆಯುಧವನ್ನು ಹಿಡಿದು ದೇವಿಯ

ನರ್ದಮಾನಂ ತದಾ ತಂ ತು ದೃಷ್ಟ್ವಾ ದೇವೀ ರುಷಾನ್ವಿತಾ ।
ಖಡ್ಗೇನ ಶಿತಧಾರೇಣ ಶಿರಶ್ಚಿಚ್ಛೇದ ಸತ್ತ್ವರಾ ॥೪೯॥

ಛಿನ್ನೇ ಶಿರಸಿ ತಾಮ್ರಸ್ತು ವಿಶೀರ್ಷೋ ಮುಸಲೀ ಬಲೀ ।
ಬಭ್ರಾಮ ಕ್ಷಣಮಾತ್ರಂ ತು ಪಪಾತ ರಣಮಸ್ತಕೇ ॥೫೦॥

ಪತಿತಂ ತಾಮ್ರಮಾಲೋಕ್ಯ ಚಿಕ್ಷುರಾಖ್ಯೋ ಮಹಾಬಲಃ ।
ಖಡ್ಗಮಾದಾಯ ತರಸಾ ದುದ್ರಾವ ಚಂಡಿಕಾಂ ಪ್ರತಿ ॥೫೧॥

ಭಗವತ್ಯಪಿ ತಂ ದೃಷ್ಟ್ವಾ ಖಡ್ಗಪಾಣಿಮುಪಾಗತಂ ।
ದಾನವಂ ಪಂಚಭಿರ್ಬಾಣೈರ್ಜಘಾನ ತರಸಾ ರಣೇ ॥೫೨॥

---

ವಾಹನವಾದ ಸಿಂಹದ ಶಿರಸ್ಸಿನ ಮೇಲೆ ಪ್ರಹರಿಸಿದನು. ಮತ್ತು ಅವನು ವಿಕೃತವಾದ ಅಟ್ಟಹಾಸವನ್ನೂ ಸಿಂಹನಾದವನ್ನೂ ಮಾಡಿದನು. ॥೪೮॥

ಹೀಗೆ ಆ ತಾಮ್ರನು ಸಿಂಹನಾದವನ್ನು ಮಾಡುತ್ತಲಿರುವುದನ್ನು ನೋಡಿ ದೇವಿಯು ತುಂಬ ಕೋಪಗೊಂಡವಳಾಗಿ ಹರಿತವಾದ ಅಲಗುಳ್ಳ ತನ್ನ ಖಡ್ಗದಿಂದ ಅವನ ಶಿರಸ್ಸನ್ನು ಲಗುಬಗೆಯಿಂದ ಕತ್ತರಿಸಿ ಕೆಡವಿದಳು. ॥೪೯॥

ಆ ತಾಮ್ರನ ಶಿರಸ್ಸು ಹೀಗೆ ದೇವಿಯಿಂದ ಕತ್ತರಿಸಲ್ಪಡಲು ಮುಸಲಾಯುಧವನ್ನು ಹಿಡಿದಿರುವ ಮತ್ತು ಬಲಿಷ್ಠನಾದ ಆ ತಾಮ್ರನು ಮುಂಚಿನ ವೇಗದ ಪ್ರಭಾವದಿಂದ ಶಿರಸ್ಸಿಲ್ಲದವನಾಗಿದ್ದರೂ ಸ್ವಲ್ಪ ಹೊತ್ತಿನವರೆಗೆ ಮುಂಡಮಾತ್ರದಿಂದಲೇ ತಿರುಗಿದನು. ಆ ಮೇಲೆ ಆ ರಣಭೂಮಿಯಲ್ಲಿ ಬಿದ್ದು ಪ್ರಾಣವನ್ನು ಬಿಟ್ಟನು. ॥೫೦॥

ಹೀಗೆ ತಾಮ್ರನು ಮೃತನಾಗಿ ಬಿದ್ದುದನ್ನು ನೋಡಿ ಚಿಕ್ಷುರನೆಂಬ ಇನ್ನೊಬ್ಬ ಬಲಿಷ್ಠನಾದ ದೈತ್ಯನು ತನ್ನ ಖಡ್ಗವನ್ನು ಹಿಡಿದು ತ್ವರೆಯಿಂದ ದೇವಿಯನ್ನು ಎದುರಿಸಲು ಬಂದನು. ॥೫೧॥

ಆಗ ಪೂಜ್ಯಳಾದ ದೇವಿಯು ಖಡ್ಗವನ್ನು ಹಿಡಿದು ಬಂದಿರುವ ಅವನನ್ನು ನೋಡಿ ಲಗುಬಗೆಯಿಂದ ತನ್ನ ಐದು ಶರಗಳಿಂದ ಆ ದೈತ್ಯನನ್ನು ಪ್ರಹರಿಸಿದಳು. ॥೫೨॥

ಏಕೇನ ಪಾತಿತಂ ಖಡ್ಗಂ ದ್ವಿತೀಯೇನ ತು ತತ್ಕರಃ ।
ಕಂಠಾಚ್ಛ ಮಸ್ತಕಂ ತಸ್ಯ ಕೃಂತಿತಂ ಚಾಪರೈಃ ಶರೈಃ ॥೫೩॥

ಏವಂ ತೌ ನಿಹತೌ ಕ್ರೂರೌ ರಾಕ್ಷಸೌ ರಣದುರ್ಮದೌ ।
ಭಗ್ನಂ ಸೈನ್ಯಂ ತಯೋಸ್ತೂರ್ಣಂ ದಿಕ್ಷು ಸಂತ್ರಸ್ತಮಾನಸಂ ॥೫೪॥

ದೇವಾಶ್ಚ ಮುದಿತಾಃ ಸರ್ವೇ ದೃಷ್ಟ್ವಾ ತೌ ನಿಹತೌ ರಣೇ ।
ಪುಷ್ಪವೃಷ್ಟಿಂ ಮುದಾ ಚಕ್ರುಃ ಜಯಶಬ್ದಂ ನಭಃಸ್ಥಿತಾಃ ॥೫೫॥

ಋಷಯೋ ದೇವಗಂಧರ್ವಾ ವೇತಾಲಾಃ ಸಿದ್ಧಚಾರಣಾಃ ।
ಊಚುಸ್ತೇ ಜಯ ದೇವೀತಿ ಚಾಂಬಿಕೇತಿ ಪುನಃ ಪುನಃ ॥೫೬॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಚತುರ್ದಶೋಽಧ್ಯಾಯಃ.

---

ಆ ಐದು ಬಾಣಗಳಲ್ಲಿ ಒಂದು ಬಾಣವು ಅವನ ಖಡ್ಗವನ್ನು ಬೀಳಿಸಿತು. ಇನ್ನೊಂದು ಅವನ ಹಸ್ತವನ್ನು ಕತ್ತರಿಸಿತು. ಉಳಿದ ಮೂರು ಶರಗಳು ಆ ಚಿಕ್ಷುರನ ಶಿರಸ್ಸನ್ನು ಕತ್ತಿನಿಂದ ಕತ್ತರಿಸಿ ಹಾರಿಸಿದುವು. ॥೫೩॥

ಹೀಗೆ ರಣೋದ್ರಿಕ್ತರಾದ ಆ ತಾಮ್ರಚಿಕ್ಷುರರೆಂಬ ಕ್ರೂರರಾದ ದೈತ್ಯರೀರ್ವರೂ ದೇವಿಯಿಂದ ಕೊಲ್ಲಲ್ಪಟ್ಟರು. ಅವರ ಸೈನ್ಯವು ಭಗ್ನವಾಗಿ ತುಂಬ ಕಾತರವಾದ ಮನಸ್ಸುಳ್ಳದ್ದಾಗಿ ದಿಕ್ಕುದಿಕ್ಕಿಗೆ ಓಡುತ್ತಾ ಚದುರಿತು. ॥೫೪॥

ಯುದ್ಧದಲ್ಲಿ ಹೀಗೆ ಆ ದೈತ್ಯರಿಬ್ಬರೂ ಹತರಾದುದನ್ನು ನೋಡಿ ಗಗನದಲ್ಲಿದ್ದ ದೇವತೆಗಳು ತುಂಬ ಸಂತೋಷಗೊಂಡವರಾಗಿ ಹರ್ಷದಿಂದ ದೇವಿಯ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು, ಮತ್ತು ದೇವಿಯನ್ನು ಜಯಶಬ್ದದಿಂದ ಗೌರವಿಸುತ್ತಾ ಹೊಗಳಿದರು. ॥೫೫॥

ಮತ್ತು ಋಷಿಗಳೂ, ದೇವತೆಗಳೂ, ಗಂಧರ್ವರೂ, ಭೂತಗಳೂ, ಸಿದ್ಧರೂ ಚಾರಣರೆಂಬ ದೇವವಿಶೇಷರೂ ಸಹ ದೇವಿಯನ್ನು ಕುರಿತು—ಜಗನ್ಮಾತೆಯಾದ ಓ ದೇವಿಯೇ, ನಿನಗೆ ಜಯವಾಗಲಿ! ಎಂದು ಹರ್ಷಧ್ವನಿಯನ್ನು ಮಾಡುತ್ತಾ ಪುನಃಪುನಃ ಜಯಘೋಷವನ್ನು ಮಾಡುತ್ತಿದ್ದರು. ॥೫೬॥

ಇಲ್ಲಿಗೆ ಶ್ರೀ ದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### || ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತೌ ತಯಾ ನಿಹತೌ ಶ್ರುತ್ವಾ ಮಹಿಷೋ ವಿಸ್ಮಯಾನ್ವಿತಃ ।**
**ಪ್ರೇಷಯಾಮಾಸ ದೈತೇಯಾನ್ ತದ್ವಧಾರ್ಥಂ ಮಹಾಬಲಾನ್ ॥೧॥**

**ಅಸಿಲೋಮಬಿಡಾಲಾಖ್ಯಪ್ರಮುಖಾನ್ ಯುದ್ಧದುರ್ಮದಾನ್ ।**
**ಸೈನ್ಯೇನ ಮಹತಾ ಯುಕ್ತಾನ್ ಸಾಯುಧಾನ್ ಸಪರಿಚ್ಛದಾನ್ ॥೨॥**

**ತೇ ತತ್ರ ದದೃಶುರ್ದೇವೀಂ ಸಿಂಹಸ್ಯೋಪರಿ ಸಂಸ್ಥಿತಾಂ ।**
**ಅಷ್ಟಾದಶಭುಜಾಂ ದಿವ್ಯಾಂ ಖಡ್ಗಖೇಟಕಧಾರಿಣೀಂ ॥೩॥**

---

ವ್ಯಾಸಮುನಿಯು ಹೇಳಿದನು—ಎಲೈ ಜನಮೇಜಯನೇ ಕೇಳು, ಹೀಗೆ ತಾಮ್ರ ಮತ್ತು ಚಿಕ್ಷುರನೆಂಬ ಆ ಇಬ್ಬರಸುರರೂ ದೇವಿಯಿಂದ ಹತರಾದುದನ್ನು ಕೇಳಿ ಮಹಿಷಾಸುರನು ತುಂಬ ಆಶ್ಚರ್ಯಚಕಿತನಾಗಿ ಆಗ ಆ ದೇವಿಯನ್ನು ವಧಿಸಲೋಸುಗ ತುಂಬ ಬಲಶಾಲಿಗಳಾದ ಬಹುಜನ ರಾಕ್ಷಸರನ್ನು ಕಳುಹಿಸಿದನು. ||೧||

ಮತ್ತು ಆ ಮಹಿಷನು, ಅಸಿಲೋಮ ಮತ್ತು ಬಿಡಾಲ ಇವರೇ ಮೊದಲಾದ, ಯುದ್ಧದಲ್ಲಿ ಮಿತಿಮೀರಿದ ಸಾಮರ್ಥ್ಯದಿಂದ ಕೊಬ್ಬಿದವರಾದ, ರಾಕ್ಷಸಪ್ರಮುಖರನ್ನೂ ತುಂಬ ಸೈನ್ಯವನ್ನೂ ಆಯುಧಗಳನ್ನೂ ಕೊಟ್ಟು ಹೆಚ್ಚಾದ ಸಹಾಯದೊಂದಿಗೆ ದೇವಿಯೆಡೆಗೆ ಕಳುಹಿಸಿದನು. ||೨||

ಮಹಿಷಾಸುರನಿಂದ ಕಳುಹಿಸಲ್ಪಟ್ಟ ಆ ದೈತ್ಯರು ಅಲ್ಲಿ ಹದಿನೆಂಟು ಬಾಹುಗಳುಳ್ಳ, ಕತ್ತಿ, ಗುರಾಣಿ ಮುಂತಾದ ಆಯುಧಗಳನ್ನು ಹಿಡಿದುಕೊಂಡಿರುವ ಮತ್ತು ಸಿಂಹವನ್ನೇರಿ ಕುಳಿತು ಪ್ರಕಾಶಿಸುತ್ತಲಿರುವ ದೇವಿಯನ್ನು ನೋಡಿದರು. ||೩||

**ಅಸಿಲೋಮಾಗ್ರತೋ ಗತ್ವಾ ತಾಮುವಾಚ ಹಸನ್ನಿವ ।**
**ವಿನಯಾವನತಃ ಶಾಂತೋ ದೇವೀಂ ದೈತ್ಯವಧೋದ್ಯತಾಂ ॥೪॥**

|| ಅಸಿಲೋಮೋವಾಚ ||

**ದೇವಿ ಬ್ರೂಹಿ ವಚಃ ಸತ್ಯಂ ಕಿಮರ್ಥಮಿಹ ಸುಂದರಿ ।**
**ಆಗತಾಸಿ ಕಿಮರ್ಥಂ ವಾ ಹಂಸಿ ದೈತ್ಯಾನ್ನಿರಾಗಸಃ ॥೫॥**

**ಕಾರಣಂ ಕಥಯಾದ್ಯ ತ್ವಂ ತ್ವಯಾ ಸಂಧಿಂ ಕರೋಮ್ಯಹಂ ।**
**ಕಾಂಚನಂ ಮಣಿರತ್ನಾನಿ ಭಾಜನಾನಿ ವರಾಣಿ ಚ ॥೬॥**

**ಯಾನೀಚ್ಛಸಿ ವರಾರೋಹೇ ಗೃಹೀತ್ವಾ ಗಚ್ಛಮಾಚಿರಂ ।**
**ಕಿಮರ್ಥಂ ಯುದ್ಧಕಾಮಾಸಿ ದುಃಖಸಂತಾಪವರ್ಧನಂ ॥೭॥**

---

ಆಗ ಅಸಿಲೋಮನೆಂಬ ದೈತ್ಯನು ಸರ್ವಶಕ್ತಿತೇಜೋಮಯಳಾಗಿ ಪ್ರಕಾಶಿಸುತ್ತಿರುವ ಆ ದೇವಿಯ ಎದುರಿಗೆ ಹೋಗಿ, ನಮ್ರತೆಯಿಂದ ಬಗ್ಗಿದವನಾಗಿ, ಸಮಾಧಾನದಿಂದ ಮುಗುಳುನಗೆಯೊಡನೆ, ರಾಕ್ಷಸರ ಸಂಹಾರದಲ್ಲಿ ನಿರತಳಾದ ಆ ದೇವಿಯನ್ನು ಕುರಿತು ಹೀಗೆ ಹೇಳಿದನು. ||೪||

ಅಸಿಲೋಮನೆಂಬ ದೈತ್ಯನು ಹೇಳಿದನು— ತುಂಬ ಸೌಂದರ್ಯವತಿಯಾದ ಓ ದೇವಿಯೇ, ನೀನು ಇಲ್ಲಿಗೆ ಏತಕ್ಕಾಗಿ ಬಂದಿರುತ್ತೀಯೆ? ಮತ್ತು ನಿರಪರಾಧಿಗಳಾದ ಈ ರಾಕ್ಷಸರನ್ನು ಸುಮ್ಮನೆ ಏಕೆ ಕೊಲ್ಲುತ್ತೀಯೆ? ನಿಜವನ್ನು ಹೇಳು. ||೫||

ಇದಕ್ಕೆಲ್ಲಕ್ಕೂ ಕಾರಣವನ್ನು ನೀನೀಗ ಹೇಳು. ನಿನ್ನೊಡನೆ ಸಂಧಿಯನ್ನು ನಾನು ಮಾಡಿಕೊಳ್ಳುತ್ತೇನೆ. ಚಿನ್ನವಾಗಲಿ, ವಜ್ರವೈಡೂರ್ಯ ಮೊದಲಾದ ರತ್ನಗಳಾಗಲಿ ಉತ್ತಮವಾದ ಪಚ್ಚೆ ಮೊದಲಾದವುಗಳಿಂದ ನಿರ್ಮಿತವಾದ ಪಾತ್ರೆಗಳಾಗಲಿ ಇವೇ ಮುಂತಾದವುಗಳಲ್ಲಿ ||೬||

ಯಾವುದನ್ನು ನೀನು ಅಪೇಕ್ಷಿಸುವೆಯೋ ಅವುಗಳೆಲ್ಲವನ್ನೂ ಕೊಡುವೆನು. ಉತ್ತಮ ಸ್ತ್ರೀಯಾದ ಓ ದೇವಿಯೇ, ನೀನು ಅವುಗಳನ್ನು ಸ್ವೀಕರಿಸಿ ಜಾಗ್ರತೆಯಾಗಿ ಹೊರಡು. ಸುಮ್ಮನೆ ಏತಕ್ಕಾಗಿ ದುಃಖವನ್ನು ಬೆಳೆಸುವ ಯುದ್ಧವನ್ನು ಮಾಡಲಪೇಕ್ಷಿಸುತ್ತಿರುವೆ? ||೭||

**ಕಥಯಂತಿ ಮಹಾತ್ಮಾನೋ ಯುದ್ಧಂ ಸರ್ವಸುಖಾಪಹಂ ।**
**ಕೋಮಲೇಽತೀವ ತೇ ದೇಹೇ ಪುಷ್ಪಘಾತಾsಸಹೇ ಭೃಶಂ ॥೮॥**

**ಕಿಮರ್ಥಂ ಶಸ್ತ್ರಸಂಪಾತಾನ್ಸಹಸೀತಿ ವಿಸಿಸ್ಮಿಯೇ ।**
**ಚಾತುರ್ಯಸ್ಯ ಫಲಂ ಶಾಂತಿಃ ಸತತಂ ಸುಖಸೇವನಂ ॥೯॥**

**ತತ್ಕಿಮರ್ಥಂ ದುಃಖಹೇತುಂ ಸಂಗ್ರಾಮಂಕರ್ತುಮಿಚ್ಛಸಿ ।**
**ಸಂಸಾರೇಽತ್ರ ಸುಖಂ ಗ್ರಾಹ್ಯಂ ದುಃಖಂ ಹೇಯಮಿತಿ ಸ್ಥಿತಿಃ ॥೧೦॥**

**ತತ್ಸುಖಂ ದ್ವಿವಿಧಂ ಪ್ರೋಕ್ತಂ ನಿತ್ಯಾನಿತ್ಯಪ್ರಭೇದತಃ ।**
**ಆತ್ಮಜ್ಞಾನಂ ಸುಖಂ ನಿತ್ಯಮನಿತ್ಯಂ ಭೋಗಜಂ ಸ್ಮೃತಂ ॥೧೧॥**

**ನಾಶಾತ್ಮಕಂ ತು ತತ್ತ್ಯಾಜ್ಯಂ ವೇದಶಾಸ್ತ್ರಾರ್ಥ ಚಿಂತಕೈಃ ।**

---

ದೊಡ್ಡವರೂ, ಯುದ್ಧವು ಎಲ್ಲ ಬಗೆಯ ಸುಖಗಳನ್ನೂ ಹಾಳುಮಾಡುತ್ತದೆ ಯೆಂದು ಹೇಳುತ್ತಾರೆ. ಹೀಗಿರುವಲ್ಲಿ, ಹೂವಿನ ಮೆತ್ತನೆಯ ಏಟನ್ನೂ ಸಹಿಸಲಾರದ ಈ ನಿನ್ನ ದೇಹದಲ್ಲಿ ಈ ಯುದ್ಧದಿಂದಾಗುವ ಶಸ್ತ್ರಗಳ ಹೊಡೆತಗಳನ್ನು ಅದಾವ ಪ್ರಯೋಜನಕ್ಕಾಗಿ ನೀನು ಹೇಗೆ ಸಹಿಸುತ್ತೀಯೆ? ಎಂದು ನಾನು ಆಶ್ಚರ್ಯ ಪಟ್ಟೆನು. ॥೮॥

ಅಲ್ಲದೆ ಇದು ಬುದ್ಧಿವಂತಿಕೆಯ ಲಕ್ಷಣವಲ್ಲವು. ಚತುರತೆಗೆ ಫಲವು ಶಾಂತಿಯೂ ಮತ್ತು ಯಾವಾಗಲೂ ಸುಖಾನುಭವವೂ ಆಗಿರುತ್ತವೆ. ಆದುದರಿಂದ ಇಷ್ಟು ದುಃಖದಾಯಕವಾದ ಯುದ್ಧವನ್ನು ಏತಕ್ಕೋಸ್ಕರವಾಗಿ ಮಾಡಲಪೇಕ್ಷಿಸುತ್ತೀಯೆ? ಈ ಸಂಸಾರದಲ್ಲಿ ಎಂದರೆ ಪ್ರಾಪಂಚಿಕವ್ಯವಹಾರದಲ್ಲಿ, ಸುಖವೇ ಗ್ರಾಹ್ಯವಾದುದು ಮತ್ತು ದುಃಖವನ್ನು ತಪ್ಪಿಸಿಕೊಳ್ಳುವುದೂ ಯೋಗ್ಯವಾದುದು. ಅಲ್ಲದೆ ಅದು ವಿವೇಕದ ನಡೆವಳಿಕೆಯಾಗಿದೆ ಎಂಬುದು ನಿಜಸ್ಥಿತಿಯು. ॥೯-೧೦॥

ಸುಖವು ನಿತ್ಯಸುಖವೆಂದೂ ಮತ್ತು ಅನಿತ್ಯಸುಖವೆಂದೂ ಎರಡು ವಿಧವಾಗಿರುತ್ತದೆ. ಅದರಲ್ಲಿ ಬ್ರಹ್ಮಜ್ಞಾನದಿಂದುಂಟಾಗುವ ಮೋಕ್ಷವೆಂಬ ತ್ರಿಕಾಲಾಬಾಧ್ಯವಾದ ಸುಖವೇ ನಿತ್ಯಸುಖವು. ವಿಷಯಗಳ ಅನುಭವದಿಂದುಂಟಾಗುವ ಸುಖವು ಅನಿತ್ಯಸುಖವು, ಎಂದರೆ ಸ್ವಲ್ಪಕಾಲದವರೆಗೆ ಸುಖದಂತೆ ತೋರುತ್ತಿದ್ದು ಆಮೇಲೆ

**ಸೌಗತಾನಾಂ ಮತಂ ಚೇತ್ತ್ವಂ ಸ್ವೀಕರೋಷಿ ವರಾನನೇ ॥೧೨॥**

**ತಥಾಪಿ ಯೌವನಂ ಪ್ರಾಪ್ಯ ಭುಂಕ್ಷ್ವ ಭೋಗಾನನುತ್ತಮಾನ್ ।**
**ಪರಲೋಕಸ್ಯ ಸಂದೇಹೋ ಯದಿ ತೇಽಸ್ತಿ ಕೃಶೋದರಿ ॥೧೩॥**

**ಸ್ವರ್ಗಭೋಗಪರಾ ನಿತ್ಯಂ ಭವ ಭಾಮಿನಿ ಭೂತಲೇ ।**
**ಅನಿತ್ಯಂ ಯೌವನಂ ದೇಹೇ ಜ್ಞಾತ್ವೇತಿ ಸುಕೃತಂ ಚರೇತ್ ॥೧೪॥**

**ಪರೋಪತಾಪನಂ ಕಾರ್ಯಂ ವರ್ಜನೀಯಂ ಸದಾ ಬುಧೈಃ ।**
**ಅವಿರೋಧೇನ ಕರ್ತವ್ಯಂ ಧರ್ಮಾರ್ಥಕಾಮಸೇವನಂ ॥೧೫॥**

---

ನಾಶವಾಗತಕ್ಕದ್ದು. ಆದುದರಿಂದ ವೇದಶಾಸ್ತ್ರಾರ್ಥಗಳನ್ನು ತಿಳಿದಿರುವ ವಿವೇಕಿಗಳು ನಾಶವಾಗತಕ್ಕ ವಿಷಯಸುಖವನ್ನು ತ್ಯಜಿಸಬೇಕು. ಆತ್ಮನು ಬ್ರಹ್ಮರೂಪನು ಎಂಬ ಅಭೇದಜ್ಞಾನದಿಂದ ಅನುಭವಕ್ಕೆ ಬರುವ ನಿತ್ಯಸುಖವನ್ನೇ ಪಡೆಯಬೇಕು. ||೧೧||

ಸುಂದರವಾದ ಮುಖವುಳ್ಳ ಓ ದೇವಿಯೇ, ಹಾಗಿಲ್ಲದಿದ್ದರೆ — ದೇವರೇ ಇಲ್ಲವು, ಆ ಪರಲೋಕವೇ ಇಲ್ಲವು, ಬ್ರಹ್ಮಜ್ಞಾನದಿಂದ ಮೋಕ್ಷವೆಲ್ಲಿಯದು ಎಂದು ಮುಂತಾಗಿ ವಾದಿಸುವ ನಾಸ್ತಿಕರಾದ ಬೌದ್ಧಮತವನ್ನು ನೀನು ಅನುಸರಿಸುವುದಾದರೆ, ಆಗಲೂ ಕೂಡ, ಈ ರೀತಿಯ ಉತ್ತಮವಾದ ಯೌವನವನ್ನು ಪಡೆದಿರುವಾಗ ಉತ್ಕೃಷ್ಟವಾದ ವಿಷಯಭೋಗಗಳನ್ನು ನೀನು ಅನುಭವಿಸುವುದೇ ಸರಿಯಾಗಿರುವುದು. ||೧೨||

ಕೃಶವಾದ ನಡುವುಳ್ಳ ಓ ಸುಂದರಿಯೇ, ಪರಲೋಕಾದಿಗಳು ಇರುವುವೆಂಬುದರಲ್ಲಿ ನಿನಗೆ ಸಂದೇಹವಿರುವುದಾದರೆ, ಅಂತಹ ಸಂದರ್ಭದಲ್ಲಿ ಈ ಭೂಲೋಕದಲ್ಲಿಯೇ ಸ್ವರ್ಗಸುಖಕ್ಕೆ ಸಮನಾದ ಭೋಗಗಳನ್ನು ಅನುಭವಿಸುವವಳಾಗು. ||೧೩||

ಈ ದೇಹದಲ್ಲಿ ಯೌವನವು ಸ್ಥಿರವಲ್ಲವು ಎಂದು ತಿಳಿದು, ಬುದ್ಧಿವಂತರಾದವರು, ಇನ್ನೊಬ್ಬರಿಗೆ ದುಃಖವನ್ನುಂಟುಮಾಡುವ ಕಾರ್ಯವನ್ನು ಮಾಡದೆ ಒಳ್ಳೆಯ ಕೆಲಸವನ್ನೇ ಯಾವಾಗಲೂ ಮಾಡಬೇಕು. ಮತ್ತು ಧರ್ಮ, ಅರ್ಥ, ಕಾಮಗಳನ್ನು ಸಂಪಾದಿಸುವಾಗ ಒಂದರಿಂದೊಂದಕ್ಕೆ ತೊಂದರೆ ಬಾರದಂತೆಯೂ, ಸುಖಕ್ಕೆ ವಿರೋಧವಿಲ್ಲದಂತೆಯೂ ನೋಡಿಕೊಂಡು ಅದರಂತೆ ಆಚರಿಸಬೇಕು. ||೧೪-೧೫||

ತಸ್ಮಾತ್ತ್ವಮಪಿ ಕಲ್ಯಾಣಿ ಮತಿಂ ಧರ್ಮೇ ಸದಾ ಕುರು ।
ಅಪರಾಧಂ ವಿನಾ ದೈತ್ಯಾನ್ಕಸ್ಮಾನ್ಮಾರಯಸೇಽಮ್ಬಿಕೇ ॥೧೬॥

ದಯಾಧರ್ಮೋಽಸ್ಯ ದೇಹೋಽಸ್ತಿ ಸತ್ಯೇ ಪ್ರಾಣಾಃ ಪ್ರಕೀರ್ತಿತಾಃ ।
ತಸ್ಮಾದ್ದಯಾ ತಥಾ ಸತ್ಯಂ ರಕ್ಷಣೀಯಂ ಸದಾ ಬುಧೈಃ ॥೧೭॥

ಕಾರಣಂ ವದ ಸುಶ್ರೋಣಿ ದಾನವಾನಾಂ ವಧೇ ತವ ।

॥ ದೇವ್ಯುವಾಚ ॥

ತ್ವಯಾ ಪೃಷ್ಟಂ ಮಹಾಬಾಹೋ ಕಿಮರ್ಥಮಿಹ ಚಾಗತಾ ॥೧೮॥

---

ಆದುದರಿಂದ ಓ ಮಂಗಳಸ್ವರೂಪಳಾದ ದೇವಿಯೇ, ನೀನೂ ಸಹ ಮೇಲೆ ಹೇಳಿದಂತಹ ಧರ್ಮಗಳನ್ನು ಆಚರಿಸುವುದರಲ್ಲಿಯೇ ಮನಸ್ಸನ್ನು ಇಡು. ಓ ಜಗನ್ಮಾತೆಯೇ, ಯಾವ ತಪ್ಪೂ ಇಲ್ಲದೆ ಇರುವ ಈ ದೈತ್ಯರನ್ನು ಏತಕ್ಕೋಸ್ಕರ ಕೊಲ್ಲುತ್ತೀಯೆ ? ॥೧೬॥

ಜೀವನಿಗೆ ಇರುವ ಈ ದೇಹವು ಇತರರ ದಯೆಯಿಂದ ಉಳಿದು ಬೆಳೆದಿದೆ. ಆದುದರಿಂದ ಇದೂ ಇತರರಲ್ಲಿ ದಯೆಯಿಂದ ವರ್ತಿಸಬೇಕಾದುದು ನ್ಯಾಯವೂ ಉಚಿತವೂ ಆಗಿದೆ. ಹಾಗೆಯೇ ಇದೂ ದಯೆಯೇ ಧರ್ಮವಾಗಿ ಉಳ್ಳದ್ದಾಗಿದೆ. ಅಲ್ಲದೆ ಹಾಗೆಯೇ ಪ್ರಾಣವೂ ಸತ್ಯದಲ್ಲಿ ಆಶ್ರಯವನ್ನು ಪಡೆದಿದೆ ಎಂದೂ ಹೇಳಲ್ಪಟ್ಟಿದೆ. ಆದುದರಿಂದ ತಿಳಿದವರು ದಯೆಯನ್ನೂ ಹಾಗೆಯೇ ಸತ್ಯವನ್ನೂ ಯಾವಾಗಲೂ ರಕ್ಷಿಸಬೇಕು. ॥೧೭॥

ಸುಂದರವಾದ ಜಘನವುಳ್ಳ ಎಲೌ ಸುಂದರಿಯೇ, ಈ ರೀತಿಯಲ್ಲಿ ನೀನು ರಾಕ್ಷಸರನ್ನು ಕೊಲ್ಲುವುದಕ್ಕೆ ಕಾರಣವೇನು ? ಎಂದು ಅಸಿಲೋಮನು ಕೇಳಿದನು.

ದೇವಿಯು ಹೇಳಿದಳು— ಬಲಿಷ್ಠವಾದ ಬಾಹುಗಳುಳ್ಳ ಎಲೈ ಅಸಿಲೋಮನೇ, ನೀನು ನನ್ನನ್ನು ಕುರಿತು—ಇಲ್ಲಿ ಬಂದಿರುವುದೇಕೆ ? ದೈತ್ಯರನ್ನು ಕೊಲ್ಲುವುದರಿಂದ ಪ್ರಯೋಜನವೇನು ? ಎಂದು ಯಾವ ಪ್ರಶ್ನೆಯನ್ನು ಕೇಳಿದೆಯೋ ಅದಕ್ಕೆ ಉತ್ತರವನ್ನು ಹೇಳುತ್ತೇನೆ, ಕೇಳು ॥೧೮॥

ತದಹಂ ಸಂಪ್ರವಕ್ಷ್ಯಾಮಿ ಹನನೇ ಚ ಪ್ರಯೋಜನಂ ।
ವಿಚರಾಮಿ ಸದಾ ದೈತ್ಯ ಸರ್ವಲೋಕೇಷು ಸರ್ವದಾ ॥೧೯॥

ನ್ಯಾಯಾನ್ಯಾಯೌ ಚ ಭೂತಾನಾಂ ಪಶ್ಯಂತೀ ಸಾಕ್ಷಿರೂಪಿಣೀ ।
ನ ಮೇ ಕದಾಪಿ ಭೋಗೇಚ್ಛಾ ನ ಲೋಭೋ ನ ಚ ವೈರಿತಾ ॥೨೦॥

ಧರ್ಮಾರ್ಥಂ ವಿಚರಾಮ್ಯತ್ರ ಸಂಸಾರೇ ಸಾಧುರಕ್ಷಣಂ ।
ವ್ರತಮೇತತ್ತು ನಿಯತಂ ಪಾಲಯಾಮಿ ನಿಜಂ ಸದಾ ॥೨೧॥

ಸಾಧೂನಾಂ ರಕ್ಷಣಂ ಕಾರ್ಯಂ ಹಂತವ್ಯಾ ಯೇಽಪ್ಯಸಾಧವಃ ।
ವೇದಸಂರಕ್ಷಣಂ ಕಾರ್ಯಮವತಾರೈರನೇಕಶಃ ॥೨೨॥

---

ಎಲೈ ಅಸುರನೇ, ಈ ಜಗತ್ತಿನಲ್ಲಿ ನಡೆಯುವ ಎಲ್ಲವನ್ನೂ ಅಭಿಮಾನ ಪಕ್ಷಪಾತಗಳಿಲ್ಲದೆ ಸಾಕ್ಷಿಯಂತೆ ಉದಾಸೀನತೆಯಿಂದ ಎಂದರೆ ನಿಷ್ಪಕ್ಷಪಾತದ ದೃಷ್ಟಿಯಿಂದ ನೋಡುವ ಸ್ವಭಾವದವಳಾದ ನಾನು, ಪ್ರಪಂಚದಲ್ಲಿ ಪ್ರಾಣಿಗಳು ಮಾಡುತ್ತಿರುವ ನ್ಯಾಯ ಮತ್ತು ಅನ್ಯಾಯಗಳನ್ನೂ, ಧರ್ಮ ಮತ್ತು ಅಧರ್ಮಗಳನ್ನೂ ನೋಡುತ್ತಾ ಗಮನಿಸುತ್ತಾ ಯಾವಾಗಲೂ ಸಂಚರಿಸುತ್ತಿರುವೆನು. ॥೧೯॥

ನನಗೆ ಯಾವಾಗಲೂ ವಿಷಯಸುಖದ ಅನುಭವದಲ್ಲಿ ಅಭಿಲಾಷೆಯಿಲ್ಲವು. ದುರಾಶೆಯೂ ಮತ್ತು ಯಾರಲ್ಲಿಯೂ ದ್ವೇಷವೂ ಇರುವುದಿಲ್ಲವು. ಕೇವಲ ಧರ್ಮ ರಕ್ಷಣೆಗಾಗಿ ಎಂದರೆ, ದುಷ್ಟರನ್ನು ನಿಗ್ರಹಿಸುವುದು ಮತ್ತು ಸತ್ಪುರುಷರನ್ನು ಕಾಪಾಡುವುದು, ಇದಕ್ಕಾಗಿ ಈ ಲೋಕಗಳಲ್ಲಿ ಈ ಪ್ರಾಪಂಚಿಕ ವ್ಯವಹಾರದಲ್ಲಿ ತೊಡಗಿರುವವಳಂತೆ ತೋರುತ್ತಾ ತಿರುಗುತ್ತಿರುತ್ತೇನೆ. ॥೨೦॥

ಆದುದರಿಂದ ಸತ್ಪುರುಷರನ್ನು ಸಲಹುವುದೇ ನನ್ನ ನಿಜವಾದ ವ್ರತವು. ಅದನ್ನಾವಾಗಲೂ ಕಾಪಾಡುವೆನು. ಅದಕ್ಕಾಗಿ ಸತ್ಪುರುಷರ ರಕ್ಷಣೆಯನ್ನೂ ಅವರನ್ನು ಹಿಂಸಿಸುವ ದುಷ್ಟರ ಕೊಲ್ಲುವಿಕೆಯನ್ನೂ ಮಾಡಬೇಕಾಗಿದೆ. ॥೨೧॥

ಮತ್ತು ಅವಶ್ಯಕವಾದಾಗಲೆಲ್ಲ ಅನೇಕ ಅವತಾರಗಳನ್ನು ಮಾಡಿ ಆ ಧರ್ಮದ ತಿಳಿವಳಿಕೆಯನ್ನು ಕೊಡುವ ವೇದಗಳ ಸಂರಕ್ಷಣೆಯನ್ನೂ ಮಾಡುತ್ತಿರಬೇಕು. ಆದುದರಿಂದ ಪ್ರತಿಯೊಂದು ಯುಗದಲ್ಲಿಯೂ ನಾನೇ ಆಯಾಯ ಅವತಾರಗಳನ್ನು ಮಾಡುತ್ತಿರುತ್ತೇನೆ. ವಿಷ್ಣು ಮೊದಲಾದವರು ನಿಮಿತ್ತ ಮಾತ್ರರು, ಎಂದು ಭಾವವು. ॥೨೨॥

ಯುಗೇ ಯುಗೇಽತ ಏವಾಹಮವತಾರಾನ್ಬಿಭರ್ಮಿ ಚ ।
ಮಹಿಷಸ್ತು ದುರಾಚಾರೋ ದೇವಾನ್ವೈ ಹಂತುಮುದ್ಯತಃ ॥೨೩॥

ಜ್ಞಾತ್ವಾಽಹಂ ತದ್ವಧಾರ್ಥಂ ಭೋ ಪ್ರಾಪ್ತಾಽಸ್ಮಿ ರಾಕ್ಷಸಾಧುನಾ ।
ತಂ ಹನಿಷ್ಯೇ ದುರಾಚಾರಂ ಸುರಶತ್ರುಂ ಮಹಾಬಲಂ ॥೨೪॥

ಗಚ್ಛ ವಾ ತಿಷ್ಠ ಕಾಮಂ ತ್ವಂ ಸತ್ಯಮೇತದುದಾಹೃತಂ ।
ಬ್ರೂಹಿ ವಾ ತಂ ದುರಾತ್ಮಾನಂ ರಾಜಾನಂ ಮಹಿಷೀಸುತಂ ॥೨೫॥

ಕಿಮನ್ಯಾನ್ಪ್ರೇಷಯಸ್ಯತ್ರ ಸ್ವಯಂ ಯುದ್ಧಂ ಕುರುಷ್ವ ಹ ।
ಸಂಧಿಂ ಚೇತ್ಕರ್ತುಮಿಚ್ಛಾಽಸ್ತಿ ರಾಜ್ಞಸ್ತವ ಮಯಾ ಸಹ ॥೨೬॥

---

ಆದರೆ ನಿನ್ನೊಡೆಯನಾದ ಮಹಿಷಾಸುರನು ದುರ್ನಡತೆಯುಳ್ಳವನಾಗಿ, ಸಾಧುಗಳಾದ ದೇವತೆಗಳನ್ನು ಹಿಂಸಿಸಲುದ್ಯುಕ್ತನಾಗಿರುತ್ತಾನೆ. ಆದುದರಿಂದಲೇ ಇದನ್ನು ನಾನು ತಿಳಿದು, ಎಲೈ ರಾಕ್ಷಸನೇ, ಆ ಮಹಿಷನ ವಧೆಗಾಗಿ ಬಂದಿರುತ್ತೇನೆ. ॥೨೩॥

ಬಲಶಾಲಿಯಾದ, ದೇವತೆಗಳಿಗೆ ಶತ್ರುವಾದ ಮತ್ತು ದುರ್ನಡತೆಯುಳ್ಳ ಆ ಮಹಿಷನನ್ನು ನಿಮ್ಮೆಲ್ಲರೊಂದಿಗೆ ಕೊಲ್ಲುವೆನು. ಆದುದರಿಂದ ಪ್ರಕೃತದಲ್ಲಿ ನೀನು ಇಷ್ಟವಿದ್ದರೆ ಇಲ್ಲಿರು, ಹಾಗಿಲ್ಲದಿದ್ದರೆ ಹೊರಟುಹೋಗುವುದಾದರೂ ಹೋಗು. ॥೨೪॥

ಅಥವಾ ಇಲ್ಲಿಂದ ಹೋಗಿ ದುರ್ನಡತೆಯುಳ್ಳ ಎಮ್ಮೆಯ ಮಗನಾದ ಆ ನಿಮ್ಮೊಡೆಯನಾದ ಮಹಿಷನನ್ನು ಕುರಿತು—" ಎಲೈ ರಾಜನೇ, ಸುಮ್ಮನೆ ಇತರರಲ್ಲಿ ಯಾರು ಯಾರನ್ನೋ ಏಕೆ ನನ್ನೊಡನೆ ಯುದ್ಧಕ್ಕಾಗಿ ಇಲ್ಲಿಗೆ ಕಳುಹಿಸುತ್ತಿರುವೆ ? ನೀನೇ ಬಂದು ನನ್ನೊಡನೆ ಯುದ್ಧವನ್ನು ಮಾಡು " ಎಂದು ನಾನು ಹೇಳಿದೆನೆಂದಾದರೂ ಹೇಳು. ॥೨೫॥

ಮತ್ತು ಎಲೈ ದೈತ್ಯನೇ, ನೀನೂ ನಿನ್ನೊಡೆಯನೂ ನನ್ನೊಡನೆ ಸಮಾಧಾನವನ್ನು ಮಾಡಿಕೊಳ್ಳಲು ಅಪೇಕ್ಷಿಸುವಿರಾದರೆ ಈ ಕೂಡಲೇ ನೀವೆಲ್ಲರೂ ದೇವತೆಗಳ ಮೇಲಿನ ದ್ವೇಷವನ್ನು ಬಿಟ್ಟು ಸುಖವಾಗಿ ಇಲ್ಲಿಂದ ಪಾತಾಳಕ್ಕೆ ನಡೆಯಿರಿ. ॥೨೬॥

ಸರ್ವೇ ಗಚ್ಛಂತು ಪಾತಾಲಂ ವೈರಂ ತ್ಯಕ್ತ್ವಾ ಯಥಾಸುಖಂ ।
ದೇವದ್ರವ್ಯಂ ತು ಯತ್ಕಿಂಚಿದ್ಧೃತಂ ಜಿತ್ವಾ ರಣೇ ಸುರಾನ್ ॥೨೭॥
ತದ್ದತ್ವಾ ಯಾಂತು ಪಾತಾಲಂ ಪ್ರಹ್ರಾದೋ ಯತ್ರ ತಿಷ್ಠತಿ ।

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ದೇವ್ಯಾ ಅಸಿಲೋಮಾ ಪುರಃ ಸ್ಥಿತಃ ॥೨೮॥
ಬಿಡಾಲಾಖ್ಯಂ ಮಹಾವೀರಂ ಪಪ್ರಚ್ಛ ಪ್ರೀತಿಪೂರ್ವಕಂ ।

॥ ಅಸಿಲೋಮೋವಾಚ ॥

ಶ್ರುತಂ ತೇಽದ್ಯ ಬಿಡಾಲಾಖ್ಯ ಭವಾನ್ಯಾ ಕಥಿತಂ ಚ ಯತ್ ॥೨೯॥
ಏವಂ ಗತೇ ಕಿಂ ಕರ್ತವ್ಯೋ ವಿಗ್ರಹಃ ಸಂಧಿರೇವ ವಾ ।

---

ಅಲ್ಲದೆ ನೀವು ಯುದ್ಧದಲ್ಲಿ ದೇವತೆಗಳನ್ನು ಜಯಿಸಿ ಅವರಿಂದ ಯಾವ ಯಾವ ವಸ್ತುಗಳನ್ನು ಅಪಹರಿಸಿರುವಿರೋ ಅವೆಲ್ಲವನ್ನೂ ಆ ದೇವತೆಗಳಿಗೇ ಕೊಟ್ಟು ನಿಮ್ಮ ಪೂರ್ವಪುರುಷನಾದ ಪ್ರಹ್ಲಾದನಿರುವ ಸ್ಥಳವಾದ ಪಾತಾಳಲೋಕಕ್ಕೆ ಹೋಗಿರಿ. ||೨೭||

ವ್ಯಾಸಮುನಿಯು ಹೇಳಿದನು—ದೇವಿಯ ಈ ಮಾತುಗಳನ್ನು ಕೇಳಿ ಎದುರಿನಲ್ಲಿ ನಿಂತಿದ್ದ ಆ ಅಸಿಲೋಮನು ತನ್ನೊಡನೆ ಬಂದಿದ್ದ ಬಿಡಾಲನೆಂಬ ದೈತ್ಯ ನನ್ನು ಕುರಿತು ಪ್ರೀತಿಪೂರ್ವಕವಾಗಿ ಹೀಗೆ ಹೇಳಿದನು. ||೨೮||

ಅಸಿಲೋಮನು ಹೇಳಿದನು—ಎಲೈ ಬಿಡಾಲಾಸುರನೇ, ಭವಾನಿಯು ಹೇಳಿದ ಮಾತುಗಳನ್ನು ಕೇಳಿದೆಯಾ? ಹೀಗಿರಲು ಈಗಲೂ ನಾವು ಯುದ್ಧವನ್ನು ಮಾಡ ಬೇಕೇ? ಅಥವಾ ದೇವಿಯೊಡನೆ ಸಂಧಿಯನ್ನು ಮಾಡಿಕೊಳ್ಳಬೇಕೇ, ಹೇಳು. ||೨೯||

ಬಿಡಾಲನೆಂಬ ಅಸುರನು ಹೇಳಿದನು—ಎಲೈ ಅಸಿಲೋಮನೇ, ನಮ್ಮ ರಾಜ ನಾದ ಮಹಿಷನು ಈ ಯುದ್ಧದಲ್ಲಿ ನಮಗೆ ಮೃತ್ಯುವು ಸಿದ್ಧವೆಂದು ತಿಳಿದಿರುವನು. ಮತ್ತು ಅವನು ವರಬಲದ ಅಹಂಕಾರದಿಂದ ತುಂಬ ಅಭಿಮಾನಿಯಾದವನು. ಆದುದರಿಂದ ಸಂಧಿಯನ್ನು ಮಾಡಿಕೊಳ್ಳಲು ಇಷ್ಟಪಡುವುದಿಲ್ಲವು. ಹಿಂದೆ ಯುದ್ಧಕ್ಕೆ

|| ಬಿಡಾಲಾಖ್ಯ ಉವಾಚ ||

**ನ ಸಂಧಿಕಾಮೋಽಸ್ತಿ ನೃಪೋಽಭಿಮಾನೀ**
**ಯುದ್ಧೇ ಚ ಮೃತ್ಯುಂ ನಿಯತಂ ಹಿ ಜಾನನ್**
**ದೃಷ್ಟ್ವಾ ಹತಾನ್ ಪ್ರೇರಯತೇ ತಥಾಽಸ್ಮಾನ್**
**ದೈವಂ ಹಿ ಕೋಽತಿಕ್ರಮಿತುಂ ಸಮರ್ಥಃ** ||೩೦||

**ದುಸ್ಸಾಧ್ಯ ಏವಾಸ್ತಿ ಇಹ ಸೇವಕಾನಾಂ**
**ಧರ್ಮಃ ಸದಾ ಮಾನವಿವರ್ಜಿತಾನಾಂ ।**
**ಆಜ್ಞಾಪರಾಣಾಂ ವಶವರ್ತಿಕಾನಾಂ**
**ಪಾಂಚಾಲಿಕಾನಾಮಿವ ಸೂತ್ರಭೇದಾತ್** ||೩೧||
**ಗತ್ವಾ ಕಥಂ ತಸ್ಯ ಪುರಸ್ತ್ವಯಾ ಚ**
**ಮಯಾಽಪಿ ವಕ್ತವ್ಯಮಿದಂ ಕಠೋರಂ ॥**

---

ಕಳುಹಿಸಿದ ದೈತ್ಯರು ಮೃತರಾದುದನ್ನು ನೋಡಿಯೂ ನಮ್ಮನ್ನು ತಿರುಗಿ ದೇವಿ ಯೊಡನೆ ಯುದ್ಧಕ್ಕೆ ಕಳುಹಿಸಿರುತ್ತಾನೆ. ಆದುದರಿಂದ ನಾವು ಈಗ ಯುದ್ಧವನ್ನು ಮಾಡಲೇಬೇಕಾಗಿದೆ. ನಮ್ಮ ಅದೃಷ್ಟವನ್ನು ಅಥವಾ ದಣಿಯ ಅಪ್ಪಣೆಯನ್ನು ನಮ್ಮಲ್ಲಿ ಯಾರು ತಾನೇ ಮೀರಲು ಸಮರ್ಥರಾದಾರು ? ಪರ್ಯವಸಾನವು ನಮ್ಮ ಅದೃಷ್ಟವಿದ್ದಂತೆ ಆಗಲಿ. ||೩೦||

ಪ್ರಭುಗಳ ಅಧೀನರಾದ ಮತ್ತು ಅವರ ಆಜ್ಞೆಯ ನಿರ್ವಹಣದಲ್ಲಿಯೇ ನಿಯು ಕ್ತರಾಗಿರುವ, ಆದುದರಿಂದ ಆತ್ಮಾಭಿಮಾನ ಗೌರವಗಳಿಂದ ರಹಿತರಾದ ನಮ್ಮಂತಹ ವರ ಧರ್ಮವು ಎಷ್ಟು ಕಷ್ಟವಾಗಿರಲಿ, ಅದನ್ನು ದಾರಗಳಿಗೆ ಆಟಗಾರನು ಬದಲಾಯಿ ಸುತ್ತಾ ಕಟ್ಟುತ್ತಿರುವ ಬೊಂಬೆಗಳಂತೆ, ನಾವೂ ಸ್ವಾತಂತ್ರ್ಯವಿಲ್ಲದೆ, ವಿಧೇಯತೆ ಯಿಂದ ನೆರವೇರಿಸಲು ದುಡಿಯುತ್ತಿರಬೇಕಾಗಿದೆ. ಇಂತಹ ಸೇವಕರ ಧರ್ಮವು ಬಹುಕಷ್ಟಕರವಾದುದು. ||೩೧||

ನಮ್ಮ ಪ್ರಭುವು ಸಾಮಾದ್ಯುಪಾಯಗಳಿಂದ ಸಿಂಹವಾಹಿನಿಯಾದ ದೇವಿ ಯನ್ನು ಕರೆದುಕೊಂಡು ಬನ್ನಿರೆಂದು ಹೇಳಿರುವಾಗ ಅವನ ಸೇವಕರಾದ ನಾವುಗಳು ತಿರುಗಿ ಅವನ ಹತ್ತಿರಕ್ಕೆ ಹೋಗಿ, ಅವನ ಮುಂದೆ ನಿಂತುಕೊಂಡು, ನಾವೆಲ್ಲರೂ ದೇವತೆಗಳಿಂದ ಗೆದ್ದು ತಂದಿರುವ ರತ್ನಗಳನ್ನೂ, ದ್ರವ್ಯವನ್ನೂ ದೇವತೆಗಳಿಗೆ ತಿರುಗಿ

ಗಚ್ಛಂತು ಪಾತಾಲಮಿತಶ್ಚ ಸರ್ವೇ
ದತ್ವಾಽಥ ರತ್ನಾನಿ ಧನಂ ಸುರಾಣಾಂ
ಪ್ರಿಯಂ ಹಿ ವಕ್ತವ್ಯಮಸತ್ಯಮೇವ
ನ ಚ ಪ್ರಿಯಂ ಸ್ಯಾದ್ಧಿತಕೃತ್ತು ಭಾಷಿತಂ ॥೩೨॥

ಸತ್ಯಂ ಪ್ರಿಯಂ ನೋ ಭವತೀಹ ಕಾಮಂ
ಮೌನಂ ತತೋ ಬುದ್ಧಿಮತಾಂ ಪ್ರತಿಷ್ಠಿತಂ ॥
ನ ಫಲ್ಗುವಾಕ್ಯೈಃ ಪ್ರತಿಬೋಧನೀಯೋ
ರಾಜಾ ತು ವೀರೈರಿತಿ ನೀತಿಶಾಸ್ತ್ರಂ ॥೩೨॥

ನ ನೂನಂ ತತ್ರ ಗಂತವ್ಯಂ ಹಿತಂ ವಾ ವಕ್ತುಮಾದರಾತ್ ।
ಪ್ರಷ್ಟುಂ ವಾಽಪಿ ಗತೇ ರಾಜಾ ಕೋಪಯುಕ್ತೋ ಭವಿಷ್ಯತಿ ॥೩೩॥

---

ಕೊಟ್ಟು, ಇಲ್ಲಿಂದ ಪಾತಾಳಲೋಕಕ್ಕೆ ಹೋಗೋಣ ಎಂದು ಕರ್ಣಕಠೋರವಾದ ಈ ಮಾತನ್ನು ಅವನಿಗೆ ನಾವು ಹೇಗೆ ಹೇಳುವುದು ? ॥೩೧॥

ಪ್ರಭುವಿನ ಹತ್ತಿರಕ್ಕೆ ಹೋಗಿ ಅವನಿಗೆ ಕೇಳಲು ಹಿತವಾಗಿರುವಂತೆ ಸುಳ್ಳು ಮಾತನ್ನೇ ಆದರೂ ಹೇಳಬೇಕು. ಮುಂದೆ ಅನುಕೂಲಕಾಲವನ್ನುಂಟುಮಾಡುವುದಾದರೂ ಒಳ್ಳೆಯ ಬುದ್ಧಿಯ ಮಾತು ತಾತ್ಕಾಲಿಕವಾಗಿ ಕೇಳುವುದಕ್ಕೆ ಹಿತವಾಗಿರುವುದಿಲ್ಲ. ಏಕೆಂದರೆ, ನಿಜವಾಗಿಯೂ ಹಿತಕರವಾದ ಬುದ್ಧಿವಾದವು ಕೇಳುವುದಕ್ಕೆ ಈಗ ಹಿತವಾಗಿರುವುದಿಲ್ಲ. ಆದುದರಿಂದ ವಿವೇಕಿಗಳಾದವರು ಸುಮ್ಮನಿರುವುದು ಮೇಲಾದುದೇ ಹೊರತು, ವ್ಯರ್ಥವಾದ ಹಗುರವಾಗಿ ತೋರುವ ಬುದ್ಧಿವಾದಗಳಿಂದ ದಣಿಗೆ ಎಚ್ಚರಿಕೆಯನ್ನು ಹೇಳುವುದಕ್ಕೆ ಹೋಗುವುದು ಗಟ್ಟಿಗರಾದ ಸೇವಕರಿಗೂ ತಕ್ಕ ಧರ್ಮವಲ್ಲವೆಂದು ನೀತಿಶಾಸ್ತ್ರವು ಎಚ್ಚರಿಸುತ್ತಾ ಇರುವುದು. ॥೩೨॥

ನಮ್ಮ ಪ್ರಭುವಿನಲ್ಲಿ ವಿಶ್ವಾಸದಿಂದ ಹಿತವನ್ನು ಹೇಳುವುದಕ್ಕಾದರೂ ಖಂಡಿತವಾಗಿಯೂ ಅವನ ಹತ್ತಿರಕ್ಕೆ ಹೋಗಬಾರದು. ಅಲ್ಲದೆ ಇಲ್ಲಿನ ಸಂಗತಿಗಳನ್ನು ತಿಳಿದು ಮುಂದೇನು ಮಾಡಬೇಕೆಂದು ಕೇಳುವುದಕ್ಕಾದರೂ ಕೂಡ ನಾವು ರಾಜನ ಬಳಿಗೆ ಹೋಗಬಾರದು. ಏಕೆಂದರೆ ಪ್ರಭುವು ನಮ್ಮ ಮೇಲೆ ಕೋಪಿಸಿಕೊಳ್ಳುವನು. ಅಲ್ಲದೆ ನಾವು ಬರುವಾಗಲೇ ನಮ್ಮನ್ನು ಕುರಿತು ಪ್ರಭುವು, ಸಾಧ್ಯವಾದರೆ ಇವಳನ್ನು ಹಿಡಿದು ತಂದು ನನ್ನ ವಶಪಡಿಸಿರಿ. ಇಲ್ಲವಾದರೆ ಯುದ್ಧವನ್ನು ಮಾಡಿ

**ಇತಿ ಸಂಚಿಂತ್ಯ ಕರ್ತವ್ಯಂ ಯುದ್ಧಂ ಪ್ರಾಣಸ್ಯ ಸಂಶಯೇ ।**
**ಸ್ವಾಮಿಕಾರ್ಯಂ ಪರಂ ಮತ್ವಾ ಮರಣಂ ತೃಣವತ್ತಥಾ ॥೩೪॥**

॥ ವ್ಯಾಸ ಉವಾಚ ॥

**ಇತಿ ಸಂಚಿಂತ್ಯ ತೌ ವೀರೌ ಸಂಸ್ಥಿತೌ ಯುದ್ಧತತ್ಪರೌ ।**
**ಧನುರ್ಬಾಣಧರೌ ತತ್ರ ಸನ್ನದ್ಧೌ ರಥಸಂಗತೌ ॥೩೫॥**

**ಪ್ರಥಮಂ ತು ಬಿಡಾಲಾಖ್ಯಃ ಸಪ್ತ ಬಾಣಾನ್ಮುಮೋಚ ಹ ।**
**ಅಸಿಲೋಮಾ ಸ್ಥಿತೋ ದೂರೇ ಪ್ರೇಕ್ಷಕಃ ಪರಮಾಸ್ತ್ರವಿತ್ ॥೩೬॥**

**ಚಿಚ್ಛೇದ ತಾಂಸ್ತಥಾ ಪ್ರಾಪ್ತಾನಂಬಿಕಾ ಸ್ವಶರೈಃ ಶರಾನ್ ।**
**ಬಿಡಾಲಾಖ್ಯಂ ತ್ರಿಭಿರ್ಬಾಣೈರ್ಜಘಾನ ಚ ಶಿಲಾಶಿತೈಃ ॥೩೭॥**

---

ಇವಳನ್ನು ಸಂಹರಿಸಿರಿ, ಎಂದು ಹೇಳಿಯೇ ಇರುವನು. ಆದುದರಿಂದ ದೇವಿಯು ಸಾಮದಾನಗಳಿಗೆ ಬಗ್ಗದಿರುವಾಗ ಯುದ್ಧವೇ ಕಾರ್ಯವು, ಎಂದು ತಾತ್ಪರ್ಯವು. ॥೩೩॥

ನಮ್ಮ ಪ್ರಭುವಿನ ಆಜ್ಞೆಯಂತೆ ನಾವು ದೇವಿಯ ಸಂಗಡ ಮಾತನಾಡಿದೆವು. ದೇವಿಯು ಹೇಳಿದ ಉತ್ತರವನ್ನು ನಮ್ಮ ಪ್ರಭುವಿಗೆ ಹೇಳಿದಲ್ಲಿ ಅವನು ಕೋಪಿಸಿ ಕೊಳ್ಳುವನು. ದೇವಿಯು, ನಮ್ಮ ಪ್ರಭುವು ಹೇಳಿ ಕಳುಹಿಸಿರುವ ಮಾತಿಗೆ ಯುದ್ಧ ವನ್ನು ವಿನಾ ಬೇರೆ ಉತ್ತರವನ್ನು ಹೇಳುವುದಿಲ್ಲ. ನಮ್ಮ ಪ್ರಾಣವು ಹೇಗೂ ಉಳಿ ಯುವುದೇ ಸಂಶಯವಾಗಿರುವ ಈ ಸಂದರ್ಭದಲ್ಲಿ ನಮ್ಮ ಸ್ವಾಮಿಕಾರ್ಯವನ್ನಾ ದರೂ ಹೆಚ್ಚಿನದನ್ನಾಗಿ ಭಾವಿಸಿ, ದಣಿಯ ಉಪ್ಪನ್ನು ತಿಂದು ಬೆಳೆದಿರುವ ನಮ್ಮ ದೇಹಪ್ರಾಣಗಳನ್ನು ಹುಲ್ಲಿನಂತೆ ಹಗುರವಾಗಿ ತಿಳಿದುಕೊಂಡು ಉತ್ಸಾಹದಿಂದ ಯುದ್ಧವನ್ನು ಮಾಡಿ ಋಣಮುಕ್ತರಾಗಲು ಯತ್ನಿಸಲೇಬೇಕು. ॥೩೪॥

ವ್ಯಾಸಮುನಿಯು ಹೇಳಿದನು—ಹೀಗೆ ಯೋಚನೆಮಾಡಿ, ಆ ಶೂರರಿಬ್ಬರೂ ಯುದ್ಧಮಾಡುವುದೇ ಸರಿಯೆಂದು ನಿಶ್ಚಯಿಸಿ ರಥದಲ್ಲಿ ಕೂತುಕೊಂಡು ಧನುರ್ಬಾಣ ಗಳನ್ನು ಹಿಡಿದುಕೊಂಡು ಸ್ಥಿರವಾಗಿ ಯುದ್ಧ ಮಾಡುವುದಕ್ಕೆ ಸಿದ್ಧರಾದರು. ॥೩೫॥

ಮೊದಲು ಬಿಡಾಲನೆಂಬುವನು ಏಳು ಬಾಣಗಳನ್ನು ದೇವಿಯ ಮೇಲೆ ಬಿಟ್ಟನು. ಉತ್ಕೃಷ್ಟವಾದ ಅಸ್ತ್ರಗಳನ್ನು ತಿಳಿದಿರುವ ಅಸಿಲೋಮನೆಂಬುವನು ದೂರದಲ್ಲಿಯೇ ನಿಂತು ನೋಡುತ್ತಿದ್ದನು. ॥೩೬॥

ಪ್ರಾಪ್ಯ ಬಾಣವ್ಯಥಾಂ ದೈತ್ಯಃ ಪಪಾತ ಸಮರಾಂಗಣೇ ।
ಮೂರ್ಛಿತೋಽಥ ಮಮಾರಾಶು ದಾನವೋ ದೈವಯೋಗತಃ ॥೩೮॥

ಬಿಡಾಲಾಖ್ಯಂ ಹತಂ ದೃಷ್ಟ್ವಾ ರಣೇ ಶಕ್ತಿಶರೋತ್ಕರೈಃ ।
ಅಸಿಲೋಮಾ ಧನುಷ್ಪಾಣಿಃ ಸಂಸ್ಥಿತೋ ಯುದ್ಧತತ್ಪರಃ ॥೩೯॥

ಊರ್ಧ್ವಂ ಸವ್ಯಂ ಕರಂ ಕೃತ್ವಾ ತಾಮುವಾಚ ಮಿತಂ ವಚಃ ।
ದೇವಿ ಜಾನಾಮಿ ಮರಣಂ ದಾನವಾನಾಂ ದುರಾತ್ಮನಾಂ ॥೪೦॥

ತಥಾಽಪಿ ಯುದ್ಧಂ ಕರ್ತವ್ಯಂ ಪರಾಧೀನೇನ ವೈ ಮಯಾ ।
ಮಹಿಷೋ ಮಂದಬುದ್ಧಿಶ್ಚ ನ ಜಾನಾತಿ ಪ್ರಿಯಾಪ್ರಿಯೇ ॥೪೧॥

---

ಮಾತೆಯಾದ ದೇವಿಯು, ಬಿಡಾಲನಿಂದ ಬಿಡಲ್ಪಟ್ಟು ತನ್ನ ಹತ್ತಿರಕ್ಕೆ ಬರುತ್ತಿರುವ ಆ ಬಾಣಗಳನ್ನು ತನ್ನ ಬಾಣಗಳಿಂದ ಕತ್ತರಿಸಿದಳು. ಮತ್ತು ಬಿಡಾಲನನ್ನು ಕಲ್ಲಿನಂತೆ ಗಟ್ಟಿಯಾದ ಮತ್ತು ಚೂಪಾದ ಮೂರು ಬಾಣಗಳಿಂದ ಪ್ರತಿಯಾಗಿ ಹೊಡೆದಳು. ॥೩೭॥

ಬಿಡಾಲನೆಂಬ ರಾಕ್ಷಸನು ಬಾಣದ ಏಟಿನಿಂದ ಉಂಟಾದ ವೇದನೆಯನ್ನು ಹೊಂದಿ ಯುದ್ಧರಂಗದಲ್ಲಿ ನೆಲದ ಮೇಲೆ ಬಿದ್ದನು. ದೈವಗತಿಯಿಂದ ಮೊದಲು ಮೂರ್ಛಿತನಾಗಿ ಆ ಮೇಲೆ ಮರಣವನ್ನು ಹೊಂದಿದನು. ॥೩೮॥

ಧನುಸ್ಸನ್ನು ಕೈಯಲ್ಲಿ ಹಿಡಿದುಕೊಂಡಿರುವ ಅಸಿಲೋಮನೆಂಬ ರಾಕ್ಷಸನು, ಯುದ್ಧದಲ್ಲಿ ಶಕ್ತಿದೇವಿಯ ಶ್ರೇಷ್ಠವಾದ ಬಾಣಗಳಿಂದ ಬಿಡಾಲನೆಂಬುವನು ನಾಶವಾದುದನ್ನು ನೋಡಿ ತಾನು ಯುದ್ಧ ಮಾಡುವುದರಲ್ಲಿ ಆಸಕ್ತನಾಗಿ ನಿಂತನು. ॥೩೯॥

ದೇವಿಯ ಮುಂದೆ ತನ್ನ ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದುಕೊಂಡು ದೇವಿಯ ಸಂಗಡ ಹೀಗೆ ಮಾತನ್ನಾಡಿದನು. ಎಲೌ ದೇವಿಯೇ, ದುಷ್ಟರಾದ ರಾಕ್ಷಸರಿಗೆ ಮರಣವಾಗುತ್ತದೆಂಬುದನ್ನು ತಿಳಿದಿದ್ದೇನೆ. ॥೪೦॥

ಆದಾಗ್ಯೂ ನಾನು ಇನ್ನೊಬ್ಬರ ಅಧೀನದಲ್ಲಿರುವ ಕಾರಣ ಯುದ್ಧವನ್ನು ಮಾಡಬೇಕಾಗಿದೆ. ಮಹಿಷಾಸುರನು ದಡ್ಡತನವುಳ್ಳವನು. ಅವನು ತನಗೆ ಹಿತವನ್ನೂ, ಕೆಟ್ಟದನ್ನೂ ಸಹ ವಿವೇಚಿಸಿ ತಿಳಿಯಲಾರನು. ॥೪೧॥

ತದಗ್ರೇ ನೈವ ವಕ್ತವ್ಯಂ ಹಿತಂ ಚೈವಾಪ್ರಿಯಂ ಮಯಾ ।
ಮರ್ತವ್ಯಂ ವೀರಧರ್ಮೇಣ ಶುಭಂ ವಾಪ್ಯಶುಭಂ ಭವೇತ್ ॥೪೨॥

ದೈವಮೇವ ಪರಂ ಮನ್ಯೇ ಧಿಕ್ಪೌರುಷಮನರ್ಥಕಂ ।
ಪತಂತಿ ದಾನವಾಸ್ತೂರ್ಣಂ ತವ ಬಾಣಹತಾ ಭುವಿ ॥೪೩॥

ಇತ್ಯುಕ್ತ್ವಾ ಶರವೃಷ್ಟಿಂ ಸ ಚಕಾರ ದಾನವೋತ್ತಮಃ ।
ದೇವೀ ಚಿಚ್ಛೇದ ತಾನ್ಬಾಣೈರಪ್ರಾಪ್ತಾಂಸ್ತು ನಿಜಾಂತಿಕೇ ॥೪೪॥

ಅನ್ಯೈರ್ವಿವ್ಯಾಧ ತಂ ತೂರ್ಣಮಸಿಲೋಮಾನಮಾಶುಗೈಃ ।
ವೀಕ್ಷಿತಾಮರಸಂಘೈಶ್ಚ ಕೋಪಪೂರ್ಣಾನನಾ ತದಾ ॥೪೫॥

---

ಅವನಧೀನದಲ್ಲಿರುವ ನಾನು ಅವನ ಎದುರಿಗೆ ಹಿತವನ್ನೂ ಕೆಟ್ಟದ್ದನ್ನೂ ಸಹ ವಿವೇಚಿಸಿ ತಿಳಿಯ ಹೇಳತಕ್ಕದ್ದು ಸರಿಯಲ್ಲವು. ಆದುದರಿಂದ ವೀರಧರ್ಮವನ್ನನುಸರಿಸಿ ಯುದ್ಧ ಮಾಡಿ ಸಾಯಲೇಬೇಕು. ಒಳ್ಳೆಯದೋ ಅಥವಾ ಕೆಟ್ಟದ್ದೋ ಯಾವುದೋ ಒಂದು ಅವಶ್ಯವಾಗಿ ಆಗುವುದು. ॥೪೨॥

ಈಗ ದೈವಗತಿಯೆನ್ನೇ ಪ್ರಬಲವಾದುದೆಂದು ತಿಳಿಯುತ್ತೇನೆ. ನಿಷ್ಪ್ರಯೋಜನವಾದ ಮತ್ತು ವಿರುದ್ಧ ಫಲವನ್ನೂ ಕೊಡುವ ಪುರುಷಪ್ರಯತ್ನವು ಧಿಕ್ಕಾರವನ್ನು ಪಡೆಯಲಿ. ನಿನ್ನ ಬಾಣದಿಂದ ಹೊಡೆಯಲ್ಪಟ್ಟವರಾಗಿ ರಾಕ್ಷಸರೆಲ್ಲರೂ ಬೇಗನೆ ಭೂಮಿಯಲ್ಲಿ ಬಿದ್ದು ಸಾಯುವರು. ॥೪೩॥

ಹೀಗೆಂದು ಹೇಳಿ, ಆ ದಾನವಶ್ರೇಷ್ಠನಾದ ಅಸಿಲೋಮನು ಬಾಣಗಳನ್ನು ಮಳೆಹುಯ್ಯುವಂತೆ ಸುರಿಸಿದನು. ದೇವಿಯು, ಆ ಬಾಣಗಳು ತನ್ನ ಹತ್ತಿರಕ್ಕೆ ಬರುವುದರ ಒಳಗಾಗಿ ಅವುಗಳನ್ನು ತನ್ನ ಬಾಣಗಳಿಂದ ಕತ್ತರಿಸಿದಳು. ॥೪೪॥

ಆಗ ದೇವಿಯು, ದೇವತೆಗಳು ಗುಂಪಾಗಿ ನೋಡುತ್ತಿರಲು, ಕೋಪದಿಂದ ತುಂಬಿದ ಮುಖವುಳ್ಳವಳಾಗಿ ಬೇರೆಯಾದ ಬಾಣಗಳಿಂದ ಬೇಗನೆ ಅಸಿಲೋಮನನ್ನೂ ಹೊಡೆದಳು. ॥೪೫॥

ಶುಶುಭೇ ದಾನವಃ ಕಾಮಂ ಬಾಣೈರ್ವಿದ್ಧತನುಃ ಕಿಲ ।
ಸ್ರವದ್ರುಧಿರಧಾರಃ ಸ ಪ್ರಫುಲ್ಲಃ ಕಿಂಶುಕೋ ಯಥಾ ॥೪೬॥

ಅಸಿಲೋಮಾ ಗದಾಂ ಗುರ್ವೀಂ ಲೌಹೀಮುದ್ಯಮ್ಯ ವೇಗತಃ ।
ದುದ್ರಾವ ಚಂಡಿಕಾಂ ಕೋಪಾತ್ಸಿಂಹಂ ಮೂರ್ಧ್ನಿ ಜಘಾನ ಹ ॥೪೭॥

ಸಿಂಹೋಽಪಿ ನಖರಾಘಾತೈಸ್ತಂ ದದಾರ ಭುಜಾಂತರೇ ।
ಅಗಣಯ್ಯ ಗದಾಘಾತಂ ಕೃತಂ ತೇನ ಬಲೀಯಸಾ ॥೪೮॥

ಉತ್ಪತ್ಯ ತರಸಾ ದೈತ್ಯೋ ಗದಾಪಾಣಿಃ ಸ ದಾರುಣಃ ।
ಸಿಂಹಮೂರ್ಧ್ನಿ ಸಮಾರುಹ್ಯ ಜಘಾನ ಗದಯಾಽಮ್ಬಿಕಾಂ ॥೪೯॥

ಕೃತಂ ತೇನ ಪ್ರಹಾರಂ ತು ವಂಚಯಿತ್ವಾ ವಿಶಾಂಪತೇ ।
ಖಡ್ಗೇನ ಶಿತಧಾರೇಣ ಶಿರಶ್ಚಿಚ್ಛೇದ ಕಂಠತಃ ॥೫೦॥

---

ಅಸಿಲೋಮನು ಬಾಣಗಳಿಂದ ಹೊಡೆಯಲ್ಪಟ್ಟು, ಧಾರೆಯಾಗಿ ಸುರಿಯುತ್ತಿರುವ ರಕ್ತವುಳ್ಳವನಾಗಿ, ತುಂಬ ಅರಳಿದ ಕೆಂಪಾದ ಹೂವುಗಳುಳ್ಳ ಮುತ್ತುಗದ ಮರದಂತೆ ಕಾಣಿಸುತ್ತಿದ್ದನು. ॥೪೬॥

ಅಸಿಲೋಮನು ಲೋಹದ ಗದೆಯನ್ನು ತೆಗೆದುಕೊಂಡು ವೇಗದಿಂದ ತಿರುಗಿಸುತ್ತಾ ದೇವಿಯ ಸಮೀಪಕ್ಕೆ ಓಡಿಹೋದನು. ಮತ್ತು ಅವಳ ವಾಹನವಾದ ಸಿಂಹದ ತಲೆಯ ಮೇಲೆ ಗದೆಯಿಂದ ಹೊಡೆದನು. ॥೪೭॥

ಬಲಿಷ್ಠನಾದ ಆ ಅಸಿಲೋಮನು ಹೊಡೆದ ಗದೆಯ ಏಟನ್ನು ಲೆಕ್ಕಕ್ಕೆ ತರದೆ, ಸಿಂಹವೂಕೂಡ ತನ್ನ ಉಗುರುಗಳ ಏಟಿನಿಂದ ಅವನನ್ನು ಎದೆಯ ಮೇಲೆ ಸೀಳಿ ಗಾಯಗೊಳಿಸಿತು. ॥೪೮॥

ಕ್ರೂರನಾದ ಆ ರಾಕ್ಷಸನು ಗದೆಯನ್ನು ಹಿಡಿದುಕೊಂಡು ಬೇಗನೆ ಮೇಲಕ್ಕೆ ಹಾರಿ, ಸಿಂಹದ ತಲೆಯ ಮೇಲೆ ಹತ್ತಿ ನಿಂತುಕೊಂಡು ಗದೆಯಿಂದ ದೇವಿಯನ್ನು ಹೊಡೆದನು. ॥೪೯॥

ಎಲೈ ರಾಜನೇ, ಅವನು ಹೊಡೆದ ಏಟನ್ನು ತಪ್ಪಿಸಿಕೊಂಡು, ಹರಿತವಾದ ಧಾರೆಯುಳ್ಳ ತನ್ನ ಕತ್ತಿಯಿಂದ ದೇವಿಯು ಅವನ ತಲೆಯನ್ನು ಕುತ್ತಿಗೆಗೆ ಸರಿಯಾಗಿ ಹೊಡೆದು ಕತ್ತರಿಸಿದಳು. ॥೫೦॥

**ಛಿನ್ನೇ ಶಿರಸಿ ದೈತ್ಯೇಂದ್ರಃ ಪಪಾತ ತರಸಾ ಕ್ಷಿತೌ ।**
**ಹಾಹಾಕಾರೋ ಮಹಾನಾಸೀತ್ಸೈನ್ಯೇ ತಸ್ಯ ದುರಾತ್ಮನಃ ॥೫೧॥**

**ಜಯ ದೇವೀತಿ ದೇವಾಸ್ತಾಂ ತುಷ್ಟುವುರ್ಜಗದಂಬಿಕಾಂ ।**
**ದೇವದುಂದುಭಯೋ ನೇದುರ್ಜಗುಶ್ಚ ನೃಪ ಕಿನ್ನರಾಃ ॥೫೨॥**

**ನಿಹತೌ ದಾನವೌ ವೀಕ್ಷ್ಯ ಪತಿತೌ ಚ ರಣಾಂಗಣೇ ।**
**ನಿಹತಾಃ ಸೈನಿಕಾಃ ಸರ್ವೇ ತತ್ರ ಕೇಸರಿಣಾ ಬಲಾತ್ ॥೫೩॥**

**ಭಕ್ಷಿತಾಶ್ಚ ತಥಾ ಕೇ ಚಿನ್ನಿಶ್ಶೇಷಂ ತದ್ರಣಂ ಕೃತಂ ।**
**ಭಗ್ನಾಃ ಕೇಚಿದ್ಗತಾ ಮಂದಾ ಮಹಿಷಂ ಪ್ರತಿ ದುಃಖಿತಾಃ ॥೫೪॥**

---

ತಲೆಯನ್ನು ಕತ್ತರಿಸಿದನಂತರ ರಾಕ್ಷಸರ ಮುಂದಾಳಾದ ಅವನು ಬೇಗನೆ ಭೂಮಿಯಲ್ಲಿ ಬಿದ್ದನು. ಪಾಪಿಯಾದ ಅವನು ಹಾಗೆ ಬೀಳಲು ರಾಕ್ಷಸರ ಸೇನೆಯಲ್ಲಿ ಬಹಳಮಟ್ಟಿಗೆ ಹಾಹಾಕಾರವುಂಟಾಯಿತು. ॥೫೧॥

ಇಬ್ಬರು ರಾಕ್ಷಸರೂ ಕೂಡ ಹೊಡೆಯಲ್ಪಟ್ಟವರಾಗಿ ರಣರಂಗದಲ್ಲಿ ಬಿದ್ದಿರುವುದನ್ನು ನೋಡಿ ದೇವತೆಗಳು, ಓ ದೇವಿಯೇ ನಿನಗೆ ಜಯವಾಗಲಿ, ಎಂಬುದಾಗಿ ಪ್ರಾರ್ಥಿಸುತ್ತಾ ಆ ಜಗನ್ಮಾತೆಯನ್ನು ಹೊಗಳಿದರು. ದೇವತೆಗಳ ನಗಾರಿಯ ಧ್ವನಿಯೂ ಮೊಳಗುವಂತೆ ಆಯಿತು. ಎಲೈ ರಾಜನೇ, ಕೇಳು. ಮತ್ತು ಕಿನ್ನರರೂ ಸಂಗೀತವನ್ನು ಹಾಡಿದರು. ॥೫೨॥

ಉಳಿದಿದ್ದ ಸೈನಿಕರು ಎಲ್ಲರೂ ಸಿಂಹದಿಂದ ಬಲಾತ್ಕಾರವಾಗಿ ಹಿಡಿದು ಕೊಲ್ಲಲ್ಪಟ್ಟರು, ಅಲ್ಲದೆ ಹಾಗೆಯೇ ಇನ್ನೂ ಕೆಲವರು ತಿನ್ನಲ್ಪಟ್ಟರು. ಮತ್ತೆ ಕೆಲವರು ಆಗ ಅಲ್ಲಿ ಧೈರ್ಯಗೆಟ್ಟು ಏನನ್ನು ಮಾಡುವುದಕ್ಕೂ ತೋರದೆ, ಮಹಿಷಾಸುರನಿಗೆ ತಿಳಿಸುವುದಕ್ಕಾಗಿ ದುಃಖವುಳ್ಳವರಾಗಿ ಹಿಂತಿರುಗಿದರು. ॥೫೩॥

ಆ ಯುದ್ಧಾಂಗಣದಲ್ಲಿ ಯಾರೂ ಇಲ್ಲದಂತಾಯಿತು. ಉಳಿದಿದ್ದ ಕೆಲವರು ಮಹಿಷಾಸುರನ ಸಮೀಪಕ್ಕೆ ಹೋಗಿ ರಕ್ಷಿಸು, ರಕ್ಷಿಸು ಎಂಬುದಾಗಿ ಆರ್ತನಾದದ ಮಾತುಗಳನ್ನು ಹೇಳುತ್ತಾ ಅಳುತ್ತಿದ್ದರು. ॥೫೪॥

ಚುಕ್ರುಶೂ ರುರುದುಶ್ಚೈವ ತ್ರಾಹಿ ತ್ರಾಹೀತಿ ಭಾಷಣೈಃ ।
ಅಸಿಲೋಮಬಿಡಾಲಾಖ್ಯೌ ನಿಹತೌ ನೃಪಸತ್ತಮ ॥೫೫॥

ಅನ್ಯೇ ಯೇ ಸೈನಿಕಾ ರಾಜನ್ ಸಿಂಹೇನ ಭಕ್ಷಿತಾಶ್ಚ ತೇ ।
ಏವಂ ಬ್ರುವಂತೋ ರಾಜಾನಂ ತದಾ ಚಕ್ರುಶ್ಚ ವೈಶಸಂ ॥೫೬॥

ತಚ್ಛ್ರುತ್ವಾ ವಚನಂ ತೇಷಾಂ ಮಹಿಷೋ ದುರ್ಮನಾಸ್ತದಾ ।
ಬಭೂವ ಚಿಂತಾಕುಲಿತೋ ವಿಮನಾ ದುಃಖಸಂಯುತಃ ॥೫೭॥

---

ಅವರು ಮಹಿಷಾಸುರನನ್ನು ಕುರಿತು, ಓ ರಾಜನೇ, ಅಸಿಲೋಮ, ಬಿಡಾಲ ಎಂಬಿಬ್ಬರೂ ನಾಶವಾದರು. ಉಳಿದಿರುವ ಸೈನಿಕರು ಸಿಂಹದಿಂದ ಭಕ್ಷಿಸಲ್ಪಟ್ಟರು. ಎಂಬುದಾಗಿ ಹೇಳುತ್ತ ಅವನಿಗೆ ತುಂಬ ವ್ಯಸನವನ್ನುಂಟುಮಾಡಿದರು. ॥೫೫-೫೬॥

ಮಹಿಷಾಸುರನು ಅವರ ಮಾತನ್ನು ಕೇಳಿ ಮನಸ್ಸಿನಲ್ಲಿ ಉತ್ಸಾಹವಿಲ್ಲದವನಾಗಿ ಆತಂಕದ ಯೋಚನೆಯಿಂದ ಗಾಬರಿಗೊಂಡು ಖಿನ್ನಮನಸ್ಕನಾಗಿ ದುಃಖದಿಂದ ಕೂಡಿದವನಾದನು. ॥೫೭॥

ಜೇತುಂ ಯಸ್ತ್ರಿಪುರಂ ಹರೇಣ ಹರಿಣಾ ವ್ಯಾಜಾದ್ಬಲಿಂ ಬಧ್ನತಾ
ಸ್ರಷ್ಟುಂ ವಾರಿಜಸಂಭವೇನ ಜಗತೀಂ ಕೃಷ್ಣೇನ ಪಾತುಂ ಯತಃ ।
ಪಾರ್ವತ್ಯಾ ಮಹಿಷಾಸುರ ಪ್ರಮಥನೇ ಸಿದ್ಧೈರಭೀಷ್ಟಾಪ್ತಯೇ
ಧ್ಯಾತಃ ಪಂಚಶರೇಣ ವಿಶ್ವಜಿತಯೇ ಪಾಯಾತ್ಸ ನಾಗಾನನಃ ॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ತೇಷಾಂ ತದ್ವಚನಂ ಶ್ರುತ್ವಾ ಕ್ರೋಧಯುಕ್ತೋ(ಽಸು) ನರಾಧಿಪಃ ।**
**ದಾರುಕಂ ಪ್ರಾಹ ತರಸಾ ರಥಮಾನಯ ಮೇಽದ್ಭುತಂ ||೧||**

**ಸಹಸ್ರಖರಸಂಯುಕ್ತಂ ಪತಾಕಾಧ್ವಜಭೂಷಿತಂ ।**
**ಆಯುಧೈಃ ಸಂಯುತಂ ಶುಭ್ರಂ ಸುಚಕ್ರಂ ಚಾರುಕೂಬರಂ ||೨||**

**ಸೂತೋಽಪಿ ರಥಮಾನೀಯ ತಮುವಾಚ ತ್ವರಾನ್ವಿತಃ ।**
**ರಾಜನ್ ರಥೋಽಯಮಾನೀತೋ ದ್ವಾರಿ ತಿಷ್ಠತಿ ಭೂಷಿತಃ ||೩||**

---

ವ್ಯಾಸಮುನಿಯು ಹೇಳಿದನು—ರಾಜನಾದ ಮಹಿಷಾಸುರನು ಅವರ ಮಾತುಗಳನ್ನು ಕೇಳಿ ಕೋಪದಿಂದ ಕೂಡಿದವನಾಗಿ ಸಾರಥಿಯಾದ ದಾರುಕನನ್ನು ಕುರಿತು ಬೇಗನೆ ಅದ್ಭುತವಾದ ನನ್ನ ರಥವನ್ನು ತೆಗೆದುಕೊಂಡು ಬಾ ಎಂದು ಹೇಳಿದನು. ||೧||

ಮಹಿಷಾಸುರನ ರಥವು ಸಾವಿರ ಕತ್ತೆಗಳನ್ನು ಕಟ್ಟಿದ್ದಾಗಿತ್ತು. ಬಾವುಟಗಳನ್ನೂ ಧ್ವಜವನ್ನೂ ಅಲಂಕಾರವಾಗಿರುವಂತೆ ಕಟ್ಟಿದ್ದರು. ಅನೇಕ ವಿಧವಾದ ಆಯುಧಗಳಿಂದ ತುಂಬಿತ್ತು. ಕೊಳೆಯಿಲ್ಲದೆ ನಿರ್ಮಲವಾಗಿತ್ತು. ಹೀಗಿರುವ ರಥವನ್ನು ಸೂತನು ತೆಗೆದುಕೊಂಡು ಬಂದು ತ್ವರೆಯಿಂದ ಕೂಡಿದವನಾಗಿ ಓ ರಾಜನೇ, ನಿನ್ನ ಈ ತೇರನ್ನು ತಂದಿದ್ದೇನೆ. ಅದು ಒಳ್ಳೆಯ ಚಕ್ರ ಮತ್ತು ಈಚುಮರದಿಂದ ಅಲಂಕೃತವಾಗಿ ಬಾಗಿಲಿನಲ್ಲಿ ಸಿದ್ಧವಾಗಿರುತ್ತದೆ ಎಂದು ಅವನಿಗೆ ಅರಿಕೆ ಮಾಡಿದನು. ||೨-೩||

**ಸರ್ವಾಯುಧಸಮಾಯುಕ್ತೋ ವರಾಸ್ತ್ರರಣಸಂಯುತಃ(೦) ।**
**ಆನೀತಂ ತಂ ರಥಂ ಜ್ಞಾತ್ವಾ ದಾನವೇಂದ್ರೋ ಮಹಾಬಲಃ ॥೪॥**

**ಮಾನುಷಂ ದೇಹಮಾಸ್ಥಾಯ ಸಂಗ್ರಾಮೇ ಗಂತುಮುದ್ಯತಃ ॥೫॥**

**ವಿಚಾರ್ಯ ಮನಸಾ ಚೇತಿ ದೇವೀ ಮಾಂ ಪ್ರೇಕ್ಷ್ಯ ದುರ್ಮುಖಂ ।**
**ಶೃಂಗಿಣಂ ಮಹಿಷಂ ನೂನಂ ವಿಮನಾ ಸಾ ಭವಿಷ್ಯತಿ ।**
**ನಾರೀಣಾಂ ಚ ಪ್ರಿಯಂ ರೂಪಂ ತಥಾ ಚಾತುರ್ಯಮಿತ್ಯಪಿ ॥೬॥**

**ತಸ್ಮಾದ್ರೂಪಂ ಚ ಚಾತುರ್ಯಂ ಕೃತ್ವಾ ಯಾಸ್ಯಾಮಿ ತಾಂ ಪ್ರತಿ ।**
**ಯಥಾ ಮಾಂ ವೀಕ್ಷ್ಯ ಸಾ ಬಾಲಾ ಪ್ರೇಮಯುಕ್ತಾ ಭವಿಷ್ಯತಿ ॥೭॥**

**ಮಮಾಪಿ ಚ ತದೈವ ಸ್ಯಾತ್ಸುಖಂ ನಾನ್ಯಸ್ವರೂಪತಃ ।**
**ಇತಿ ಸಂಚಿಂತ್ಯ ಮನಸಾ ದಾನವೇಂದ್ರೋ ಮಹಾಬಲಃ ॥೮॥**

---

ಎಲ್ಲ ವಿಧವಾದ ಆಯುಧಗಳಿಂದ ಕೂಡಿದವನಾಗಿ ಬಲಿಷ್ಠನಾದ ಮಹಿಷಾಸುರನು ಉತ್ತಮವಾದ ಬಟ್ಟೆಯ ಹಾಸಿನಿಂದ ಕೂಡಿರುವ ರಥವು ತರಲ್ಪಟ್ಟಿತೆಂದು ಕೇಳಿ ತಿಳಿದು, ಮನುಷ್ಯಶರೀರವನ್ನು ಧರಿಸಿಕೊಂಡು ಯುದ್ಧಕ್ಕೆ ಹೊರಡಲು ಸಿದ್ಧನಾದನು. ||೪-೫||

ಏಕೆಂದರೆ, ಆಗ ಮನಸ್ಸಿನಲ್ಲಿ ಹೀಗೆ ಯೋಚನೆ ಮಾಡಿದನು. ದೇವಿಯು, ಕೆಟ್ಟಮುಖವುಳ್ಳ ಕೊಂಬುಳ್ಳ ನನ್ನನ್ನು ನೋಡಿ ಖಂಡಿತವಾಗಿಯೂ ವಿಮನಸ್ಕಳಾಗುವಳು. ಏಕೆಂದರೆ ಹೆಂಗಸರಿಗೆ ಸೌಂದರ್ಯವೂ ಕೌಶಲವೂ ಪ್ರಿಯವಾಗಿರುತ್ತವೆ. ||೬||

ಆದುದರಿಂದ ಸೌಂದರ್ಯವನ್ನೂ ನಿಪುಣತೆಯನ್ನೂ ಪ್ರಕಟಿಸುವ ರೂಪವೇಷಗಳನ್ನು ಮಾಡಿಕೊಂಡು ಆ ದೇವಿಯ ಸಮೀಪಕ್ಕೆ ಹೋಗುವೆನು. ಆದುದರಿಂದ ನನ್ನನ್ನು ನೋಡಿ ಆ ಹುಡುಗಿಯಾದ ದೇವಿಯು ನನ್ನಲ್ಲಿ ಪ್ರೀತಿಯುಳ್ಳವಳಾಗುವಳು. ||೭||

ಸ್ತ್ರೀಪುರುಷರು ಒಂದೇ ಜಾತಿಯವರಾಗಿದ್ದರೆ ಇಬ್ಬರಿಗೂ ಸೌಖ್ಯವು ಉಂಟಾಗುವುದು. ಮನುಷ್ಯಜಾತಿಯ ಸ್ತ್ರೀಯೂ ತಿರ್ಯಗ್ಜಾತಿಯ ಪುರುಷಪ್ರಾಣಿಯೂ ಸೇರಿ ಸುಖವನ್ನು ಅನುಭವಿಸಲಾರರು. ಆದುದರಿಂದ ನನಗೂ ಸಹ ಮನುಷ್ಯರೂಪದಲ್ಲಿ ಹೊರತು ನನ್ನ ಸ್ವಸ್ವರೂಪವಾದ ಮಹಿಷರೂಪದಿಂದ ಅವಳೊಡನೆ ಸುಖವು

ತ್ಯಕ್ತ್ವಾ ತನ್ಮಾಹಿಷಂ ರೂಪಂ ಬಭೂವ ಪುರುಷಃ ಶುಭಃ ।
ಸರ್ವಾಯುಧಧರಃ ಶ್ರೀಮಾಂಶ್ಚಾರುಭೂಷಣಭೂಷಿತಃ ॥೯॥

ದಿವ್ಯಾಂಬರಧರಃ ಕಾಂತಃ ಪುಷ್ಪಬಾಣ ಇವಾಪರಃ ।
ರಥೋಪವಿಷ್ಟಃ ಕೇಯೂರಸ್ರಗ್ವೀ ಬಾಣಧನುರ್ಧರಃ ॥೧೦॥

ಸೇನಾಪರಿವೃತೋ ದೇವೀಂ ಜಗಾಮ ಮದಗರ್ವಿತಃ ।
ಮನೋಜ್ಞಂ ರೂಪಮಾಸ್ಥಾಯ ಮಾನಿನೀನಾಂ ಮನೋಹರಂ ॥೧೧॥

ತಮಾಗತಂ ಸಮಾಲೋಕ್ಯ ದೈತ್ಯಾನಾಮಧಿಪಂ ತದಾ ।
ಬಹುಭಿಃ ಸಂವೃತಂ ವೀರೈರ್ದೇವೀ ಶಂಖಮವಾದಯತ್ ॥೧೨॥

ಸ ಶಂಖನಿನದಂ ಶ್ರುತ್ವಾ ಜನವಿಸ್ಮಯಕಾರಕಂ ।
ಸಮೀಪಮೇತ್ಯ ದೇವ್ಯಾಸ್ತು ತಾಮುವಾಚ ಹಸನ್ನಿವ ॥೧೩॥

---

ಉಂಟಾಗುವುದಿಲ್ಲವು. ಎಂದು ಮಹಾಬಲಿಷ್ಠನಾದ ಆ ದಾನವ ರಾಜನು ಮನಸ್ಸಿನಲ್ಲಿ ಯೋಚಿಸಿ, ತನ್ನ ಮಹಿಷದ ಆಕಾರವನ್ನು ಬಿಟ್ಟು ಮಂಗಳಕರವಾದ ಪುರುಷರೂಪವನ್ನು ತಾಳಿದನು. ॥೮॥

ಎಲ್ಲ ಆಯುಧಗಳನ್ನೂ ಧರಿಸಿಕೊಂಡು, ಕಾಂತಿಯುಳ್ಳವನಾಗಿ, ಮನೋಹರವಾದ ಆಭರಣಗಳನ್ನೂ ಉತ್ತಮವಾದ ಬಟ್ಟೆಗಳನ್ನೂ ಧರಿಸಿಕೊಂಡು ಸುಂದರನಾದ ಆ ಮಹಿಷಾಸುರನು, ಮನ್ಮಥನೇ ಬೇರೆಯಾಗಿ ಬಂದನೋ ಎಂಬಂತೆ ಇದ್ದನು. ಹೀಗೆ ಅವನು, ಭುಜಕೀರ್ತಿ, ಹಾರ ಇವುಗಳನ್ನು ಧರಿಸಿ, ಧನುಸ್ಸು ಬಾಣಗಳನ್ನು ಹಿಡಿದುಕೊಂಡು, ಮದದಿಂದ ಅಹಂಕಾರವುಳ್ಳವನಾಗಿ ಸೇನೆಯಿಂದ ಸುತ್ತುವರಿಯಲ್ಪಟ್ಟವನಾಗಿ ದೇವಿಯ ಎದುರಿಗೆ ಹೋದನು. ॥೯-೧೦॥

ಹೆಂಗಸರಿಗೆ ಒಪ್ಪುವಂತಿರುವ ಮನೋಹರವಾದ ಆಕಾರವನ್ನು ಧರಿಸಿಕೊಂಡು, ಅನೇಕ ವೀರರಿಂದ ಕೂಡಿಕೊಂಡು ಬಂದಿರುವ ದೈತ್ಯಾಧಿಪನಾದ ಮಹಿಷಾಸುರನನ್ನು ನೋಡಿ ಆ ದೇವಿಯು ಆಗ ಶಂಖವನ್ನು ಊದಿದಳು. ॥೧೧-೧೨॥

ಜನಗಳಿಗೆ ಆಶ್ಚರ್ಯವನ್ನುಂಟುಮಾಡುವ ಶಂಖಧ್ವನಿಯನ್ನು ಕೇಳಿ ಆ ಮಹಿಷನು ದೇವಿಯ ಸಮೀಪಕ್ಕೆ ಬಂದು ಮುಗುಳುನಗೆಯಿಂದ ಕೂಡಿ ಈ ಮಾತನ್ನು ಹೇಳಿದನು. ॥೧೩॥

ದೇವಿ ಸಂಸಾರಚಕ್ರೇಽಸ್ಮಿನ್ವರ್ತಮಾನೋ ಜನಃ ಕಿಲ ।
ನರೋ ವಾಽಥ ತಥಾನಾರೀ ಸುಖಂ ವಾಂಛತಿ ಸರ್ವಥಾ ॥೧೪॥

ಸುಖಂ ಸಂಯೋಗಜಂ ನೃಣಾಂ ನಾಸಂಯೋಗೇ ಭವೇದಿಹ ।
ಸಂಯೋಗೋ ಬಹುಧಾ ಭಿನ್ನಸ್ತಾನ್ಬ್ರವೀಮಿ ಶೃಣುಷ್ವ ಹ ॥೧೫॥

ಭೇದಾನ್ಸುಪ್ರೀತಿಹೇತೂತ್ಥಾನ್ಸ್ವಭಾವೋತ್ಥಾನನೇಕಶಃ ।
ತತ್ರ ಪ್ರೀತಿಭವಾನಾದೌ ಕಥಯಾಮಿ ಯಥಾಮತಿ ॥೧೬॥

ಮಾತಾಪಿತ್ರೋಸ್ತು ಪುತ್ರೇಣ ಸಂಯೋಗಸ್ತೂತ್ತಮಃ ಸ್ಮೃತಃ ।
ಭ್ರಾತುರ್ಭ್ರಾತ್ರಾ ತಥಾ ಯೋಗಃ ಕಾರಣಾನ್ಮಧ್ಯಮೋ ಮತಃ ॥೧೭॥

---

ಎಲೌ ದೇವಿಯೇ, ಚಕ್ರದಂತೆ ಸುತ್ತುತ್ತಿರುವ ಈ ಸಂಸಾರದಲ್ಲಿ ಇರತಕ್ಕ ಜನವು ಗಂಡಸಾಗಲಿ, ಅಥವಾ ಹೆಂಗುಸಾಗಲಿ ಯಾರೇ ಆದರೂ ಸುಖವನ್ನೇ ಅಪೇಕ್ಷಿಸುವುದು. ||೧೪||

ಈ ಲೋಕದಲ್ಲಿ ಮನುಷ್ಯರಿಗೆ ಸಂಬಂಧದಿಂದ ಸುಖವುಂಟಾಗುವುದೇ ಹೊರತು ಪರಸ್ಪರವಾಗಿ ಅನುರೂಪರಾದ ಸ್ತ್ರೀಪುರುಷರು ಸಂಸಾರದಲ್ಲಿ ಸೇರದಿದ್ದರೆ ಸುಖವುಂಟಾಗುವುದಿಲ್ಲವು. ಈ ಸಂಯೋಗವು ಅನೇಕವಿಧವಾಗಿರುವುದು. ಅವುಗಳನ್ನು ಹೇಳುತ್ತೇನೆ, ನೀನು ಕೇಳು. ||೧೫||

ಅನೇಕ ಬಗೆಯ ಸಂಯೋಗಗಳಲ್ಲಿ ಸ್ವಭಾವದಿಂದುಂಟಾದುವು ಕೆಲವು ಇರುತ್ತವೆ. ಅವುಗಳಲ್ಲಿ ಪ್ರೀತಿಯಿಂದುಂಟಾದ ಸಂಯೋಗಗಳನ್ನು ನನ್ನ ಬುದ್ಧಿಗೆ ತೋರಿದ ಮಟ್ಟಿಗೆ ಮೊದಲು ನಾನು ಹೇಳುತ್ತೇನೆ. ||೧೬||

ತಂದೆತಾಯಿಗಳಿಗೆ ಮಕ್ಕಳೊಡನೆ ಉಂಟಾಗುವ ಸಂಯೋಗವು ಪ್ರೀತಿಯಿಂದ ಉಂಟಾಗುವುದಾದಕಾರಣ ಇದನ್ನು ಉತ್ತಮವಾದ ಪ್ರೀತಿಸಂಯೋಗವೆಂದೆನ್ನುವರು. ಅಣ್ಣತಮ್ಮಂದಿರಿಗೆ ಉಂಟಾಗುವ ಸಂಯೋಗವು ಉಪಕಾರ್ಯೋಪಕಾರಕಭಾವವನ್ನು ಅವಲಂಬಿಸಿಕೊಂಡು ಕಾರಣಾಂತರದಿಂದ ಹುಟ್ಟುವುದಾದ ಕಾರಣ ಮಧ್ಯಮವೆನಿಸುವುದು. ||೧೭||

ಉತ್ತಮಸ್ಯ ಸುಖಸ್ಯೈವ ದಾತೃತ್ವಾದುತ್ತಮಃ ಸ್ಮೃತಃ ।
ತಸ್ಮಾದಲ್ಪಸುಖಸ್ಯೈವ ಪ್ರದಾತೃತ್ವಾಚ್ಚ ಮಧ್ಯಮಃ ॥೧೮॥

ನಾವಿಕಾನಾಂ ತು ಸಂಯೋಗಃ ಸ್ಮೃತಃ ಸ್ವಾಭಾವಿಕೋ ಬುಧೈಃ ।
ವಿವಿಧಾವೃತಚಿತ್ತಾನಾಂ ಪ್ರಸಂಗಪರಿವರ್ತಿನಾಂ ॥೧೯॥

ಅತ್ಯಲ್ಪಸುಖದಾತೃತ್ವಾತ್ಕನಿಷ್ಠೋಽಯಂ ಸ್ಮೃತೋ ಬುಧೈಃ ।
ಅತ್ಯುತ್ತಮಸ್ತು ಸಂಯೋಗಃ ಸಂಸಾರೇ ಸುಖದಃ ಸದಾ ॥೨೦॥

ನಾರೀಪುರುಷಯೋಃ ಕಾಂತೇ ಸಮಾನವಯಸೋಃ ಸದಾ ।
ಸಂಯೋಗೋ ಯಃ ಸಮಾಖ್ಯಾತಃ ಸ ಏವಾತ್ಯುತ್ತಮಃ ಸ್ಮೃತಃ ॥೨೧॥

---

ಉತ್ತಮವಾದ ಸುಖವನ್ನುಂಟುಮಾಡುವ ಸಂಯೋಗವು ಉತ್ತಮವು. ಕೊಂಚ ಸೌಖ್ಯವನ್ನು ಕೊಡುವುದು ಮಧ್ಯಮವು ಎಂದು ಫಲಭೇದದಿಂದ ಈ ವಿಭಾಗವು. ೧೮॥

ಹಡಗಿನಲ್ಲಿ ದಾರಿಗರು ಸೇರುವಂತೆ, ಅವರವರ ನಾನಾಬಗೆಯ ಕಾರ್ಯವನ್ನು ಮಾಡುವುದರಲ್ಲಿ ವ್ಯಗ್ರರಾಗಿರುವ ಜನಗಳು ಪ್ರಯಾಣದಲ್ಲಿ ಆಸಕ್ತಿಯುಳ್ಳವರಾಗಿ ಒಂದು ಸತ್ರ ಮುಂತಾದ ಕಡೆಯಲ್ಲಿ ಸೇರಿದಾಗ ಉಂಟಾಗುವ ಸಂಯೋಗವು ಸ್ವಾಭಾವಿಕವೆನಿಸುವುದು. ॥೧೯॥

ಹಿಂದೆ ಹೇಳಿದ ಸುಖಗಳಿಗಿಂತಲೂ ಕಡಮೆಯಾದ ಸುಖವನ್ನುಂಟುಮಾಡುವ ಕಾರಣ ಇದನ್ನು ಕನಿಷ್ಠವೆಂದೆನ್ನುವರು. ಸಂಸಾರದಲ್ಲಿ ಅತ್ಯುತ್ತಮವಾದ ಸಂಯೋಗವು ಯಾವಾಗಲೂ ಉತ್ತಮ ಸುಖಗಳಲ್ಲೂ ತುಂಬ ಮೇಲಾದ ಸುಖವನ್ನುಂಟುಮಾಡುವುದು. ॥೨೦॥

ಎಲೌ ಮನೋಹರಳಾದ ಸ್ತ್ರೀಯೇ, ಒಂದೇ ಸಮವಾದ ವಯಸ್ಸುಳ್ಳ ಗಂಡಸಿಗೂ ಹೆಂಗುಸಿಗೂ ಉಂಟಾಗುವ ಸಂಯೋಗವು ಇಬ್ಬರಿಗೂ ಹೆಚ್ಚಾದ ಸುಖವನ್ನುಂಟುಮಾಡುವುದರಿಂದ ಆ ಬಗೆಯ ಸಂಯೋಗವು ಅತ್ಯುತ್ತಮವೆನಿಸಿಕೊಳ್ಳುವುದು. ॥೨೧॥

ಅತ್ಯುತ್ತಮಸುಖಸ್ಯೈವ ದಾತೃತ್ವಾತ್ಸ ತಥಾವಿಧಃ ।
ಚಾತುರ್ಯರೂಪವೇಷಾದ್ಯೈಃ ಕುಲಶೀಲಗುಣೈಸ್ತಥಾ ॥೨೨॥

ಪರಸ್ಪರಸಮುತ್ಕರ್ಷಃ ಕಥ್ಯತೇ ಹಿ ಪರಸ್ಪರಂ ।
ತಂ ಚೇತ್ಕರೋಷಿ ಸಂಯೋಗಂ ವೀರೇಣ ಚ ಮಯಾ ಸಹ ॥೨೩॥

ಅತ್ಯುತ್ತಮಸುಖಸ್ಯೈವ ಪ್ರಾಪ್ತಿಃ ಸ್ಯಾತ್ತೇ ನ ಸಂಶಯಃ ।
ನಾನಾವಿಧಾನಿ ರೂಪಾಣಿ ಕರೋಮಿ ಸ್ವೇಚ್ಛಯಾ ಪ್ರಿಯೇ ॥೨೪॥

ಇಂದ್ರಾದಯಃ ಸುರಾಃ ಸರ್ವೇ ಸಂಗ್ರಾಮೇ ವಿಜಿತಾ ಮಯಾ ।
ರತ್ನಾನಿ ಯಾನಿ ದಿವ್ಯಾನಿ ಭ(ಭು)ವನೇಽಸ್ಮಿನ್ಮಮಾಽಧುನಾ ॥೨೫॥

---

ಬುದ್ಧಿವಂತಿಕೆಯೂ, ಕೌಶಲವೂ, ಸೌಂದರ್ಯವೂ, ಅಲಂಕಾರವೂ, ಕುಲವೂ, ಸ್ವಭಾವವೂ, ಗುಣವೂ ಇವುಗಳಿಂದ ಸ್ತ್ರೀಪುರುಷರಿಬ್ಬರೂ ಒಬ್ಬರನ್ನೊಬ್ಬರು ಮೀರುವಂತೆ ಇರುತ್ತಾ ಎಲ್ಲರ ಅಭಿನಂದನೆಗೆ ಪಾತ್ರರಾಗಿ ಇಬ್ಬರೂ ಪರಸ್ಪರ ಮೇಲ್ಮೆಯನ್ನೂ ಹೆಚ್ಚಿಸುತ್ತಾ, ಅಪಾರವಾದ ಸುಖವನ್ನು ಅನುಭವಿಸುವವರಾದ ಕಾರಣ ಈ ಸಂಯೋಗವನ್ನು ಅತ್ಯುತ್ತಮವೆಂದು ಹೇಳುವರು. ॥೨೨॥

ನಾನು ಈಗ ಹೇಳಿದ ಸಂಯೋಗಗಳಲ್ಲಿ ಅತ್ಯುತ್ತಮ, ಉತ್ತಮ, ಮಧ್ಯಮ ಮತ್ತು ಅಧಮರೂಪವಾದ ಭೇದಗಳಲ್ಲಿ, ಅತ್ಯುತ್ತಮವಾದ ನಮ್ಮಿಬ್ಬರ ಸಂಯೋಗವು ವೀರನಾದ ನನ್ನೊಡನೆ ನೀನು ಸೇರಿದರೆ ಮಾತ್ರ ಉಂಟಾಗುತ್ತದೆ. ॥೨೩॥

ಅದನ್ನು ನೀನು ಒಪ್ಪಿ ಮಾಡುವುದಾದರೆ ನಿನಗೂ ನನಗೂ ಅತ್ಯುತ್ತಮವಾದ ಸುಖವು ಆಗುವುದರಲ್ಲಿ ಕೊಂಚವೂ ಸಂಶಯವಿರುವುದಿಲ್ಲವು. ನನ್ನ ಪ್ರೀತಿಗೆ ಪಾತ್ರಳಾದ ಪ್ರಿಯಳೇ, ನಾನೂ ನನ್ನ ಇಚ್ಛೆಗೆ ಬಂದಂತೆ ಅನೇಕ ವಿಧವಾದ ಆಕಾರಗಳನ್ನು ಹೊಂದಬಲ್ಲೆನು. ॥೨೪॥

ನನ್ನಿಂದ ಇಂದ್ರನೇ ಮೊದಲಾದ ದೇವತೆಗಳೂ ಯುದ್ಧದಲ್ಲಿ ಗೆಲ್ಲಲ್ಪಟ್ಟಿರುವರು. ಈ ಲೋಕದಲ್ಲಿ ಈಗ ಯಾವ ಯಾವ ರತ್ನಗಳೂ ಶ್ರೇಷ್ಠವಾದ ವಸ್ತುಗಳೂ ಇವೆಯೋ ಅವೆಲ್ಲವೂ ನನ್ನ ಮನೆಯಲ್ಲಿ ನನ್ನದಾಗಿರುವುವು. ॥೨೫॥

ಭುಂಕ್ಷ್ವ ತ್ವಂ ತಾನಿ ಸರ್ವಾಣಿ ಯಥೇಷ್ಟಂ ದೇಹಿ ವಾ ಯಥಾ ।
ಪಟ್ಟರಾಜ್ಞೀ ಭವಾದ್ಯ ತ್ವಂ ದಾಸೋಽಸ್ಮಿ ತವ ಸುಂದರಿ ॥೨೬॥

ವೈರಂ ತ್ಯಜೇಽಹಂ ದೇವೈಸ್ತು ತವ ವಾಕ್ಯಾನ್ನ ಸಂಶಯಃ ।
ಯಥಾ ತ್ವಂ ಸುಖಮಾಪ್ನೋಷಿ ತಥಾಽಹಂ ಕರವಾಣಿ ವೈ ॥೨೭॥

ಆಜ್ಞಾಪಯ ವಿಶಾಲಾಕ್ಷಿ ತಥಾಽಹಂ ಪ್ರಕರೋಮ್ಯಥ ।
ಚಿತ್ತಂ ಮೇ ತವ ರೂಪೇಣ ಮೋಹಿತಂ ಚಾರುಭಾಷಿಣಿ ॥೨೮॥

ಆತುರೋಽಸ್ಮಿ ವರಾರೋಹೇ ಪ್ರಾಪ್ತಸ್ತೇ ಶರಣಂ ಕಿಲ ।
ಪ್ರಪನ್ನಂ ಪಾಹಿ ರಂಭೋರು ಕಾಮಬಾಣೈಃ ಪ್ರಪೀಡಿತಂ ॥೨೯॥

ಧರ್ಮಾಣಾಮುತ್ತಮೋ ಧರ್ಮಃ ಶರಣಾಗತರಕ್ಷಣಂ ।
ತ್ವದೀಯೋಽಸ್ಮ್ಯಸಿತಾಪಾಂಗಿ ಸೇವಕೋಽಹಂ ಕೃಶೋದರಿ ॥೩೦॥

---

ಅವುಗಳೆಲ್ಲವನ್ನೂ ನೀನು ನಿನ್ನ ಇಷ್ಟಬಂದಂತೆ ಅನುಭವಿಸು ಅಥವಾ ದಾನಮಾಡು. ಎಲೌ ಸುಂದರಿಯೇ, ನೀನು ನನಗೆ ಪಟ್ಟದ ರಾಣಿಯಾಗು. ನಿನಗೆ ನಾನು ದಾಸನಾಗಿರುತ್ತೇನೆ. ||೨೬||

ನಿನ್ನ ಮಾತಿನಿಂದ ನಾನು ದೇವತೆಗಳ ಸಂಗಡ ವೈರವನ್ನೂ ಬಿಡುತ್ತೇನೆ. ಹೇಗಾದರೆ ನಿನಗೆ ಸುಖವಾಗುವುದೋ ಹಾಗೆ ನಾನು ಖಂಡಿತವಾಗಿಯೂ ಮಾಡುವೆನು. ಇದರಲ್ಲಿ ಸಂದೇಹವಿಲ್ಲವು. ||೨೭||

ದೊಡ್ಡದಾದ ಕಣ್ಣುಳ್ಳವಳೇ, ನನಗೆ ಅಪ್ಪಣೆಯನ್ನು ಮಾಡು. ನೀನು ಆಜ್ಞೆಯನ್ನು ಮಾಡಿದಂತೆ ನಾನು ನಡೆಯುವೆನು. ಚನ್ನಾಗಿ ಮಾತನಾಡುವವಳೇ, ನಿನ್ನ ಸೌಂದರ್ಯದಿಂದ ನನ್ನ ಮನಸ್ಸು ಮೋಹಗೊಂಡಿರುತ್ತದೆ. ||೨೮||

ಎಲೌ ಉತ್ತಮ ಸ್ತ್ರೀಯೇ ನಾನು ಕಾಮಬಾಧೆಯಿಂದ ಪೀಡಿತನಾಗಿ ಭ್ರಾಂತನಾಗಿರುತ್ತೇನೆ. ನಿನ್ನನ್ನು ಶರಣು ಹೊಂದಿದೇನೆ. ಬಾಳೆಯ ಕಂಬದಂತೆ ಇರುವ ತೊಡೆಯುಳ್ಳವಳೇ, ಹೀಗೆ ಆತುರನಾಗಿ ನಿನ್ನನ್ನು ಶರಣುಹೊಂದಿರುವ ನನ್ನನ್ನು ಕಾಪಾಡು. ||೨೯||

ಕಪ್ಪಾದ ಕುಡಿನೋಟವುಳ್ಳವಳೇ, ಕೃಶೋದರಿಯೇ, ಶರಣು ಎಂದು ಬಂದವರನ್ನು ರಕ್ಷಿಸುವುದು ಧರ್ಮಗಳಲ್ಲಿ ಉತ್ತಮವಾದ ಧರ್ಮವು. ನಾನು ನಿನಗೆ ಸಂಬಂಧಿಸಿದವನು. ನಿನಗೆ ಸೇವಕನಾದವನು. ಆದುದರಿಂದ ನನ್ನನ್ನು ಕಾಪಾಡು. ||೩೦||

ಮರಣಾಂತಂ ವಚಃ ಸತ್ಯಂ ನಾನ್ಯಥಾ ಪ್ರಕರೋಮ್ಯಹಂ ।
ಪಾದೌ ನತೋಽಸ್ಮಿ ತನ್ವಂಗಿ ತ್ಯಕ್ತ್ವಾ ನಾನಾಯುಧಾನಿ ತೇ ॥೩೧॥

ದಯಾಂ ಕುರು ವಿಶಾಲಾಕ್ಷಿ ತಪ್ತೋಽಸ್ಮಿ ಕಾಮಮಾರ್ಗಣೈಃ ।
ಜನ್ಮಪ್ರಭೃತಿ ಚಾರ್ವಂಗಿ ದೈನ್ಯಂ ನಾಚರಿತಂ ಮಯಾ ॥೩೨॥

ಬ್ರಹ್ಮಾದೀನೀಶ್ವರಾನ್ಪ್ರಾಪ್ಯ ತ್ವಯಿ ತದ್ವಿದಧಾಮ್ಯಹಂ ।
ಚರಿತಂ ಮಮ ಜಾನಂತಿ ರಣೇ ಬ್ರಹ್ಮಾದಯಃ ಸುರಾಃ ॥೩೩॥

ಸೋಽಪ್ಯಹಂ ತವ ದಾಸೋಽಸ್ಮಿ ಮನ್ಮುಖಂ ಪಶ್ಯ ಭಾಮಿನಿ ।

॥ ವ್ಯಾಸ ಉವಾಚ ॥

ಇತಿ ಬ್ರುವಾಣಂ ತಂ ದೈತ್ಯಂ ದೇವೀ ಭಗವತೀ ಹಿ ಸಾ ॥೩೪॥

---

ನಾನು ಸಾಯುವವರೆಗೂ ಈ ನನ್ನ ಮಾತನ್ನು ನಿಜವಾಗಿ ನಡೆಯಿಸುವೆನು. ಇದಕ್ಕೆ ಬೇರೆಯಾಗಿ ನಾನು ಮಾಡುವುದಿಲ್ಲ. ಎಲೈ ಕೃಶಾಂಗಿಯೇ, ಅನೇಕವಾದ ಆಯುಧಗಳನ್ನೂ ಬಿಟ್ಟು ನಿನ್ನ ಕಾಲುಗಳಿಗೆ ನಮಸ್ಕರಿಸಿದ್ದೇನೆ. ॥೩೧॥

ಎಲೈ ವಿಶಾಲಾಕ್ಷಿಯೇ, ನನ್ನಲ್ಲಿ ದಯೆಮಾಡು. ಮನ್ಮಥನ ಬಾಣಗಳಿಂದ ಪೀಡಿತನಾಗಿ ಸಂಕಟಪಡುತ್ತಿದೇನೆ. ಎಲೌ ಮನೋಹರವಾದ ಅಂಗವುಳ್ಳವಳೇ, ನಾನು ಹುಟ್ಟಿದ್ದು ಮೊದಲುಗೊಂಡು ಈವರೆಗೆ ಯಾವಾಗಲೂ ದೈನ್ಯವನ್ನೇ ತೋರಿಸಿರಲಿಲ್ಲವು! ॥೩೨॥

ಬ್ರಹ್ಮನೇ ಮೊದಲಾದ ದೇವಾಧಿಪತಿಗಳನ್ನೂ ಪಡೆದು ನಿನ್ನ ವಿಷಯದಲ್ಲಿ ಏನು ಆಗಬೇಕೋ ಅದೆಲ್ಲವನ್ನೂ ಮಾಡುವೆನು. ಯುದ್ಧದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳೂ ನನ್ನ ನಡತೆಯನ್ನು ಸಾಮರ್ಥ್ಯದ ಕಥೆಯನ್ನೂ ತಿಳಿದಿರುತ್ತಾರೆ. ಇಷ್ಟುಮಟ್ಟಿನ ಮಹಿಮೆಯುಳ್ಳ ನಾನು ನಿನಗೆ ದಾಸನಾಗಿದ್ದೇನೆ. ಎಲೈ ಸ್ತ್ರೀಯೇ ನನ್ನ ಮುಖವನ್ನು ನೋಡು. ॥೩೩॥

ವ್ಯಾಸಋಷಿಯು ಹೇಳಿದನು—ಪೂಜ್ಯಳಾದ ಷಡ್ಗುಣೈಶ್ವರ್ಯಸಂಪನ್ನಳಾದ ಮಹಾ ಮಹಿಮಶಾಲಿನಿಯಾದ ಉತ್ತಮಳಾದ ಆ ದೇವಿಯು ಹೀಗೆ ಹೇಳುತ್ತಿರುವ ಆ ರಾಕ್ಷಸನನ್ನು ನೋಡಿ, ಅವನ ದಡ್ಡತನಕ್ಕಾಗಿ ನಕ್ಕು, ಮಂದಹಾಸದಿಂದ ಮುಂದೆ ಸೂಚಿಸಿರುವಂತೆ ಮಾತನ್ನು ಹೇಳಿದಳು. ॥೩೪॥

ಪ್ರಹಸ್ಯ ಸಸ್ಮಿತಂ ವಾಕ್ಯಮುವಾಚ ವರವರ್ಣಿನೀ ।

॥ ದೇವ್ಯುವಾಚ ॥

ನಾಹಂ ಪುರುಷಮಿಚ್ಛಾಮಿ ಪರಮಂ ಪುರುಷಂ ವಿನಾ ॥೩೫॥

ತಸ್ಯ ಚೇಚ್ಛಾಽಸ್ಮ್ಯಹಂ ದೈತ್ಯ ಸೃಜಾಮಿ ಸಕಲಂ ಜಗತ್ ।
ಸ ಮಾಂ ಪಶ್ಯತಿ ವಿಶ್ವಾತ್ಮಾ ತಸ್ಯಾಹಂ ಪ್ರಕೃತಿಶ್ಶಿವಾ ॥೩೬॥

---

ಶುದ್ಧವಾದ ಪರಬ್ರಹ್ಮಚೈತನ್ಯ ಒಂದೇ ಯಾವಾಗಲೂ ಇರುವ ನಿತ್ಯವೂ ನಿರ್ವಿಕಾರವೂ ಆದ ತತ್ತ್ವವು. ಆದರೂ ಅನಾದಿಯಾಗಿರುವ ಈ ಸಂಸಾರದಲ್ಲಿ ಎಂದರೆ, ಈ ಪ್ರಪಂಚಗಳ ಸೃಷ್ಟಿಸ್ಥಿತಿಲಯಗಳ ಪರಂಪರೆಯಲ್ಲಿ, ಜೀವರು ತಮ್ಮ ತಮ್ಮ ಕರ್ಮಾನುಸಾರವಾದ ಶರೀರಗಳನ್ನು ಪಡೆಯುತ್ತಾ ಸುಖದುಃಖರೂಪವಾದ ಕರ್ಮಫಲಗಳನ್ನು ಅನುಭವಿಸುತ್ತಿರುತ್ತಾರೆ. ಪ್ರತಿಯೊಂದು ಜಗತ್ತಿನ ಒಂದೊಂದು ಸೃಷ್ಟಿಯ ಪ್ರಾರಂಭದಲ್ಲಿಯೂ ಆ ಬ್ರಹ್ಮತತ್ತ್ವವು ಸೃಜ್ಯಮಾನವಾದ ಪ್ರಾಣಿಗಳ ಕರ್ಮವಶದಿಂದ ಜಗತ್ತನ್ನು ಸೃಷ್ಟಿಸಬೇಕೆಂಬ ಇಚ್ಛೆಯುಳ್ಳದ್ದಾಗಿರುತ್ತದೆ. ಈ ಅಂಶ ವನ್ನು "ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ । ಯದಿದಂ ಕಿಂ ಚ । ತತ್ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್" ಎಂದು ತೈತ್ತಿರೀಯ ಮುಂತಾದ ಉಪನಿಷತ್ತುಗಳಲ್ಲಿ ವಿವರಿಸಿದೆ. ಇಂತಹ ಸೃಷ್ಟಿಸ್ಥಿತಿಲಯ ಗಳನ್ನು ನೆರವೇರಿಸಬೇಕಾದರೆ ಆ ಬ್ರಹ್ಮವಸ್ತುವು ಸರ್ವಜ್ಞವೂ ಸರ್ವಶಕ್ತವೂ ಆಗಿರ ಬೇಕೆಂಬುದು ನ್ಯಾಯಪ್ರಾಪ್ತವಾಗಿರುತ್ತದೆ. ಈ ಇಚ್ಛೆ ಅಥವಾ ಕಾಮವೇ ಆ ಬ್ರಹ್ಮತತ್ತ್ವದ ಮೊದಲನೆಯ ಸ್ಪಂದವು ಅಥವಾ ಆದಿಶಕ್ತಿಯ ಆವಿರ್ಭಾವವು. ಈ ಇಚ್ಛಾಶಕ್ತಿಗಳಿಗೇ ದೇವಿಯು, ಮಹಾಮಾಯೆಯು, ಪರಾಶಕ್ತಿಯು ಎಂದು ವ್ಯವಹಾ ರವಿದೆ. ಈ ಅಂಶವನ್ನು "ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯ ಧಿಕಶ್ಚ ದೃಶ್ಯತೇ । ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ ॥" ಎಂದು ಶ್ವೇತಾಶ್ವತರ ಮುಂತಾದ ಉಪನಿಷತ್ತುಗಳಲ್ಲೂ "ಇಚ್ಛಾಶಕ್ತಿರುಮಾ ಕುಮಾರೀ" ಎಂದು ಶಿವಸೂತ್ರ ಮುಂತಾದ ಗ್ರಂಥಗಳಲ್ಲೂ ವರ್ಣಿಸಿದೆ. ಹೀಗೆ ಸೃಷ್ಟಿಗೆ ಅಭಿಮುಖವಾದ ಬ್ರಹ್ಮತತ್ತ್ವವೇ ಈ ಇಚ್ಛಾಶಕ್ತಿರೂಪ ವಾದ ಮಾಯಾ ಎಂಬ ಉಪಾಧಿಯಿಂದ ಸಂವಲಿತವಾಗಿ, ಸಗುಣವೂ, ಸಾಕಾರವೂ, ಲಿಂಗಭೇದವುಳ್ಳದೂ ಆಗಿ, ಮಾಯಾವಿಶಿಷ್ಟಬ್ರಹ್ಮ ಅಥವಾ ಹಿರಣ್ಯಗರ್ಭಬ್ರಹ್ಮ

ಎಂಬ ವ್ಯವಹಾರವನ್ನು ಪಡೆಯುತ್ತದೆ. ಈ ಅಂಶವನ್ನು ಶ್ರುತಿಸ್ಮೃತಿಗಳಲ್ಲಿ 'ಸರ್ವೈ ಶರೀರೀ ಪ್ರಥಮಃ' ಎಂದು ಹೇಳಿದೆ. ಮಾಯಾವಿಶಿಷ್ಟಬ್ರಹ್ಮವೂ, ಬ್ರಹ್ಮೋಪಾಧಿ ಮಾಯೆಯೂ ಪ್ರಥಮ ದಂಪತಿಗಳಾದ ಅಭಿನ್ನತತ್ತ್ವಗಳು. ಈ ಸಗುಣಬ್ರಹ್ಮರೂಪ ವನ್ನೇ ವಿಶಿಷ್ಟಾದ್ವೈತ ಮುಂತಾದ ಮತಗಳಲ್ಲಿ ಪುರುಷೋತ್ತಮ ಪರತತ್ವವೆಂದು ಹೇಳಿದೆ. ಅಗ್ನಿಯು ದಾಹಶಕ್ತಿಗಿಂತ ಹೇಗೆ ಭಿನ್ನವಲ್ಲವೋ ಹಾಗೆಯೇ ಈ ಬ್ರಹ್ಮವೂ ಶಕ್ತಿಯೂ ಅಭಿನ್ನ ತತ್ತ್ವಗಳಾಗಿವೆ. ಬ್ರಹ್ಮತತ್ತ್ವವೂ ಮಾಯೆಗೆ ಅಭಿಮುಖವಾ ದೊಡನೆಯೇ ಆದಿಶಕ್ತಿ ಅಥವಾ ಮಹಾಮಾಯೆಯಿಂದ ಪ್ರಪಂಚಗಳ ಸೃಷ್ಟಿಸ್ಥಿತಿಲಯ ಗಳೂ, ಅವುಗಳ ಮುಖ್ಯಾಧಿಕಾರಿಗಳಾದ ಬ್ರಹ್ಮ ವಿಷ್ಣು ರುದ್ರರೂ, ಅವರ ಶಕ್ತಿಗಳಾದ ಸರಸ್ವತೀ, ಲಕ್ಷ್ಮೀ, ಉಮಾದೇವಿಯರೂ ಉಂಟಾಗಿ ಕ್ರಮವಾಗಿ ಮುಖ್ಯಸೃಷ್ಟಿಗಳೂ ಮುಂದುವರಿಯುತ್ತವೆ. ಹಾಗೆಯೇ ಜೀವರಿಗೂ ಅವರವರ ಕರ್ಮಾನುಸಾರವಾಗಿ ಭೋಗ್ಯಗಳಾಗಿರಲು ಬೇಕಾಗುವ ಪಾಂಚಭೌತಿಕವಸ್ತುಗಳೂ, ಸನ್ನಿವೇಶಗಳೂ ವಿಸ್ತಾರ ವಾಗುತ್ತಾ ಅನುಸೃಷ್ಟಿಕ್ರಮದಿಂದ ಒದಗುತ್ತಾ ಬರುತ್ತವೆ. ಇದೇ ಪ್ರವೃತ್ತಿಮಾರ್ಗವು. ಅನಾದಿಯಾಗಿ ತಮ್ಮ ಕರ್ಮ, ಸಂಸ್ಕೃತಿಗಳಿಂದ ಮೇಲ್ಪಡುತ್ತಿರುವ, ತಮ್ಮ ಉಪಾಧಿ ಯಾದ ಅವಿದ್ಯೆಯ ಯೋಗ್ಯತೆಗೆ ತಕ್ಕಂತೆ ಅಲ್ಪಜ್ಞರೂ ಅಲ್ಪಶಕ್ತರೂ ಆಗಿ ವ್ಯವಹರಿ ಸುತ್ತಾ ಸಕಾಮಕರ್ಮಾಚರಣೆಯಿಂದ ಈ ಸಂಸಾರದಚಕ್ರದಲ್ಲಿ ಕರ್ತೃತ್ವ ಭೋಕ್ತೃತ್ವ ಗಳ ಅಭಿಮಾನವುಳ್ಳವರಾಗಿ ಜನನಮರಣಗಳನ್ನು ಪಡೆಯುತ್ತಾ ಕ್ರಮವಾಗಿ ಅಧಿಕ ಜ್ಞರೂ ಅಧಿಕಶಕ್ತರೂ ಆಗುತ್ತಿದ್ದರೂ, ಸುಖದುಃಖಗಳನ್ನು ಅನುಭವಿಸುತ್ತಾ ಜೀವರು ಅನಾದಿಕಾಲದಿಂದ ಸುತ್ತುತ್ತಿರುತ್ತಾರೆ. ಈ ಅಂಶವನ್ನು "ಪುಣ್ಯೇನ ಪುಣ್ಯಂ ಲೋಕಂ ನಯತಿ, ಪಾಪೇನ ಪಾಪಂ, ಉಭಾಭ್ಯಾಮೇವ ಮನುಷ್ಯಲೋಕಂ"ಎಂದು ಪ್ರಶ್ನೋಪ ನಿಷತ್ತಿನಲ್ಲೂ ಹೇಳಿದೆ.

ಹೀಗೆ ಕರ್ಮಗಳನ್ನು ಮಾಡುವುದು ಅದರ ಫಲವಾದ ದುಃಖವನ್ನೋ ಸುಖ ವನ್ನೋ ಅನುಭವಿಸುವುದು, ಇವುಗಳಲ್ಲಿ ಮಾನವನು ವಿವೇಕಿಯೂ ವೇದಶಾಸ್ತ್ರಗಳ ತಿಳಿವಳಿಕೆಯುಳ್ಳವನೂ ಆದರೆ ದುಷ್ಕರ್ಮಗಳನ್ನು ಬಿಟ್ಟು ಸತ್ಕರ್ಮಗಳನ್ನೇ ಮಾಡು ತ್ತಾನೆ. ಅವುಗಳ ಫಲಗಳನ್ನೂ ಈ ಲೋಕದಲ್ಲೂ ಪರಲೋಕದಲ್ಲೂ ಅನುಭವಿಸಿ ಆ ಪುಣ್ಯವು ಮುಗಿದ ಮೇಲೆ ಪುನಃ ಈ ಲೋಕದಲ್ಲಿ ಹುಟ್ಟುತ್ತಾನೆ. ಹೀಗೆ ಗಾಣದೆತ್ತಿನಂತೆ ಸಕಾಮಕರ್ಮಾಚರಣೆ ಮಾಡುವುದು, ಅದರ ಫಲಾನುಭವವನ್ನು ಮಾಡುವುದು ಎಂಬ ಚಕ್ರದಲ್ಲಿ ಸುತ್ತುತ್ತಿರುವಿಕೆಯಿಂದ ಜೀವನಿಗೆ ಒಂದೊಂದು ವೇಳೆ ಬೇಸರವು ಉಂಟಾಗುವುದೂ ಸ್ವಾಭಾವಿಕವಾಗಿದೆ. ಹಾಗೆ ಬೇಸರಪಟ್ಟಾಗ ಈ ಸಂಸಾರದಿಂದ ಬಿಡುಗಡೆಗೆ ಅವನ ಮನಸ್ಸು ಒಲಿದು ಬರುತ್ತದೆ. ಈ ವೃತ್ತಿಯು

ಎಲ್ಲರಿಗೂ ಅನುಭವದಿಂದ ವಿವೇಕವೂ ಮುಂದಾಲೋಚನೆಯೂ ಹೆಚ್ಚಿದಹಾಗೆಲ್ಲ ಒಂದಲ್ಲದಿದ್ದರೆ ಮತ್ತೊಂದು ದಿನದಲ್ಲಿ ಉಂಟಾಗಿಯೇ ಆಗುತ್ತದೆ. ಆ ಕೂಡಲೇ ವಿವೇಕಿಯಾದವನು ಆ ವೈರಾಗ್ಯವನ್ನು ಶಾಸ್ತ್ರಾಭ್ಯಾಸ, ಸತ್ಸಹವಾಸ, ವಿವೇಕಾನುಭವಗಳಿಂದ ಬಲಪಡಿಸಿಕೊಂಡು, ತತ್ತ್ವಜ್ಞಾನಸಂಪಾದನೆಗಾಗಿ ವೇದಾಂತವ್ಯಾಸಂಗಕ್ಕೆ ಪ್ರಾರಂಭಿಸುತ್ತಾನೆ. ನಿಷ್ಕಾಮಕರ್ಮಾಚರಣೆಯು ಅಲ್ಲಿಂದ ಮುಂದಕ್ಕೆ ಅಂಥವನ ಸ್ವಭಾವವಾಗುತ್ತದೆ. ಅದರಿಂದ ಚಿತ್ತಶುದ್ಧಿಯುಂಟಾಗಿ, ದೈವಾನುಗ್ರಹದಿಂದಲೂ, ಗುರೂಪದೇಶದಿಂದಲೂ ತತ್ತ್ವಸಾಕ್ಷಾತ್ಕಾರವನ್ನು ಪಡೆದು ಮುಕ್ತನಾಗುತ್ತಾನೆ. ಈ ಮುಕ್ತಿಯನ್ನು ಎಲ್ಲರೂ ಪಡೆಯಬಹುದು. ಹೀಗೆ ಶ್ರುತಿಸ್ಮೃತಿಗಳಲ್ಲೂ ದರ್ಶನಶಾಸ್ತ್ರಗಳಲ್ಲೂ, ಪುರಾಣೇತಿಹಾಸಗಳಲ್ಲೂ ದೊರೆಯುವ ಶ್ರೇಯಸ್ಕರವಾದ ಉಪದೇಶದಲ್ಲಿ ಸಾಮಂಜಸ್ಯವೂ ಸಾಮರಸ್ಯವೂ ಇದೆ ಎಂಬುದನ್ನು ಗಮನಿಸಬಹುದು. ಈ ಸಾಮರಸ್ಯವು ದುರ್ಘಟವೆಂದು ಅವುಗಳಲ್ಲಿರುವ ಪ್ರಕ್ರಿಯಾ, ವಿವರಗಳ ಭೇದದ ದೃಷ್ಟಿಯಿಂದ ನೋಡುವ ದೊಡ್ಡವರೆನ್ನಿಸಿಕೊಂಡಿರುವವರಲ್ಲೂ ಹಿರಿಯರಲ್ಲೂ ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೂ ಮುಖ್ಯವೂ ಮೂಲಭೂತಗಳೂ ಆದ ತತ್ತ್ವ ಮತ್ತು ಸಿದ್ಧಾಂತಗಳಲ್ಲಿ ಈ ಸಾಮರಸ್ಯವಿದೆ ಎಂಬ ಅಂಶವನ್ನು ಅಲ್ಲಲ್ಲಿ ಸಂಗ್ರಹವಾಗಿ ನಿರೂಪಿಸಿದೆ. ಅಲ್ಲದೆ ಇದು "ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್" ಎಂಬ ಸಿದ್ಧಾಂತಕ್ಕೂ ಹೊಂದಿಬರುತ್ತದೆ. ಏಕೆಂದರೆ ವೇದಗಳು, ಪುರಾಣೇತಿಹಾಸಗಳೂ, ಆಗಮಗಳು ಮತ್ತು ದರ್ಶನಗಳು ಭಾರತಾರ್ಯರ ಸಾಹಿತ್ಯದಲ್ಲಿ ಕ್ರಮವಾಗಿ ಅನುಸ್ಯೂತವಾಗಿ ಬೆಳೆದು ರೂಪಗೊಂಡ ಭಾಗಗಳಾಗಿವೆ. ಆದುದರಿಂದಲೇ ಇವೆಲ್ಲವುಗಳ ಸಿದ್ಧಾಂತಗಳಲ್ಲಿ ಸಾಮರಸ್ಯವು ಇರುವುದನ್ನು ಕಾಣಬಹುದಾಗಿದೆ. ಮೇಲಿನ ಪುಟ ೭-೮; ಸ್ಕಂಧ ೩, ಪುಟ ೭೫-೭೬ ಮತ್ತು ಪುಟ ೯೧-೯೩ ನ್ನೂ ನೋಡಿ. ಮತ್ತು ಎಲ್ಲ ಸಂಪುಟಗಳಲ್ಲೂ ದೇವೀಸ್ತೋತ್ರಭಾಗಗಳನ್ನು ನೋಡಿ.

ಮಾಯೆಯಿಂದ ಕೂಡಿದ ಪರಬ್ರಹ್ಮಸ್ವರೂಪವು ದೇವಿಯ ನಿಜವಾದ ರೂಪವಾಗಿರುವುದರಿಂದ, ಪುರುಷ, ಸ್ತ್ರೀ ಎಂಬ ಎರಡು ವಿಧವಾದ ವ್ಯವಹಾರವೂ ದೇವಿಗೆ ಉಂಟು. ಹೀಗಿರುವುದರಿಂದಲೇ ದೇವಿಯು ಈಗ ತನಗೆ ಪ್ರಕೃತಿ ಸ್ವರೂಪದಲ್ಲಿ ಇರುವ ಅಭಿಮಾನವನ್ನು ತೋರಿಸುತ್ತಾ ಹೇಳುತ್ತಾಳೆ.

ಓ ಮಹಿಷಾಸುರನೇ, ನಾನು ಪರಮಪುರುಷನನ್ನು ಹೊರತು ಬೇರೆ ಪುರುಷನನ್ನೇ ಅಪೇಕ್ಷಿಸುವುದಿಲ್ಲವು. ಎಲೈ ರಾಕ್ಷಸನೇ, ನಾನು ಆ ಪರಬ್ರಹ್ಮನ ಇಚ್ಛಾ-

**ತತ್ಸಾನ್ನಿಧ್ಯವಶಾದೇವ ಚೈತನ್ಯಂ ಮಯಿ ಶಾಶ್ವತಂ ।**
**ಜಡಾಽಹಂ ತಸ್ಯ ಸಂಯೋಗಾತ್ಪ್ರಭವಾಮಿ ಸಚೇತನಾ ॥೩೭॥**

**ಅಯಸ್ಕಾಂತಸ್ಯ ಸಾನ್ನಿಧ್ಯಾದಯಸಶ್ಚೇತನಾ ಯಥಾ ।**
**ನ ಗ್ರಾಮ್ಯಸುಖವಾಂಛಾ ಮೇ ಕದಾಚಿದಪಿ ಜಾಯತೇ ॥೩೮॥**

**ಮೂರ್ಖಸ್ತ್ವಮಪಿ ಮಂದಾತ್ಮನ್ಯತ್ಸ್ತ್ರೀಸಂಗಂ ಚಿಕೀರ್ಷಸಿ ।**
**ನರಸ್ಯ ಬಂಧನಾರ್ಥಾಯ ಶೃಂಖಲಾ ಸ್ತ್ರೀ ಪ್ರಕೀರ್ತಿತಾ ॥೩೯॥**

**ಲೋಹಬದ್ಧೋಽಪಿ ಮುಚ್ಯೇತ ಸ್ತ್ರೀಬದ್ಧೋ ನೈವ ಮುಚ್ಯತೇ ।**
**ಕಿಮಿಚ್ಛಸಿ ಚ ಮಂದಾತ್ಮನ್ಮೂತ್ರಾಗಾರಸ್ಯ ಸೇವನಂ ॥೪೦॥**

---

ಜ್ಞಾನ-ಕ್ರಿಯಾಶಕ್ತಿಗಳ ಸ್ವರೂಪಳಾಗಿದ್ದೇನೆ. ಸಮಸ್ತವಾದ ಜಗತ್ತನ್ನೂ ಸೃಷ್ಟಿ ಮಾಡುತ್ತೇನೆ. ಪ್ರಪಂಚಕ್ಕೆ ಅಧಿಷ್ಠಾನವಾಗಿರುವ ಆ ಪರಬ್ರಹ್ಮನು ನನ್ನನ್ನು ನೋಡುತ್ತಾನೆ. ನಾನು ಅವನಿಗೆ ಮಂಗಳಕರಳಾದ ಸ್ವರೂಪಳಾಗಿದ್ದೇನೆ. ॥೩೫-೩೬॥

ನಾನು ಜಡಸ್ವಭಾವದವಳು, ಚೇತನಸ್ವಭಾವದವಳಲ್ಲವು. ಜ್ಞಾನರೂಪಿಯಾದ ಆ ಪರಬ್ರಹ್ಮನ ಸಮೀಪದಲ್ಲಿರುವುದರಿಂದ ನನ್ನಲ್ಲಿಯೂ ಯಾವಾಗಲೂ ಚೈತನ್ಯವುಂಟಾಗಿರುವಂತೆ ತೋರುತ್ತಾ ಇರುವುದು. ಹೀಗೆ ಅವನ ಸಂಯೋಗದಿಂದ ನಾನು ಚೈತನ್ಯವುಳ್ಳವಳಾಗಿರುತ್ತೇನೆ. ಹೇಗೆಂದರೆ ॥೩೭॥

ಸೂಜಿಗಲ್ಲಿನ ಹತ್ತಿರದಲ್ಲಿರುವುದರಿಂದ ಕಬ್ಬಿಣವೂ ಕ್ರಿಯೆಯುಳ್ಳದ್ದಾಗುವಂತೆ ನನಗೆ ಚೈತನ್ಯವು ಪರಬ್ರಹ್ಮನ ಸಾಮೀಪ್ಯ ಸಂಬಂಧದಿಂದ ಉಂಟಾಗಿರುತ್ತದೆ. ಅಷ್ಟೇ ಹೊರತು, ನನ್ನ ವ್ಯವಹಾರಗಳಿಂದ ಮೂಢರಿಗೆ ತೋರುವಂತೆ, ನನಗೆ ಇಂದ್ರಿಯ ಜನ್ಯವಾದ ಸುಖಾನುಭವಗಳಲ್ಲಿ ಯಾವಾಗಲೂ ಆಸೆಯು ಹುಟ್ಟುವುದಿಲ್ಲವು. ॥೩೮॥

ಎಲೈ ದಡ್ಡನೇ, ಸ್ತ್ರೀಸಹವಾಸವನ್ನು ಮಾಡಲು ಇಚ್ಛೆಮಾಡುವುದರ ಕಾರಣದಿಂದ ನೀನು ಮಂದನಾಗಿದ್ದೀಯೆ. ಹೆಂಗುಸು ಎಂಬ ವಸ್ತುವು ಮನುಷ್ಯನನ್ನು ಸಂಸಾರ ನಿರ್ಬಂಧದಲ್ಲಿ ಕಟ್ಟಿಹಾಕುವ ಸರಪಣಿಯೆಂದು ಎಣಿಸಲ್ಪಟ್ಟಿರುತ್ತದೆ. ॥೩೯॥

ಲೋಹದಿಂದ ಮಾಡಿದ ಸರಪಣಿಯೇ ಮುಂತಾದುದರಿಂದ ಕಟ್ಟಲ್ಪಟ್ಟವನೂ ಬಿಡುಗಡೆಯನ್ನು ಹೊಂದಿಯಾನು. ಆದರೆ ಸ್ತ್ರೀಯಿಂದ ಕಟ್ಟಲ್ಪಟ್ಟವನು ಬಿಡುಗಡೆಯನ್ನು ಹೊಂದಲಾರನು. ಹೀಗಿರುವಲ್ಲಿ, ಎಲೈ ದಡ್ಡನೇ, ನೀನು ಮೂತ್ರಗೃಹದ ಸೇವನೆಯನ್ನು ಏತಕ್ಕೆ ಆಶಿಸುತ್ತೀಯೆ ? ॥೪೦॥

ಶಮಂ ಕುರು ಸುಖಾಯ ತ್ವಂ ಶಮಾತ್ಸುಖಮವಾಪ್ಸ್ಯಸಿ ।
ನಾರೀಸಂಗೇ ಮಹದ್ದುಃಖಂ ಜಾನನ್ ಕಿಂ ತ್ವಂ ವಿಮುಹ್ಯಸಿ ॥೪೧॥

ತ್ಯಜ ವೈರಂ ಸುರೈಸ್ಸಾರ್ಧಂ ಯಥೇಷ್ಟಂ ವಿಚರಾವನೌ ।
ಪಾತಾಲಂ ಗಚ್ಛ ವಾ ಕಾಮಂ ಜೀವಿತೇಚ್ಛಾ ಯದಸ್ತಿ ತೇ ॥೪೨॥

ಅಥವಾ ಕುರು ಸಂಗ್ರಾಮಂ ಬಲವತ್ಯಸ್ಮಿ ಸಾಂಪ್ರತಂ ।
ಪ್ರೇಷಿತಾಽಹಂ ಸುರೈಃ ಸರ್ವೈಸ್ತವ ನಾಶಾಯ ದಾನವ ॥೪೩॥

ಸತ್ಯಂ ಬ್ರವೀಮಿ ಯೇನಾದ್ಯ ತ್ವಯಾ ವಚನಸೌಹೃದಂ ।
ದರ್ಶಿತಂ ತೇನ ತುಷ್ಟಾಽಸ್ಮಿ ಜೀವನ್ಗಚ್ಛ ಯಥಾಸುಖಂ ॥೪೪॥

---

ಎಲೈ ರಾಕ್ಷಸನೇ, ಸುಖವನ್ನು ಅನುಭವಿಸುವುದಕ್ಕಾಗಿ ಉಪಶಾಂತಿಯನ್ನು ಹೊಂದು. ನೀನು ಆಶಿಸುವ ಸುಖವನ್ನು ಉಪಶಾಂತಿಯಿಂದ ಹೊಂದುವೆ. ಸ್ತ್ರೀಸಹವಾಸದಲ್ಲಿ ದುಃಖವು ಹೆಚ್ಚೆಂದು ತಿಳಿದುಕೊಂಡೂ ಏತಕ್ಕೆ ಭ್ರಾಂತನಾಗಿರುತ್ತೀಯೆ ? ॥೪೧॥

ನೀನು ದೇವತೆಗಳೊಡನೆ ವಿರೋಧವನ್ನು ಬಿಡು. ನೀನು ಬದುಕಬೇಕೆಂಬ ಇಚ್ಛೆಯಿದ್ದಲ್ಲಿ ಇತರರ ವಿಷಯದಲ್ಲಿ ಅಸೂಯೆಪಡದೆ, ಅವರ ಸಂಪತ್ತನ್ನು ಆಶಿಸದೆ, ನಿನ್ನ ಇಚ್ಛೆ ಬಂದ ಹಾಗೆ ಭೂಮಿಯಲ್ಲಿ ಸಂಚಾರಮಾಡು. ಅಥವಾ ಪಾತಾಳಕ್ಕಾದರೂ ಹೋಗು. ॥೪೨॥

ಎಲೈ ರಾಕ್ಷಸನೇ, ಹಾಗಿಲ್ಲದಿದ್ದರೆ ಆಶೆ ಅಸೂಯೆಗಳನ್ನು ಬಿಡಲಾರದೆ ಇದ್ದರೆ, ಈಗ ನನ್ನೊಡನೆ ಯುದ್ಧವನ್ನು ಮಾಡು. ನಾನು ಬಲಿಷ್ಠಳಾಗಿಯೇ ಇದೇನೆ. ನಾನು ದೇವತೆಗಳೆಲ್ಲರಿಂದಲೂ ನಿನ್ನ ನಾಶಕ್ಕಾಗಿಯೇ ಪ್ರಾರ್ಥಿಸಿ ಕಳುಹಿಸಲ್ಪಟ್ಟದ್ದೇನೆ. ॥೪೩॥

ಎಲೈ ದಾನವನೇ, ನಾನು ನಿನಗೆ ನಿಜವನ್ನು ಹೇಳುತ್ತಿದೇನೆ. ನೀನು ಈಗ ನಿನ್ನ ವಿಧೇಯತೆಯ ಮಾತಿನಿಂದಲೇ ಸ್ನೇಹವನ್ನು ತೋರಿಸಿರುತ್ತೀಯೆ. ಆದರಿಂದ ನಾನು ಸಂತೋಷವುಳ್ಳವಳಾಗಿ ಇಷ್ಟು ಮಾತನ್ನು ಹೇಳಿರುತ್ತೇನೆ. ನೀನೂ ಕೂಡ ಬದುಕಿಕೊಂಡು ನಿನಗೆ ಸುಖವಾಗುವಂತೆ ಇಲ್ಲಿಂದ ಹೊರಟುಹೋಗು. ॥೪೪॥

ಸತಾಂ ಸಪ್ತಪದೀ ಮೈತ್ರೀ ತೇನ ಮುಂಚಾಮಿ ಜೀವಿತಂ ।
ಮರಣೇಚ್ಛಾsಸ್ತಿ ಚೇದ್ಯುದ್ಧಂ ಕುರು ವೀರ ಯಥಾಸುಖಂ ॥೪೫॥

ಹನಿಷ್ಯಾಮಿ ಮಹಾಬಾಹೋ ತ್ವಾಮಹಂ ನಾತ್ರ ಸಂಶಯಃ ।

॥ ವ್ಯಾಸ ಉವಾಚ ॥

ಇತಿ ತಸ್ಯಾ ವಚಃ ಶ್ರುತ್ವಾ ದಾನವಃ ಕಾಮಮೋಹಿತಃ ॥೪೬॥

ಉವಾಚ ಶ್ಲಕ್ಷ್ಣಯಾ ವಾಚಾ ಮಧುರಂ ವಚನಂ ತತಃ ।
ಬಿಭೇಮ್ಯಹಂ ವರಾರೋಹೇ ತ್ವಾಂ ಪ್ರಹರ್ತುಂ ವರಾನನೇ ॥೪೭॥

ಕೋಮಲಾಂ ಚಾರುಸರ್ವಾಂಗೀಂ ನಾರೀಂ ನರವಿಮೋಹಿನೀಂ ।
ಜಿತ್ವಾ ಹರಿಹರಾದೀಂಶ್ಚ ಲೋಕಪಾಲಾಂಶ್ಚ ಸರ್ವಶಃ ॥೪೮॥

---

ಸತ್ಪುರುಷರೊಡನೆ ಸ್ನೇಹವು ಏಳು ಹೆಜ್ಜೆ ನಡೆದ ಮಾತ್ರಕ್ಕೆ, ಎಂದರೆ, ಅಷ್ಟು ಸ್ವಲ್ಪ ಹೊತ್ತು ಮಾತ್ರ ಒಳ್ಳೆಯ ಮಾತು ಸೌಜನ್ಯಸಹವಾಸವ್ಯವಹಾರದಿಂದ ಉಂಟಾಗುವುದು. ಆದುದರಿಂದ ನಿನ್ನ ಪ್ರಾಣವನ್ನು ಬಿಟ್ಟುಕೊಡುತ್ತೇನೆ. ವೀರನಾದ ಮಹಿಷನೇ, ನೀನು ಸಾಯಲೇಬೇಕೆಂಬ ಇಚ್ಛೆಯಿದ್ದಲ್ಲಿ ನಿನಗೆ ತೃಪ್ತಿಯುಂಟಾಗುವ ಹಾಗೆ ಯುದ್ಧವನ್ನು ಮಾಡು. ಎಲೈ ಮಹಾಬಾಹುವೇ, ನಿನ್ನನ್ನು ನಾನು ಸಂಹಾರ ಮಾಡುವೆನು. ಇದರಲ್ಲಿ ಸಂಶಯವನ್ನು ಇಟ್ಟುಕೊಳ್ಳಬೇಡ. ॥೪೫॥

ವ್ಯಾಸಋಷಿಯು ಹೇಳಿದನು— ಕಾಮದಿಂದ ಅಜ್ಞಾನವುಳ್ಳವನಾದ ಯುಕ್ತಾಯುಕ್ತವಿವೇಚನೆ ಇಲ್ಲದವನಾದ, ಆ ಮಹಿಷಾಸುರನು ಹಾಗೆ ಹೇಳುತ್ತಿರುವ ಆ ದೇವಿಯ ಮಾತನ್ನು ಕೇಳಿ ಮೊದಲು ಹೇಳಿದ್ದಕ್ಕಿಂತಲೂ ಮಧುರವಾದ ಮಾತನ್ನು ಮೃದುವಾದ ರೀತಿಯಲ್ಲಿ ಹೀಗೆ ಹೇಳಿದನು. ॥೪೬॥

ಓ ಮೇಲಾದ ಸುಖವನ್ನುಂಟುಮಾಡುವ ಮನೋಹರವಾದ ಮುಖವುಳ್ಳವಳೇ, ನೀನು ಬಹಳ ಸುಕುಮಾರವಾದ ಶರೀರವುಳ್ಳವಳಾಗಿದ್ದೀಯೆ. ಸುಂದರವಾದ ಎಲ್ಲ ಅವಯವಗಳೂ ಉಳ್ಳವಳಾಗಿದ್ದೀಯೆ. ಆದುದರಿಂದ ನಿನ್ನನ್ನು ಕಠಿಣವಾದ ಆಯುಧಗಳಿಂದ ಹೊಡೆಯಲು ಹಿಂಜರಿಯುತ್ತಿದೇನೆ. ನಾನು, ವಿಷ್ಣು ಈಶ್ವರ ಲೋಕಪಾಲಕರು ಇವರುಗಳೇ ಮುಂತಾದ ವೀರಶೂರರನ್ನೂ ಗೆದ್ದು ಇರುತ್ತೇನೆ. ಇಷ್ಟು ಶೂರನಾದ ನಾನು, ನೋಡಿದ ಕೂಡಲೇ ಮನುಷ್ಯನನ್ನು ಮೋಹಕ್ಕೆ

ಕಿಂ ತ್ವಯಾ ಸಹ ಯುದ್ಧಂ ಮೇ ಯುಕ್ತಂ ಕಮಲಲೋಚನೇ ।
ರೋಚತೇ ಯದಿ ಚಾರ್ವಂಗಿ ವಿವಾಹಂ ಕುರು ಮಾಂ ಭಜ ॥೪೯॥

ನೋ ಚೇದ್ಗಚ್ಛ ಯಥೇಷ್ಟಂ ತೇ ದೇಶಂ ಯಸ್ಮಾತ್ಸಮಾಗತಾ ।
ನಾಹಂ ತ್ವಾಂ ಪ್ರಹರಿಷ್ಯಾಮಿ ಯತೋ ಮೈತ್ರೀ ಕೃತಾ ತ್ವಯಾ ॥೫೦॥

ಹಿತಮುಕ್ತಂ ಶುಭಂ ವಾಕ್ಯಂ ತಸ್ಮಾದ್ಗಚ್ಛ ಯಥಾಸುಖಂ ।
ಕಾ ಶೋಭಾ ಮೇ ಭವೇದಂತೇ ಹತ್ವಾ ತ್ವಾಂ ಚಾರುಲೋಚನಾಂ ॥೫೧॥

ಸ್ತ್ರೀಹತ್ಯಾ ಬಾಲಹತ್ಯಾ ಚ ಬ್ರಹ್ಮಹತ್ಯಾ ದುರತ್ಯಯಾ ।
ಗೃಹೀತ್ವಾ ತ್ವಾಂ ಗೃಹಂ ನೂನಂ ಗಚ್ಛಾಮ್ಯದ್ಯ ವರಾನನೇ ॥೫೨॥

---

ಒಳಗಾಗುವಂತೆ ಮಾಡುವಷ್ಟು ಸೌಂದರ್ಯದಿಂದ ಕೂಡಿರುವ ನಿನ್ನಂತಹ ಹೆಂಗಸನ್ನು ಯುದ್ಧದಲ್ಲಿ ಹೊಡೆಯುವುದಕ್ಕೆ ಹೆದರುತ್ತೇನೆ. ॥೪೭-೪೮॥

ಕಮಲದಂತಿರುವ ಕಣ್ಣುಳ್ಳವಳೇ, ನನಗೆ ನಿನ್ನೊಡನೆ ಯುದ್ಧವು ಉಚಿತವಾದುದೇ ? ಎಲೌ ಸುಂದರಾಂಗಿಯೇ, ನಿನಗೆ ಮನಸ್ಸು ಬಂದರೆ, ನನ್ನನ್ನು ಮದುವೆ ಮಾಡಿಕೊಂಡು ನನ್ನನ್ನು ಸೇವಿಸುತ್ತಾ ಸುಖವನ್ನು ಹೊಂದು. ॥೪೯॥

ಹಾಗೆ ಆಗದಿದ್ದರೆ, ನೀನು ಎಲ್ಲಿಂದ ಬಂದೆಯೋ ಆ ಪ್ರದೇಶಕ್ಕೆ ನಿನ್ನ ಇಷ್ಟಾನುಸಾರವಾಗಿ ಹಿಂತಿರುಗಿ ಹೋಗು. ನನಗೆ ನಿನ್ನೊಡನೆ ಸ್ನೇಹವು ಉಂಟಾಗಿದೆಯಾದಕಾರಣ ನಾನು ನಿನ್ನನ್ನು ಹೊಡೆಯುವುದಿಲ್ಲವು. ॥೫೦॥

ನೀನು ಇಂಪಾದ ಒಳ್ಳೆಯ ಮಾತನ್ನು ಹೇಳಿರುತ್ತೀಯೆ. ಆದುದರಿಂದಲೂ ನೀನು ನಿನ್ನ ಮನಬಂದಂತೆ ಸುಖಾನುಸಾರವಾಗಿ ಹೋಗು. ಸುಂದರವಾದ ಕಣ್ಣುಗಳುಳ್ಳ ನಿನ್ನಂತಹ ಹೆಂಗುಸನ್ನು ನಾನು ಕೊಂದರೆ ನನಗೆ ಕೊನೆಗೆ ಮೇಲ್ಮೆಯ ಕಾಂತಿಯು ಪರಾಕ್ರಮದ ಯಶಸ್ಸು ಏನುತಾನೇ ಉಂಟಾದೀತು ? ॥೫೧॥

ನಿನ್ನನ್ನು ಕೊಂದಲ್ಲಿ ಸ್ತ್ರೀಹತ್ಯೆ, ಬಾಲಹತ್ಯೆ ಇವೆರಡರ ಜೊತೆಗೆ ಮಾರಲಸಾಧ್ಯವಾದ ಬ್ರಹ್ಮಹತ್ಯೆಯೂ ಸಹ ಬರುವುದು. ಆದುದರಿಂದ, ಎಲೌ ಶ್ರೇಷ್ಠವಾದ ಮುಖವುಳ್ಳವಳೇ, ನಿನ್ನನ್ನು ಸಂಹರಿಸದೆ ಕೈಸೆರೆಗೊಂಡು ಈಗ ನಾನು ಮನೆಗೆ ಹೋಗುವೆನು ಎಂದು ಯೋಚಿಸಿದರೆ, ॥೫೨॥

ತಥಾಪಿ ಮೇ ಫಲಂ ನ ಸ್ಯಾದ್ಬಲಾದ್ಭೋಗಸುಖಂ ಕುತಃ ।
ಪ್ರಬ್ರವೀಮಿ ಸುಕೇಶಿ ತ್ವಾಂ ವಿನಯಾವನತೋ ಯತಃ ॥೫೩॥

ಪುರುಷಸ್ಯ ಸುಖಂ ನ ಸ್ಯಾದೃತೇ ಕಾಂತಾಮುಖಾಂಬುಜಾತ್ ।
ತತ್ರೈವ ಹಿ ನಾರೀಣಾಂ ನ ಸ್ಯಾಚ್ಚ ಪುರುಷಂ ವಿನಾ ॥೫೪॥

ಸಂಯೋಗೇ ಸುಖಸಂಭೂತಿರ್ವಿಯೋಗೇ ದುಃಖಸಂಭವಃ ।
ಕಾಂತಾಽಸಿ ರೂಪಸಂಪನ್ನಾ ಸರ್ವಾಭರಣಭೂಷಿತಾ ॥೫೫॥

ಚಾತುರ್ಯಂ ತ್ವಯಿ ಕಿಂ ನಾಸ್ತಿ ಯತೋ ಮಾಂ ನ ಭಜಸ್ಯಹೋ ।
ತವೋಪದಿಷ್ಟಂ ಕೇನೇದಂ ಭೋಗಾನಾಂ ಪರಿವರ್ಜನಂ ॥೫೬॥

ವಂಚಿತಾಽಸಿ ಪ್ರಿಯಾಲಾಪೇ ವೈರಿಣಾ ಕೇನಚಿತ್ತ್ವಿಹ ।
ಮುಂಚಾಽಽಗ್ರಹಮಿಮಂ ಕಾಂತೇ ಕುರು ಕಾರ್ಯಂ ಸುಶೋಭನಂ ॥೫೭॥

---

ಹಾಗೆ ಮಾಡಿದರೂ ಅದರಿಂದ ಏನು ಪ್ರಯೋಜನವೂ ಆಗಲಾರದು. ಏಕೆಂದರೆ ಬಲಾತ್ಕಾರದಿಂದ ಎಂತಹ ಭೋಗಸುಖವು ಲಭಿಸೀತು ? ಆದುದರಿಂದ ಎಲೌ ಸುಕೇಶಿಯೇ, ನಾನು ವಿನಯದಿಂದ ತಲೆಯನ್ನು ತಗ್ಗಿಸಿಕೊಂಡು ಹೇಳುತ್ತೇನೆ. ॥೫೩॥

ಗಂಡಸಿಗೆ ಸುಂದರಿಯಾದ ಸ್ತ್ರೀಯ ಮುಖಕಮಲದ ದರ್ಶನವಿಲ್ಲದೆ ಸುಖವುಂಟಾಗುವುದಿಲ್ಲವು. ಹಾಗೆಯೇ ಸ್ತ್ರೀಯರಿಗೂ ಪುರುಷರಿಲ್ಲದೆ ಸುಖವಿಲ್ಲವು. ॥೫೪॥

ದಂಪತಿಗಳಾದ ಸ್ತ್ರೀಪುರುಷರಿಗೆ ಸಂಯೋಗವುಂಟಾದರೆ ಸುಖವೂ, ವಿಯೋಗವುಂಟಾದರೆ ದುಃಖವೂ ಉಂಟಾಗುವುದು. ನೀನು ಎಲ್ಲ ಬಗೆಯ ಆಭರಣಗಳಿಂದ ಅಲಂಕಾರಗಳಿಂದ ಶೃಂಗರಿಸಿಕೊಂಡಿರುವವಳಾಗಿ, ಅತಿಶಯವಾದ ಸೌಂದರ್ಯವುಳ್ಳವಳಾದ ರಮಣಿಯಾಗಿರುತ್ತೀಯೆ. ॥೫೫॥

ನೀನು ನನ್ನನ್ನು ಪತಿಯಾಗಿ ಹೊಂದದೇ ಇರುವುದರಿಂದ ನಿನಗೆ ಅನುರೂಪನಾದ ರಮಣನನ್ನು ಸೇರಬೇಕೆಂಬ ಇಚ್ಛೆಯೂ ಜಾಣತನವೂ ಇಲ್ಲವೇ ? ಇದು ಆಶ್ಚರ್ಯಕರವಾಗಿರುತ್ತೆ. ಅಲ್ಲದೆ, ಭೋಗಗಳನ್ನು ಪಡೆಯಬಾರದೆಂಬ ಉಪದೇಶವನ್ನು ನಿನಗೆ ಯಾರು ಮಾಡಿದರು ? ॥೫೬॥

ಪ್ರಿಯವಾದ ಮಾತನಾಡುವ ಎಲೌ ರಮಣಿಯೇ, ಶತ್ರುವಾದ ಯಾವನೋ ಒಬ್ಬನಿಂದ ನೀನು ಮೋಸಮಾಡಲ್ಪಟ್ಟಿರುವೆ. ಎಲೌ ಕಾಂತೆಯೇ, ಈ ಹಠವನ್ನು

ಸುಖಂ ತವ ಮಮಾಪಿ ಸ್ಯಾದ್ವಿವಾಹೇ ವಿಹಿತೇ ಕಿಲ ।
ವಿಷ್ಣುರ್ಲಕ್ಷ್ಮ್ಯಾ ಸಹಾಭಾತಿ ಸಾವಿತ್ರ್ಯಾ ಚ ಸಹಾತ್ಮಭೂಃ ।
ರುದ್ರೋ ಭಾತಿ ಚ ಪಾರ್ವತ್ಯಾ ಶಚ್ಯಾ ಶತಮಖಸ್ತಥಾ ॥೫೮॥

ಕಾ ನಾರೀ ಪತಿಹೀನಾ ಚ ಸುಖಂ ಪ್ರಾಪ್ನೋತಿ ಶಾಶ್ವತಂ ।
ಯೇನ ತ್ವಮಸಿತಾಪಾಂಗಿ ನ ಕರೋಷಿ ಪತಿಂ ಶುಭಂ ॥೫೯॥

ಕಾಮಃ ಕ್ವಾದ್ಯ ಗತಃ ಕಾಂತೇ ಯಸ್ತ್ವಾಂ ಬಾಣೈಃ ಸುಕೋಮಲೈಃ ।
ಮಾದನೈಃ ಪಂಚಭಿಃ ಕಾಮಂ ನ ತಾಡಯತಿ ಮಂದಧೀಃ ॥೬೦॥

ಮನ್ಯೇಽಹಮಿವ ಕಾಮೋಽಪಿ ದಯಾವಾಂಸ್ತ್ವಯಿ ಸುಂದರಿ ॥೬೧॥
ಅಬಲೇತಿ ಚ ಮನ್ವಾನೋ ನ ಪ್ರೇರಯತಿ ಮಾರ್ಗಣಾನ್ ।

---

ಬಿಡು. ಮಂಗಳಕರವಾದುದರಿಂದ ಒಳ್ಳೆಯದಾದ, ಅನುರೂಪನಾದ ಪತಿಯನ್ನು ಪಡೆಯುವ ಈ ಕೆಲಸವನ್ನು ನೆರವೇರಿಸು. ॥೫೭॥

ನಮ್ಮಿಬ್ಬರಿಗೂ ವಿವಾಹವು ನಡೆದಲ್ಲಿ ನಿನಗೂ ನನಗೂ ಸುಖವುಂಟಾಗುವುದು. ವಿಷ್ಣುವು ಲಕ್ಷ್ಮಿಯೊಡನೆಯೂ, ಬ್ರಹ್ಮನು ಸರಸ್ವತಿಯೊಡನೆಯೂ, ಈಶ್ವರನು ಪಾರ್ವತಿಯೊಡನೆಯೂ, ಇಂದ್ರನು ಶಚೀದೇವಿಯೊಡನೆಯೂ ಸೇರಿ ಸುಖಪಡುತ್ತಾ, ಶೋಭಿಸಿರುವಂತೆ ನಾವೂ ಚನ್ನಾಗಿ ಬಾಳಬಹುದು. ॥೫೮॥

ಒಳ್ಳೆಯ ಗಂಡನಿಲ್ಲದಿರುವ ಯಾವ ಹೆಂಗುಸುತಾನೇ ಸ್ಥಿರವಾದ ಸುಖವನ್ನು ಹೊಂದುವಳು ? ಕಪ್ಪಾದ ಕಾಂತಿಯಿಂದ ಕೂಡಿರುವ ಕಡೆಗಣ್ಣುಗಳ ನೋಟವುಳ್ಳ ಸ್ತ್ರೀಯೇ, ಶುಭಕರನಾದ ಪತಿಯನ್ನು ನೀನು ಏತಕ್ಕೆ ಮಾಡಿಕೊಳ್ಳುವುದಿಲ್ಲ ? ॥೫೯॥

ಎಲೈ ಸುಂದರಳಾದ ರಮಣಿಯೇ, ಮಂದಬುದ್ಧಿಯುಳ್ಳ ಆ ಮನ್ಮಥನು ಮದವನ್ನುಂಟುಮಾಡುವ ತನ್ನ ಐದು ಬಾಣಗಳಿಂದ ತನ್ನ ಇಚ್ಛಾಶಕ್ತಿಗಳಿಗೆ ಅನು ಸಾರವಾಗಿ ನಿನ್ನನ್ನು ಹೊಡೆಯದೇ ಅವನು ಈಗ ಎಲ್ಲಿಗೆ ಹೋದನು ? ॥೬೦॥

ಎಲೈ ಸುಂದರಿಯೇ, ಆ ಮನ್ಮಥನೂ ಕೂಡ, ನನ್ನಂತೆಯೇ ನಿನ್ನ ವಿಷಯ ದಲ್ಲಿ ದಯವುಳ್ಳವನಾಗಿರುವನೆಂದು ನಾನು ತಿಳಿಯುತ್ತೇನೆ. ಮತ್ತು ನಿನ್ನನ್ನು ಬಲ ವಿಲ್ಲದವಳೆಂದು ತಿಳಿದು ಬಾಣಗಳನ್ನು ಮನ್ಮಥನೂ ಬಿಡಲಾರದೆ ಇದಾನೆಂದು ತಿಳಿಯುತ್ತೇನೆ. ॥೬೧॥

ಮನೋಭವಸ್ಯ ವೈರಂ ವಾ ಕಿಮಪ್ಯಸ್ತಿ ಮಯಾ ಸಹ ।
ತೇನ ಚ ತ್ವಯ್ಯರಾಲಾಕ್ಷಿ ನ ಮುಂಚತಿ ಶಿಲೀಮುಖಾನ್ ॥೬೨॥

ಅಥವಾ ಮೋಹಿತೈರ್ದೇವೈಃ ವಾರಿತೋಽಸೌ ಝುಷಧ್ವಜಃ ।
ಸುಖವಿಧ್ವಂಸಿಭಿಸ್ತೇನ ತ್ವಯಿ ನ ಪ್ರಹರತ್ಯಪಿ ॥೬೩॥

ತ್ಯಕ್ತ್ವಾ ಮಾಂ ಮೃಗಶಾಬಾಕ್ಷಿ ಪಶ್ಚಾತ್ತಾಪಂ ಕರಿಷ್ಯಸಿ ।
ಮಂದೋದರೀವ ತನ್ವಂಗಿ ಪರಿತ್ಯಜ್ಯ ಶುಭಂ ನೃಪಂ ॥೬೪॥

ಅನುಕೂಲಂ ಪತಿಂ ಪಶ್ಚಾತ್ಸಾ ಚಕಾರ ಶಠಂ ಪತಿಂ ।
ಕಾಮಾರ್ತಾ ಚ ಯದಾ ಜಾತಾ ಮೋಹೇನ ವ್ಯಾಕುಲಾಂತರಾ ॥೬೫॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಷೋಡಶೋಽಧ್ಯಾಯಃ.

---

ಮನ್ಮಥನಿಗೆ ನನ್ನೊಡನೆ ದ್ವೇಷವಾದರೂ ಏನು ಇರಬಹುದು? ನನಗೆ ಮಾತ್ರ ಬಾಣಗಳನ್ನು ಮನ್ಮಥನು ಪ್ರಯೋಗಿಸಿಬಿಟ್ಟು, ನಿನಗೆ ಬಾಣಗಳನ್ನು ಬಿಡುತ್ತಾ ಇಲ್ಲವು! ಅಥವಾ ನನಗೆ ಶತ್ರುಗಳಾದ ದೇವತೆಗಳು ಆ ಮೀನಕೇತನನನ್ನು ನಿನಗೆ ಬಾಣಗಳನ್ನು ಬಿಡದಂತೆ ತಡೆ ಮಾಡಿರಬಹುದೆಂದು ತೋರುತ್ತದೆ. ||೬೨-೬೩||

ಆದುದರಿಂದ ಅವನು ದುಃಖವನ್ನುಂಟುಮಾಡುವ ಬಾಣಗಳಿಂದ ನಿನ್ನನ್ನು ಹೊಡೆಯುತ್ತಿಲ್ಲವು! ಅಲ್ಲದೆ ಹುಲ್ಲೆಯ ಮರಿಯ ಕಣ್ಣಿನಂತಿರುವ ಕಣ್ಣುಳ್ಳ ಮಹಿಳೆಯೇ, ತಾನಾಗಿ ಬಂದಿರುವ ನನ್ನನ್ನು ಈಗ ನೀನು ಬಿಟ್ಟು ಅನಂತರದಲ್ಲಿ ಪಶ್ಚಾತ್ತಾಪವನ್ನು ಹೊಂದುವೆ! ||೬೪||

ಎಲೈ ಕೃಶಾಂಗಿಯೇ, ಮಂಡೋದರಿಯೆಂಬುವಳು, ಅನುಕೂಲನಾದ ಪತಿಯು ತಾನಾಗಿ ಬಂದಾಗ ಅವನನ್ನು ಸ್ವೀಕರಿಸದೆ ಬಿಟ್ಟು ತನಗೆ ಕಾಮಬಾಧೆಯುಂಟಾದಾಗ ಮೋಹದಿಂದ ವ್ಯಾಕುಲವಾದ ಮನಸ್ಸುಳ್ಳವಳಾಗಿ ಆತುರಪಟ್ಟು ಮೋಸಹೋಗಿ ದುಷ್ಟನಾದವನನ್ನು ಪತಿಯನ್ನು ಮಾಡಿಕೊಂಡು ಕ್ಲೇಶಪಟ್ಟಂತೆ, ನೀನೂ ಈಗ ನನ್ನನ್ನು ಬಿಟ್ಟು ಆಮೇಲೆ ಕ್ಲೇಶಕ್ಕೆ ಒಳಗಾಗುವೆ! ||೬೫||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### || ಸಪ್ತದಶೋಽಧ್ಯಾಯಃ ||

### ಹದಿನೇಳನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ಶ್ರುತ್ವಾ ವಚಸ್ತಸ್ಯ ದೇವೀ ಪಪ್ರಚ್ಛ ದಾನವಂ ।**
**ಕಾ ಸಾ ಮಂದೋದರೀ ನಾರೀ ಕೋಽಸೌ ತ್ಯಕ್ತೋ ನೃಪಸ್ತಯಾ ॥೧॥**

**ಶಠಃ ಕೋ ವಾ ನೃಪಃ ಪಶ್ಚಾತ್ತನ್ಮೇ ಬ್ರೂಹಿ ಕಥಾನಕಂ ।**
**ವಿಸ್ತರೇಣ ಯಥಾಪ್ರಾಪ್ತಂ ದುಃಖಂ ವನಿತಯಾ ಪುನಃ ॥೨॥**

---

ವ್ಯಾಸಋಷಿಯು ಹೇಳಿದನು—ಹಿಂದಿನ ಅಧ್ಯಾಯದಲ್ಲಿ ಹೇಳಿದ ಪ್ರಕಾರವಾಗಿರುವ ಆ ಮಹಿಷಾಸುರನ ಮಾತನ್ನು ಕೇಳಿ, ದೇವಿಯು—ಆ ಮಂದೋದರಿಯೆಂಬ ಹೆಂಗುಸು ಯಾರು? ಅವಳಿಂದ ಬಿಡಲ್ಪಟ್ಟ ರಾಜನು ಯಾರು? ಎಂದು ಮಹಿಷಾಸುರನನ್ನು ಪ್ರಶ್ನೆಮಾಡಿದಳು. ||೧||

ಮತ್ತು ದುಷ್ಟನಾದ ಆ ರಾಜನು ಯಾರು? ಆ ಸ್ತ್ರೀಯು ದುಃಖವನ್ನು ಹೇಗೆ ಹೊಂದಿದಳು? ಈ ಕಥೆಯೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು ಎಂದು ಕೇಳಿದಳು. ||೨||

ಈ ಧರ್ಮಯುದ್ಧದ ಪ್ರಕರಣದಲ್ಲಿ ದೇವಿಗೂ ಮಹಿಷನಿಗೂ ಈ ಬಗೆಯ ಕಥಾಸಲ್ಲಾಪವಿನೋದವನ್ನು ಮುಂದುವರಿಸುತ್ತಿರುವುದು ಅನುಚಿತವೆಂದು ಕಾಣಬಹುದು. ಆದರೂ ರಸಾಭಾಸಕ್ಕೆ ಉದಾಹರಣೆಯಾಗಿರುವ ಮಹಿಷನನ್ನು ಇನ್ನೂ ಹೆಚ್ಚಿನ ನಗೆಗೇಡಿನ ಹಳ್ಳಕ್ಕೆ ತಳ್ಳಿ, ಅವನಲ್ಲಿ ತೋರುವುದು ಶೃಂಗಾರರಸದ ರತಿಸ್ಥಾಯೀ ಭಾವವಲ್ಲವು. ಮತ್ತೇನೆಂದರೆ ವಿಷಯಲಂಪಟನ ಇಂದ್ರಿಯ ಲಾಲಸೆಯಿಂದ ಪಾಶವ ಪಾಪಾಚರಣೆಯಲ್ಲಿ ಮುನ್ನುಗ್ಗುವಿಕೆ. ಎಂಬುದನ್ನು ತೋರಿಸುತ್ತಾ, ಅಂಥ

|| ಮಹಿಷ ಉವಾಚ ||

**ಸಿಂಹಲೋ ನಾಮ ದೇಶೋಽಸ್ತಿ ವಿಖ್ಯಾತಃ ಪೃಥಿವೀತಲೇ ।**
**ಘನಪಾದಪಸಂಯುಕ್ತೋ ಧನಧಾನ್ಯಸಮೃದ್ಧಿಮಾನ್ ||೩||**

**ಚಂದ್ರಸೇನಾಭಿಧಸ್ತತ್ರ ರಾಜಾ ಧರ್ಮಪರಾಯಣಃ ।**
**ನ್ಯಾಯದಂಡಧರಃ ಶಾಂತಃ ಪ್ರಜಾಪಾಲನತತ್ಪರಃ ||೪||**

**ಸತ್ಯವಾದೀ ಮೃದುಶ್ಶೂರಸ್ತಿತಿಕ್ಷುರ್ನೀತಿಸಾಗರಃ ।**
**ಶಾಸ್ತ್ರವಿತ್ಸರ್ವಧರ್ಮಜ್ಞೋ ಧನುರ್ವೇದೇಽತಿನಿಷ್ಠಿತಃ ||೫||**

**ತಸ್ಯ ಭಾರ್ಯಾ ವರಾರೋಹಾ ಸುಂದರೀ ಸುಭಗಾ ಶುಭಾ ।**
**ಸದಾಚಾರಾಽತಿಸುಮುಖೀ ಪತಿಭಕ್ತಿಪರಾಯಣಾ ||೬||**

---

ವನ ವಧೆಯು ಧಾರ್ಮಿಕವಾದುದೆಂಬುದನ್ನೂ ಓದುವವರ ಮತ್ತು ಕೇಳುವವರ ಹೃದಯಕ್ಕೆ ತಂದು, ಇಂತಹ ಆಕರ್ಷಣೆಗಳಿಗೆ ಒಳಗಾದರೆ ಕೇಡುಂಟಾಗುವುದರಿಂದ ಹಾಗೆ ಮಾಡಬಾರದೆಂಬುದನ್ನು ತೋರಿಸುವ ಉದ್ದೇಶದಿಂದ ಹೀಗೆ ವಿವರಿಸಲಾಗಿದೆ, ಎಂದು ತಿಳಿಯಬಹುದು. ಅಲ್ಲದೆ ಜಗನ್ಮಾತೆಯು ಮಾಡಿದ ಲೋಕಲೀಲೆಯ ಅನುಕರಣಕ್ಕೆ ಇದೂ ಒಂದು ಉದಾಹರಣೆ ಎನ್ನಬಹುದು.

ಮಹಿಷನು ಹೇಳಿದನು— ದಟ್ಟವಾದ ಮರಗಳಿಂದ ಕೂಡಿ, ಧನಧಾನ್ಯಗಳ ಸಂಪತ್ತಿನಿಂದ ತುಂಬಿರುವ ಸಿಂಹಲ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರುವ ದೇಶವೊಂದು ಈ ಭೂಮಂಡಲದಲ್ಲಿ ವಿರಾಜಿಸುತ್ತಾ ಇರುವುದು. ||೩||

ಆ ದೇಶದಲ್ಲಿ ಚಂದ್ರಸೇನನೆಂಬುವನು ರಾಜನಾಗಿದ್ದನು. ಅವನು ಧರ್ಮದಲ್ಲಿ ಆದರವುಳ್ಳವನೂ, ಅಪರಾಧಿಗಳಿಗೆ ನ್ಯಾಯದಿಂದ ದಂಡವನ್ನು ವಿಧಿಸುವವನೂ, ಉಪಶಾಂತನೂ, ಪ್ರಜೆಗಳನ್ನು ರಕ್ಷಿಸುವುದರಲ್ಲಿ ಆಸಕ್ತನೂ ಆಗಿದ್ದನು. ||೪||

ಅಲ್ಲದೆ ಅವನು ನಿಜವನ್ನು ಹೇಳುವವನೂ, ಮೃದುಸ್ವಭಾವದವನೂ ಆದರೂ ಶೂರನೂ, ಕಷ್ಟಗಳನ್ನು ಸಹಿಸಬಲ್ಲವನೂ, ನೀತಿಶಾಸ್ತ್ರಗಳನ್ನು ಚನ್ನಾಗಿ ತಿಳಿದವನೂ, ಶಾಸ್ತ್ರಗಳನ್ನು ಬಲ್ಲವನೂ, ಧರ್ಮಜ್ಞನೂ ಆಗಿದ್ದನಲ್ಲದೆ ಧನುರ್ವೇದದಲ್ಲಿಯೂ ಉದ್ದಾಮ ಪಂಡಿತನಾಗಿದ್ದನು. ||೫||

ಆ ರಾಜನಿಗೆ ಸುಂದರಿಯೂ, ಮಂಗಳಕರಳೂ, ಉತ್ಕೃಷ್ಟವಾದ ಸುಖವನ್ನುಂಟುಮಾಡುವವಳೂ, ಒಳ್ಳೆಯ ವಿಚಾರವುಳ್ಳವಳೂ, ಸೌಮ್ಯವಾಗಿರುವ ಮುಖ

ನಾಮ್ನಾ ಗುಣವತೀ ಕಾಂತಾ ಸರ್ವಲಕ್ಷಣಸಂಯುತಾ ।
ಸುಷುವೇ ಪ್ರಥಮೇ ಗರ್ಭೇ ಪುತ್ರೀಂ ಸಾ ಚಾತಿಸುಂದರೀಂ ॥೭॥

ಪಿತಾ ಚಾತೀವ ಸಂತುಷ್ಟಃ ಪುತ್ರೀಂ ಪ್ರಾಪ್ಯ ಮನೋರಮಾಂ ।
ಮಂಡೋದರೀತಿ ನಾಮಾಸ್ಯಾಃ ಪಿತಾ ಚಕ್ರೇ ಮುದಾನ್ವಿತಃ ॥೮॥

ಇಂದೋಃ ಕಲೇವ ಚಾತ್ಯರ್ಥಂ ವವೃಧೇ ಸಾ ದಿನೇ ದಿನೇ ।
ದಶವರ್ಷಾ ಯದಾ ಜಾತಾ ಕನ್ಯಾ ಚಾತಿಮನೋಹರಾ ॥೯॥

ವರಾರ್ಥಂ ನೃಪತಿಶ್ಚಿಂತಾಮವಾಪ ಚ ದಿನೇ ದಿನೇ ।
ಮದ್ರದೇಶಾಧಿಪಃ ಶೂರಃ ಸುಧನ್ವಾ ನಾಮ ಪಾರ್ಥಿವಃ ॥೧೦॥

---

ವುಳ್ಳವಳೂ, ಪತಿಭಕ್ತಿಯಲ್ಲಿ ಆಸಕ್ತಳೂ ಆಗಿ ಇರುವ ಗುಣವತಿಯೆಂಬ ಹೆಂಡಿತಿಯು ಮನೋಹರಳಾಗಿ ಎಲ್ಲ ವಿಧವಾದ ಉತ್ತಮ ಲಕ್ಷಣಗಳಿಂದ ಕೂಡಿ ಶ್ಲಾಘ್ಯಳಾಗಿದ್ದಳು ॥೬॥

ಆ ಗುಣವತಿಯೂ ಕೂಡ ಮೊದಲನೆಯ ಗರ್ಭದಲ್ಲಿ ಬಹಳ ಸುಂದರಿಯಾದ ಹೆಣ್ಣು ಮಗುವನ್ನು ಧರಿಸಿದ್ದು ಸಕಾಲದಲ್ಲಿ ಹೆತ್ತಳು. ತಂದೆಯೂ ಕೂಡ ಬಹಳ ಸಂತೋಷವುಳ್ಳವನಾಗಿ ಮನೋಹರಳಾದ ಮಗಳನ್ನು ಹೊಂದಿ ಅವಳಿಗೆ ಮಂಡೋದರಿ ಎಂದು ನಾಮಕರಣವನ್ನು ಮಾಡಿದನು. ॥೭-೮॥

ಆ ಮಂಡೋದರಿಯು ಚಂದ್ರನ ಕಲೆಯ ಹಾಗೆ ದಿನದಿನಕ್ಕೂ ಸೌಂದರ್ಯ ಮತ್ತು ಕೌಶಲಗಳಲ್ಲಿ ಅಭಿವೃದ್ಧಿಯನ್ನು ಹೊಂದಿದಳು. ಹೀಗೆ ಅವಳಿಗೆ ಹತ್ತು ವರ್ಷಗಳು ತುಂಬುವ ವೇಳೆಗೆ, ಆ ಹುಡುಗಿಯು ಚಲುವಿನಿಂದ ತುಂಬಿ ಮನೋಹರಳಾದಳು. ರಾಜನಾದರೋ ಆ ಹುಡುಗಿಗೆ ಅನುರೂಪನಾದ ವರನನ್ನು ಎಲ್ಲಿ ಕಂಡು ದೊರಕಿಸುವುದಕ್ಕಾದೀತೆಂದು ಪ್ರತಿದಿನವೂ ಯೋಚನೆಯನ್ನು ಮಾಡುತ್ತಾ ವಿಚಾರಿಸುತ್ತಿದ್ದನು. ಹೀಗಿರುವಲ್ಲಿ ॥೯॥

ಮದ್ರದೇಶಕ್ಕೆ ದೊರೆಯಾದ, ವೀರನಾದ, ಸುಧನ್ವನೆಂಬ ದೊರೆಯು ಇರುವನು. ಅವನ ಮಗನು ಬಹಳ ಬುದ್ಧಿವಂತನು. ಕಂಬುಗ್ರೀವನೆಂದು ಪ್ರಸಿದ್ಧಿಯನ್ನು ಹೊಂದಿರುವನು. ವರನಿಗೆ ಇರಬೇಕಾದ ಎಲ್ಲ ಗುಣಗಳಿಂದ ಕೂಡಿದವನಾದ, ಎಲ್ಲ

ತಸ್ಯ ಪುತ್ರೋऽತಿಮೇಧಾವೀ ಕಂಬುಗ್ರೀವೋऽತಿವಿಶ್ರುತಃ ।
ಬ್ರಾಹ್ಮಣೈಃ ಕಥಿತೋ ರಾಜ್ಞೀ ಸ ಯುಕ್ತೋऽಸ್ಯಾ ವರಃ ಶುಭಃ ॥೧೧॥

ಸರ್ವಲಕ್ಷಣಸಂಪನ್ನಃ ಸರ್ವವಿದ್ಯಾರ್ಥಪಾರಗಃ ।
ರಾಜ್ಞಾ ಪೃಷ್ಟಾ ತದಾ ರಾಜ್ಞೀ ನಾಮ್ನಾ ಗುಣವತೀ ಪ್ರಿಯಾ ॥೧೨॥

ಕಂಬುಗ್ರೀವಾಯ ಕನ್ಯಾಂ ಸ್ವಾಂ ದಾಸ್ಯಾಮಿ ವರವರ್ಣಿನೀಂ ।
ಸಾ ತು ಪತ್ಯುರ್ವಚಃ ಶ್ರುತ್ವಾ ಪುತ್ರೀಂ ಪಪ್ರಚ್ಛ ಸಾದರಂ ॥೧೩॥

ವಿವಾಹಂ ತೇ ಪಿತಾ ಕರ್ತುಂ ಕಂಬುಗ್ರೀವೇಣ ವಾಂಛತಿ ।
ತಚ್ಛ್ರುತ್ವಾ ಮಾತರಂ ಪ್ರಾಹ ವಾಕ್ಯಂ ಮಂದೋದರೀ ತದಾ ॥೧೪॥

ನಾಹಂ ಪತಿಂ ಕರಿಷ್ಯಾಮಿ ನೇಚ್ಛಾ ಮೇऽಸ್ತಿ ಪರಿಗ್ರಹೇ ।
ಕೌಮಾರಂ ವ್ರತಮಾಸ್ಥಾಯ ಕಾಲಂ ನೇಷ್ಯಾಮಿ ಸರ್ವಥಾ ॥೧೫॥

---

ವಿದ್ಯೆಗಳಲ್ಲಿಯೂ ಪಾರಂಗತನಾದ ಅವನು ಒಳ್ಳೆಯ ರಾಜಲಕ್ಷಣಗಳಿಂದ ಕೂಡಿದವನು ಮತ್ತು ಈ ಹುಡುಗಿಗೆ ಅನುರೂಪನಾದ ವರನು ಎಂದು ರಾಜನಿಗೆ ಬ್ರಾಹ್ಮಣರು ತಿಳಿಸಿದರು. ||೧೦-೧೧||

ಆಗ ರಾಜನು ತನ್ನ ಪ್ರೀತಿಪಾತ್ರಳಾದ ಗುಣವತಿಯೆಂಬ ರಾಣಿಯನ್ನು ಕುರಿತು ಕಮ್ಬುಗ್ರೀವನಿಗೆ ತನ್ನ ಉತ್ತಮಳಾದ ಮಗಳನ್ನು ಮದುವೆಮಾಡಿಕೊಡುತ್ತೇನೆಂದು ಹೇಳಿ ಅವಳ ಅಭಿಪ್ರಾಯವನ್ನು ಕೇಳಿದನು. ||೧೨||

ಆ ಗುಣವತಿಯೂ ಗಂಡನ ಮಾತನ್ನು ಕೇಳಿ, ಆದರದಿಂದ ಮಗಳನ್ನು ಕುರಿತು, ನಿನ್ನ ತಂದೆಯು ಕಂಬುಗ್ರೀವನೊಡನೆ ನಿನಗೆ ಮದುವೆಯನ್ನು ಮಾಡಿಕೊಡಲು ಅಪೇಕ್ಷಿಸುತ್ತಾನೆ. ಎಂದು ಹೇಳಿ, ಅವಳ ಅಭಿಪ್ರಾಯವನ್ನು ತಿಳಿಯುವುದಕ್ಕಾಗಿ ಪ್ರಶ್ನೆಮಾಡಿದಳು. ಆಗ ಮಂದೋದರಿಯು ಆ ಮಾತನ್ನು ಕೇಳಿ ಹೀಗೆ ಉತ್ತರವನ್ನು ಹೇಳಿದಳು. ||೧೩-೧೪||

ನಾನು ಗಂಡನನ್ನು ಮದುವೆಮಾಡಿಕೊಳ್ಳುವುದಿಲ್ಲವು. ನನಗೆ ಮದುವೆಯಲ್ಲಿ ಆಸೆಯಿಲ್ಲವು. ಸರ್ವಪ್ರಕಾರದಿಂದಲೂ ಕೌಮಾರವ್ರತವನ್ನು ಅವಲಂಬಿಸಿಕೊಂಡು ಇರುತ್ತಾ ಕಾಲವನ್ನು ಕಳೆಯುವೆನು. ||೧೫||

ಸ್ವಾತಂತ್ರ್ಯೇಣ ಚರಿಷ್ಯಾಮಿ ತಪಸ್ತೀವ್ರಂ ಸದೈವ ಹಿ ।
ಪಾರತಂತ್ರ್ಯಂ ಪರಂ ದುಃಖಂ ಮಾತಃ ಸಂಸಾರಸಾಗರೇ ॥೧೬॥

ಸ್ವಾತಂತ್ರ್ಯಾನ್ಮೋಕ್ಷಮಿತ್ಯಾಹುಃ ಪಂಡಿತಾಃ ಶಾಸ್ತ್ರಕೋವಿದಾಃ ।
ತಸ್ಮಾನ್ಮುಕ್ತಾ ಭವಿಷ್ಯಾಮಿ ಪತ್ಯಾ ಮೇ ನ ಪ್ರಯೋಜನಂ ॥೧೭॥

ವಿವಾಹೇ ವರ್ತಮಾನೇ ತು ಪಾವಕಸ್ಯ ಚ ಸನ್ನಿಧೌ ।
ವಕ್ತವ್ಯಂ ವಚನಂ ಸಮ್ಯಕ್ತದಧೀನಾಽಸ್ಮಿ ಸರ್ವದಾ ॥೧೮॥

ಶ್ವಶ್ರೂದೇವರವರ್ಗಾಣಾಂ ದಾಸೀತ್ವಂ ಶ್ವಶುರಾಲಯೇ ।
ಪತಿಚಿತ್ತಾನುವರ್ತಿತ್ವಂ ದುಃಖಾದ್ದುಃಖತರಂ ಸ್ಮೃತಂ ॥೧೯॥

ಕದಾಚಿತ್ಪತಿರನ್ಯಾಂ ವಾ ಕಾಮಿನೀಂ ಚ ಭಜೇದ್ಯದಿ ।
ತದಾ ಮಹತ್ತರಂ ದುಃಖಂ ಸಪತ್ನೀಸಂಭವಂ ಭವೇತ್ ॥೨೦॥

---

ನಾನು ಯಾವಾಗಲೂ ಸ್ವತಂತ್ರಳಾಗಿದ್ದುಕೊಂಡು ಕಠಿನವಾದ ತಪಸ್ಸನ್ನು ಮಾಡುತ್ತಿರುವೆನು. ಓ ತಾಯಿಯೇ, ಸಂಸಾರಸಮುದ್ರದಲ್ಲಿ ಇನ್ನೊಬ್ಬರ ಅಧೀನದಲ್ಲಿರುವುದೆಂಬುದು ತುಂಬ ದುಃಖವನ್ನುಂಟುಮಾಡುವುದು. ॥೧೬॥

ಶಾಸ್ತ್ರಗಳನ್ನು ಬಲ್ಲವರಾದ ಪಂಡಿತರು ಸ್ವಾತಂತ್ರ್ಯದಿಂದ ಮೋಕ್ಷವುಂಟೆಂದು ಹೇಳುತ್ತಾರೆ ; ಆದುದರಿಂದ ನಾನು ಸ್ವತಂತ್ರಳಾಗಿರುತ್ತಾ ಕಡೆಗೆ ಮುಕ್ತಳಾಗುವೆನು. ನನಗೆ ಗಂಡನಿಂದ ಆಗಬೇಕಾಗಿರುವ ಪ್ರಯೋಜನವೇನೂ ಇಲ್ಲವು. ॥೧೭॥

ಅಷ್ಟೇ ಅಲ್ಲದೆ ಮದುವೆಯು ಆಗುವಾಗ ಅಗ್ನಿಸಾಕ್ಷಿಯ ಸಮೀಪದಲ್ಲಿ ಪತಿಗೆ ಯಾವಾಗಲೂ ಅಧೀನಳಾಗಿರುತ್ತೇನೆಂಬ ಪ್ರಮಾಣದ ಮಾತನ್ನು ಮನಃಪೂರ್ವಕವಾಗಿ ಹೇಳಬೇಕಾಗಿರುವುದು. ॥೧೮॥

ಅದುಮಾತ್ರವಲ್ಲದೆ ಅತ್ತೆಮಾವಂದಿರೂ ಭಾವಮೈದುನರೂ ಇವರೇ ಮೊದಲಾದವರಿಗೆ ಮಾವನ ಮನೆಯಲ್ಲಿ ದಾಸಿಯಾಗಿರಬೇಕಾಗುವುದು. ಅಲ್ಲದೆ ಆದರ ಜತೆಗೆ ಗಂಡನ ಮನಸ್ಸನ್ನೂ ಅನುಸರಿಸುವುದು, ಇವೆಲ್ಲವೂ ಒಂದಕ್ಕಿಂತ ಇನ್ನೊಂದು ಹೆಚ್ಚು ದುಃಖಕರವಾಗಿರುವುದು ! ॥೧೯॥

ಒಂದುವೇಳೆ ಗಂಡನು ಇನ್ನೊಬ್ಬ ಹೆಂಗುಸನ್ನು ಅಪೇಕ್ಷಿಸಿ ಹೊಂದುವುದಾದರೆ ಆಗ ಸವತಿಯಿಂದ ಉಂಟಾಗುವ ದುಃಖವು ತುಂಬ ಹೆಚ್ಚಾದುದು. ॥೨೦॥

**ತದೇರ್ಷ್ಯಾ ಜಾಯತೇ ಪತ್ಯೌ ಕ್ಲೇಶಶ್ಚಾಪಿ ಭವೇದಥ ।**
**ಸಂಸಾರೇ ಕ್ವ ಸುಖಂ ಮಾತರ್ನಾರೀಣಾಂ ಚ ವಿಶೇಷತಃ ।**
**ಸ್ವಭಾವಾತ್ಪರತಂತ್ರಾಣಾಂ ಸಂಸಾರೇ ಸ್ವಪ್ನಧರ್ಮಿಣಿ ॥೨೧॥**

**ಶ್ರುತಂ ಮಯಾ ಪುರಾ ಮಾತರುತ್ತಾನಚರಣಾತ್ಮಜಃ ॥೨೨॥**

**ಉತ್ತಮಃ ಸರ್ವಧರ್ಮಜ್ಞೋ ಧ್ರುವಾದವರಜೋ ನೃಪಃ ।**
**ಪತ್ನೀಂ ಧರ್ಮಪರಾಂ ಸಾಧ್ವೀಂ ಪತಿಭಕ್ತಿಪರಾಯಣಾಂ ।**
**ಅಪರಾಧಂ ವಿನಾ ಕಾಂತಾಂ ತ್ಯಕ್ತವಾನ್ವಿಪಿನೇ ಪ್ರಿಯಾಂ ॥೨೩॥**

**ಏವಂ ವಿಧಾನಿ ದುಃಖಾನಿ ವಿದ್ಯಮಾನೇ ತು ಭರ್ತರಿ ॥೨೪॥**

**ಕಾಲಯೋಗಾನ್ಮೃತೇ ತಸ್ಮಿನ್ನಾರೀ ಸ್ಯಾದ್ದುಃಖಭಾಜನಂ ।**
**ವೈಧವ್ಯಂ ಪರಮಂ ದುಃಖಂ ಶೋಕಸಂತಾಪಕಾರಕಂ ॥೨೫॥**

---

ಆಗ ಗಂಡನ ಮತ್ತು ಸವತಿಯ ಮೇಲೆ ಅಸೂಯೆಯು ಹುಟ್ಟುವುದು. ಆ ಮೇಲೆ ಕ್ಲೇಶವೂ ಉಂಟಾಗುವುದು. ಓ ತಾಯಿಯೆ, ಸಂಸಾರದಲ್ಲಿ ಪ್ರಾಯಿಕವಾಗಿ ಅದರಲ್ಲೂ ವಿಶೇಷವಾಗಿ ಹೆಂಗಸರಿಗೆ ಸುಖವೆಲ್ಲಿ ದೊರೆಯುವುದು ? ಸ್ವಭಾವದಿಂದಲೂ ಇತರರ ಅಧೀನರಾಗಿರುವ ಹೆಂಗಸರಿಗೆ ಸ್ವಪ್ನಪ್ರಾಯವಾದ ಈ ಸಂಸಾರದಲ್ಲಿ ನಿಜವಾದ ಸುಖವಿಲ್ಲವು. ||೨೧||

ಓ ತಾಯಿಯೇ, ಪೂರ್ವದಲ್ಲಿ ಉತ್ತಾನಪಾದರಾಯನ ಮಗನಾದ ಧ್ರುವನ ತಮ್ಮನಾದ, ಎಲ್ಲ ಧರ್ಮಗಳನ್ನು ತಿಳಿದಿರುವ ಉತ್ತಮನೆಂಬ ಧೊರೆಯು ಧರ್ಮದಲ್ಲಿ ಆಸಕ್ತಳಾದ ಪತಿವ್ರತೆಯಾಗಿ, ಪತಿಭಕ್ತಿಯಲ್ಲಿ ಆದರವುಳ್ಳ ಸುಂದರಿಯಾದ ಹೆಂಡತಿಯನ್ನು ಅವಳಲ್ಲಿ ಯಾವ ತಪ್ಪನ್ನೂ ಕಾಣದೆ ಇದ್ದರೂ ಕಾಡಿನಲ್ಲಿ ಬಿಟ್ಟನು ಎಂದು ನಾನು ಕೇಳಿದ್ದೇನೆ. ||೨೨-೨೩||

ಇದಿಷ್ಟೂ ಗಂಡನು ಬದುಕಿದ್ದಾಗಲೂ ಸಂಭವಿಸುವ ಅನೇಕ ವಿಧಗಳಾದ ದುಃಖಗಳ ವಿವರವಾಯಿತು. ಇನ್ನು ದೈವಗತಿಯಿಂದ ಗಂಡನೇನಾದರೂ ಮೃತನಾದರೆ ಆಗ ಹೆಂಗುಸು ಅತಿಯಾದ ದುಃಖಕ್ಕೆ ಗುರಿಯಾಗುವಳು. ವೈಧವ್ಯವೂ ಎಲ್ಲಕ್ಕಿಂತಲೂ ಹೆಚ್ಚಿನ ದುಃಖವನ್ನೂ ಪಶ್ಚಾತ್ತಾಪದ ಸಂಕಟವನ್ನೂ ಸಹ ಸಾಯುವವರೆಗೂ ಉಂಟುಮಾಡುತ್ತಿರುವುದು. ||೨೪-೨೫||

ಪರೋಷಿತಪತಿಕ್ತ್ವೇಽಪಿ ದುಃಖಂ ಸ್ಯಾದಧಿಕಂ ಗೃಹೇ ।
ಮದನಾಗ್ನಿವಿದಗ್ಧಾಯಾಃ ಕಿಂ ಸುಖಂ ಪತಿಸಂಗಜಂ ॥೨೬॥

ತಸ್ಮಾತ್ಪತಿರ್ನ ಕರ್ತವ್ಯಃ ಸರ್ವಥೇತಿ ಮತಿರ್ಮಮ ।
ಏವಂ ಪ್ರೋಕ್ತಾ ತದಾ ಮಾತಾ ಪತಿಂ ಪ್ರಾಹ ನೃಪಾತ್ಮಜಾ ॥೨೭॥

ನ ಚ ವಾಂಛತಿ ಭರ್ತಾರಂ ಕೌಮಾರವ್ರತಧಾರಿಣೀ ।
ವ್ರತಜಾಪ್ಯಪರಾ ನಿತ್ಯಂ ಸಂಸಾರಾದ್ವಿಮುಖೀ ಸದಾ ॥೨೮॥

ನ ಕಾಂಕ್ಷತಿ ಪತಿಂ ಕರ್ತುಂ ಬಹುದೋಷವಿಚಕ್ಷಣಾ ।
ಭಾರ್ಯಾಯಾ ಭಾಷಿತಂ ಶ್ರುತ್ವಾ ತಥೈವ ಸಂಸ್ಥಿತೋ ನೃಪಃ ॥೨೯॥

---

ಅಲ್ಲದೆ ಪತಿಯು ಬದುಕಿರುವಾಗಲೂ ಬೇರೆ ಕಡೆಯಲ್ಲಿ ಅವನು ಪ್ರವಾಸಿಯಾಗಿದ್ದಲ್ಲಿ ಕಾಮಬಾಧೆಯ ಸಂತಾಪದಿಂದ ಕ್ಲೇಶಪಡುತ್ತಿರುವ ಹೆಂಗುಸಿಗೆ ಆ ಮನೆಯಲ್ಲಿ ವಿಯೋಗದುಃಖವು ಹೆಚ್ಚಾಗಿಯೇ ಇರುತ್ತದೆ. ಹೀಗೆ, ಪತಿಯನ್ನು ಮದುವೆಯಾಗುವುದರಿಂದ ಏನುತಾನೇ ಸುಖವುಂಟಾಗುವುದು ? ||೨೬||

ಪತಿಯನ್ನು ಮಾಡಿಕೊಂಡರೆ ಎಲ್ಲ ವಿಧದಿಂದಲೂ ಕ್ಲೇಶವೇ ಹೆಚ್ಚಾಗಿರುವಂತೆ ಕಂಡುಬರುವ ಕಾರಣದಿಂದ ಹೇಗಾದರೂ ಮದುವೆಯನ್ನು ಮಾಡಿಕೊಳ್ಳದಿರುವುದೇ ಉತ್ತಮವೆಂದು ನನ್ನ ಅಭಿಪ್ರಾಯವು ; ಎಂಬುದಾಗಿ ತನ್ನ ಮಗಳು ಹೇಳಿದ ಮಾತನ್ನು ತಾಯಿಯು ದೊರೆಗೆ ತಿಳಿಸಿದಳು. ||೨೭||

ಓ ಪತಿಯೇ, ಮಂದೋದರಿಯು ಕೌಮಾರವ್ರತವನ್ನು ಧರಿಸಿದವಳಾಗಿ ಯಾವಾಗಲೂ ಸಂಸಾರಜೀವನದಲ್ಲಿ ಅನೇಕ ದೋಷಗಳನ್ನು ಮನಗಂಡವಳೂ ಬುದ್ಧಿವಂತಳೂ ಆದ ಅವಳು ಸಂಸಾರದಿಂದ ವಿಮುಖಳಾಗಿ ವ್ರತ, ಜಪ ಇವುಗಳನ್ನು ನಡೆಸುತ್ತಿರಲು ಬಯಸುತ್ತಾಳೆಯೇ ಹೊರತು ಗಂಡನನ್ನು ಮದುವೆಯಾಗಲು ಇಚ್ಛಿಸುತ್ತಿಲ್ಲವು ಎಂದು ಗುಣವತಿಯು ರಾಜನಿಗೆ ತಿಳಿಸಿದಳು. ||೨೮||

ರಾಜನು ಹೆಂಡತಿಯು ಹೇಳಿದ ಮಗಳ ಮಾತನ್ನು ಕೇಳಿ, ತನ್ನ ಮಗಳಿಗೆ ಮದುವೆಯಲ್ಲಿ ಸಮ್ಮತಿಯಿಲ್ಲವೆಂದು ತಿಳಿದು ಹಾಗೆಯೇ ಅವಳಿಗೆ ವಿವಾಹವನ್ನು ಮಾಡದೆ ಸುಮ್ಮನಿದ್ದನು. ||೨೯||

ವಿವಾಹೋ ನ ಕೃತಃ ಪುತ್ರ್ಯಾಃ ಜ್ಞಾತ್ವಾ ಭಾವವಿವರ್ಜಿತಾಂ ।
ವರ್ತಮಾನಾ ಗೃಹೇಷ್ವೇವಂ ಪಿತ್ರಾ ಮಾತ್ರಾ ಚ ರಕ್ಷಿತಾ ।
ಯೌವನಸ್ಯಾಂಕುರಾ ಜಾತಾ ನಾರೀಣಾಂ ಕಾಮದೀಪಕಾಃ ॥೩೦॥

ತಥಾಪಿ ಸಾ ವಯಸ್ಯಾಭಿಃ ಪ್ರೇರಿತಾಽಪಿ ಪುನಃಪುನಃ ।
ಚಕಮೇ ನ ಪತಿಂ ಕರ್ತುಂ ಜ್ಞಾನಾರ್ಥಪದಭಾಷಿಣೀ ॥೩೧॥

ಏಕದೋದ್ಯಾನದೇಶೇ ಸಾ ವಿಹರ್ತುಂ ಬಹುಪಾದಪೇ ॥೩೨॥

ಜಗಾಮ ಸುಮುಖೀ ಪ್ರೇಮ್ಣಾ ಸ್ವೈರಂಧ್ರೀಗಣಸೇವಿತಾ ।
ರೇಮೇ ಕೃಶೋದರೀ ತತ್ರಾಪಶ್ಯತ್ಕುಸುಮಿತಾ ಲತಾಃ ॥೩೩॥

ಪುಷ್ಪಾಣಿ ಚಿನ್ವತೀ ರಮ್ಯಾ ವಯಸ್ಯಾಭಿಃ ಸಮಾವೃತಾ ।
ಕೋಸಲಾಧಿಪತಿಸ್ತತ್ರ ಮಾರ್ಗೇ ದೈವವಶಾತ್ತದಾ ॥೩೪॥

---

ಆ ಮಂದೋದರಿಯು ತಂದೆತಾಯಿಗಳಿಂದ ರಕ್ಷಣೆಯನ್ನು ಹೊಂದಿ ಹೀಗೆಯೇ ತಂದೆಯ ಮನೆಯಲ್ಲಿದ್ದಳು. ಕಾಲಕ್ರಮದಲ್ಲಿ ಹೆಂಗಸರಿಗೆ ಕಾಮವನ್ನು ಹೆಚ್ಚಿಸುವ ಯೌವನದ ಮೊಳಕೆಗಳು ಇವಳಿಗೂ ಉಂಟಾದುವು. ॥೩೦॥

ಆಗಲಾಮಂದೋದರಿಯ ಸ್ನೇಹಿತೆಯರೆಲ್ಲರೂ ಮದುವೆಯಾಗಲು ಅವಳನ್ನು ಆಗಾಗ್ಗೆ ಬಹು ವಿಧವಾಗಿ ಪ್ರೇರಿಸುತ್ತಿದ್ದರು. ಆದರೂ ಅವಳು ಜ್ಞಾನ ಪ್ರಯೋಜನವಾದ ಮಾತುಗಳನ್ನು ಹೇಳುತ್ತಾ ಮದುವೆಯನ್ನು ಮಾಡಿಕೊಳ್ಳಲು ಅಪೇಕ್ಷಿಸಲಿಲ್ಲ. ॥೩೧॥

ಹೀಗೆ ಇರುವಾಗ ಒಂದಾನೊಂದು ಕಾಲದಲ್ಲಿ ಆ ಸುಮುಖಿಯಾದ ಮಂದೋದರಿಯು ತನ್ನ ಊಳಿಗದವರಿಂದ ಸೇವಿಸಲ್ಪಡುವವಳಾಗಿ, ಬಹಳ ಮರಗಳಿಂದ ಕೂಡಿದ ಉದ್ಯಾನವನದಲ್ಲಿ ವಿಹರಿಸುವುದಕ್ಕೆ ಹೋದಳು. ಆ ಕೃಶೋದರಿಯು ಆ ಉದ್ಯಾನವನದಲ್ಲಿ ಹೂವುಳ್ಳ ಬಳ್ಳಿಗಳನ್ನು ನೋಡಿ ಆನಂದಪಟ್ಟಳು. ॥೩೨-೩೩॥

ಆ ಉದ್ಯಾನವನದಲ್ಲಿ ಆ ಸುಂದರಿಯು ತನ್ನ ಗೆಳತಿಯರಿಂದ ಕೂಡಿದವಳಾಗಿ ಹೂವುಗಳನ್ನು ಕೊಯ್ಯುತ್ತಾ ವಿಹರಿಸುತ್ತಿದ್ದಳು. ಆಗ ದೈವಗತಿಯಿಂದ ಆ ದಾರಿಯಲ್ಲಿ ಕೋಸಲದೇಶದ ದೊರೆಯು ಅಲ್ಲಿಗೆ ಬಂದನು. ॥೩೪॥

ಆಜಗಾಮ ಮಹಾವೀರೋ ವೀರಸೇನೋಽತಿವಿಶ್ರುತಃ ।
ಏಕಾಕೀ ರಥಮಾರೂಢಃ ಕತಿಚಿತ್ಸೇವಕೈರ್ವೃತಃ ॥೩೫॥

ಸೈನ್ಯಂ ಚ ಪೃಷ್ಠತಸ್ತಸ್ಯ ಸಮಾಯಾತಿ ಶನೈಃ ಶನೈಃ ।
ದೃಷ್ಟಸ್ತಸ್ಯಾ ವಯಸ್ಯಾಭಿಃ ದೂರತಃ ಪಾರ್ಥಿವಸ್ತದಾ ॥೩೬॥

ಮಂಡೋದರ್ಯೈ ತಥಾ ಪ್ರೋಕ್ತಂ ಸಮಾಯಾತಿ ನರಃ ಪಥಿ ।
ರಥಾರೂಢೋ ಮಹಾಬಾಹೂ ರೂಪವಾನ್ಮದನೋಽಪರಃ ॥೩೭॥

ಮನ್ಯೇಽಹಂ ನೃಪತಿಃ ಕಶ್ಚಿತ್ಪ್ರಾಪ್ತೋ ಭಾಗ್ಯವಶಾದಿಹ ।
ಏವಂ ಬ್ರುವತ್ಯಾಂ ತತ್ರಾಸೌ ಕೋಸಲೇಂದ್ರಃ ಸಮಾಗತಃ ॥೩೮॥

ದೃಷ್ಟ್ವಾ ತಾಮಸಿತಾಪಾಂಗೀಂ ವಿಸ್ಮಯಂ ಪ್ರಾಪ ಭೂಪತಿಃ ।
ಉತ್ತೀರ್ಯ ಸ ರಥಾತ್ತೂರ್ಣಂ ಪಪ್ರಚ್ಛ ಪರಿಚಾರಿಕಾಂ ॥೩೯॥

---

ಆ ಧೊರೆಯು ಬಹಳ ಶೂರನಾಗಿ ವೀರಸೇನನೆಂಬ ಹೆಸರಿನಿಂದ ಬಹಳ ಪ್ರಸಿದ್ಧನಾದವನು. ಅವನು ಅಸಹಾಯಶೂರನಾಗಿ ರಥವನ್ನು ಹತ್ತಿಕೊಂಡು ಕೆಲವು ಮಂದಿ ಆಳುಗಳಿಂದ ಮಾತ್ರ ಸುತ್ತುವರಿಯಲ್ಪಟ್ಟಿದ್ದನು. ॥೩೫॥

ಅವನ ಸೇನೆಯು ಅವನ ಹಿಂದುಗಡೆಯಲ್ಲಿ ಮೆಲ್ಲಮೆಲ್ಲಗೆ ಬರುತ್ತಿತ್ತು. ಆ ಮಂಡೋದರಿಯ ಸ್ನೇಹಿತೆಯು ದೂರದಲ್ಲಿಯೇ ಆ ರಾಜನನ್ನು ಕಂಡಳು. ॥೩೬॥

ಅವಳು ಮಂಡೋದರಿಯನ್ನು ಕುರಿತು, ದೈವಗತಿಯಿಂದ ಇಲ್ಲಿಗೆ ಒಬ್ಬ ಮನುಷ್ಯನು ದಾರಿಯಲ್ಲಿ ಬರುತ್ತಿದ್ದಾನೆ. ಅವನು ರಥಾರೂಢನಾಗಿ, ಮಹಾಬಾಹುವಾಗಿ, ಇನ್ನೊಬ್ಬ ಮನ್ಮಥನಂತೆ ಕಾಣುತ್ತಾ ಇರುವುದರಿಂದ ಯಾವನೋ ಒಬ್ಬ ರಾಜನಾಗಿರ ಬೇಕೆಂಬುದಾಗಿ ನಾನು ತಿಳಿಯುತ್ತೇನೆ. ಎಂದು ಹೇಳಿದಳು. ॥೩೭॥

ಹೀಗೆ ಅವಳು ಹೇಳುತ್ತಿರುವಷ್ಟರಲ್ಲಿಯೇ, ಈ ಕೋಸಲದೇಶದ ರಾಜನು ಅಲ್ಲಿಗೆ ಬಂದನು. ರಾಜನು ಕಪ್ಪಾದ ಕಡೆಗಣ್ಣುಳ್ಳ ಆ ಮಂಡೋದರಿಯನ್ನು ನೋಡಿ ಆಶ್ಚರ್ಯಪಟ್ಟನು. ॥೩೮॥

ಮತ್ತು ಅವನು ರಥದಿಂದ ಬೇಗನೆ ಇಳಿದು ಮಂಡೋದರಿಯ ಪರಿಚಾರಿಕೆ ಯನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು. ॥೩೯॥

ಕೇಯಂ ಬಾಲಾ ವಿಶಾಲಾಕ್ಷೀ ಕಸ್ಯ ಪುತ್ರೀ ವದಾಽಽಶು ಮೇ ।
ಏವಂ ಪೃಷ್ಟಾ ತು ಸೈರಂಧ್ರೀ ತಮುವಾಚ ಶುಚಿಸ್ಮಿತಾ ॥೪೦॥

ಪ್ರಥಮಂ ಬ್ರೂಹಿ ಮೇ ವೀರ ಪೃಚ್ಛಾಮಿ ತ್ವಾಂ ಸುಲೋಚನ ।
ಕೋಽಸಿ ತ್ವಂ ಕಿಮಿಹಾಯಾತಃ ಕಿಂ ಕಾರ್ಯಂ ವದ ಸಾಂಪ್ರತಂ ॥೪೧॥

ಇತಿ ಪೃಷ್ಟಸ್ತು ಸೈರಂಧ್ರ್ಯಾ ತಾಮುವಾಚ ಮಹೀಪತಿಃ ।
ಕೋಸಲೋ ನಾಮ ದೇಶೋಽಸ್ತಿ ಪೃಥಿವ್ಯಾಂ ಪರಮಾದ್ಭುತಃ ॥೪೨॥

ತಸ್ಯ ಪಾಲಯಿತಾ ಚಾಹಂ ವೀರಸೇನಾಭಿಧಃ ಪ್ರಿಯೇ ।
ವಾಹಿನೀ ಪೃಷ್ಠತಃ ಕಾಮಂ ಸಮಾಯಾತಿ ಚತುರ್ವಿಧಾ ।
ಮಾರ್ಗಭ್ರಮಾದಿಹ ಪ್ರಾಪ್ತಂ ವಿದ್ಧಿ ಮಾಂ ಕೋಸಲಾಧಿಪಂ ॥೪೩॥

---

ಆ ರಾಜನು "ದೊಡ್ಡದಾದ ಕಣ್ಣುಗಳುಳ್ಳವಳಾದ ಈ ಹುಡುಗಿಯು ಯಾರ ಮಗಳು? ಎಂಬುದನ್ನು ನನಗೆ ಬೇಗ ಹೇಳು" ಎಂಬುದಾಗಿ ಆ ಮಂದೋದರಿಗೆ ಅಲಂಕಾರ ಮಾಡುವವಳನ್ನು ಕುರಿತು ಪ್ರಶ್ನೆಮಾಡಲು, ಮಂದಹಾಸವುಳ್ಳವಳಾಗಿ ಅವಳು, ಅವನ ಸಂಗಡ ಹೀಗೆ ಮಾತನಾಡಿದಳು. ॥೪೦॥

ಚನ್ನಾಗಿರುವ ಕಣ್ಣುಳ್ಳವನಾದ, ವೀರನಾದ ರಾಜನೇ, ನೀನು ಯಾರು? ಇಲ್ಲಿಗೆ ಏತಕ್ಕೆ ಬಂದೆ? ಈಗ ಇಲ್ಲಿ ನಿನಗೆ ಏನು ಕೆಲಸವು? ಎಂಬುದನ್ನು ನೀನು ಮೊದಲು ಹೇಳು, ಎಂಬುದಾಗಿ ಆ ಮಂದೋದರಿಯ ದಾತಿಯಿಂದ ಪ್ರಶ್ನೆ ಮಾಡಲ್ಪಟ್ಟವನಾಗಿ ರಾಜನು ಮುಂದಿನ ಮಾತನ್ನು ಹೇಳಿದನು. ॥೪೧॥

ಈ ಭೂಮಿಯಲ್ಲಿ ಕೋಸಲವೆಂಬ ಹೆಸರುಳ್ಳ ಆಶ್ಚರ್ಯಕರವಾದ ದೇಶವು ಇರುತ್ತದೆ. ನಾನು ಆ ದೇಶವನ್ನು ಪಾಲಿಸುವವನು. ನನ್ನನ್ನು ವೀರಸೇನನೆಂದು ಕರೆಯುವರು. ಎಲೈ ಪ್ರೀತಿಪಾತ್ರಳೇ, ನನ್ನ ಹಸ್ತಿ, ಅಶ್ವ, ರಥ, ಪದಾತಿ ಎಂದು ನಾಲ್ಕು ವಿಧವಾದ ಸೇನೆಯು ಯಥೇಚ್ಛವಾಗಿ ಹಿಂದೆ ಬರುತ್ತಿರುವುದು. ದಾರಿಯು ತಪ್ಪಿದ್ದರಿಂದ ಇಲ್ಲಿಗೆ ಬಂದಿರುವ ನನ್ನನ್ನು ಕೋಸಲದೇಶದ ರಾಜನೆಂದು ತಿಳಿ. ॥೪೨-೪೩॥

॥ ಸ್ವೈರಂಧ್ರ್ಯುವಾಚ ॥

ಚಂದ್ರಸೇನಸುತಾ ರಾಜನ್ನಾಮ್ನಾ ಮಂಡೋದರೀ ಕಿಲ ॥೪೪॥

ಉದ್ಯಾನೇ ರಂತುಕಾಮೇಯಂ ಪ್ರಾಪ್ತಾ ಕಮಲಲೋಚನಾ ।
ಶ್ರುತ್ವಾ ತದ್ಭಾಷಿತಂ ರಾಜಾ ಪ್ರತ್ಯುವಾಚ ಪ್ರಸಾಧಿಕಾಂ ॥೪೫॥

ಸೈರಂಧ್ರಿ ಚತುರಾಽಸಿ ತ್ವಂ ರಾಜಪುತ್ರೀಂ ಪ್ರಬೋಧಯ ।
ಕಕುತ್ಸ್ಥವಂಶಜಶ್ಚಾಹಂ ರಾಜಾಽಸ್ಮಿ ಚಾರುಲೋಚನೇ ॥೪೬॥

ಗಾಂಧರ್ವೇಣ ವಿವಾಹೇನ ಪತಿಂ ಮಾಂ ಕುರು ಕಾಮಿನಿ ।
ನ ಮೇ ಭಾರ್ಯಾಸ್ತಿ ಸುಶ್ರೋಣಿ ವಯಸೋದ್ಭೂತಯೌವನಾಂ ॥೪೭॥
ವಾಂಛಾಮಿ ರೂಪಸಂಪನ್ನಾಂ ಸುಕುಲಾಂ ಕಾಮಿನೀಂ ಕಿಲ ।

---

ಈ ಮಾತನ್ನು ಕೇಳಿ, ಮಂಡೋದರಿಯ ಸಖಿಯು ಹೇಳಿದಳು.—ಓ ರಾಜನೆ, ಈ ನಮ್ಮ ಸಖಿಯು ರಾಜನಾದ ಚಂದ್ರಸೇನನ ಮಂಡೋದರಿಯೆಂಬ ಹೆಸರುಳ್ಳ ಮಗಳು, ಕಮಲದಂತಿರುವ ಕಣ್ಣುಳ್ಳ ಇವಳು ಈ ಉದ್ಯಾನವನದಲ್ಲಿ ವಿಹಾರಮಾಡಲು ಬಂದಿರುತ್ತಾಳೆ. ಎಂದು ಹೇಳಿದಳು. ॥೪೪॥

ರಾಜನು ಆ ಸಖಿಯು ಹೇಳಿದ ಮಾತನ್ನು ಕೇಳಿ ಹೀಗೆ ಪ್ರತ್ಯುತ್ತರವನ್ನು ಕೊಟ್ಟನು. ಎಲೈ ಸೈರಂಧ್ರಿಯೆ, ನೀನು ಬುದ್ಧಿಕೌಶಲಶಾಲಿನಿಯಾಗಿದ್ದೀಯೆ ! ರಾಜಪುತ್ರಿಗೆ ತಿಳಿವಳಿಕೆಯನ್ನು ಹೇಳಿ ಎಚ್ಚರಿಸು. ಎಲೈ ಸುಂದರವಾದ ಕಣ್ಣುಳ್ಳವಳೇ, ನಾನು ಕಕುತ್ಸ್ಥವಂಶದಲ್ಲಿ ಹುಟ್ಟಿದವನು. ಧೊರೆಯಾಗಿಯೂ ಇದ್ದೇನೆ. ॥೪೫-೪೬॥

ಎಲೈ ಕಾಮಿನಿಯೇ, ಗಾಂಧರ್ವ ವಿವಾಹದಿಂದ ನನ್ನನ್ನು ನಿಮ್ಮ ಮಂಡೋದರಿಯು ಪತಿಯನ್ನಾಗಿ ವರಿಸುವಂತೆ ಮಾಡು. ನಾನು ಇನ್ನೂ ಹೆಂಡಿತಿಯನ್ನು ಮದುವೆಯಾಗಿಲ್ಲವು. ಸರಿಯಾದ ಪ್ರಾಯದ ವಯಸ್ಸಿನಿಂದ ಕೂಡಿ ಇರುವ ಸೌಂದರ್ಯವತಿಯಾದ, ಸತ್ಕುಲಪ್ರಸೂತಳಾದ ಸ್ತ್ರೀಯನ್ನು ನಾನು ಮದುವೆಯಾಗಲು ಅಪೇಕ್ಷಿಸುವವನಾಗಿದ್ದೇನೆ. ॥೪೭॥

**ಅಥವಾ ತೇ ಪಿತಾ ಮಹ್ಯಂ ವಿಧಿನಾ ದಾತುಮರ್ಹತಿ ॥೪೮॥**

**ಅನುಕೂಲಪತಿಶ್ಚಾಹಂ ಭವಿಷ್ಯಾಮಿ ನ ಸಂಶಯಃ ।**

॥ ಮಹಿಷ ಉವಾಚ ॥

**ಇತ್ಯಾಕರ್ಣ್ಯ ವಚಸ್ತಸ್ಯ ಸೈರಂಧ್ರೀ ಪ್ರಾಹ ತಾಂ ತದಾ ॥೪೯॥**

**ಪ್ರಹಸ್ಯ ಮಧುರಂ ವಾಕ್ಯಂ ಕಾಮಶಾಸ್ತ್ರವಿಶಾರದಾ ।**
**ಮಂದೋದರಿ ನೃಪಃ ಪ್ರಾಪ್ತಃ ಸೂರ್ಯವಂಶಸಮುದ್ಭವಃ ॥೫೦॥**

**ರೂಪವಾನ್ಬಲವಾನ್ಕಾಂತೋ ವಯಸಾ ತ್ವತ್ಸಮಃ ಪುನಃ ।**
**ಪ್ರೀತಿಮಾನ್ನೃಪತಿರ್ಜಾತಸ್ತ್ವಯಿ ಸುಂದರಿ ಸರ್ವಥಾ ॥೫೧॥**

**ಪಿತ್ರಾಽಪಿ ತೇ ವಿಶಾಲಾಕ್ಷಿ ಪರಿತಪ್ಯತಿ ಸರ್ವಥಾ ।**
**ವಿವಾಹಕಾಲಂ ತೇ ಜ್ಞಾತ್ವಾ ತ್ವಾಂ ಚ ವೈರಾಗ್ಯಸಂಯುತಾಂ ॥೫೨॥**

---

ಗಾಂಧರ್ವವಿವಾಹದಿಂದ ನನ್ನನ್ನು ವರಿಸಲು ಇಷ್ಟ ವಿಲ್ಲದಿದ್ದರೆ, ನಿನ್ನ ತಂದೆಯು ನನಗೆ ನಿನ್ನನ್ನು ಶಾಸ್ತ್ರೋಕ್ತರೀತಿಯಿಂದ ದಾನಮಾಡುವುದಕ್ಕೂ ಅರ್ಹನಾಗಿರುತ್ತಾನೆ. ನಿನಗೆ ನಾನು ಅನುಕೂಲನಾದ ಪತಿಯಾಗುವುದರಲ್ಲಿ ಸಂದೇಹ ವಿಲ್ಲವು. ॥೪೮॥

ಮಹಿಷಾಸುರನು ಕಥೆಯನ್ನು ಮುಂದುವರಿಯಿಸುತ್ತಾ ಹೇಳಿದನು— ಕಾಮಶಾಸ್ತ್ರದಲ್ಲಿ ಬುದ್ಧಿವಂತೆಯಾದ ಆ ಸೈರಂಧ್ರಿಯು ಆಗ ರಾಜನ ಮಾತನ್ನು ಕೇಳಿನಕ್ಕು ಮಂದೋದರಿಯನ್ನು ಕುರಿತು ಮೃದುವಾದ ಮಾತನ್ನು ಹೀಗೆ ಹೇಳಿದಳು. ॥೪೯॥

ಎಲೈ ಮಂದೋದರಿಯೇ, ಸೂರ್ಯವಂಶದಲ್ಲಿ ಹುಟ್ಟಿದ ರಾಜನು ಬಂದಿದ್ದಾನೆ. ಇವನು ರೂಪವಂತನು, ಬಲಿಷ್ಠನು, ಸುಂದರನೂ, ನಿನಗೆ ಸರಿಯಾದ ವಯಸ್ಸಿನವನೂ ಆಗಿದಾನೆ. ಎಲೈ ಸುಂದರಿಯೇ, ನಿನ್ನಲ್ಲಿ ಸರ್ವ ವಿಧವಾಗಿಯೂ ತುಂಬ ಪ್ರೀತಿಯುಳ್ಳವನಾಗಿಯೂ ಇದಾನೆ. ॥೫೦-೫೧॥

ದೊಡ್ಡದಾದ ಕಣ್ಣುಳ್ಳವಳಾದ, ಎಲೈ ಮಂದೋದರಿಯೇ— ನಿನ್ನ ತಂದೆಯು ನಿನಗೆ ವಿವಾಹಕಾಲವು ಒದಗಿರುವುದನ್ನೂ, ನೀನು ವೈರಾಗ್ಯದಿಂದ ಕೂಡಿ ಇರುವುದನ್ನೂ ತಿಳಿದು ಸರ್ವಪ್ರಕಾರದಿಂದಲೂ ಸಂಕಟಪಡುತ್ತಿರುವನು. ॥೫೨॥

ಇತ್ಯಾಹಾಸ್ಮಾನ್ಸ ನೃಪತಿರ್ವಿನಿಃಶ್ವಸ್ಯ ಪುನಃ ಪುನಃ ।
ಪುತ್ರೀಂ ಪ್ರಬೋಧಯಂತ್ವೇತಾಂ ಸೈರಂಧ್ರ್ಯಃ ಸೇವನೇ ರತಾಃ ॥೫೩॥

ವಕ್ತುಂ ಶಕ್ತಾ ವಯಂ ನ ತ್ವಾಂ ಹಠಧರ್ಮರತಾಂ ಪುನಃ ।
ಭರ್ತುಃ ಶುಶ್ರೂಷಣಂ ಸ್ತ್ರೀಣಾಂ ಪರೋ ಧರ್ಮೋಽಬ್ರವೀನ್ಮುನಿಃ ॥೫೪॥

ಭರ್ತಾರಂ ಸೇವಮಾನಾ ವೈ ನಾರೀ ಸ್ವರ್ಗಮವಾಪ್ನುಯಾತ್ ।
ತಸ್ಮಾತ್ಕುರು ವಿಶಾಲಾಕ್ಷಿ ವಿವಾಹಂ ವಿಧಿಪೂರ್ವಕಂ ॥೫೫॥

॥ ಮಂಡೋದರ್ಯುವಾಚ ॥

ನಾಹಂ ಪತಿಂ ಕರಿಷ್ಯಾಮಿ ಚರಿಷ್ಯೇ ತಪಮದ್ಭುತಂ ।
ನಿವಾರಯ ನೃಪಂ ಬಾಲೇ ಕಿಂ ಮಾಂ ಪಶ್ಯತಿ ನಿಸ್ತ್ರಪಃ ॥೫೬॥

---

ನಿನ್ನ ತಂದೆಯಾದ ರಾಜನು ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತಾ ನಮ್ಮನ್ನು ಕುರಿತು, ನನ್ನ ಮಗಳ ಸೇವೆಯಲ್ಲಿರುವ ಓ ಸೈರಂಧ್ರಿಯರೇ, ವೈರಾಗ್ಯ ದಿಂದಿರುವ ಇವಳು ಮದುವೆಯಾಗುವಂತೆ ತಿಳಿಯಹೇಳಿ ಎಚ್ಚರಿಕೆಯನ್ನು ಕೊಡ ಬೇಕು. ಎಂದು ಹೇಳಿರುವನು. ॥೫೩॥

ಮದುವೆಯಾಗುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿಕೊಂಡು ಹಟದಿಂದ ಧರ್ಮದಲ್ಲಿ ಆಸಕ್ತಳಾಗಿ ಇರುವ ನಿನ್ನನ್ನು ಕುರಿತು ನಾವು ಏನನ್ನು ಹೇಳುವುದಕ್ಕೂ ಸಮರ್ಥರಲ್ಲವು. ಆದರೆ ಧರ್ಮಶಾಸ್ತ್ರವನ್ನು ರಚಿಸಿರುವ ಋಷಿಯಾದರೋ ಸ್ತ್ರೀಗೆ ಗಂಡನ ಸೇವೆಯೇ ಮುಖ್ಯವಾದ ಧರ್ಮವೆಂದು ಹೇಳಿರುವನು. ॥೫೪॥

ಇತರ ಧರ್ಮಗಳನ್ನು ಬಿಟ್ಟಾದರೂ ಗಂಡನ ಸೇವೆಯನ್ನು ಮಾಡುವ ಹೆಂಗುಸು ಸ್ವರ್ಗವನ್ನು ಹೊಂದುವಳು. ಆದುದರಿಂದ, ಎಲೈ ವಿಶಾಲವಾದ ಕಣ್ಣುಳ್ಳ ಮಂಡೋದರಿಯೇ, ನೀನು ಶಾಸ್ತ್ರನಿಯಮಾನುಸಾರವಾಗಿ ವಿವಾಹವನ್ನು ಮಾಡಿಕೋ. ॥೫೫॥

ಮಂಡೋದರಿಯು ಹೇಳಿದಳು—ಎಲೌ ಹುಡುಗಿಯಾಗಿರುವ ಸೈರಂಧ್ರಿಯೇ, ನಾನು ಗಂಡನನ್ನು ಮದುವೆ ಮಾಡಿಕೊಳ್ಳುವುದಿಲ್ಲವು. ಆಶ್ಚರ್ಯಕರ ವಾದ ತಪಸ್ಸನ್ನು ಮಾಡುತ್ತಿರುವೆನು. ನೀನು ಈ ದೊರೆಯನ್ನು ನನ್ನ ಹತ್ತಿರ ದಿಂದ ಆಚೆಗೆ ಕಳುಹಿಸಿ ತಪ್ಪಿಸು. ಅವನು ನನ್ನನ್ನು ನಾಚಿಕೆಯಿಲ್ಲದೆ ಏನು ಕಾರಣ ದಿಂದ ಹೀಗೆ ನೋಡುತ್ತಿದಾನೆ ? ಎಂದು ಮಂಡೋದರಿಯು ಹೇಳಿದಳು. ॥೫೬॥

|| ಸೈರಂಧ್ರ್ಯುವಾಚ ||

**ದುರ್ಜಯೋ ದೇವಿ ಕಾಮೋಽಸೌ ಕಾಲಸ್ತು ದುರತಿಕ್ರಮಃ ।**
**ತಸ್ಮಾನ್ಮೇ ವಚನಂ ಪಥ್ಯಂ ಕರ್ತುಮರ್ಹಸಿ ಸುಂದರಿ ॥೫೭॥**

**ಅನ್ಯಥಾ ವ್ಯಸನಂ ನೂನಮಾಪತೇದಿತಿ ನಿಶ್ಚಯಃ ।**
**ಇತಿ ತಸ್ಯಾ ವಚಃ ಶ್ರುತ್ವಾ ಕನ್ಯೋವಾಚಾಥ ತಾಂ ಸಖೀಂ ॥೫೮॥**

**ಯದ್ಭವ್ಯಂ ಭವೇತ್ತದ್ಭವತು ದೈವಯೋಗಾದಸಂಶಯಂ ।**
**ನ ವಿವಾಹಂ ಕರಿಷ್ಯೇಽಹಂ ಸರ್ವಥಾ ಪರಿಚಾರಿಕೇ ॥೫೯॥**

|| ಮಹಿಷ ಉವಾಚ ||

**ಇತಿ ತಸ್ಯಾಸ್ತು ನಿರ್ಬಂಧಂ ಜ್ಞಾತ್ವಾ ಪ್ರಾಹ ನೃಪಂ ಪುನಃ ।**
**ಗಚ್ಛ ರಾಜನ್ ಯಥಾಕಾಮಂ ನೇಯಮಿಚ್ಛತಿ ಸತ್ಪತಿಂ ॥೬೦॥**

---

ಸೈರಂಧ್ರಿಯು ಹೇಳಿದಳು—ಎಲೌ ದೇವಿಯೇ, ಸುಂದರಿಯೇ, ಕಾಮ ನನ್ನು ಜಯಿಸುವುದು ಅಸಾಧ್ಯವು. ಕಾಲವನ್ನೂ ಮೀರುವುದಕ್ಕಾಗುವುದಿಲ್ಲವು. ಆದುದರಿಂದ ಹಿತವಾದ ನನ್ನ ಮಾತನ್ನು ನಡೆಯಿಸಲು ಯೋಗ್ಯಳಾಗು. ||೫೭||

ನೀನು ನನ್ನ ಮಾತನ್ನು ನಡೆಸದಿದ್ದರೆ ನಿನಗೆ ನಿಜವಾಗಿಯೂ ದುಃಖವು ಸಂಭವಿಸುವುದು. ಇದು ನಿಶ್ಚಯವಾದುದು. ಹೀಗೆ ಹೇಳಿದ ಆ ಸೈರಂಧ್ರಿಯ ಮಾತನ್ನು ಕೇಳಿ ಬಾಲೆಯಾದ ಆ ಮಂದೋದರಿಯು ತನ್ನ ಸ್ನೇಹಿತೆಯನ್ನು ಕುರಿತು ಮುಂದೆ ಹೇಳುವಂತೆ ಹೇಳಿದಳು. ||೫೮||

ಎಲೈ ದೂತಿಯೆ, ದೈವಗತಿಯಿಂದ ಯಾವುದು ಆಗಬೇಕಾಗಿದ್ದೀತೋ ಅದು ಆಗಲಿ. ನಾನು ಸರ್ವಪ್ರಕಾರದಿಂದಲೂ ವಿವಾಹವನ್ನು ಮಾಡಿಕೊಳ್ಳುವುದಿಲ್ಲವು. ಇದರಲ್ಲಿ ಸಂಶಯವಿಲ್ಲವು. ||೫೯||

ಮಹಿಷಾಸುರನು ಹೇಳಿದನು—ಆ ಮಂದೋದರಿಯ ಕಟ್ಟುನಿಟ್ಟಾದ ಈ ರೀತಿ ಯಾದ ಅಭಿಪ್ರಾಯವನ್ನು ತಿಳಿದುಕೊಂಡು ಆ ಸಖಿಯು ದೊರೆಯನ್ನು ಕುರಿತು ಓ ರಾಜನೇ, ನೀನು ನಿನ್ನ ಇಚ್ಛೆಬಂದಂತೆ ಹೋಗು. ಇವಳು ಒಳ್ಳೆಯ ಗಂಡ ನನ್ನು ಹೊಂದಲು ಇಚ್ಛೆಪಡುವುದಿಲ್ಲವು. ಎಂದು ಹೇಳಿದಳು. ||೬೦||

**ನೃಪಸ್ತು ತದ್ವಚಃ ಶ್ರುತ್ವಾ ನಿರ್ಗತಸ್ಸಹ ಸೇನಯಾ ।**
**ಕೋಸಲಾನ್ ವಿಮನಾ ಭೂತ್ವಾ ಕಾಮಿನೀಂ ಪ್ರತಿ ನಿಸ್ಸ್ಪೃಹಃ ॥೬೧॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ಸಪ್ತದಶೋಽಧ್ಯಾಯಃ**

---

ದೊರೆಯು ಆ ಮಂಡೋದರಿಯ ಮಾತನ್ನು ಕೇಳಿ ಮನಸ್ಸಿನಲ್ಲಿ ಉತ್ಸಾಹವಿಲ್ಲದವನಾಗಿ, ಆ ಹೆಂಗುಸನ್ನು ಹೊಂದುವ ವಿಷಯದಲ್ಲಿ ಆಶೆಯಿಲ್ಲದವನಾಗಿ, ತನ್ನ ಸೇನೆಯೊಡನೆ ಹಿಂತಿರುಗಿ ಕೋಸಲದೇಶಗಳನ್ನು ಪಡೆದನು. ॥೬೧॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಅಷ್ಟಾದಶೋಽಧ್ಯಾಯಃ ||

### ಹದಿನೆಂಟನೆಯ ಅಧ್ಯಾಯವು

|| ಮಹಿಷ ಉವಾಚ ||

**ತಸ್ಯಾಸ್ತು ಭಗಿನೀ ಕನ್ಯಾ ನಾಮ್ನಾ ಚೇಂದುಮತೀ ಶುಭಾ ।**
**ವಿವಾಹಯೋಗ್ಯಾ ಸಂಜಾತಾ ಸುರೂಪಾಽವರಜಾ ಯದಾ ||೧||**

**ತಸ್ಯಾ ವಿವಾಹಃ ಸಂವೃತ್ತಃ ಸಂಜಾತಶ್ಚ ಸ್ವಯಂವರಃ ।**
**ರಾಜಾನೋ ಬಹುದೇಶೀಯಾಃ ಸಂಗತಾಸ್ತತ್ರ ಮಂಡಪೇ ||೨||**

**ತಯಾ ವೃತೋ ನೃಪಃ ಕಶ್ಚಿದ್ಬಲವಾನ್ ರೂಪಸಂಯುತಃ ।**
**ಕುಲಶೀಲಸಮಾಯುಕ್ತಃ ಸರ್ವಲಕ್ಷಣಸಂಯುತಃ ||೩||**

---

ಮಹಿಷಾಸುರನು ಹೇಳಿದನು — ಆ ಮಂದೋದರಿಯ ತಂಗಿಯಾದ ಇಂದುಮತಿಯೆಂಬವಳೂ ಸುಂದರಿಯಾಗಿದ್ದಳು. ಅವಳಿಗೆ ವಿವಾಹಕ್ಕೆ ಯೋಗ್ಯವಾದ ವಯಸ್ಸು ಬಂದಿತು. ||೧||

ಅವಳಿಗೆ ಮದುವೆಯನ್ನು ನೆರವೇರಿಸಲು, ಆಗ ಸ್ವಯಂವರವು ಏರ್ಪಡಿಸಲ್ಪಟ್ಟಿತು. ಆ ಸ್ವಯಂವರ ಮಂಟಪದಲ್ಲಿ ಅನೇಕ ದೇಶಗಳಲ್ಲಿನ ರಾಜರು ಬಂದು ಸೇರಿದ್ದರು. ||೨||

ಆ ಇಂದುಮತಿಯು ಒಳ್ಳೆಯ ಕುಲ, ಸ್ವಭಾವ, ಇವುಗಳಿಂದ ಕೂಡಿದವನಾದ, ಬಲಿಷ್ಠನಾದ, ರೂಪಸಂಪನ್ನನಾದ ಎಲ್ಲ ಲಕ್ಷಣಗಳಿಂದ ಕೂಡಿದ ರಾಜನನ್ನು ವರಿಸಿದಳು. ||೩||

**ತದಾ ಕಾಮಾತುರಾ ಜಾತಾ ವಿಟಂ ವೀಕ್ಷ್ಯ ನೃಪಂ ತು ಸಾ ।**
**ಚಕಮೇ ದೈವಯೋಗಾತ್ತು ಶಠಂ ಚಾತುರ್ಯಭೂಷಿತಂ ॥೪॥**

**ಪಿತರಂ ಪ್ರಾಹ ತನ್ವಂಗೀ ವಿವಾಹಂ ಕುರು ಮೇ ಪಿತಃ ।**
**ಇಚ್ಛಾ ಮೇಽದ್ಯ ಸಮುದ್ಭೂತಾ ದೃಷ್ಟ್ವಾ ಮದ್ರಾಧಿಪಂ ತ್ವಿಹ ॥೫॥**

**ಚಂದ್ರಸೇನೋಽಪಿ ತಚ್ಛ್ರುತ್ವಾ ಪುತ್ರ್ಯಾ ಯದ್ಭಾಷಿತಂ ರಹಃ ।**
**ಪ್ರಸನ್ನೇನೈವ ಮನಸಾ ತತ್ಕಾರ್ಯೇ ತತ್ಪರೋಽಭವತ್ ॥೬॥**

**ತಮಾಹೂಯ ನೃಪಂ ಗೇಹೇ ವಿವಾಹವಿಧಿನಾ ದದೌ ।**
**ಕನ್ಯಾಂ ಮಂದೋದರೀಂ ತಸ್ಮೈ ಪಾರಿಬರ್ಹಂ ತಥಾ ಬಹು ॥೭॥**

**ಚಾರುದೇಷ್ಣೋಽಪಿ ತಾಂ ಪ್ರಾಪ್ಯ ಸುಂದರೀಂ ಮುದಿತೋಽಭವತ್ ।**
**ಜಗಾಮ ಸ್ವಗೃಹಂ ತುಷ್ಟೋ ರಾಜಾಽಪಿ ಸಹಿತಃ ಸ್ತ್ರಿಯಾ ॥೮॥**

---

ಆಗ ಮಂದೋದರಿಗೂ ಕಾಮವುಂಟಾಯಿತು ಆದರೆ ಅವಳು ದೈವಗತಿಯಿಂದ ಜಾರನೂ, ವಂಚಕನೂ, ಒಳ್ಳೆಯವನಂತೆ ನಟಿಸುವುದರಲ್ಲಿ ನಿಪುಣನೂ, ಕಾಮುಕನೂ ಆದ ಒಬ್ಬ ದೊರೆಯನ್ನು ಕಾಮಿಸಿದಳು. ॥೪॥

ಆಮೇಲೆ ಆಕೃಶಾಂಗಿಯಾದ ಮಂದೋದರಿಯು ತಂದೆಯಾದ ಚಂದ್ರಸೇನನನ್ನು ಕುರಿತು, ಓ ತಂದೆಯೇ, ಮದ್ರದೇಶದ ರಾಜನನ್ನು ನೋಡಿ ಅವನನ್ನು ಮದುವೆಯಾಗಬೇಕೆಂಬ ಆಸೆಯು ಈಗ ನನಗೆ ಉಂಟಾಗಿರುತ್ತದೆ. ಆದುದರಿಂದ ನನಗೆ ವಿವಾಹವನ್ನು ಮಾಡು, ಎಂದು ಹೇಳಿದಳು. ॥೫॥

ಮಗಳು ಏಕಾಂತದಲ್ಲಿ ಹೇಳಿದ ಈ ಮಾತನ್ನು ತಂದೆಯು ಕೇಳಿ ಸಂತೋಷದಿಂದ ಅವಳನ್ನೂ ಮದುವೆಮಾಡಿಕೊಡುವುದರಲ್ಲಿ ಆಸಕ್ತನಾದನು. ॥೬॥

ಆ ಮದ್ರದೇಶದ ರಾಜನನ್ನು ಮನೆಗೆ ಕರೆದುಕೊಂಡು ಬಂದು ಅವನಿಗೆ ಬಹಳಮಟ್ಟಿಗೆ ವರೋಪಚಾರದ ಪದಾರ್ಥಗಳನ್ನೂ ಬಳುವಳಿಯಾಗಿ ಕೊಟ್ಟು, ಮಗಳಾದ ಮಂದೋದರಿಯನ್ನೂ, ಶಾಸ್ತ್ರೋಕ್ತ ರೀತಿಯಿಂದ ಅವನಿಗೆ ಧಾರೆಯೆರೆದು ಮದುವೆಮಾಡಿಕೊಟ್ಟನು. ॥೭॥

ಮದ್ರದೇಶದ ರಾಜನಾದ ಆ ಚಾರುದೇಷ್ಣನೂ ಸುಂದರಿಯಾದ ರಾಜಪುತ್ರಿಯನ್ನು ಹೊಂದಿ ಸಂತೋಷವುಳ್ಳವನಾದನು. ಆ ಸ್ತ್ರೀಯೊಡನೆ ಸಂತೋಷದಿಂದ ತನ್ನ ಅರಮನೆಯನ್ನು ಸೇರಿದನು. ॥೮॥

ರೇಮೇ ನೃಪತಿಶಾರ್ದೂಲಃ ಕಾಮಿನ್ಯಾ ಬಹುವಾಸರಾನ್ ।
ಕದಾಚಿದ್ದಾಸಪತ್ನ್ಯಾ ಸ ರಮಮಾಣೋ ರಹಃ ಕಿಲ ॥೯॥

ಸ್ವೈರಂಧ್ರ್ಯಾ ಕಥಿತಂ ತಸ್ಯೈ ತಯಾ ದೃಷ್ಟಃ ಪತಿಸ್ತಥಾ ।
ಉಪಾಲಂಭಂ ದದೌ ತಸ್ಮೈ ಸ್ಮಿತಪೂರ್ವಂ ರುಷಾಽನ್ವಿತಾ ॥೧೦॥

ಕದಾಚಿದಪಿ ಸಾಮಾನ್ಯಾಂ ರಹೋ ರೂಪವತೀಂ ನೃಪಃ ।
ಕ್ರೀಡಯನ್ ಲಾಲಯನ್ ದೃಷ್ಟಃ ಖೇದಂ ಪ್ರಾಪ ತದೈವ ಸಾ॥೧೧॥

ನ ಜ್ಞಾತೋಽಯಂ ಶಠಃ ಪೂರ್ವಂ ಯದಾ ದೃಷ್ಟಃ ಸ್ವಯಂವರೇ ।
ಕಿಂ ಕೃತಂ ತು ಮಯಾ ಮೋಹಾದ್ವಂಚಿತಾಽಹಂ ನೃಪೇಣ ಚ ॥೧೨॥

ಕಿಂ ಕರೋಮ್ಯದ್ಯ ಸಂತಾಪಂ ನಿರ್ಲಜ್ಜೇ ನಿರ್ಘೃಣೇ ಶಠೇ ।
ಕಾ ಪ್ರೀತಿರೀದೃಶೇ ಪತ್ಯೌ ಧಿಗದ್ಯ ಮಮ ಜೀವಿತಂ ॥೧೩॥

---

ಮದ್ರದೇಶದ ರಾಜನು ಆ ಮಂಡೋದರಿಯೊಡನೆ ಬಹಳ ದಿನಗಳು ಸುಖವಾಗಿದ್ದನು. ಆದರೆ ಒಂದುದಿನ ಅವನು ಗುಟ್ಟಾಗಿ (ದಾಸನ) ತನ್ನ ಸೇವಕನ ಪತ್ನಿಯೊಡನೆ ವಿಹಾರ ಮಾಡುತ್ತಿದ್ದುದನ್ನು ಕಂಡೆನೆಂದು ಮಂಡೋದರಿಯ ಸೈರಂಧ್ರಿಯು ಅವಳಿಗೆ ಹೇಳಿದಳು. ಆಗ ಮಂಡೋದರಿಯು ಕೋಪದಿಂದ ಕೂಡಿದವಳಾದರೂ ಮಂದಹಾಸದಿಂದ ಆ ರಾಜನನ್ನು ನಿಂದಿಸಿದಳು. ||೯-೧೦||

ಇನ್ನೊಂದು ಸಲ ಆ ರಾಜನು ಏಕಾಂತದಲ್ಲಿ ಸುಂದರಿಯಾದ ಸಾಮಾನ್ಯ ಸ್ತ್ರೀಯನ್ನು ಲಾಲಿಸುತ್ತಾ ಅವಳೊಡನೆ ಆಟವಾಡುತ್ತಿದ್ದದ್ದನ್ನು ಕಂಡಳು, ಮತ್ತು ಆಗಲೇ ವಿಷಾದವನ್ನೂ ಪಡೆದು ಹೀಗೆ ಪಶ್ಚಾತ್ತಾಪಪಟ್ಟಳು. ||೧೧||

ನಾನು ಸ್ವಯಂವರ ಕಾಲದಲ್ಲಿ ಮೊದಲು ಇವನನ್ನು ನೋಡಿದಾಗ ಈ ದುಷ್ಟನ ವಿಷಯವು ನನಗೆ ತಿಳಿಯಲಿಲ್ಲ! ನಾನು ಭ್ರಾಂತಿಯಿಂದ ಎಂತಹ ಕೆಲಸವನ್ನು ಮಾಡಿದೆನು! ನಾನು ಈ ದೊರೆಯಿಂದ ಮೋಸಗೊಳಿಸಲ್ಪಟ್ಟಿದೇನೆ. ||೧೨||

ನಾಚಿಕೆಯೂ, ದಯೆಯೂ, ಇಲ್ಲದಿರುವ ಗೂಢವಾಗಿ ನನಗೆ ಅಪಕಾರವನ್ನೂ ಮಾಡಿರುವ ಈ ದುಷ್ಟನ ವಿಷಯದಲ್ಲಿ ನನಗೆ ಪಶ್ಚಾತ್ತಾಪವು ಉಂಟಾಗುತ್ತಿದೆ. ಏನನ್ನು ಮಾಡಲಿ, ಹೀಗೆ ಇರುವ ಗಂಡನಿಗೆ ನನ್ನಲ್ಲಿ ಪ್ರೀತಿಯು ತಾನೇ ಎಂಥಾದ್ದು! ನನ್ನ ಬಾಳು ವ್ಯರ್ಥವೂ, ಸಂಕಟವುಳ್ಳದ್ದೂ ಆಯಿತು! ||೧೩||

**ಅದ್ಯ ಪ್ರಭೃತಿ ಸಂಸಾರೇ ಸುಖಂ ತ್ಯಕ್ತಂ ಮಯಾ ಖಲು ।**
**ಪತಿಸಂಭೋಗಜಂ ಸರ್ವಂ ಸಂತೋಷೋಽದ್ಯ ಮಯಾ ಕೃತಃ ॥೧೪॥**

**ಅಕರ್ತವ್ಯಂ ಕೃತಂ ಕಾರ್ಯಂ ತಜ್ಞಾತಂ ದುಃಖದಂ ಮಮ ।**
**ದೇಹತ್ಯಾಗಃ ಕ್ರಿಯತೇ ಚೇದ್ಧತ್ಯಾಽತೀವ ದುರತ್ಯಯಾ ॥೧೫॥**

**ಪಿತೃಗೇಹಂ ವ್ರಜಾಮ್ಯಾಶು ತತ್ರಾಪಿ ನ ಸುಖಂ ಭವೇತ್ ।**
**ಹಾಸ್ಯಯೋಗ್ಯಾ ಸಖೀನಾಂ ತು ಭವೇಯಂ ನಾತ್ರ ಸಂಶಯಃ ॥೧೬॥**

**ತಸ್ಮಾದತ್ರೈವ ಸಂವಾಸೋ ವೈರಾಗ್ಯಯುತಯಾ ಮಯಾ ।**
**ಕರ್ತವ್ಯಃ ಕಾಲಯೋಗೇನ ತ್ಯಕ್ತ್ವಾ ಕಾಮಸುಖಂ ಪುನಃ ॥೧೭॥**

**॥ ಮಹಿಷ ಉವಾಚ ॥**

**ಇತಿ ಸಂಚಿತ್ಯ ಸಾ ನಾರೀ ದುಃಖಶೋಕಪರಾಯಣಾ ।**
**ಸ್ಥಿತಾ ಪತಿಗೃಹಂ(ಹೇ) ತ್ಯಕ್ತ್ವಾ ಸುಖಂ ಸಂಸಾರಜಂ ತತಃ ॥೧೮॥**

---

ಇಂದು ಮೊದಲುಗೊಂಡು ಈ ಸಂಸಾರದಲ್ಲಿ ಪತಿ ಸಂಭೋಗದಿಂದ ಉಂಟಾಗಬಹುದಾದ ಸೌಖ್ಯವೆಲ್ಲದರ ಆಶೆಯನ್ನೂ ನಾನು ಬಿಟ್ಟೆನು. ಅದೆಲ್ಲವನ್ನೂ ನಾನು ಈಗ ಸಂತೋಷಪೂರ್ವಕವಾಗಿ ಬಿಟ್ಟಿರುತ್ತೇನೆ. ಈ ಆಶಾತ್ಯಾಗದಿಂದ ಮಂದೋದರಿಗೆ ಮನಶ್ಶಾಂತಿ ಸುಖಗಳೂ ಲಭಿಸಿವೆ ಎಂದು ಭಾವವು. ॥೧೪॥

ಮಾಡಬಾರದ ಕೆಲಸಗಳನ್ನು ನಾನು ಮಾಡಿದುದಾಯಿತು! ಪ್ರಾಣವನ್ನು ಬಿಡೋಣವೆಂದರೆ ಆತ್ಮಹತ್ಯೆಯ ಪಾಪವು ತಪ್ಪದೆ ಉಂಟಾಗುತ್ತದೆ! ಅದರ ದುಃಖವನ್ನು ತಪ್ಪಿಸಿಕೊಳ್ಳಲಸಾಧ್ಯವಾಗುವುದು. ॥೧೫॥

ಅಲ್ಲದೆ ನಾನು ಬೇಗನೆ ತಂದೆಯ ಮನೆಗೆ ಹೋಗೋಣವೆಂದರೆ ಅಲ್ಲಿಯೂ ನನಗೆ ಸುಖವುಂಟಾಗುವುದಿಲ್ಲವು. ಏಕೆಂದರೆ ಅಲ್ಲಿ ನನ್ನ ಸಖಿಯರೆಲ್ಲರಿಗೂ ನಾನು ಹಾಸ್ಯಕ್ಕೆ ಗುರಿಯಾಗುವುದರಲ್ಲಿ ಸಂಶಯವಿಲ್ಲವು. ॥೧೬॥

ಆದುದರಿಂದ ನಾನು ವೈರಾಗ್ಯವನ್ನು ಹೊಂದಿ, ಕಾಮಸುಖದಲ್ಲಿ ಆಶೆಯನ್ನು ಈಗಿನಂತೆಯೇ ಮುಂದೆಯೂ ಬಿಟ್ಟು ಇಲ್ಲಿಯೇ ವಾಸಮಾಡುತ್ತಾ ಕಾಲವನ್ನು ಕಳೆಯಬೇಕು. ॥೧೭॥

ಮಹಿಷಾಸುರನು ಹೇಳಿದನು—ಆ ಹೆಂಗಸು ಹೀಗೆ ಆಲೋಚನೆಯನ್ನು

ತಸ್ಮಾತ್ತ್ವಮಪಿ ಕಲ್ಯಾಣಿ ಮಾಮನಾದೃತ್ಯ ಭೂಪತಿಂ ।
ಅನ್ಯಂ ಕಾಪುರುಷಂ ಮಂದಂ ಕಾಮಾರ್ತಾ ಸಂಶ್ರಯಿಷ್ಯಸಿ ॥೧೯॥

ವಚನಂ ಕುರು ಮೇ ತಥ್ಯಂ ನಾರೀಣಾಂ ಪರಮಂ ಹಿತಂ ।
ಅಕೃತ್ವಾ ಪರಮಂ ಶೋಕಂ ಲಪ್ಸ್ಯಸೇ ನಾತ್ರ ಸಂಶಯಃ ॥೨೦॥

॥ ದೇವ್ಯುವಾಚ ॥

ಮಂದಾತ್ಮನ್ ಗಚ್ಛ ಪಾತಾಲಂ ಯುದ್ಧಂ ವಾ ಕುರು ಸಾಂಪ್ರತಂ ।
ಹತ್ವಾ ತ್ವಾಮಸುರಾನ್ಸರ್ವಾನ್ ಗಮಿಷ್ಯಾಮಿ ಯಥಾಸುಖಂ ॥೨೧॥

ಯದಾ ಯದಾ ಹಿ ಸಾಧೂನಾಂ ದುಃಖಂ ಭವತಿ ದಾನವ ।
ತದಾ ತೇಷಾಂ ಚ ರಕ್ಷಾರ್ಥಂ ದೇಹಂ ಸಂಧಾರಯಾಮ್ಯಹಂ ॥೨೨॥

---

ಮಾಡಿ ಸಂಕಟವ್ಯಸನಗಳಿಂದ ದುಃಖಾಕ್ರಾಂತಳಾಗಿ ಆಮೇಲೆ ಶಯ್ಯಾಗೃಹಸುಖ ವನ್ನು ಬಿಟ್ಟು ವೈರಾಗ್ಯದಿಂದ ಗಂಡನ ಮನೆಯಲ್ಲಿಯೇ ಇದ್ದಳು. ॥೧೮॥

ಎಲೌ ಮಂಗಳಕರಳೇ, ಹೀಗೆ ಮಂದೋದರಿಗೆ ದುಃಖವು ಒದಗಿತಾದುದರಿಂದ, ನೀನೂ ಕೂಡ ದೊರೆಯಾದ ನನ್ನನ್ನು ಈಗ ಸ್ವೀಕರಿಸದೆ ತಿರಸ್ಕರಿಸಿಬಿಟ್ಟು, ಆಮೇಲೆ ಕಾಮವಶತೆಯಿಂದ ಕೂಡಿದವಳಾಗಿ ಆತುರತೆಯಿಂದ ಕೂಡಿ ದಡ್ಡನೂ ಹೀನನೂ ಆಗಿರುವ ಯಾವನೋ ಬೇರೆಯವನನ್ನು ನೀನು ಅವಲಂಬಿಸುವೆ! ॥೧೯॥

ನೀನು ನಿಜವಾದ ನನ್ನ ಮಾತನ್ನು ನಡೆಸಿಕೊಡು. ನನ್ನ ಬುದ್ಧಿವಾದದ ಈ ಮಾತು ಹೆಂಗಸರಿಗೆ ಬಹಳ ಹಿತಕರವಾದದ್ದು. ಇದರಂತೆ ನಡೆಯಿಸದಿದ್ದಲ್ಲಿ ನೀನು ಹೆಚ್ಚಾದ ದುಃಖವನ್ನು ಹೊಂದುವೆ. ಇದರಲ್ಲಿ ಸಂಶಯವಿಲ್ಲವು. ॥೨೦॥

ದೇವಿಯು ಹೇಳಿದಳು—ಎಲೈ ದಡ್ಡನೇ, ಈಗ ನೀನು ಪಾತಾಳ ಲೋಕಕ್ಕಾದರೂ ಹೋಗು, ಹಾಗಿಲ್ಲದಿದ್ದರೆ ಯುದ್ಧವನ್ನಾದರೂ ಮಾಡು! ಹಾಗೆ ಮಾಡದೆ ಹೋದರೆ ನಿನ್ನನ್ನೂ ಎಲ್ಲ ರಾಕ್ಷಸರನ್ನೂ ಸಹ ಕೊಂದುಹಾಕಿ ನಾನು ನನ್ನ ಇಚ್ಛೆಗೆ ಬರುವಂತೆ ಸುಖವಾಗಿ ಹೋಗುವೆನು! ॥೨೧॥

ಎಲೈ ರಾಕ್ಷಸನೇ—ಸತ್ಪುರುಷರಿಗೆ ಯಾವ ಯಾವಾಗ ದುಃಖವುಂಟಾಗುವುದೋ ಆವಾಗಲೆಲ್ಲ ಅವರ ರಕ್ಷಣೆಗಾಗಿಯೇ ನಾನು ಶರೀರವನ್ನು ಧರಿಸಿ ಅವತರಿಸಿ ಬರುತ್ತೇನೆ. ॥೨೨॥

ಅರೂಪಾಯಾಶ್ಚ ಮೇ ರೂಪಮಜನ್ಮಾಯಾಶ್ಚ ಜನ್ಮ ಚ ।
ಸುರಾಣಾಂ ರಕ್ಷಣಾರ್ಥಾಯ ವಿದ್ಧಿ ದೈವ ವಿನಿಶ್ಚಿತಂ ॥೨೩॥

ಸತ್ಯಂ ಬ್ರವೀಮಿ ಜಾನೀಹಿ ಪ್ರಾರ್ಥಿತಾಽಹಂ ಸುರೈಃ ಕಿಲ ।
ತ್ವದ್ವಧಾರ್ಥಂ ಹಯಾರೇ ತ್ವಾಂ ಹತ್ವಾ ಸ್ಥಾಸ್ಯಾಮಿ ನಿಶ್ಚಲಾ ॥೨೪॥

ತಸ್ಮಾದ್ಯುದ್ಧಸ್ವ ವಾ ಗಚ್ಛ ಪಾತಾಲಮಸುರಾಲಯಂ ।
ಸರ್ವಥಾ ತ್ವಾಂ ಹನಿಷ್ಯಾಮಿ ಸತ್ಯಮೇತದ್ಬ್ರವೀಮ್ಯಹಂ ॥೨೫॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಸ ತಯಾ ದೇವ್ಯಾ ಧನುರಾದಾಯ ದಾನವಃ ।
ಯುದ್ಧಕಾಮಃ ಸ್ಥಿತಸ್ತತ್ರ ಸಂಗ್ರಾಮಾಂಗಣಭೂಮಿಷು ॥೨೬॥

---

ಎಲೈ ರಾಕ್ಷಸನೇ,—ಸಗುಣವೂ ಸಾಕಾರವೂ ಆದ ರೂಪವಿಲ್ಲದೆ ಇರುವ ನನಗೆ ರೂಪವೂ, ಭೂತಭವಿಷ್ಯದ್ವರ್ತಮಾನವೆಂಬ ಮೂರು ಕಾಲಗಳಲ್ಲೂ ಇರುವ ವಳಾದುದರಿಂದ ನಿತ್ಯಳಾದ, ಅದರಿಂದಲೇ ಜನ್ಮವಿಲ್ಲದಿರುವ ನನಗೆ ಜನ್ಮವೂ ಕೂಡ ದೇವತೆಗಳ ರಕ್ಷಣೆಗೋಸ್ಕರಲೇ ಉಂಟಾಗುವುದೆಂದೂ, ಈ ದೈವನಿಯಮವು ತಪ್ಪ ದೆಂದೂ, ನೀನು ತಿಳಿದುಕೋ. ॥೨೩॥

ಎಲೈ ಮಹಿಷಾಸುರನೆ-–ನಾನು ನಿಜವನ್ನು ಹೇಳುತ್ತೇನೆ. ನಿನ್ನ ಸಂಹಾರ ಕ್ಕಾಗಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವಳಾಗಿ ಬಂದಿದೇನೆ. ನಿನ್ನನ್ನು ಸಂಹರಿಸಿ ಮನಸ್ಸಿನಲ್ಲಿ ಆತಂಕವೂ ಚಾಂಚಲ್ಯವೂ ಇಲ್ಲದವಳಾಗಿ ಸ್ಥಿರಳಾಗಿರುವೆನು. ॥೨೪॥

ಆದುದರಿಂದ ನೀನು ನನ್ನೊಡನೆ ಯುದ್ಧ ಮಾಡು. ಇಲ್ಲದಿದ್ದರೆ ರಾಕ್ಷಸರ ವಾಸಸ್ಥಾನವಾದ ಪಾತಾಳಲೋಕಕ್ಕೆ ಹೋಗು. ಹಾಗೆ ಮಾಡದೆ ಇದ್ದರೆ ಸರ್ವ ವಿಧದಿಂದಲೂ ನಿನ್ನನ್ನು ನಾನು ಕೊಲ್ಲುವೆನು! ಇದು ನಿಜವು. ಇದನ್ನು ನಿನಗೆ ಹೇಳಿಯೂ ಇರುತ್ತೇನೆ! ॥೨೫॥

ವ್ಯಾಸಋಷಿಯು ಹೇಳಿದನು—ದಾನವನಾದ ಆ ಮಹಿಷನು ದೇವಿಯಿಂದ ಹೀಗೆ ಹೇಳಲ್ಪಟ್ಟವನಾಗಿ ಧನುಸ್ಸನ್ನು ತೆಗೆದುಕೊಂಡು ಆ ಯುದ್ಧ ಮಾಡುವ ಸಮ ತಲವಾದ ಭೂಮಿಯಲ್ಲಿ ಯುದ್ಧ ಮಾಡಬೇಕೆಂಬ ಇಚ್ಛೆಯಿಂದ ಸಿದ್ಧನಾಗಿ ನಿಂತನು. ॥೨೬॥

ಮುಮೋಚ ತರಸಾ ಬಾಣಾನ್ಕರ್ಣಾಕೃಷ್ಟಾಂಛಿಲಾಶಿತಾನ್ ।
ದೇವೀ ಚಿಚ್ಛೇದ ತಾನ್ಬಾಣೈಃ ಕ್ರೋಧಾನ್ಮುಕ್ತೈರಯೋಮುಖೈಃ ॥೨೭॥

ತಯೋಃ ಪರಸ್ಪರಂ ಯುದ್ಧಂ ಸಂಬಭೂವ ಭಯಪ್ರದಂ ।
ದೇವಾನಾಂ ದಾನವಾನಾಂ ಚ ಪರಸ್ಪರಜಯೈಷಿಣಾಂ ॥೨೮॥

ಮಧ್ಯೇ ದುರ್ಧರ ಆಗತ್ಯ ಮುಮೋಚ ಚ ಶಿಲೀಮುಖಾನ್ ।
ದೇವೀಂ ಪ್ರತಿ ವಿಷಾಸಕ್ತಾನ್ಕೋಪಯನ್ನತಿದಾರುಣಾನ್ ॥೨೯॥

ತತೋ ಭಗವತೀ ಕ್ರುದ್ಧಾ ತಂ ಜಘಾನ ಶಿತೈಃ ಶರೈಃ ।
ದುರ್ಧರಸ್ತು ಪಪಾತೋರ್ವ್ಯಾಂ ಗತಾಸುರ್ಗಿರಿಶೃಂಗವತ್ ॥೩೦॥

---

ಮಹಿಷಾಸುರನು ಕಲ್ಲಿನಂತೆ ಗಟ್ಟಿಯಾಗಿ ಮೊನೆಯಾಗಿರುವ ಬಾಣಗಳನ್ನು ಧನುಸ್ಸಿನ ಹೆದೆಯಲ್ಲಿ ಸೇರಿಸಿ ಕಿವಿಯವರೆಗೂ ಎಳೆದು ವೇಗವಾಗಿ ಬಿಟ್ಟನು. ದೇವಿಯೂ ಕೂಡ ಕೋಪದಿಂದ ಬಿಡಲ್ಪಟ್ಟ ಕಬ್ಬಿಣದ ಮುಖವುಳ್ಳವುಗಳಾದ ತನ್ನ ಬಾಣಗಳಿಂದ ಆ ಬಾಣಗಳನ್ನು ಕತ್ತರಿಸಿದಳು. ||೨೭||

ಆಗ ಅನ್ಯೋನ್ಯವಾಗಿ ಜಯವನ್ನು ಹೊಂದಬೇಕೆಂಬ ಇಚ್ಛೆಯುಳ್ಳವರಾದ ದೇವೀ ಮತ್ತು ಮಹಿಷ ಇವರಿಗೆ ದೇವತೆಗಳಿಗೂ, ರಾಕ್ಷಸರಿಗೂ ಮತ್ತು ಇತರರಿಗೂ ಭಯವನ್ನುಂಟುಮಾಡುವಂತಹ ಯುದ್ಧವು ನಡೆಯಿತು. ||೨೮||

ಹೀಗೆ ದೇವಿಗೂ, ಮಹಿಷಾಸುರನಿಗೂ, ಯುದ್ಧವು ನಡೆಯುತ್ತಿರುವಾಗ ಇವರಿಬ್ಬರ ಮಧ್ಯದಲ್ಲಿ ದುರ್ಧರನೆಂಬ ರಾಕ್ಷಸನು ಬಂದು ದೇವಿಯ ಮೇಲೆ ವಿಷವನ್ನು ಹಚ್ಚಿರುವ ಮತ್ತು ಕ್ರೂರವಾದ ಬಾಣಗಳನ್ನು ಬಿಟ್ಟು ದೇವಿಯನ್ನು ರೇಗಿಸಿದನು. ||೨೯||

ಅನಂತರದಲ್ಲಿ ಷಡ್ಗುಣೈಶ್ವರ್ಯಸಂಪನ್ನಳಾದ ದೇವಿಯು ಕೋಪವುಳ್ಳವಳಾಗಿ ಅವನನ್ನು ಹರಿತವಾದ ಬಾಣಗಳಿಂದ ಹೊಡೆದಳು. ದುರ್ಧರನು ಪ್ರಾಣ ಹೋದವನಾಗಿ ಬೆಟ್ಟದ ಶಿಖರದಹಾಗೆ ಭೂಮಿಯಲ್ಲಿ ಬಿದ್ದನು. ||೩೦||

ತಂ ತಥಾ ನಿಹತಂ ದೃಷ್ಟ್ವಾ ತ್ರಿನೇತ್ರಃ ಪರಮಾಸ್ತ್ರವಿತ್ ।
ಆಗತ್ಯ ಸಪ್ತಭಿರ್ಬಾಣೈರ್ಜಘಾನ ಪರಮೇಶ್ವರೀಂ ॥೩೦॥

ಅನಾಗತಾಂಸ್ತು ಚಿಚ್ಛೇದ ದೇವೀ ತಾನ್ನಿಶಿತೈಃ ಶರಾನ್ ।
ತ್ರಿಶೂಲೇನ ತ್ರಿನೇತ್ರಂ ತು ಜಘಾನ ಜಗದಂಬಿಕಾ ॥೩೧॥

ಅಂಧಕಸ್ತ್ವಾಜಗಾಮಾಶು ಹತಂ ದೃಷ್ಟ್ವಾ ತ್ರಿಲೋಚನಂ ।
ಗದಯಾ ಲೋಹಮಯ್ಯಾಽಶು ಸಿಂಹಂ ವಿವ್ಯಾಧ ಮಸ್ತಕೇ ॥೩೨॥

ಸಿಂಹಸ್ತು ನಖಘಾತೇನ ತಂ ಹತ್ವಾ ಬಲವತ್ತರಂ ।
ಚಖಾದ ತರಸಾ ಮಾಂಸಮಂಧಕಸ್ಯ ರುಷಾಽನ್ವಿತಃ ॥೩೪॥

ತಾನ್ ರಣೇ ನಿಹತಾನ್ವೀಕ್ಷ್ಯ ದಾನವೋ ವಿಸ್ಮಯಂ ಗತಃ ।
ಚಿಕ್ಷೇಪ ತರಸಾ ಬಾಣಾನತಿತೀಕ್ಷ್ಣಾಂಛಿಲಾಶಿತಾನ್ ॥೩೫॥

---

ಆ ದುರ್ಧರನು ಹಾಗೆ ದೇವಿಯಿಂದ ಕೊಲ್ಲಲ್ಪಟ್ಟದ್ದನ್ನು ನೋಡಿ ಶ್ರೇಷ್ಠ ವಾದ ಅಸ್ತ್ರಗಳನ್ನು ತಿಳಿದಿರುವ ತ್ರಿಣೇತ್ರನೆಂಬ ರಾಕ್ಷಸನು ದೇವಿಯ ಎದುರಿಗೆ ಬಂದು ಆ ಪರಮೇಶ್ವರಿಯನ್ನು ಏಳು ಬಾಣಗಳಿಂದ ಹೊಡೆದನು. ||೩೦||

ದೇವಿಯು ಅವನು ಬಿಟ್ಟ ಬಾಣಗಳು ತನ್ನ ಹತ್ತಿರಕ್ಕೆ ಬರುವುದಕ್ಕೆ ಮುಂಚಿತವಾಗಿಯೇ ತನ್ನ ಬಾಣಗಳಿಂದ ಅವುಗಳನ್ನು ಕತ್ತರಿಸಿದಳು. ಅಲ್ಲದೆ ಆ ಜಗನ್ಮಾತೆಯು ತ್ರಿಶೂಲದಿಂದ ತ್ರಿಣೇತ್ರನೆಂಬ ಅಸುರನನ್ನು ಹೊಡೆದುಕೊಂದಳು. ||೩೧||

ತ್ರಿಲೋಚನನೆಂಬ ರಾಕ್ಷಸನು ನಾಶವಾದುದನ್ನು ಕಂಡು ಅನ್ಧಕನೆಂಬ ರಾಕ್ಷಸನು ಬೇಗನೆ ಬಂದು ಕಬ್ಬಿಣದ ಗದೆಯಿಂದ ದೇವಿಯ ವಾಹನವಾದ ಸಿಂಹವನ್ನು ಜಾಗ್ರತೆಯಾಗಿ ತಲೆಯ ಮೇಲೆ ಹೊಡೆದನು. ||೩೩||

ದೇವಿಯ ಸಿಂಹವು ತನ್ನ ಉಗುರಿನಿಂದ ಅವನಿಗೆ ಬಹಳ ಬಲವಾದ ಏಟನ್ನು ಹಾಕಿ ಸಿಳಿ ತುಂಬಿದ ಕೋಪವುಳ್ಳದ್ದಾಗಿ ಅಂಧಕಾಸುರನ ಮಾಂಸವನ್ನು ಬೇಗನೆ ತಿಂದುಹಾಕಿತು. ||೩೪||

ಮಹಿಷಾಸುರನು ಯುದ್ಧದಲ್ಲಿ ಆ ರಾಕ್ಷಸರೂ ದೇವಿಯಿಂದ ಕೊಲ್ಲಲ್ಪಟ್ಟು ದನ್ನು ನೋಡಿ ಆಶ್ಚರ್ಯವನ್ನು ಹೊಂದಿದನು! ಮತ್ತು ಬಹಳ ಕ್ರೂರವಾದ ಕಲ್ಲಿ

ದ್ವಿಧಾ ಚಕ್ರೇ ಶರಾನ್ದೇವೀ ತಾನಪ್ರಾಪ್ತಾಂಛಿಲೀಮುಖೈಃ ।
ಗದಯಾ ತಾಡಯಾಮಾಸ ದೈತ್ಯಂ ವಕ್ಷಸಿ ಚಾಂಬಿಕಾ ॥೩೬॥

ಸ ಗದಾಭಿಹತೋ ಮೂರ್ಚ್ಛಾಮವಾಪಾಮರಬಾಧಕಃ ।
ವಿಷಹ್ಯ ಪೀಡಾಂ ಪಾಪಾತ್ಮಾ ಪುನರಾಗತ್ಯ ಸತ್ವರಃ ॥೩೭॥

ಜಘಾನ ಗದಯಾ ಸಿಂಹಂ ಮೂರ್ಧ್ನಿ ಕ್ರೋಧಸಮನ್ವಿತಃ ।
ಸಿಂಹೋಽಪಿ ನಖಘಾತೇನ ತಂ ದದಾರ ಮಹಾಸುರಂ ॥೩೮॥

ವಿಹಾಯ ಪೌರುಷಂ ರೂಪಂ ಸೋಽಪಿ ಸಿಂಹೋ ಬಭೂವಹ ।
ನಖೈರ್ವಿದಾರಯಾಮಾಸ ದೇವೀಸಿಂಹಂ ಮದೋತ್ಕಟಂ ॥೩೯॥

---

ನಂತೆ ಗಟ್ಟಿಯೂ ಮೊನೆಯೂ ಆದ ಬಾಣಗಳನ್ನು ದೇವಿಯ ಮೇಲೆ ವೇಗವಾಗಿ ಪ್ರಯೋಗಿಸಿ ಬಿಟ್ಟನು. ॥೩೫॥

ಆಗ ಜಗನ್ಮಾತೆಯಾದ ದೇವಿಯು ಮಹಿಷಾಸುರನ ಬಾಣಗಳು ತನ್ನನ್ನು ಸೋಕುವುದರ ಒಳಗೇ ತನ್ನ ಬಾಣಗಳಿಂದ ಅವನ್ನು ಎರಡು ತುಂಡಾಗಿ ಕತ್ತರಿಸಿ, ಅವನನ್ನು ಗದೆಯಿಂದ ಎದೆಯಲ್ಲಿ ಹೊಡೆದಳು. ॥೩೬॥

ದೇವತೆಗಳಿಗೆ ತೊಂದರೆಯನ್ನು ಕೊಡುವ ಆ ಮಹಿಷಾಸುರನು ದೇವಿಯ ಗದೆಯ ಪೆಟ್ಟಿನಿಂದ ಮೂರ್ಛೆಯನ್ನು ಹೊಂದಿದನು. ಆ ಪಾಪಿಷ್ಠನು ಗದೆಯ ಪೆಟ್ಟಿನಿಂದುಂಟಾದ ತೊಂದರೆಯನ್ನು ಸಹಿಸಿಕೊಂಡು ಬೇಗನೆ ಪುನಃ ನುಗ್ಗಿ ಬಂದು ಕ್ರೋಧದಿಂದ ಕೂಡಿದವನಾಗಿ ಸಿಂಹದ ತಲೆಗೆ ಗದೆಯಿಂದ ಹೊಡೆದನು. ಸಿಂಹವೂ ಕೂಡ ಮಹಾಸುರನಾದ ಆ ಮಹಿಷನನ್ನು ತನ್ನ ಉಗುರಿನ ಏಟಿನಿಂದ ಬಲವಾಗಿ ಪರಚಿ ಸೀಳಿತು. ॥೩೭-೩೮॥

ಮಹಿಷಾಸುರನು ಕೂಡ ಮನುಷ್ಯನ ಆಕಾರವನ್ನು ಬಿಟ್ಟು ತಾನು ಸಿಂಹದ ಆಕಾರವನ್ನು ಹೊಂದಿ ಮದದಿಂದ ಸ್ವೇಚ್ಛೆಯಾಗಿರುವ ದೇವಿಯ ಸಿಂಹವನ್ನು ಉಗುರುಗಳಿಂದ ಬಗೆದನು. ॥೩೯॥

ತಂ ಚ ಕೇಸರಿಣಂ ವೀಕ್ಷ್ಯ ದೇವೀ ಕ್ರುದ್ಧಾ ಹ್ಯಯೋಮುಖೈಃ ।
ಶರೈರವಾಕಿರತ್ತೀಕ್ಷ್ಣೈಃ ಕ್ರೂರೈರಾಶೀವಿಷೈರಿವ ॥೪೦॥

ತ್ಯಕ್ತ್ವಾಽಸೌ ಹರಿರೂಪಂ ತು ಗಜೋ ಭೂತ್ವಾ ಮದಸ್ರವಃ ।
ಶೈಲಶೃಂಗಂ ಕರೇ ಕೃತ್ವಾ ಚಿಕ್ಷೇಪ ಚಂಡಿಕಾಂ ಪ್ರತಿ ॥೪೧॥

ಆಗಚ್ಛಂತಂ ಗಿರೇಃ ಶೃಂಗಂ ದೇವೀ ಬಾಣೈಃ ಶಿಲಾಶಿತೈಃ ।
ಚಕಾರ ತಿಲಶಃ ಖಂಡಾಞ್ಜಹಾಸ ಜಗದಂಬಿಕಾ ॥೪೨॥

ಉತ್ಪತ್ಯ ಚ ತದಾ ಸಿಂಹಸ್ತಸ್ಯ ಮೂರ್ಧ್ನಿ ವ್ಯವಸ್ಥಿತಃ ।
ನಖೈರ್ವಿದಾರಯಾಮಾಸ ಮಹಿಷಂ ಗಜರೂಪಿಣಂ ॥೪೩॥

ವಿಹಾಯ ಗಜರೂಪಂ ಚ ಬಭೂವಾಷ್ಟಾಪದೀ ತಥಾ ।
ಹಂತುಕಾಮೋ ಹರಿಂ ಕೋಪಾದ್ದಾರುಣೋ ಬಲವತ್ತರಃ ॥೪೪॥

---

ದೇವಿಯು ಆ ಸಿಂಹವನ್ನು ಕೂಡಲೆ ನೋಡಿ ಕೋಪಗೊಂಡವಳಾಗಿ ಕಬ್ಬಿಣದ ಮುಖವುಳ್ಳದ್ದಾದ, ಕ್ರೂರವಾಗಿರುವ ಹಾವುಗಳಂತೆ ಕಾಣುವ ಮೊನೆಯಾದ ಬಾಣಗಳಿಂದ ಹೊಡೆದಳು. ॥೪೦॥

ಅವನು ಸಿಂಪದ ರೂಪವನ್ನು ಬಿಟ್ಟು ಮದವನ್ನು ಸುರಿಸುವ ಮದ್ದಾನೆಯ ಆಕಾರವನ್ನು ಹೊಂದಿ, ತನ್ನ ಸೊಂಡಲಿನಿಂದ ಒಂದು ಬೆಟ್ಟದ ಶಿಖರವನ್ನು ಕಿತ್ತು ತೆಗೆದು ಹಿಡಿದುಕೊಂಡು ಅದನ್ನು ಆ ದೇವಿಯನ್ನು ಕುರಿತು ಎಸೆದನು. ॥೪೧॥

ತನ್ನ ಹತ್ತಿರಕ್ಕೆ ಬರುತ್ತಿರುವ ಬೆಟ್ಟದ ಶಿಖರನ್ನು ದೇವಿಯು ಕಲ್ಲಿನಂತೆ ಮೊನೆಯಾದ ಬಾಣಗಳಿಂದ ಎಳ್ಳಿನಷ್ಟು ಗಾತ್ರದ ಚೂರುಗಳನ್ನಾಗಿ ಮಾಡಿದಳು ಮತ್ತು ಆ ಜಗನ್ಮಾತೆಯು ಅವನ ಯುದ್ಧಕ್ರಮವನ್ನು ನೋಡಿ ಅವನ ಪ್ರತಿಯೊಂದು ಪ್ರಯತ್ನವನ್ನೂ ನಿಷ್ಫಲವಾಗುವಂತೆ ಮಾಡುತ್ತಾ ನಕ್ಕಳು. ॥೪೨॥

ಅಲ್ಲದೆ ಆಗ ದೇವಿಯ ಸಿಂಹವೂ ಆನೆಯಾಗಿರುವ ಮಹಿಷಾಸುರನ ತಲೆಯ ಮೇಲಕ್ಕೆ ನೆಗೆದು ಹಾರಿ ಕೂತುಕೊಂಡು ತನ್ನ ಉಗುರುಗಳಿಂದ ಸೀಳಿತು. ॥೪೩॥

ಆ ಬಳಿಕ ಮಹಿಷಾಸುರನು ದೇವಿಯ ಸಿಂಹವನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಆನೆಯ ಆಕಾರವನ್ನು ಬಿಟ್ಟು, ಕೋಪವುಳ್ಳವನಾಗಿ ಬಹಳ ಬಲವುಳ್ಳದ್ದಾದ

ತಂ ವೀಕ್ಷ್ಯ ಶರಭಂ ದೇವೀ ಖಡ್ಗೇನ ಚ ರುಷಾನ್ವಿತಾ ।
ಉತ್ತಮಾಂಗೇ ಜಘಾನಾಶು ಸೋಽಪಿ ತಾಂ ಪ್ರಾಹರತ್ತದಾ ॥೪೫॥

ತಯೋಃ ಪರಸ್ಪರಂ ಯುದ್ಧಂ ಬಭೂವಾತಿಭಯಪ್ರದಂ ।
ಮಾಹಿಷಂ ರೂಪಮಾಸ್ಥಾಯ ಶೃಂಗಾಭ್ಯಾಂ ಪ್ರಾಹರತ್ತದಾ ॥೪೬॥

ಪುಚ್ಛಪ್ರಭ್ರಮಣೇನಾಶು ಶೃಂಗಾಘಾತೈರ್ಮಹಾಸುರಃ ।
ತಾಡಯಾಮಾಸ ತನ್ವಂಗೀಂ ಘೋರರೂಪೋ ಭಯಾನಕಃ ॥೪೭॥

ಪುಚ್ಛೇನ ಪರ್ವತಾಂಛೃಂಗೇ ಗೃಹೀತ್ವಾ ಭ್ರಾಮಯನ್ಬಲಾತ್ ।
ಪ್ರೇಷಯಾಮಾಸ ಪಾಪಾತ್ಮಾ ಪ್ರಹಸನ್ಪರಯಾ ಮುದಾ ॥೪೮॥

---

ಕ್ರೂರವಾದ ಎಂಟು ಕಾಲುಗಳುಳ್ಳ ಶರಭವೆಂಬ ಮೃಗದ ಆಕಾರವನ್ನು ಧರಿಸಿದನು. ॥೪೪॥

ದೇವಿಯು ರೋಷದಿಂದ ಕೂಡಿದವಳಾಗಿ ಆ ಶರಭವನ್ನು ನೋಡಿ ಕತ್ತಿಯಿಂದ ಅದರ ತಲೆಯ ಮೇಲೆ ಬೇಗನೆ ಹೊಡೆದಳು. ಅದೂ ಕೂಡ ಆಗ ಅವಳನ್ನು ಹೊಡೆಯಿತು. ॥೪೫॥

ಅವರಿಬ್ಬರಿಗೂ ಬಹಳ ಭಯಂಕರವಾದ ಯುದ್ಧವು ಪರಸ್ಪರವಾಗಿ ನಡೆಯಿತು. ಆಗ ಆ ಮಹಿಷಾಸುರನು ತನ್ನ ನಿಜರೂಪವಾದ ಕೋಣನ ಆಕಾರವನ್ನು ಹೊಂದಿ ಕೊಂಬುಗಳಿಂದ ತಿವಿದನು. ॥೪೬॥

ರೌದ್ರವಾದ ಆಕಾರದಿಂದ ಭಯವನ್ನುಂಟುಮಾಡುವ, ಘೋರವಾದ ನಡೆವಳಿಕೆಯಿಂದಲೂ ಭಯಂಕರನಾದ, ರಾಕ್ಷಸರಲ್ಲಿ ಗಟ್ಟಿಗನಾದ ಆ ಮಹಿಷನು ಬೇಗನೆ ತನ್ನ ಬಾಲವನ್ನು ತಿರುಗಿಸಿ ಹೊಡೆಯುವುದರಿಂದಲೂ ಕೊಂಬುಗಳ ತಿವಿತದ ಏಟುಗಳಿಂದಲೂ ಸಹ ಕೃಶಾಂಗಿಯಾದ ದೇವಿಯನ್ನು ಹೊಡೆದನು. ॥೪೭॥

ಪಾಪಿಷ್ಠನಾದ ಆ ಮಹಿಷಾಸುರನು ತನ್ನ ಕೊಂಬಿನಿಂದ ಪರ್ವತವನ್ನು ಮಾಟ ಕಿತ್ತು ಹಿಡಿದುಕೊಂಡು, ತನ್ನ ಬಾಲದಿಂದ ಅದನ್ನು ಸುತ್ತಿ ತಿರುಗಿಸಿ, ತುಂಬ ಸಂತೋಷದಿಂದ ನಗುತ್ತಾ ತನ್ನ ಶಕ್ತಿಗನುಸಾರವಾಗಿ ದೇವಿಯ ಮೇಲೆ ಅದರಿಂದ ಹೊಡೆದನು. ॥೪೮॥

ತಾಮುವಾಚ ಬಲೋನ್ಮತ್ತಸ್ತಿಷ್ಠ ದೇವಿ ರಣಾಂಗಣೇ ।
ಅದ್ಯಾಹಂ ತ್ವಾಂ ಹನಿಷ್ಯಾಮಿ ರೂಪಯೌವನಭೂಷಿತಾಂ ॥೪೯॥

ಮುಗ್ಧಾSಸಿ ಮದಮತ್ತಾSದ್ಯ ಯನ್ಮಯಾ ಸಹ ಸಂಗರಂ ।
ಕರೋಷಿ ಮೋಹಿತಾSತೀವ ಮೃಷಾ ಬಲವತೀ ಖರಾ ॥೫೦॥

ಹತ್ವಾ ತ್ವಾಂ ನಿಹನಿಷ್ಯಾಮಿ ದೇವಾನ್ಕಪಟಪಂಡಿತಾನ್ ।
ಯೇ ನಾರೀಂ ಪುರತಃ ಕೃತ್ವಾ ಜೇತುಮಿಚ್ಛಂತಿ ಮಾಂ ಶಠಾಃ ॥೫೧॥

॥ ದೇವ್ಯುವಾಚ ॥

ಮಾ ಗರ್ವಂ ಕುರು ಮಂದಾತ್ಮಂಸ್ತಿಷ್ಠ ತಿಷ್ಠ ರಣಾಂಗಣೇ ।
ಕರಿಷ್ಯಾಮಿ ನಿರಾತಂಕಾನ್ ಹತ್ವಾ ತ್ವಾಂ ಸುರಸತ್ತಮಾನ್ ॥೫೨॥

---

ಮಹಿಷಾಸುರನು ಮಿತಿಮೀರಿದ ದೇಹಶಕ್ತಿಯಿಂದ ಹುಚ್ಚನಂತಾಗಿ ಬಹಳ ವಾದ ಸಂತೋಷದಿಂದ ನಗುತ್ತಾ ದೇವಿಯ ಸಂಗಡ ಹೀಗೆ ಹೇಳಿದನು—ಎಲೈ ದೇವಿಯೇ, ನಿಲ್ಲು, ನಿಲ್ಲು ! ರೂಪ, ಯೌವ್ವನಗಳಿಂದ ಅಲಂಕೃತಳಾಗಿರುವ ನಿನ್ನನ್ನು ಈಗಲೇ ನಾನು ಕೊಲ್ಲುವೆನು. ॥೪೯॥

ನೀನು ಮದದಿಂದ ಕೊಬ್ಬಿರುತ್ತೀಯೆ ! ಆದುದರಿಂದ ಬಹಳಮಟ್ಟಿಗೆ ದಡ್ಡಳಾಗಿ ಬರಿಯ ಒರಟುತನದಿಂದ ಬಲವುಳ್ಳವಳೆಂದು ತಿಳಿದುಕೊಂಡು ನೀನು ನನ್ನ ಸಂಗಡ ಈಗ ಯುದ್ಧವನ್ನು ಮಾಡುತ್ತಿದೀಯೆ ! ॥೫೦॥

ಯಾವ ದುಷ್ಟದೇವತೆಗಳು ಸ್ತ್ರೀಯನ್ನು ಮುಂದೆ ಬಿಟ್ಟುಕೊಂಡು ನನ್ನನ್ನು ಜಯಿಸಲು ಇಚ್ಛಿಸುವರೋ, ಆ ರೀತಿಯ ಮೋಸಗಾರಿಕೆಯಲ್ಲಿ ಜಾಣರಾದ ದೇವತೆಗಳನ್ನೂ ನಿನ್ನನ್ನು ಕೊಂದ ಅನಂತರದಲ್ಲಿ ಕೊಲ್ಲುವೆನು. ॥೫೧॥

ದೇವಿಯು ಹೇಳಿದಳು– ಎಲೈ ದಡ್ಡನೇ, ಹೆಮ್ಮೆಪಡಬೇಡ, ರಣರಂಗದಲ್ಲಿ ನಿಲ್ಲು ! ಧೈರ್ಯದಿಂದ ದೃಢವಾಗಿ ನಿಂತುಕೋ ! ನಿನ್ನನ್ನು ಕೊಂದು ದೇವಶ್ರೇಷ್ಠರನ್ನು ಯಾವ ಆತಂಕವೂ ಇಲ್ಲದವರನ್ನಾಗಿ ಮಾಡುವೆನು ! ॥೫೨॥

**ಪೀತ್ವಾದ್ಯ ಮಾಧವೀಂ ಮಿಷ್ಟಾಂ ಘಾತಯಾಮಿ ರಣೇऽಧಮ ।**
**ದೇವಾನಾಂ ದುಃಖದಂ ಪಾಪಂ ಮುನೀನಾಂ ಭಯಕಾರಕಂ ॥೫೩॥**

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ಚಷಕಂ ಹೈಮಂ ಗೃಹೀತ್ವಾ ಸುರಯಾ ಯುತಂ ।**
**ಪಪೌ ಪುನಃ ಪುನಃ ಕ್ರೋಧಾದ್ಧಂತುಕಾಮಾ ಮಹಾಸುರಂ ॥೫೪॥**

**ಪೀತ್ವಾ ದ್ರಾಕ್ಷಾಸವಂ ಮಿಷ್ಟಂ ಶೂಲಮಾದಾಯ ಸತ್ವರಾ ।**
**ದುದ್ರಾವ ದಾನವಂ ದೇವೀ ಹರ್ಷಯನ್ದೇವತಾಗಣಾನ್ ॥೫೫॥**

---

ಎಲೈ ನೀಚನೇ, ಈಗ ನಾನು ನೆರವೇರಿಸಬೇಕಾಗಿರುವ ಕಾರ್ಯಕ್ಕೆ ಹಿತಕರವಾದ ಮದ್ಯವನ್ನು ಕುಡಿದು, ದೇವತೆಗಳಿಗೆ ದುಃಖವನ್ನುಂಟುಮಾಡುತ್ತಿರುವ, ಪಾಪಿಯಾದ ನಿನ್ನನ್ನು ಯುದ್ಧದಲ್ಲಿ ಈಗಲೇ ಕೆತ್ತಿ ಕತ್ತರಿಸಿ ಸೀಳುವೆನು. ಧರ್ಮರಕ್ಷಣೆಗಾಗಿ ಮಹಿಷಾಸುರನನ್ನು ದೇವಿಯೇ ಕೊಲ್ಲಬೇಕಾಗಿದೆ. ಆದರೂ ಕಾಳಿಕಾಪುರಾಣದಲ್ಲಿ ಮಹಿಷಾಸುರನು ಶಿವನ ಅಂಶದಿಂದ ಉಂಟಾದವನೆಂದು ಹೇಳಿರುವುದರಿಂದ, ಅಂಥವನನ್ನು ದೇವಿಯು ಬುದ್ಧಿಪೂರ್ವಕವಾಗಿ ಕೊಲ್ಲುವುದು ಅನುಚಿತವಾಗಿದ್ದ ಕಾರಣ ಅವನನ್ನು ಮದ್ಯಪಾನದಿಂದುಂಟಾದ ಮದಾಂಧತೆಯಿಂದ ಕೊಂದಳೆಂದು ಸೂಚಿಸುವುದಕ್ಕಾಗಿ ದೇವಿಯು ಮದ್ಯಪಾನಮಾಡಿದಳು. ಅಲ್ಲದೆ ಪ್ರಬಲನಾದ ಶತ್ರುವನ್ನು ಕೊಲ್ಲಲು ವೀರಪಾನವು ಅವಶ್ಯಕವಾದುದೆಂದು ಅನೇಕ ಮಹಾಯುದ್ಧಗಳಲ್ಲಿ ವರ್ಣಿಸಿದೆ. ॥೫೩॥

ವ್ಯಾಸಋಷಿಯು ಹೇಳಿದನು---ದೇವಿಯು ಹೀಗೆ ಹೇಳಿ ಮದ್ಯದಿಂದ ತುಂಬಿರುವ ಚಿನ್ನದ ಪಾನಪಾತ್ರೆಯನ್ನು ತೆಗೆದುಕೊಂಡು ಮಹಾಸುರನನ್ನು ಕೊಲ್ಲುವ ಇಚ್ಛೆಯುಳ್ಳವಳಾಗಿ ಕೋಪದಿಂದ ತಿರುಗಿ, ತಿರುಗಿ, ಮದ್ಯವನ್ನು ಪಾನಮಾಡಿದಳು. ಹೆಚ್ಚಾದ ಕ್ರೋಧದ ಆವೇಶವಿಲ್ಲದೆ ಮಹಿಷಾಸುರನಂತಹ ವರಮತ್ತನಾದ ಕಡುಗಲಿಯನ್ನು ಸಂಹಾರಮಾಡುವುದೆಂಬ ಮಹಾಕಾರ್ಯವು ನೆರವೇರುವಂತಿರಲಿಲ್ಲವೆಂದು ಭಾವವು. ॥೫೪॥

ಆ ಬಳಿಕ ದೇವಿಯು ರುಚಿಕರವಾದ ದ್ರಾಕ್ಷಾಮದ್ಯವನ್ನು ಪಾನಮಾಡಿ ಬೇಗನೆ ಶೂಲವನ್ನು ತೆಗೆದುಕೊಂಡು, ದೇವತೆಗಳ ಸಮೂಹವನ್ನು ಸಂತೋಷಪಡಿಸುವವಳಾಗಿ ರಾಕ್ಷಸನಾದ ಮಹಿಷನನ್ನು ಹರಿಸಿಕೊಂಡು ಬೆನ್ನಟ್ಟಿ ಓಡಿದಳು. ॥೫೫॥

ದೇವಾಸ್ತಾಂ ತುಷ್ಟುವುಃ ಪ್ರೇಮ್ಣಾ ಚಕ್ರುಃ ಕುಸುಮವರ್ಷಣಂ ।
ಜಯ ಜೀವೇತಿ ತೇ ಪ್ರೋಚುರ್ದುಂದುಭೀನಾಂ ಚ ನಿಸ್ವನೈಃ ॥೫೬॥

ಋಷಯಃ ಸಿದ್ಧಗಂಧರ್ವಾಃ ಪಿಶಾಚೋರಗಚಾರಣಾಃ ।
ಕಿನ್ನರಾಃ ಪ್ರೇಕ್ಷ್ಯ ಸಂಗ್ರಾಮಂ ಮುದಿತಾ ಗಗನೇ ಸ್ಥಿತಾಃ ॥೫೭॥

ಸೋಽಪಿ ನಾನಾವಿಧಾನ್ದೇಹಾನ್ ಕೃತ್ವಾ ಕೃತ್ವಾ ಪುನಃ ಪುನಃ ।
ಮಾಯಾಮಯಾನ್ ಜಘಾನಾಜೌ ದೇವೀಂ ಕಪಟಪಂಡಿತಃ ॥೫೮॥

ಚಂಡಿಕಾಽಪಿ ಚ ತಂ ಪಾಪಂ ತ್ರಿಶೂಲೇನ ಬಲಾದ್ಧೃದಿ ।
ತಾಡಯಾಮಾಸ ತೀಕ್ಷ್ಣೇನ ಕ್ರೋಧಾದರುಣಲೋಚನಾ ॥೫೯॥

ತಾಡಿತೋಽಸೌ ಪಪಾತೋರ್ವ್ಯಾಂ ಮೂರ್ಚ್ಛಾಮವಾಪ ಮುಹೂರ್ತಕಂ ।
ಪುನರುತ್ಥಾಯ ಚಾಮುಂಡಾಂ ಪದ್ಭ್ಯಾಂ ವೇಗಾದತಾಡಯತ್ ॥೬೦॥

---

ದೇವತೆಗಳು ಆ ದೇವಿಯನ್ನು ಸ್ತೋತ್ರಮಾಡಿದರು. ಪ್ರೀತಿಯಿಂದ ಹೂವಿನ ಮಳೆಯನ್ನು ಕರೆದರು. ನಗಾರಿಗಳ ಧ್ವನಿಯನ್ನು ಮಾಡಿದರು. ಓ ದೇವಿಯೇ, ಜಯಿಸು ! ನಿನ್ನ ಈ ಅವತಾರವು ಯಶಸ್ವಿಯಾಗಲಿ ! ಎಂದು ಪ್ರಾರ್ಥಿಸಿ ಹೇಳಿದರು. ಮತ್ತು ಜಯಘೋಷವನ್ನು ಮಾಡುತ್ತಾ ಪ್ರೋತ್ಸಾಹಿಸುತ್ತಿದ್ದರು ! ॥೫೬॥

ಋಷಿಗಳೂ, ಸಿದ್ಧರೂ, ಗಂಧರ್ವರೂ, ಪಿಶಾಚರು, ನಾಗರು, ಚಾರಣರು, ಕಿನ್ನರರು, ಇವರೆಲ್ಲರೂ ಅಂತರಿಕ್ಷದಲ್ಲಿದ್ದುಕೊಂಡು ಯುದ್ಧವನ್ನು ನೋಡಿ ಆಶ್ಚರ್ಯದಿಂದ ಸಂತೋಷವುಳ್ಳವರಾದರು. ॥೫೭॥

ಮೋಸ ಮಾಡುವುದರಲ್ಲಿ ನಿಪುಣನಾದ, ಆ ಮಹಿಷಾಸುರನು ಕೂಡ ವಂಚನೆಯ ರೀತಿ-ನೀತಿಗಳಿಂದ ಕೂಡಿರುವ ಅನೇಕ ವಿಧವಾದ ಶರೀರಗಳನ್ನು ಆಗಾಗ್ಗೆ ಧರಿಸಿಕೊಂಡು ದೇವಿಯನ್ನು ಯುದ್ಧದಲ್ಲಿ ಬಾರಿಬಾರಿಗೂ ಹೊಡೆಯುತ್ತಿದ್ದನು. ॥೫೮॥

ಆ ಚಂಡಿಕಾದೇವಿಯೂ ಕೂಡ ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿ ಪಾಪಿಷ್ಠನಾದ ಅವನನ್ನು ಮೊನೆಯಾದ ತ್ರಿಶೂಲಾಯುಧದಿಂದ ಎದೆಗೆ ಬಲವಾಗಿ ಹೊಡೆದಳು. ॥೫೯॥

ತ್ರಿಶೂಲದಿಂದ ಹೊಡೆಯಲ್ಪಟ್ಟ ಆ ಮಹಿಷಾಸುರನು ಭೂಮಿಯಲ್ಲಿ ಬಿದ್ದನು. ಮತ್ತು ಒಂದು ಮುಹೂರ್ತದವರೆಗೆ ಮೂರ್ಛೆಯನ್ನು ಹೊಂದಿದನು. ಅನಂತರ

**ವಿನಿಹತ್ಯ ಪದಾಘಾತೈರ್ಜಹಾಸ ಚ ಮುಹುರ್ಮುಹುಃ ।**
**ರುರಾವ ದಾರುಣಂ ಶಬ್ದಂ ದೇವಾನಾಂ ಭಯಕಾರಕಂ ॥೬೧॥**

**ತತೋ ದೇವೀ ಸಹಸ್ರಾರಂ ಸುನಾಭಂ ಚಕ್ರಮುತ್ತಮಂ ।**
**ಕರೇ ಕೃತ್ವಾ ಜಗಾದೋಚ್ಚೈಃ ಸಂಸ್ಥಿತಂ ಮಹಿಷಾಸುರಂ ॥೬೨॥**

**ಪಶ್ಯ ಚಕ್ರಂ ಮದಾಂಧಾದ್ಯ ತವ ಕಂಠನಿಕೃಂತನಂ ।**
**ಕ್ಷಣಮಾತ್ರಂ ಸ್ಥಿರೋ ಭೂತ್ವಾ ಯಮಲೋಕಂ ವ್ರಜಾಧುನಾ ॥೬೩॥**

**ಇತ್ಯುಕ್ತ್ವಾ ದಾರುಣಂ ಚಕ್ರಂ ಮುಮೋಚ ಜಗದಂಬಿಕಾ ।**
**ಶಿರಶ್ಛಿನ್ನಂ ರಥಾಂಗೇನ ದಾನವಸ್ಯ ತದಾ ರಣೇ ॥೬೪॥**

---

ದಲ್ಲಿ ಮೇಲಕ್ಕೆದ್ದು ಆ ಚಾಮುಂಡಿಕಾದೇವಿಯನ್ನು ಎರಡು ಕಾಲುಗಳಿಂದಲೂ ಜೋರಾಗಿ ಒದೆದನು. ॥೬೦॥

ಕಾಲಿನ ಒದೆತಗಳಿಂದ ದೇವಿಯನ್ನು ಹೊಡೆದು ಬಾರಿಬಾರಿಗೂ ಆ ಮಹಿಷಾಸುರನು ದೇವತೆಗಳಿಗೂ ಭಯವನ್ನುಂಟುಮಾಡುವ ಕ್ರೂರವಾದ ಧ್ವನಿಯಿಂದ ಗರ್ಜಿಸಿದನು. ॥೬೧॥

ಅನಂತರದಲ್ಲಿ ದೇವಿಯು ಗಟ್ಟಿಯಾದ ಮಧ್ಯಭಾಗವುಳ್ಳದ್ದಾದ, ಸಾವಿರ ಅಲಗುಗಳಿಂದ ಕೂಡಿದ, ಶ್ರೇಷ್ಠವಾದ ಚಕ್ರಾಯುಧವನ್ನು ಕೈಯಲ್ಲಿ ತೆಗೆದುಕೊಂಡು ಯುದ್ಧಕ್ಕೆ ಸಿದ್ಧನಾಗಿ ನಿಂತಿರುವ ಮಹಿಷಾಸುರನನ್ನು ಕುರಿತು ಗಟ್ಟಿಯಾಗಿ ಹೀಗೆ ಹೇಳಿದಳು ॥೬೨॥

ಎಲೈ ಮದದಿಂದ ಕೊಬ್ಬಿ ಕುರುಡನಂತಿರುವ ಮಹಿಷನೇ, ನಿನ್ನ ಕುತ್ತಿಗೆಯನ್ನು ಕತ್ತರಿಸುವ ಈ ಚಕ್ರವನ್ನು ನೋಡು. ಒಂದು ಕ್ಷಣದವರೆಗೂ ಸ್ಥಿರವಾಗಿ ನಿಂತು ಯುದ್ಧವನ್ನು ಮಾಡು. ಈಗಲೇ ಯಮಲೋಕವನ್ನು ಪಡೆಯುವೆ! ॥೬೩॥

ಜಗನ್ಮಾತೆಯು ಹೀಗೆ ಹೇಳಿ ಕ್ರೂರವಾದ ಚಕ್ರವನ್ನು ಪ್ರಯೋಗಿಸಿ ಬಿಟ್ಟಳು. ಆಗ ಯುದ್ಧದಲ್ಲಿ ಚಕ್ರದಿಂದ ಆ ರಾಕ್ಷಸನಾದ ಮಹಿಷಾಸುರನ ತಲೆಯು ಕತ್ತರಿಸಲ್ಪಟ್ಟಿತು. ॥೬೪॥

ಸುಸ್ರಾವ ರುಧಿರಂ ಚೋಷ್ಣಂ ಕಂಠನಾಲಾದ್ಗಿರೇರ್ಯಥಾ ।
ಗೈರಿಕಾದ್ಯರುಣಂ ಪ್ರೌಢಂ ಪ್ರವಾಹಮಿವ ನೈರ್ಝರಂ ॥೬೫॥

ಕಬಂಧಸ್ತಸ್ಯ ದೈತ್ಯಸ್ಯ ಭ್ರಮನ್ವೈ ಪತಿತಃ ಕ್ಷಿತೌ ।
ಜಯಶಬ್ದಶ್ಚ ದೇವಾನಾಂ ಬಭೂವ ಸುಖವರ್ಧನಃ ॥೬೬॥

ಸಿಂಹಸ್ತ್ವತಿಬಲಸ್ತತ್ರ ಪಲಾಯನಪರಾನಥ ।
ದಾನವಾನ್ಭಕ್ಷಯಾಮಾಸ ಕ್ಷುಧಾರ್ತ ಇವ ಸಂಗರೇ ॥೬೭॥

ಮೃತೇ ಚ ಮಹಿಷೇ ಕ್ರೂರೇ ದಾನವಾ ಭಯಪೀಡಿತಾಃ ।
ಮೃತಶೇಷಾಶ್ಚ ಯೇ ಕೇಚಿತ್ಪಾತಾಲಂ ತೇ ಯಯುರ್ನೃಪ ॥೬೮॥

---

ಬೆಟ್ಟದಿಂದ ಗೈರಿಕಾದಿ ಧಾತುಗಳ ನಾನಾ ಬಣ್ಣಗಳಿಂದ ಕೂಡಿದ ಬಲವಾದ ತೊರೆಯು ಹೊರಕ್ಕೆ ಬರುವಂತೆ ಆ ಮಹಿಷಾಸುರನ ಕುತ್ತಿಗೆಯಿಂದ ಬಿಸಿಯಾದ ರಕ್ತದ ಪ್ರವಾಹವು ಹೊರಚಿಮ್ಮಿತು. ॥೬೫॥

ಆದರೂ ಆ ರಾಕ್ಷಸನ ಮುಂಡವು ಮಾತ್ರ ಮುಂಚಿನ ವೇಗದ ಪ್ರಭಾವದಿಂದ ಸ್ವಲ್ಪ ಹೊತ್ತಿನವರೆಗೆ ಸುತ್ತುತ್ತಾ ಇದ್ದು ಆಮೇಲೆ ಭೂಮಿಯಲ್ಲಿ ಬಿದ್ದಿತು. ದೇವತೆಗಳ ಜಯಕಾರ ಧ್ವನಿಯು ಕಡೆಗೆ ಧರ್ಮಕ್ಕೇ ಜಯವಾಗುವುದೆಂಬ ಭಾವವನ್ನು ಸೂಚಿಸುತ್ತಾ, ಕಿವಿಗೆ ಇಂಪಾಗಿ ಬಹಳಮಟ್ಟಿಗೆ ಜನರ ಸುಖವನ್ನು ಹೆಚ್ಚಿಸುವಂತಾಯಿತು. ॥೬೬॥

ಆ ಯುದ್ಧರಂಗದಲ್ಲಿ ಮಹಿಷಾಸುರನು ಸತ್ತಮೇಲೆ, ಬಹಳ ಬಲವುಳ್ಳ ದೇವಿಯ ವಾಹನವಾದ ಸಿಹ್ಮವೂ ಶ್ರಮದ ಹಸಿವಿನಿಂದ ಬಳಲಿತ್ತೋ ಎಂಬಂತೆ ತೋರುತ್ತಾ, ಹೆದರಿ ಓಡಿಹೋಗಲು ಹವಣಿಸುತ್ತಿದ್ದ ರಾಕ್ಷಸರನ್ನು ತಿಂದಿತು. ॥೬೭॥

ಈ ರೀತಿಯಲ್ಲಿ ಕ್ರೂರನಾದ ಮಹಿಷಾಸುರನು ಸತ್ತಮೇಲೆ ಅವನ ಕಡೆಯ ರಾಕ್ಷಸರಲ್ಲಿ ಸತ್ತವರಲ್ಲದೆ ಉಳಿದ ರಾಕ್ಷಸರು ಕೆಲವರು ಮಾತ್ರ ಭಯದಿಂದ ಕೂಡಿದವರಾಗಿ ಓಡಿಹೋಗಿ ಪಾತಾಳಲೋಕವನ್ನು ಸೇರಿದರು. ॥೬೮॥

ಪಾತಾಳಕ್ಕೆ ಓಡಿಹೋಗುತ್ತಿದ್ದ ರಾಕ್ಷಸರನ್ನು ದೇವಿಯು ಬಿಟ್ಟುಬಿಟ್ಟಳು. ಏಕೆಂದರೆ ರಾಕ್ಷಸರು ಭೂಲೋಕಕ್ಕೆ ಬಂದು ಸಾಧುಗಳನ್ನೂ ಧಾರ್ಮಿಕರನ್ನೂ ಹಿಂಸಿಸಿ ಧರ್ಮಕ್ಕೆ ಹಾನಿಯನ್ನುಂಟುಮಾಡಿದಾಗ ಮಾತ್ರ ಅವರನ್ನು ನಿಗ್ರಹಿಸ

ಆನಂದಂ ಪರಮಂ ಜಗ್ಮುರ್ದೇವಾಸ್ತಸ್ಮಿನ್ನಿಪಾತಿತೇ ।
ಮುನಯೋ ಮಾನವಾಶ್ಚೈವ ಯೇ ಚಾನ್ಯೇ ಸಾಧವಃ ಕ್ಷಿತೌ ॥೭೯॥

ಚಂಡಿಕಾsಪಿ ರಣಂ ತ್ಯಕ್ತ್ವಾ ಶುಭೇ ದೇಶೇsಥ ಸಂಸ್ಥಿತಾ ।
ದೇವಾಸ್ತತ್ರಾssಯಯುಃ ಶೀಘ್ರಂ ಸ್ತೋತುಕಾಮಾಃ ಸುಖಪ್ರದಾಂ ॥೭೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಅಷ್ಟಾದಶೋsಧ್ಯಾಯಃ.

---

ಬೇಕಾದುದು ದೇವಿಯ ಕರ್ತವ್ಯವಾದ ಉದ್ದೇಶವಾಗಿದೆ ಎಂದು ಭಾವವು. ಈ ಅಭಿಪ್ರಾಯವನ್ನು ದೇವಿಯೇ ರಾಕ್ಷಸರನ್ನು ಕುರಿತು ಅನೇಕಾವೃತ್ತಿ ಹೇಳಿದಾಳೆ.

ಭೂಮಿಯಲ್ಲಿರುವ ಸಾಧುಗಳಾದ ಮುನಿಗಳೂ, ಮನುಷ್ಯರೂ ಮತ್ತು ದೇವತೆಗಳೂ ಕೂಡ ಆ ಮಹಿಷಾಸುರನು ಮೃತನಾದ ಬಳಿಕ ಉತ್ಕೃಷ್ಟವಾದ ಧರ್ಮಜಯದಿಂದುಂಟಾದ ಆನಂದವನ್ನು ಹೊಂದಿದರು. ||೭೯||

ಮಹಿಷಾಸುರನ ವಧೆಯ ಅನಂತರದಲ್ಲಿ ಚಂಡಿಕಾದೇವಿಯೂ ಕೂಡ ಆ ಯುದ್ಧರಂಗವನ್ನು ಬಿಟ್ಟು ಮಂಗಳಕರವಾದ ಒಂದು ಸ್ಥಳದಲ್ಲಿ ಬಂದು ನಿಂತಳು. ಅಲ್ಲಿಗೆ ದೇವತೆಗಳೂ ಸುಖವನ್ನುಂಟುಮಾಡುವ ದೇವಿಯನ್ನು ಸ್ತೋತ್ರಮಾಡುವುದಕ್ಕಾಗಿ ಬೇಗನೆ ಬಂದರು. ||೭೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

|| ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಅಥ ಪ್ರಮುದಿತಾಃ ಸರ್ವೇ ದೇವಾ ಇಂದ್ರಪುರೋಗಮಾಃ ।**
**ಮಹಿಷಂ ನಿಹತಂ ದೃಷ್ಟ್ವಾ ತುಷ್ಟುವುರ್ಜಗದಂಬಿಕಾಂ ॥೧॥**

|| ದೇವಾ ಊಚುಃ ||

**ಬ್ರಹ್ಮಾ ಸೃಜತ್ಯವತಿ ವಿಷ್ಣುರಿದಂ ಮಹೇಶಃ**
**ಶಕ್ತ್ಯಾ ತವೈವ ಹರತೇ ನನು ಚಾಂತಕಾಲೇ ।**
**ಈಶಾ ನ ತೇಽಪಿ ಚ ಭವಂತಿ ತಯಾ ವಿಹೀನಾ**
**ಸ್ತಸ್ಮಾತ್ತ್ವಮೇವ ಜಗತಃ ಸ್ಥಿತಿನಾಶಕರ್ತ್ರೀ ॥೨॥**

---

ವ್ಯಾಸಮುನಿಯು ಹೇಳಿದನು— ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಮಹಿಷಾಸುರನು ಸಂಹೃತನಾದುದನ್ನು ನೋಡಿದೊಡನೆ ಎಲ್ಲರೂ ಸಂತೋಷವುಳ್ಳವರಾಗಿ ಜಗನ್ಮಾತೆಯಾದ ದೇವಿಯನ್ನು ಹೀಗೆ ಸ್ತೋತ್ರಮಾಡಿದರು. ||೧||

ಓ ದೇವಿಯೇ, ಬ್ರಹ್ಮನು ನಿನ್ನಿಂದ ಕೊಡಲ್ಪಟ್ಟ ಶಕ್ತಿಯಿಂದ ಈ ಪ್ರಪಂಚದ ಸೃಷ್ಟಿಕಾರ್ಯವನ್ನು ಮಾಡುವನು; ವಿಷ್ಣುವು ಸೃಷ್ಟಿಯಾದುದನ್ನು ನೀನು ಅನುಗ್ರಹಿಸಿದ ಸಾಮರ್ಥ್ಯದಿಂದ ರಕ್ಷಿಸುವನು. ಮಹೇಶ್ವರನು ಪ್ರಳಯ ಕಾಲದಲ್ಲಿ ನಿನ್ನ ಶಕ್ತಿಯ ಅಂಶದಿಂದಲೇ, ಸಂಹಾರವನ್ನೂ ಮಾಡುವನು. ನಿನ್ನ ಶಕ್ತಿಯ ಸಹಾಯವು ಇಲ್ಲದಿದ್ದರೆ, ಬ್ರಹ್ಮ, ವಿಷ್ಣು, ಮಹೇಶ್ವರರೂ ತಮ್ಮ ತಮ್ಮ ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಕೆಲಸಗಳನ್ನು ಮಾಡಲು ಸಮರ್ಥರಾಗುವುದಿಲ್ಲ. ನಿನ್ನ ಶಕ್ತಿಯಿದ್ದರೆ ಅವರು ಶಕ್ತರು. ಇಲ್ಲದಿದ್ದರೆ ಅವರು ಶಕ್ತರಲ್ಲವಾದ್ದರಿಂದ ಬ್ರಹ್ಮ

**ಕೀರ್ತಿರ್ಮತಿಃ ಸ್ಮೃತಿಗತೀ ಕರುಣಾ ದಯಾ ತ್ವಂ**
**ಶ್ರದ್ಧಾ ಧೃತಿಶ್ಚ ವಸುಧಾ ಕಮಲಾ ಜಯಾ ಚ ।**
**ಪುಷ್ಟಿಃ ಕಲಾಽಥ ವಿಜಯಾ ಗಿರಿಜಾಽಜಪಾ ತ್ವಂ**
**ತುಷ್ಟಿಃ ಪ್ರಮಾ ತ್ವಮಸಿ ಬುದ್ಧಿರುಮಾ ರಮಾ ಚ** ॥೩॥

---

ವಿಷ್ಣು, ಮಹೇಶ್ವರರಿಗೂ ಅವರವರ ಕಾರ್ಯಗಳನ್ನು ಮಾಡುವ ಸಾಮರ್ಥ್ಯವನ್ನು ಕೊಡುವ ನೀನೇ ನಿಜವಾಗಿ ಜಗತ್ತನ್ನು ಸೃಷ್ಟಿಮಾಡಿ ರಕ್ಷಿಸಿ ಅದರ ಕಾರ್ಯವು ಆದಮೇಲೆ ಅದರ ನಾಶವನ್ನು ಸಹ ಮಾಡುವವಳು ; ಆದುದರಿಂದ ನೀನು ಸರ್ವೇಶ್ವರಿಯಾಗಿರುವವಳು. ಈ ಅಂಶವನ್ನು ಪಂಚೋಪನಿಷತ್ತಿನಲ್ಲೂ (ಪುಟ 72) ದೇವೀ ಮಹಾತ್ಮ್ಯದಲ್ಲೂ, ಸೂತಸಂಹಿತೆಯಲ್ಲೂ ವಿವರಿಸಿದೆ. ॥೨॥

ಬ್ರಹ್ಮಾ, ವಿಷ್ಣು, ಮಹೇಶ್ವರರಿಗೂ, ಕಾರಣಳಾಗಿರುವುದರಿಂದ ಎಲ್ಲಕ್ಕೂ, ದೇವಿಯೇ ಮಹಾಕಾರಣಳಾಗಿರುತ್ತಾಳೆ. ಆ ದೇವಿಯನ್ನು ಉಪಾಸನೆ ಮಾಡುವವರು ಎಲ್ಲರೂ ಕಾರಣ ಸ್ವರೂಪವನ್ನು ತಿಳಿಯಲು ಅಶಕ್ತರಾಗಿ ಕಾರ್ಯರೂಪವನ್ನು ತಿಳಿದು ಸೇವಿಸುವರು. ಆ ರೂಪಗಳು ಕಾರಣದಿಂದ ಬೇರೆಯಾಗಿಲ್ಲವಾದಕಾರಣ ಉಪಾಸಕರಿಗೆ ಸೌಕರ್ಯಕ್ಕಾಗಿ ಆ ಮಹಾದೇವಿಯ ರೂಪಗಳನ್ನು ಇಲ್ಲಿಯೂ ಸ್ವಲ್ಪಮಟ್ಟಿಗೆ ವಿವರಿಸಲಾಗಿದೆ. ಓ ದೇವಿಯೇ, ನೀನು ಕೀರ್ತಿ, ಮನನ ಶಕ್ತಿ, ಸ್ಮರಣಶಕ್ತಿ, ಗಮನಶಕ್ತಿ, ಕೃಪಾ, ದಯಾ (ಪ್ರಾಣಿಗಳ ವಿಪತ್ತನ್ನು ಎದುರಿಸಿ ಅದನ್ನು ಪರಿಹರಿಸಲಿಚ್ಛೆಪಡುವಿಕೆ) ಈ ಸ್ವರೂಪಳಾಗಿರುವೆ. ಮತ್ತು ನೀನು, ಒಳ್ಳೆಯ ಕೆಲಸ ಮಾಡುವುದರಲ್ಲಿರುವ ಆದರ ಬುದ್ಧಿಯೂ (ಶ್ರದ್ಧಾ), ಬುದ್ಧಿಗತವಾದ ಧಾರಣಶಕ್ತಿಯೂ (ಧೈರ್ಯವೂ), ಈ ಸಂಪತ್ತುಳ್ಳ ಭೂಮಿಯೂ, ಲಕ್ಷ್ಮಿಯೂ, ಜಯವೂ, ಪುಷ್ಟಿಯೂ, ಕಾನ್ತಿಯೂ, ವಿಜಯಾ ಎಂಬ ದೇವತೆಯೂ, (ಗಿರಿಜಾ) ಪಾರ್ವತಿಯೂ (ರುದ್ರಶಕ್ತಿಯೂ), ಅಜಪಾ ಎಂದರೆ " ಸೋಽಹಂ ಹಂಸಃ " ಎಂಬ ಮಂತ್ರವಿಶೇಷವೂ, ಸಂತೋಷವೂ, ಪ್ರಮಾಣಜನ್ಯವಾದ ನಿಶ್ಚಯ ಜ್ಞಾನವೂ (ಬುದ್ಧಿ), ನಿಶ್ಚಯಾತ್ಮಕವಾದ ಜ್ಞಾನವೂ, ಶಿವಶಕ್ತಿಯೂ (ಉಮಾ), ಲಕ್ಷ್ಮಿಯೂ (ವಿಷ್ಣುಶಕ್ತಿಯೂ), ಸಹ ಇವೆಲ್ಲವೂ ನಿನ್ನ ಶಕ್ತಿಯ ಅಂಶಗಳಾದುದರಿಂದ ನೀನೆ ಆಗಿರುತ್ತೀಯೆ. ಇದರಿಂದ ಸರ್ವಕಾರ್ಯರೂಪಳಾಗಿರುವ ನಿನಗೆ ಕಾರಣಾಭಿನ್ನವಾದ ಸ್ವರೂಪವೂ ಇರುವುದರಿಂದ ಸರ್ವಾತ್ಮಕತ್ವವು ಸಿದ್ಧವಾಗಿರುವುದಲ್ಲದೆ ಸರ್ವಾಧಿಕತ್ವವೂ ಇರುವುದೆಂದು ತಾತ್ಪರ್ಯವು. ॥೩॥

ವಿದ್ಯಾ ಕ್ಷಮಾ ಜಗತಿ ಕಾಂತಿರಸೀಹ ಮೇಧಾ
ಸರ್ವಂ ತ್ವಮೇವ ವಿದಿತಾ ಭುವನತ್ರಯೇಽಸ್ಮಿನ್ ।
ಆಭಿರ್ವಿನಾ ತವ ತು ಶಕ್ತಿಭಿರಾಶು ಕರ್ತುಂ
ಕೋ ವಾ ಕ್ಷಮಃ ಸಕಲಲೋಕನಿವಾಸಭೂಮೇ ॥೪॥

ತ್ವಂ ಧಾರಣಾ ನನು ನ ಚೇದಸಿ ಕೂರ್ಮನಾಗೌ
ಧರ್ತುಂ ಕ್ಷಮೌ ಕಥಮಿಲಾಮಪಿ ತೌ ಭವೇತಾಂ ।
ಪೃಥ್ವೀ ನ ಚೇತ್ತ್ವಮಸಿ ವಾ ಗಗನೇ ಕಥಂ ಸ್ಥಾ
ಸ್ಯತ್ಯೇತದಂಬ ನಿಖಿಲಂ ಬಹುಭಾರಯುಕ್ತಂ ॥೫॥

---

ಓ ದೇವಿಯೇ! ಇಷ್ಟೇ ಅಲ್ಲದೆ ಈ ಮೂರು ಲೋಕಗಳಲ್ಲಿ ನೀನು ಜ್ಞಾನ ಶಕ್ತಿ, ಸಹನಶಕ್ತಿ, ಕಾನ್ತಿ, ಮೇಧಾಶಕ್ತಿ ಎಂಬ ಶಕ್ತಿಸ್ವರೂಪಳಾಗಿ ಸರ್ವಾತ್ಮಕ ಳಾಗಿ, ಪ್ರಸಿದ್ಧಿಯನ್ನು ಹೊಂದಿರುತ್ತೀಯೆ. ಸರ್ವ ಪ್ರಪಂಚಗಳಿಗೂ, ಅಧಿಷ್ಠಾನ ವಾಗಿ ಆಧಾರವಾಗಿ ವಾಸಸ್ಥಾನವಾಗಿರುವ ಓ ದೇವಿಯೇ! ನಿನ್ನ ಈ ಶಕ್ತಿಗಳ ಸಹಾಯವಿಲ್ಲದೆ ಯಾವ ಕೆಲಸವನ್ನಾದರೂ ಯಾವನು ತಾನೆ ಬೇಗನೆ ಮಾಡಲು ಸಮರ್ಥನಾದಾನು? ಪೂರ್ವಶ್ಲೋಕದಲ್ಲಿಯೂ, ಈ ಶ್ಲೋಕದಲ್ಲಿಯೂ, ಹೇಳಿರು ವಂತೆ ದೇವಿಯ ವಿಭೂತಿಗಳ ಸ್ವರೂಪವನ್ನೂ, ಈ ರೂಪವಾಗಿ ಮೊದಲಿನಲ್ಲಿಯೂ ಹೇಳಿರುವುದು. ಉಪಾಸಕರಿಗೆ ದೇವಿಯ ಸ್ವರೂಪವು ಇಂಥಾದ್ದೆಂದು ತಿಳಿಯುವು ದಕ್ಕೂ ಮತ್ತು ಮೂರು ಲೋಕಗಳಲ್ಲಿನ ಸಕಲ ವಿಧವಾದ ವ್ಯವಹಾರವೂ ದೇವಿಯ ಮಹಿಮೆಯ ಸಂಬಂಧವಿಲ್ಲದೆ ನಡೆಯಲಾಗುವುದಿಲ್ಲವೆಂದು ಸರ್ವರಿಗೂ ಗೊತ್ತಾಗು ವುದಕ್ಕೂ ಸಹ ಪುನಃಪುನಃ ಹೇಳಿದೆ. ॥೪॥

ಇದುವರೆಗೆ ಸರ್ವಕಾರಣವಾದ ದೇವಿಯ (ಸರ್ವಾಧಿಷ್ಠಾನ) ರೂಪವನ್ನು ವಿಸ್ತಾರವಾಗಿ ಹೇಳಿ, ಈಗ ಧಾರಣಾ ಎಂಬ ದೇವಿಯ ಶಕ್ತಿಸ್ವರೂಪವನ್ನು ಹೇಳು ವರು. ಓ ದೇವಿಯೇ, ನೀನು ಧಾರಣಾ ಎಂಬ ಶಕ್ತಿರೂಪಳಾಗಿಯೂ ಇರು ತ್ತೀಯೆ. ಇಲ್ಲದಿದ್ದರೆ ಭೂಮಿಯನ್ನು ಧರಿಸಿರುವ ಕೂರ್ಮ, ಆದಿಶೇಷ ಇವರಿಗೆ ಆ ಶಕ್ತಿಯು ಎಲ್ಲಿಂದ ಬಂದೀತು? ಮತ್ತು ಸಮಸ್ತ ಪ್ರಾಣಿಗಳ ಭಾರವನ್ನು ವಹಿಸಿ ರುವ ಭೂಮಿಗೆ ನೀನು ಧಾರಣಾಶಕ್ತಿರೂಪದಿಂದ ಸಹಾಯ ಮಾಡುತ್ತಿಲ್ಲದಿದ್ದರೆ ಇವೆಲ್ಲವೂ ಅಂತರಿಕ್ಷದಲ್ಲಿ ಹೇಗೆ ನಿಂತಿರಬಲ್ಲುದು? ಆದುದರಿಂದ ನೀನು ಸರ್ವಾ ಧಾರ ಶಕ್ತಿ ಸ್ವರೂಪಳಾಗಿರುತ್ತೀಯೆ. ಪಂಚೋಪನಿಷತ್ತು ಪುಟ ೭೨. ನೋಡಿ. ॥೫॥

ಯೇ ವಾ ಸ್ತುವಂತಿ ಮನುಜಾ ಅಮರಾನ್ವಿಮೂಢಾ
ಮಾಯಾಗುಣೈಸ್ತವ ಚತುರ್ಮುಖವಿಷ್ಣುರುದ್ರಾನ್ ।
ಶುಭ್ರಾಂಶುವಹ್ನಿಯಮವಾಯುಗಣೇಶಮುಖ್ಯಾನ್
ಕಿಂ ತ್ವಾಮೃತೇ ಜನನಿ ತೇ ಪ್ರಭವಂತಿ ಕಾರ್ಯೇ ॥೬॥

ಯೇ ಜುಹ್ವತಿ ಪ್ರವಿತತೇಽಲ್ಪಧಿಯೋಽಂಬ ಯಜ್ಞೇ
ವಹ್ನೌ ಸುರಾನ್ಸಮಧಿಕೃತ್ಯ ಹವಿಃ ಸಮೃದ್ಧಂ ।
ಸ್ವಾಹಾ ನ ಚೇತ್ತ್ವಮಸಿ ತೇ ಕಥಮಾಪುರದ್ಧಾ
ತ್ವಾಮೇವ ಕಿಂ ನ ಹಿ ಯಜಂತಿ ತತೋ ಹಿ ಮೂಢಾಃ ॥೭॥

---

ಲೋಕದಲ್ಲಿ ಯಾವ ಮನುಷ್ಯರು ನಿನ್ನ ಮಾಯಾಗುಣಗಳಿಂದ ಮೋಹಿತರಾಗಿ ಬ್ರಹ್ಮ, ವಿಷ್ಣು, ರುದ್ರ, ಇವರೇ ಮೊದಲಾದ ಮುಖ್ಯ ಮುಖ್ಯರಾದ ದೇವತೆಗಳನ್ನೂ ಮತ್ತು ಹಾಗೆಯೇ ಚಂದ್ರ, ಅಗ್ನಿ, ಯಮ, ವಾಯು, ಗಣೇಶ, ಇವರೇ ಮುಂತಾದ ಇತರ ದೇವತೆಗಳನ್ನೂ ಸೇವಿಸುವರೋ ಅವರು ಬುದ್ಧಿಯಿಲ್ಲದವರು. ಏಕೆಂದರೆ ಆ ದೇವತೆಗಳು ನಿನ್ನ ಅನುಗ್ರಹದಿಂದಲೇ ತಮ್ಮ ಭಕ್ತರನ್ನು ಕಾಪಾಡಬಲ್ಲವರಾಗುತ್ತಾರೆ. ಆದುದರಿಂದ ಆ ಭಕ್ತರು ನಿನ್ನ ಸಹಾಯವಿಲ್ಲದೆ ತಮ್ಮ ಇಷ್ಟ ಕಾರ್ಯದಲ್ಲಿ ಸಿದ್ಧಿಯನ್ನು ಹೇಗೆ ಪಡೆದಾರು ? ತಾವು ಪೂಜಿಸುವ ದೇವತೆಗಳಿಗೆ ತಮ್ಮ ಭಕ್ತರ ತಪ್ಪನ್ನು ಕ್ಷಮಿಸಿ ಕಾಪಾಡುವುದೇ ಮುಂತಾದ ಸಾಮರ್ಥ್ಯವನ್ನು ಕೊಡುವ ನೀನು ಇರುವಲ್ಲಿ ಸಾಕ್ಷಾತ್ತಾಗಿ ನಿನ್ನ ಪೂಜೆಯೇ ಮೊದಲಾದುದನ್ನು ಬಿಡುವುದು ಜಾಣತನವಾಗಿರುವುದಿಲ್ಲವು. ಮತ್ತು ಅವರು ಶ್ರೇಯಸ್ಸನ್ನು ಸಂಪೂರ್ಣವಾಗಿಯೂ, ನೇರವಾಗಿಯೂ, ಶೀಘ್ರವಾಗಿಯೂ ಹೊಂದಲಾರರು. ಈ ಅಂಶವನ್ನು ಸಂಚೋಪ ನಿಷತ್ತಿನಲ್ಲಿ ಪುಟ ೭೩. "ಅಹಂ ರುದ್ರೇಭಿಃ" ಎಂದು ಮುಂತಾದ ಶ್ರುತಿಗಳಲ್ಲಿಯೂ ವಿವರಿಸಿದೆ. ಅಲ್ಲದೆ ಉಮಾ ಸಂಹಿತೆಯಲ್ಲಿಯೂ ಈ ವಿಷಯವನ್ನು— "ಯೇ ನ ಸ್ತುವಂತಿ ದೇವೇಶೀಂ ಸರ್ವಕಾರಣಕಾರಣಾಂ । ಮಾಯಾಗುಣೈರ್ಮೋಹಿತಾಃ ಸ್ಯುಃ ಹತಭಾಗ್ಯಾ ನ ಸಂಶಯಃ ॥" ಎಂದೂ ನಿರೂಪಿಸಿದೆ. ॥೬॥

ಓ ದೇವಿಯೇ, ಹೀಗೆಯೇ ವೈದಿಕವಾದ ಶ್ರೌತಕರ್ಮಗಳನ್ನು ಆಚರಿಸುತ್ತಿರುವ ಶ್ರೋತ್ರಿಯರೂ ಮೋಸಹೋಗಿರುತ್ತಾರೆ. ಹೇಗೆಂದರೆ :—ಯಜ್ಞದಲ್ಲಿ ದೇವತೆಗಳನ್ನು ಉದ್ದೇಶಮಾಡಿಕೊಂಡು ಬಹಳಮಟ್ಟಿನ ಹವಿಸ್ಸನ್ನು ಹೋಮ ಮಾಡುವರು. ಆದರೆ ಆ ಅಗ್ನಿಗೆ ಇರುವ ಇತರ ದೇವತೆಗಳ ಹವಿಸ್ಸನ್ನು ತೆಗೆದು

**ಭೋಗಪ್ರದಾಽಸಿ ಭವತೀಹ ಚರಾಚರಾಣಾಂ**
**ಸ್ವಾಂಶೈರ್ದದಾಸಿ ಖಲು ಜೀವನಮೇವ ನಿತ್ಯಂ ।**
**ಸ್ವೀಯಾನ್ಸುರಾನ್ ಜನನಿ ಪೋಷಯಸೀಹ ಯದ್ವ**
**ತ್ತದ್ವತ್ಪರಾನಪಿ ಚ ಪಾಲಯಸೀತಿ ಹೇತೋಃ ॥೮॥**

---

ಕೊಂಡು ಹೋಗಿ ಅವರವರಿಗೆ ತಪ್ಪದೆ ತಲಪಿಸುವಂತೆ ಮಾಡುವ ಸ್ವಾಹಾ ಎಂಬ ಶಕ್ತಿಯು ನೀನೇ ಆಗಿರುತ್ತೀಯೆ. ಅಗ್ನಿಮೂಲಕವಲ್ಲದೆ ಅವರಿಗೆ ಬೇರೆ ವಿಧದಿಂದ ಹವಿಸ್ಸು ತಲಪಲು ಅವಕಾಶವಿಲ್ಲವಾದ ಕಾರಣದಿಂದ ದೇವತೆಗಳಿಗೆ ತೃಪ್ತಿಯೂ ನಿನ್ನಿಂದಲೇ ಉಂಟಾಗಬೇಕಾಯಿತು. ಸಾಕ್ಷಾತ್ತಾಗಿ ನಿನ್ನನ್ನೇ ಪೂಜಿಸದೆ ನಿನ್ನ ಸಹಾಯದಿಂದ ಶಕ್ತರಾಗುವ ದೇವತೆಗಳನ್ನು ಕುರಿತು ಯಜ್ಞ ಮಾಡುವವರ ಬುದ್ಧಿವಂತಿಕೆಯು ಉತ್ತಮವಾಗಿರುವುದಿಲ್ಲವಾದ್ದರಿಂದ ಅವರೂ ದಡ್ಡರಾಗಿರುವರು. ಈ ಅಂಶವನ್ನು ಬ್ರಹ್ಮಾಂಡಪುರಾಣದಲ್ಲಿರುವ ಲಲಿತೋಪಾಖ್ಯಾನದಲ್ಲಿ “ ಅಶ್ರುತಾಸಃ ” ಎಂದು ಮೊದಲಾಗುವ ಪದ್ಯದಲ್ಲೂ,' ಮುಂಡಕೋಪನಿಷತ್ತಿನಲ್ಲಿ “ ಪ್ಲವಾಹ್ಯೇತೇ ಅದೃಢಾ ” ಎಂದು ಮೊದಲಾಗುವ ಮಂತ್ರದಲ್ಲೂ ವಿವರಿಸಿದೆ. ॥೭॥

ಓ ದೇವಿಯೇ, ಸ್ಥಾವರ, ಜಂಗಮರೂಪವಾದ ಸಕಲ ಪ್ರಾಣಿಗಳಿಗೂ ಅವರವರ ಪ್ರಾರಬ್ಧಕರ್ಮಾನುಸಾರವಾಗಿ ಸುಖದುಃಖಗಳ ಭೋಗವನ್ನು ಕೊಡುವವಳೂ ನೀನೇ ಆಗಿರುತ್ತೀಯೆ. ಸಾಂಖ್ಯ ಮತಾನುಸಾರವಾಗಿ ಪ್ರಕೃತಿಯೂ, ವಿಕೃತಿಯೂ, ಪ್ರಕೃತಿವಿಕೃತಿಯೂ ಆಗಿರುವ ಮಹತ್, ಅಹಂಕಾರ, ಪಂಚಮಹಾಭೂತತನ್ಮಾತ್ರೆಗಳೂ, ಏಕಾದಶೇಂದ್ರಿಯಗಳೂ ಪಂಚಪ್ರಾಣವಾಯುಗಳೂ ಎಲ್ಲವೂ ಒಟ್ಟಾಗಿ ಈ ಇಪ್ಪತ್ತುಮೂರು ತತ್ವಗಳೂ ನೀನೇ ಆಗಿರುವುದರಿಂದ ಎಲ್ಲ ಪ್ರಾಣಿಗಳಿಗೂ ಭೋಗಪಡುವ ಶಕ್ತಿಯೂ ನೀನೇ ಆಗಿರುವುದಲ್ಲದೆ ಭೋಗ್ಯವಸ್ತು ರೂಪಳೂ ಆಗಿರುತ್ತೀಯೆ. ಆದರೆ ನಿನ್ನ ಅಂಶದಿಂದ ಪ್ರಾಣಿಗಳಿಗೆ ಭೋಗವು ಉಂಟಾಗುವುದು. ಮತ್ತು ನೀನು ದೇವತೆಗಳನ್ನೂ ಅವರವರ ಪ್ರಾರಬ್ಧಕರ್ಮಾನುಸಾರವಾದ ಭೋಗಗಳನ್ನು ಕೊಟ್ಟು ಕಾಪಾಡುತ್ತೀಯೆ. ದೇವತೆಗಳಿಗೆ ವಿರುದ್ಧರಾದ ರಾಕ್ಷಸರನ್ನೂ ಅವರು ಧಾರ್ಮಿಕರಾಗಿ ಇರುವವರೆಗೂ, ದೇವತೆಗಳಂತೆಯೇ ಅವರೂ ನಿನ್ನ ಮಕ್ಕಳೆಂದು ತಿಳಿದು ನಿಷ್ಪಕ್ಷಪಾತವಾಗಿ ಜೀವನ ಭೋಗಗಳನ್ನು ಅನುಗ್ರಹಿಸುತ್ತಾ ರಕ್ಷಿಸುತ್ತೀಯೆ. ದೇವತೆಗಳು ರಾಕ್ಷಸರಿಗಿಂತ ಬೇರೆಯವರಾಗಿ ಶತ್ರುಗಳಾಗಿರುವುದರಿಂದ, ಆ ದೇವತೆಗಳಿಂದಲೇ ರಾಕ್ಷಸರೂ ಭೋಗಗಳನ್ನು ಹೊಂದುವರೆಂಬುದು ಅಸ್ವಾಭಾವಿಕವಾದುದು. ಆದುದ

ಮಾತಃ ಸ್ವಯಂ ವಿರಚಿತಾನ್ವಿಪಿನೇ ವಿನೋದಾ
ದ್ವಂಧ್ಯಾನ್ಪಲಾಶರಹಿತಾಂಶ್ಚ ಕಟೂಂಶ್ಚ ವೃಕ್ಷಾನ್ ।
ನೋಚ್ಛೇದಯಂತಿ ಪುರುಷಾ ನಿಪುಣಾಃ ಕಥಂ ಚಿ
ತ್ತಸ್ಮಾತ್ತ್ವಮುಸ್ಯತಿತರಾಂ ಪರಿಪಾಸಿ ದೈತ್ಯಾನ್ ॥೯॥

ಯತ್ತ್ವಂ ತು ಹಂಸಿ ರಣಮೂರ್ಧ್ನಿ ಶರೈರರಾತೀನ್
ದೇವಾಂಗನಾಸುರತಕೇಲಿಮತೀನ್ವಿದಿತ್ವಾ ।
ದೇಹಾಂತರೇಽಪಿ ಕರುಣಾರಸಮಾದದಾನಾ
ತತ್ತೇ ಚರಿತ್ರಮಿದಮೀಪ್ಸಿತಪೂರಣಾಯ ॥೧೦॥

---

ರಿಂದ ಜಗನ್ಮಾತೆಯಾದ ನೀನೇ ರಾಕ್ಷಸರನ್ನೂ ಕಾಪಾಡುತ್ತೀಯೆ. ಆದುದರಿಂದ ದೇವತೆಗಳಿಗೂ ರಾಕ್ಷಸರಿಗೂ ಸಹ ನೀನೇ ಅಧೀಶ್ವರೀದೇವತೆಯಾಗಿ ಅವರವರು ಅನುಭವಿಸುವ ಭೋಗವನ್ನು ಅವರವರಿಗೆ ಕೊಟ್ಟು ಕಾಪಾಡುತ್ತೀಯೆ. ಈ ಕೆಲಸವು ಇತರ ದೇವತೆಗಳಿಂದ ಸಾಧ್ಯವಾಗತಕ್ಕದ್ದಲ್ಲವು ಎಂದು ತಾತ್ಪರ್ಯವು. ||೮||

ಓ ತಾಯಿಯೇ! ಲೋಕದಲ್ಲಿ ವಿನೋದಕ್ಕಾಗಿ ಕಾಡಿನಲ್ಲಿ ತಾವಾಗಿ ಬೆಳಸಿದ ಫಲವಿಲ್ಲದ, ಎಲೆಯೂ ಇಲ್ಲದಿರುವ, ಕಹಿಯಾದ ರುಚಿಯನ್ನುಂಟುಮಾಡುವ ಮರಗಳನ್ನೂ ಕೂಡ ಬುದ್ಧಿವಂತರು ತಾವಾಗಿಯೇ ಕಡಿಸುವುದಿಲ್ಲ. ಹಾಗೆಯೇ ನೀನೂ ಕೂಡ ಈ ಮರಗಳಂತೆ ಇರುವ ರಾಕ್ಷಸರನ್ನು ಬೆಳಸಿ ಅವರ ಇಷ್ಟಗಳನ್ನು ಕೊಟ್ಟು ಅವರನ್ನೂ ಕಾಪಾಡುತ್ತೀಯೆ. ಅವರನ್ನು ಅವರ ತಪ್ಪಿಲ್ಲದೆ ನೀನಾಗಿ ಕೊಲ್ಲುವುದಿಲ್ಲ. ಈ ಅಂಶದಲ್ಲಿ "ವಿಷವೃಕ್ಷೋಽಪಿಸಂವರ್ಧ್ಯಸ್ವಯಂ ಛೇತ್ತುಮಸಾಂಪ್ರತಂ" ಎಂಬ ಸೂಕ್ತಿನಿಯಮವನ್ನು ನೀನು ಅನುಸರಿಸುತ್ತಿರುವೆ. ಆದುದರಿಂದ ಎಲ್ಲರನ್ನೂ ಒಂದೇ ಸಮನಾಗಿ ವಿಶ್ವಾಸದಿಂದ ರಕ್ಷಿಸುತ್ತೀಯೆ. ||೯||

ಓ ದೇವಿಯೇ, ನೀನು ಯುದ್ಧದಲ್ಲಿ ದೇವತೆಗಳ ಶತ್ರುಗಳಾದ ರಾಕ್ಷಸರು ಧರ್ಮವಿರುದ್ಧವಾಗಿ ದೇವಸ್ತ್ರೀಯರೊಡನೆ ಭೋಗಪಡಲಿಚ್ಛೆಯುಳ್ಳವರೆಂದು ತಿಳಿದು ಬಂದಾಗ ಅವರನ್ನು ಬಾಣಗಳಿಂದ ಕೊಲ್ಲುತ್ತೀಯಲ್ಲವೆ? ರಾಕ್ಷಸರಿಗೆ ನಿನ್ನಿಂದ ಉಂಟಾಗುವ ಈ ಶಿಕ್ಷೆಯು ಬೇರೆಯ ದೇಹದಲ್ಲಿ ಎಂದರೆ, ಧೈರ್ಯಯುದ್ಧದಲ್ಲಿ ಮರಣವಾದರೆ ಉಂಟಾಗುವ ವೀರಸ್ವರ್ಗದ ಭೋಗದೇಹದಲ್ಲಿ ದೇವತಾಸ್ತ್ರೀಯರ ಭೋಗವನ್ನು ದೊರಕಿಸಿಕೊಡುವ ಕಾರಣವೂ ಆಗಿ, ಅದೂ ನಿನ್ನ ಅನುಗ್ರಹವೇ ಆಗಿರುವುದು. ಕೇವಲ ತಾಮಸರಾಗಿರುವ ಈ ದೈತ್ಯರಿಗೆ ಯಜ್ಞಯಾಗ ಮುಂತಾದ

ಚಿತ್ರಂ ತ್ವಮೀಾ ಯದಸುಭೀ ರಹಿತಾ ನ ಸಂತಿ
ತ್ವಚ್ಚಿಂತಿತೇನ ದನುಜಾಃ ಪ್ರಥಿತಪ್ರಭಾವಾಃ ।
ಯೇಷಾಂ ಕೃತೇ ಜನನಿ ದೇಹನಿಬಂಧನಂ ತೇ
ಕ್ರೀಡಾರಸಸ್ತ್ರವ ನ ಚಾನ್ಯತರೋಽತ್ರ ಹೇತುಃ ॥೧೧॥

ಪ್ರಾಪ್ತೇ ಕಲಾವಹಹ ದುಷ್ಟತರೇ ಚ ಕಾಲೇ
ನ ತ್ವಾಂ ಭಜಂತಿ ಮನುಜಾ ನನು ವಂಚಿತಾಸ್ತೇ ।

---

ಧರ್ಮಗಳನ್ನು ಮಾಡಿ ತನ್ಮೂಲಕವಾಗಿ ಸ್ವರ್ಗವನ್ನು ಹೊಂದಲು ತಕ್ಕ ಯೋಗ್ಯತೆಯು ಇಲ್ಲದಿರುವಾಗ ಈ ರೀತಿಯಿಂದಲಾದರೂ ಅವರ ಇಷ್ಟವನ್ನು ನೆರವೇರಿಸಿ ಕೊಡುವ ದಯಾಶಾಲಿಗಳಾದವರು ನೀನಲ್ಲದೆ ಮತ್ತೆ ಯಾರೂ ಇಲ್ಲವು. ಈ ಅಂಶವನ್ನು "ಲಾಲನೇ ತಾಡನೇ ಮಾತುರ್ನಾಕಾರುಣ್ಯಂ ಯಥಾಽರ್ಭಕೇ । ತದ್ವದೇವ ಮಹೇಶಸ್ಯ ನಿಯಂತುರ್ಗುಣದೋಷಯೋಃ ॥" ಎಂದು ವಿವರಿಸಿದೆ. ॥೧೦॥

ಓ ತಾಯಿಯೇ! ಈ ರಾಕ್ಷಸರ ವಧೆಗಾಗಿ ನೀನು ಅವತಾರಗಳನ್ನು ಮಾಡುತ್ತಿರುವುದು ಆಶ್ಚರ್ಯಕರವಾಗಿರುತ್ತದೆ. ಏಕೆಂದರೆ ನಿನ್ನ ಸಂಕಲ್ಪದಿಂದಲೇ ಈ ರಾಕ್ಷಸರ ಶರೀರವು ನಾಶವಾಗಿ ದಿವ್ಯದೇಹದಿಂದ ಅವರು ಭೋಗವನ್ನು ಅನುಭವಿಸುವುದೂ, ಮತ್ತು ರಾಕ್ಷಸರಿಗೆ ಪ್ರಸಿದ್ಧಿಯಾದ ಮಹಿಮೆಯುಂಟಾಗುವುದೂ ಸಹ ನೆರವೇರುವುದು. ನೀನು ಸರ್ವವನ್ನು ಸೃಷ್ಟಿಮಾಡುವವಳಾದ್ದರಿಂದ ನಿನ್ನ ಸಂಕಲ್ಪದಿಂದಲೇ ಈ ಕೆಲಸವು ಆಗುವಾಗ, ಇದಕ್ಕಾಗಿ ನೀನು ದೇಹವನ್ನು ಧರಿಸಿ ಎದುರಿಗೆ ಬಂದು ಯುದ್ಧಮಾಡುವುದೇ ಮುಂತಾದುದೆಲ್ಲವೂ ನಿನ್ನ ಭಕ್ತರಿಗೆ ನಿನ್ನ ಲೀಲೆಯನ್ನು ತೋರಿಸುವುದಕ್ಕಾಗಿಯೇ ಆಗುತ್ತಿರುವುದೆಂದು ನಾವು ತಿಳಿಯುವೆವು! ಹೀಗಲ್ಲದಿದ್ದರೆ ನೀನು ಶರೀರವನ್ನು ಧರಿಸಿದ್ದಕ್ಕೆ ಬೇರೆಯಾದ ಕಾರಣವನ್ನು ಅಥವಾ ಉದ್ದೇಶವನ್ನು ನಾವು ತಿಳಿಯಲಾರೆವು. ಅಲ್ಲದೆ ಈ ಪ್ರಕಾರವಾಗಿ ನಿನ್ನ ಅವತಾರಗಳ ಲೀಲೆಗಳನ್ನು ವರ್ಣಿಸಿ ಹೇಳುವುದು ಕೇಳುವುದು ಇವೇ ಮುಂತಾದ ಧರ್ಮಕಾರ್ಯಗಳಿಂದ ಜನರಲ್ಲಿ ಭಕ್ತಿಯೂ ಪವಿತ್ರತೆಯ ಭಾವವೂ ಹೆಚ್ಚುತ್ತಾ ಬರುತ್ತವೆ! ಹೀಗಿದ್ದರೂ, ॥೧೧॥

ದುಷ್ಟವಾದ ಕಲಿಯುಗವು ಬಂದಿರುವ ಈ ಕಾಲದಲ್ಲಿ ಯಾವ ಮನುಷ್ಯರು ನಿನ್ನ ಪೂಜೆಯನ್ನು ಮಾಡುವುದಿಲ್ಲವೋ, ಅವರನ್ನು ಪುರಾಣ ಗ್ರಂಥಗಳನ್ನು ಓದಿ ಹೇಳುವುದರಲ್ಲಿ ಚತುರರಾದ ಧೂರ್ತಜನರು ನಿನ್ನ ಸೇವೆ ಮಾಡುವವರಾದುದರಿಂದ

ಧೂರ್ತೈಃ ಪುರಾಣಚತುರೈರ್ಹರಿಶಂಕರಾಣಾಂ
ಸೇವಾಪರಾಶ್ಚ ವಿಹಿತಾಸ್ತವ ನಿರ್ಮಿತಾನಾಂ ॥೧೨॥

ಜ್ಞಾತ್ವಾ ಸುರಾಂಸ್ತವ ವಶಾನಸುರಾರ್ದಿತಾಂಶ್ಚ
ಯೇ ವೈ ಭಜಂತಿ ಭುವಿ ಭಾವಯುತಾ ವಿಭಗ್ನಾನ್ ।
ಧೃತ್ವಾ ಕರೇ ಸುವಿಮಲಂ ಖಲು ದೀಪಕಂ ತೇ
ಕೂಪೇ ಪತಂತಿ ಮನುಜಾ ವಿಜಲೇಽತಿಘೋರೇ ॥೧೩॥

---

ನಿನಗಿಂತಲೂ ಮಹಿಮೆಯಲ್ಲಿ ಕಡಿಮೆಯಾಗಿರುವ ವಿಷ್ಣು, ಈಶ್ವರ, ಕೃಷ್ಣ, ರಾಮ, ಇವರೇ ಮುಂತಾದ ಚಿಕ್ಕದೇವತೆಗಳ ಸೇವೆಯಲ್ಲಿ ಆಸಕ್ತರಾಗುವಂತೆ ಮಾಡುತ್ತಾರೆ. ಎಲ್ಲ ದೇವತೆಗಳಿಗೂ ಮಿಗಿಲಾದ, ಸರ್ವಜ್ಞಳೂ ಸರ್ವಶಕ್ತಳೂ ಆಗಿರುವ, ನಿನ್ನನ್ನು ಪೂಜಿಸುವ ವಿಷಯದಲ್ಲಿ ಅವರು ಮೋಸಮಾಡಲ್ಪಟ್ಟವರಾಗಿ ಇರುವರು. ಬ್ರಹ್ಮ, ವಿಷ್ಣು, ರುದ್ರರನ್ನೂ ಸೃಷ್ಟಿಸಿ ಸರ್ವಕಾರಣಳಾದುದರಿಂದ ನೀನು ಆ ವಿಷ್ಣು ಶಂಕರರಿಗೂ ಪೂಜ್ಯಳಾದರೂ ನಿನ್ನ ಪೂಜೆಯನ್ನು ವಿಷ್ಣು, ಶಂಕರರನ್ನು ಪೂಜಿಸುವವರು ಮಾಡದಿರುವುದು ಆ ಪುರಾಣ ಚತುರರ ಆ ವಂಚನೆಯ ಫಲವಾಗಿರುವುದು! ಪೌರಾಣಿಕರೂ, ಹರಿಕಥೆ-ಶಿವಕಥೆಗಳನ್ನು ಹಾಡುವ ದಾಸರೂ, ಭಕ್ತರೂ ತಮ್ಮ ಇಚ್ಛೆಬಂದಂತೆ ಕಲ್ಪಿಸಿ ಪ್ರಚಾರ ಮಾಡುತ್ತಿರುವ ಕಥಾವಿಶೇಷಗಳು ಈಗಲೂ ಹೆಚ್ಚುತ್ತಿರುವುದನ್ನು ಗಮನಿಸಬಹುದು. ॥೧೨॥

ಈ ಬ್ರಹ್ಮ-ವಿಷ್ಣು-ರುದ್ರ ಮುಂತಾದ ದೇವತೆಗಳೂ ರಾಕ್ಷಸರಿಂದ ಇತರ ಜನರಂತೆ ತೊಂದರೆ ಪಡಿಸಲ್ಪಟ್ಟಿರುವರು. ಮತ್ತು ರಾಕ್ಷಸರಿಂದ ಆಗಾಗ್ಗೆ ಅಪಜಯವನ್ನೂ ಹೊಂದಿರುವರು. ಮತ್ತು ನಿನ್ನ ಅಧೀನಕ್ಕೆ ಸಿಕ್ಕಿರುವರು. ಈ ವಿಷಯವನ್ನು ತಿಳಿದೂ ಇಂಥಾ ದೇವತೆಗಳಲ್ಲಿ ಭಕ್ತಿಭಾವವನ್ನು ಹೊಂದಿ ಕೆಲವು ಜನರು ಇವರನ್ನು ಪೂಜೆ ಮಾಡುವರು. ಇಂಥವರು ತಮ್ಮ ಕೈಯ್ಯಲ್ಲಿಯೇ ಪ್ರಕಾಶಕರವಾದ ದೀಪವನ್ನು ಹಿಡಿದುಕೊಂಡು ಇರುವವರಾಗಿದ್ದರೂ ನೀರಿಲ್ಲದ ಭಯಂಕರವಾದ ಭಾವಿಯಲ್ಲಿ ಬೀಳುವರು. ಅಂದರೆ ವಿಷಯವನ್ನು ತಿಳಿದು ತನ್ನ ತಿಳಿವಳಿಕೆಯನ್ನು ತಿದ್ದಿಕೊಂಡು ನಡೆಯದಿರುವುದು ಬಹಳ ಪ್ರಮಾದಕರವೆಂದೂ ಶೋಚನೀಯವಾದುದೆಂದೂ ಅಭಿಪ್ರಾಯವು. ಈ ಅಂಶವನ್ನು ಉಮಾಸಂಹಿತೆಯಲ್ಲೂ ಹೇಳಿದೆ. " ನಭಜಂತಿ ಮಹಾದೇವೀಂ ಕರುಣಾರಸಸಾಗರಾಂ । ಅಂಧಕೂಪೇ ಪತಂತ್ಯೇತೇ ಘೋರೇ ಸಂಸಾರರೂಪಿಣಿ ॥ " ಎಂದು ವಿವರಿಸಿದೆ. ॥೧೩॥

ವಿದ್ಯಾ ತ್ವಮೇವ ಸುಖದಾಽಸುಖದಾಪ್ಯವಿದ್ಯಾ
ಮಾತಸ್ತ್ವಮೇವ ಜನನಾರ್ತಿಹರಾ ನರಾಣಾಂ ।
ಮೋಕ್ಷಾರ್ಥಿಭಿಸ್ತು ಕಲಿತಾ ಕಿಲ ಮಂದಧೀಭಿ
ರ್ನಾಽಽರಾಧಿತಾ ಜನನಿ ಭೋಗಪರೈಸ್ತಥಾಽಜ್ಞೈಃ ॥೧೪॥

ಬ್ರಹ್ಮಾ ಹರಶ್ಚ ಹರಿರಪ್ಯನಿಶಂ ಶರಣ್ಯಂ
ಪಾದಾಂಬುಜಂ ತವ ಭಜಂತಿ ಸುರಾಸ್ತಥಾನ್ಯೇ ।
ತದ್ವೈ ನ ಯೇಽಲ್ಪಮತಯೋ ಮನಸಾ ಭಜಂತಿ
ಭ್ರಾಂತಾಃ ಪತಂತಿ ಸತತಂ ಭವಸಾಗರೇ ತೇ ॥೧೫॥

---

ಓ ತಾಯಿಯೇ ! ನೀನು ಸುಖವನ್ನುಂಟುಮಾಡುವ ಜ್ಞಾನಸ್ವರೂಪಳಾಗಿಯೂ, ಕಷ್ಟವನ್ನುಂಟುಮಾಡುವ ಅಜ್ಞಾನರೂಪಳಾಗಿಯೂ ಇರುತ್ತೀಯೆ. ಹಾಗೆಯೇ ಮನುಷ್ಯರಿಗೆ ಜನ್ಮ, ಮರಣರೂಪವಾದ ಸಂಕಟವನ್ನು ನಾಶಪಡಿಸುವವಳಾಗಿರುತ್ತೀಯೆ. ಭೋಗದಲ್ಲಿ ಅಪೇಕ್ಷೆಯಿಲ್ಲದೆ ವೈರಾಗ್ಯವನ್ನು ಹೊಂದಿರುವ, ಮೋಕ್ಷವನ್ನು ಬೇಡುವವರಾದ ಜನಗಳೂ ನಿನ್ನನ್ನೇ ಪೂಜಿಸುವರು. ಕೇವಲ ಭೋಗದಲ್ಲಿಯೇ ಆಸಕ್ತರಾಗಿರುವ, ಮಂದಬುದ್ಧಿಯುಳ್ಳವರಾದ, ದಡ್ಡರು ಮಾತ್ರ ನಿನ್ನನ್ನು ಪೂಜಿಸುವುದಿಲ್ಲ. ವೈರಾಗ್ಯವುಳ್ಳ ಜ್ಞಾನಿಗೆ ಮೋಕ್ಷಮಾತ್ರದಲ್ಲಿ ಅಭಿಲಾಷೆಯು ಇರುವುದರಿಂದ ಜ್ಞಾನನಿಷ್ಠೆಗೆ ಭೋಗವು ಪ್ರತಿಬಂಧಕವಾದ ಕಾರಣ ಭೋಗಪ್ರದಳಾದ ನಿನ್ನ ಆರಾಧನೆಯನ್ನು ಅಂಥವನು ಐಹಿಕ ಮತ್ತು ಆಮುಷ್ಮಿಕಗಳಾದ ಸುಖಗಳಲ್ಲಿ ಭೋಗಾಪೇಕ್ಷೆಯಿಂದ ಮಾಡುವುದಿಲ್ಲ. ಸರ್ವದಾ ಭೋಗದಲ್ಲಿ ಆಸಕ್ತಿಯುಳ್ಳವನಾದರೋ ಅವನಿಗೆ ನಿನ್ನ ಸ್ವರೂಪವೇ ಗೊತ್ತಿಲ್ಲದೆ ಇರುವುದರಿಂದ ನಿನ್ನ ಸೇವೆಯ ಕಡೆಗೆ ಅವನ ಚಿತ್ತವು ಒಲಿದು ಬರುವುದಿಲ್ಲವು. ॥೧೪॥

ಬ್ರಹ್ಮನೂ, ಹರನೂ, ವಿಷ್ಣುವೂ ಇತರರಾದ ದೇವತೆಗಳೂ ಸಹ ರಕ್ಷಕವಾದ ನಿನ್ನ ಪಾದಪದ್ಮವನ್ನು ಸೇವಿಸುತ್ತಿರುವರು. ಯಾವ ದಡ್ಡರು ನಿನ್ನ ಪಾದವನ್ನು ಮನಸ್ಸಿನಿಂದಲೂ ಸಹ ಸ್ಮರಿಸದೆ ಪೂಜೆಯನ್ನು ಮಾಡುವುದಿಲ್ಲವೋ ಅವರು ಸರಿಯಾದ ತಿಳಿವಳಿಕೆಯನ್ನು ಹೊಂದದೆ ಭ್ರಾಂತಿಯನ್ನು ಹೊಂದಿ ಜನನ-ಮರಣರೂಪವಾದ ಸಂಸಾರಸಮುದ್ರದಲ್ಲಿ ಯಾವಾಗಲೂ ಬಿದ್ದಿರುವರು. ॥೧೫॥

ಚಂಡಿ ತ್ವದಂಘ್ರಿಜಲಜೋತ್ಥರಜಃಪ್ರಸಾದೈ
ರ್ಬ್ರಹ್ಮಾ ಕರೋತಿ ಸಕಲಂ ಭುವನಂ ಭವಾದೌ ।
ಶೌರಿಶ್ಚ ಪಾತಿ ಖಲು ಸಂಹರತೇ ಹರಸ್ತು
ತ್ವಾಂ ಸೇವತೇ ನ ಮನುಜಸ್ತ್ವಿಹ ದುರ್ಭಗೋಽಸೌ ॥೧೬॥

ವಾಗ್ದೇವತಾ ತ್ವಮಸಿ ದೇವಿ ಸುರಾಸುರಾಣಾಂ
ವಕ್ತುಂ ನ ತೇಽಮರವರಾಃ ಪ್ರಭವಂತಿ ಶಕ್ತಾಃ ।
ತ್ವಂ ಚೇನ್ಮುಖೇ ವಸಸಿ ನೈವ ಯದೈವ ತೇಷಾಂ
ಯಸ್ಮಾದ್ಭವಂತಿ ಮನುಜಾ ನ ಹಿ ತದ್ವಿಹೀನಾಃ ॥೧೭॥

---

ಪ್ರಪಂಚದಲ್ಲಿ ಎಲ್ಲಕ್ಕೂ ಭಯಂಕರವಾದ ಬ್ರಹ್ಮಸ್ವರೂಪಕ್ಕೆ ಚಂಡೀ ಎಂದು ಹೆಸರಿದೆ. ಬ್ರಹ್ಮತತ್ತ್ವದ ಈ ಸ್ವರೂಪಕ್ಕೆ "ಭೀಷಾಸ್ಮಾದ್ವಾತಃ ಪವತೇ" "ಮಹ ದ್ಭಯಂವಜ್ರಮುದ್ಯತಂ" ಮುಂತಾದ ಶ್ರುತಿಗಳು ಪ್ರಮಾಣಗಳಾಗಿವೆ. ಅಲ್ಲದೆ ವೇದಾಂತಸೂತ್ರಗಳಲ್ಲಿ ಕಂಪನಾಧಿಕರಣದಲ್ಲಿಯೂ ಈ ಅಂಶವನ್ನು ನಿರೂಪಿಸಿದೆ. ಓ ಚಂಡಿಕಾದೇವಿಯೇ, ಬ್ರಹ್ಮನು ನಿನ್ನ ಪಾದಕಮಲದ ರೇಣುವಿನ ಸಹಾಯದಿಂದ ಮಹಾಭೂತಗಳನ್ನೂ ಸಕಲವಾದ ಲೋಕಗಳನ್ನೂ ಕ್ರಮವಾಗಿ ಸೃಷ್ಟಿಸುವನು. ವಿಷ್ಣುವೂ ಸೃಷ್ಟವಾದ ಆ ಪ್ರಪಂಚವನ್ನು ನಿನ್ನ ಪಾದರೇಣುವಿನ ಅನುಗ್ರಹದಿಂ ದಲೇ ರಕ್ಷಿಸುವನು. ಹರನೂ ಅದನ್ನು ನಿನ್ನ ಪಾದಕಮಲಗಳ ರೇಣುಗಳ ಪ್ರಸಾದ ದಿಂದ ನಾಶಪಡಿಸುವನು. ಹೀಗಿರುವಾಗ ಯಾರು ನಿನ್ನನ್ನು ಸೇವೆ ಮಾಡುವುದಿ ಲ್ಲವೋ ಅವರು ಇಲ್ಲಿ ಅದೃಷ್ಟಹೀನರೆನಿಸುವರು. ॥೧೬॥

ಓ ದೇವಿಯೇ, ನೀನು ಎಲ್ಲವಾಙ್ಮಯಕ್ಕೂ ಅಭಿಮಾನಿ ದೇವತೆಯಾಗಿರುವೆ. ಆದುದರಿಂದ ನಿನ್ನ ಸ್ತೋತ್ರವನ್ನು ನಮಗೆ ವಾಗ್ದೇವತೆಯಾದ ನಿನ್ನ ಪ್ರೇರಣೆಯು ಎಷ್ಟರಮಟ್ಟಿಗೆ ಆಗುವುದೋ ಅದಕ್ಕನುಸಾರವಾಗಿ ನಿನ್ನ ಸ್ತೋತ್ರವನ್ನು ಮಾಡು ತ್ತೇವೆ. ಅದರಲ್ಲಿ ಇರತಕ್ಕ ಗುಣದೋಷ ವಿವೇಚನೆಯೇ ಮುಂತಾದುವುಗಳನ್ನು ನಾವೂ ಅಥವಾ ದೇವತೆಗಳಲ್ಲಿ ಶ್ರೇಷ್ಠರಾದವರೂ ಸಹ ತಿಳಿಯಲು ಸಾಧ್ಯವಿಲ್ಲವು. ಏತಕ್ಕೆಂದರೆ, ನೀನು ಸಮಸ್ತರಾದ ದೇವತೆಗಳೂ, ಮತ್ತು ರಾಕ್ಷಸರೂ ಇವರಿಬ್ಬ ರಲ್ಲಿಯೂ ಮುಖದಲ್ಲಿ ವಾಸವಾಗಿರುತ್ತಾ ಮಾತನ್ನು ಪ್ರೇರಿಸದಿದ್ದರೆ ಅವರಲ್ಲಿ ಯಾರೂ ಮಾತನಾಡಲು ಸಹ ಶಕ್ತರಾಗುವುದಿಲ್ಲ. ॥೧೭॥

ಶಪ್ತೋ ಹರಿಸ್ತು ಭೃಗುಣಾ ಕುಪಿತೇನ ಕಾಮಂ
ಮೀನೋ ಬಭೂವ ಕಮಠಃ ಖಲು ಸೂಕರಸ್ತು ।
ಪಶ್ಚಾನ್ನೃಸಿಂಹ ಇತಿ ಯಶ್ಛಲಕೃದ್ಧರಾಯಾಂ
ತಾನ್ಸೇವತಾಂ ಜನನಿ ಮೃತ್ಯುಭಯಂ ನ ಕಿಂ ಸ್ಯಾತ್ ॥೧೮॥

ಶಂಭೋಃ ಪಪಾತ ಭುವಿ ಲಿಂಗಮಿದಂ ಪ್ರಸಿದ್ಧಂ
ಶಾಪೇನ ತೇನ ಚ ಭೃಗೋರ್ವಿಪಿನೇ ಗತಸ್ಯ ।
ತಂ ಯೇ ನರಾ ಭುವಿ ಭಜಂತಿ ಕಪಾಲಿನಂ ತು
ತೇಷಾಂ ಸುಖಂ ಕಥಮಿಹಾಪಿ ಪರತ್ರ ಮಾತಃ ॥೧೯॥

ಯೋಽಭೂದ್ಗಜಾನನಗಣಾಧಿಪತಿರ್ಮಹೇಶಾ
ತ್ತಂ ಯೇ ಭಜಂತಿ ಮನುಜಾ ವಿತಥಪ್ರಪನ್ನಾಃ ।

---

ಓ ಜಗನ್ಮಾತೆಯೇ, ಕೋಪವುಳ್ಳವನಾದ ಭೃಗುಋಷಿಯಿಂದ ಶಾಪವನ್ನು ಹೊಂದಿದವನಾಗಿ ವಿಷ್ಣುವು ಕ್ರಮವಾಗಿ ಅನೇಕ ಅವತಾರಗಳನ್ನು ಮಾಡಬೇಕಾಯಿತು. ಹೇಗೆಂದರೆ:—ಮೀನಾದನು, ಆಮೆಯಾದನು, ಹಂದಿಯಾದನು. ಅನಂತರದಲ್ಲಿ ನರಸಿಹ್ಮನಾದನು, ಮೋಸಗಾರನಾದ ವಾಮನನಾದನು. ಓ ತಾಯಿಯೇ, ಭೂಮಿಯಲ್ಲಿ ಹೀಗೆ ನಾನಾ ರೂಪಗಳಲ್ಲಿ ಅವತರಿಸಿರುವ ದೇವತಾ ರೂಪಗಳನ್ನು ಆರಾಧಿಸಿ ಸೇವಿಸುವವರಿಗೆ ಮರಣಭಯವು ಆಗದೆ ಇರುವುದೇನು? ಏಕೆಂದರೆ ಈ ಅವತಾರಗಳೇ ಪರಾಧೀನವಾಗಿ ಜನ್ಮವನ್ನು ಪಡೆದಿದ್ದು ಕಡೆಗೆ ಮರಣವನ್ನೂ ಪಡೆದಿರಲು, ತಮ್ಮ ಭಕ್ತರಿಗೆ ಮೃತ್ಯುಭಯವನ್ನು ತಪ್ಪಿಸುವುದು ಅವರಿಗೆ ಅಸಾಧ್ಯವೆಂದು ಭಾವವು. ॥೧೮॥

ಓ ತಾಯಿಯೇ, ದಾಕ್ಷಾಯಣಿಯ ವಿಯೋಗವೂ ಮರಣವೂ ಸಂಭವಿಸಿದ ಮೇಲೆ ಶಿವನು ಅರಣ್ಯ ಮಧ್ಯದಲ್ಲಿರುವಾಗ ಅವನ ಲಿಂಗವು ಆ ಭೃಗುಋಷಿಯ ಶಾಪದಿಂದಲೇ ಬಿದ್ದಿತೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿರುವುದು. ಹೀಗೆ ತಾನೇ ತನ್ನನ್ನು ಕಾಪಾಡಿಕೊಳ್ಳಲು ಶಕ್ತಿಯಿಲ್ಲದೆ ಕಾಪಾಲಿಕನಾಗಿ ತಿರುಗುತ್ತಿರುವ ಈ ಶಿವನನ್ನು ಸೇವೆಮಾಡುವ ಮನುಷ್ಯರಿಗೆ ಇಹ-ಪರ ಲೋಕಗಳಲ್ಲಿ ಹೇಗೆತಾನೇ ಉತ್ತಮ ಸುಖವುಂಟಾದೀತು? ॥೧೯॥

ಓ ದೇವಿಯೇ, ಅಂತಹ ಮಹೇಶ್ವರನಿಂದ ಗಜಾನನ ಎಂದರೆ ಆನೆಯ ಮುಖವನ್ನು ಹೊಂದಿರುವ ಗಣಪತಿಯು ಹುಟ್ಟಿದನು. ಈ ಗಣಪತಿಯನ್ನು ಪೂಜಿ

**ಜಾನಂತಿ ತೇ ನ ಸಕಲಾರ್ಥಫಲಪ್ರದಾತ್ರೀಂ**
**ತ್ವಾಂ ದೇವಿ ವಿಶ್ವಜನನೀಂ ಸುಖಸೇವನೀಯಾಂ ॥೨೦॥**

**ಚಿತ್ರಂ ತ್ವಯಾಽರಿಜನತಾಪಿ ದಯಾರ್ದ್ರಭಾವಾ**
**ದ್ಧತ್ವಾ ರಣೇ ಶಿತಶರೈರ್ಗಮಿತಾ ದ್ಯುಲೋಕಂ ।**
**ನೋ ಚೇತ್ಸ್ವಕರ್ಮನಿಚಿತೇ ನಿರಯೇ ನಿತಾಂತಂ**
**ದುಃಖಾತಿದುಃಖಗತಿಮಾಪದಮಾಪತೇತ್ಸಾ ॥೨೧॥**

---

ಸುವವರ ಪ್ರಯತ್ನವೆಲ್ಲವೂ ಅತ್ಯುತ್ತಮವಾದ ಪುರುಷಾರ್ಥವನ್ನುಂಟುಮಾಡಲಾರದಾಗುವುದರಿಂದ ಏನೂ ಪ್ರಯೋಜನವಿಲ್ಲದವುಗಳು. ಮತ್ತು ಆ ರೀತಿಯಲ್ಲಿ ಪೂಜಿಸುವವರು ಸಮಸ್ತವಾದ ಪುರುಷಾರ್ಥಗಳನ್ನೂ ಕೊಡುವವಳಾಗಿಯೂ, ಅನಾಯಾಸವಾಗಿ ಸೇವಿಸುವುದಕ್ಕೆ ಯೋಗ್ಯಳಾಗಿಯೂ, ಸಮಸ್ತ ಪ್ರಪಂಚಕ್ಕೂ ತಾಯಿಯಾಗಿಯೂ, ಭಕ್ತರ ಎಲ್ಲ ಮನೋರಥಗಳನ್ನೂ ಕರುಣಿಸಲು ಶಕ್ತಳಾಗಿಯೂ, ಇರುವ ನಿನ್ನನ್ನು ಬಿಟ್ಟು ಆ ಇತರ ದೇವತೆಗಳಲ್ಲಿ ಭಕ್ತಿಭಾವದಿಂದ ಪೂಜಿಸುವುದು ವ್ಯರ್ಥವಾದುದು ! ಏಕೆಂದರೆ ಅದು ಅಲ್ಪಪ್ರಯೋಜನಗಳನ್ನುಂಟುಮಾಡಬಲ್ಲುದೇ ವಿನಾ ಉತ್ತಮ ಫಲವಾದ ನಿತ್ಯಸುಖವನ್ನು ಉಂಟುಮಾಡಲಾರದು. ಈ ಅಂಶವನ್ನು ಶಿವಪುರಾಣದಲ್ಲಿ ಉಮಾಸಂಹಿತೆಯಲ್ಲಿ "ಗಂಗಾಂ ವಿಹಾಯತೃಷ್ತ್ಯರ್ಥಂ ಮರುವಾರಿ ಯಥಾವ್ರಜೇತ್ । ವಿಹಾಯದೇವೀಂ ತದ್ಭಿನ್ನಂ ತಥಾ ದೇವಾಂತರಂ ವ್ರಜೇತ್ ॥" ಸೂತಸಂಹಿತೆಯಲ್ಲಿ "ಯಸ್ಯಾಃ ಸ್ಮರಣಮಾತ್ರೇಣ ಪುರುಷಾರ್ಥಚತುಷ್ಟಯಂ । ಅನಾಯಾಸೇನಲಭತೇ ಕಸ್ತ್ಯಜೇತ್ತಾಂನರೋತ್ತಮಃ ॥" ಕರುಣಾಸಾಗರಾಮೇತಾಂ ಯಃಪೂಜಯತಿ ಶಾಂಕರೀಂ । ಕಿಂ ನಸಿದ್ಧ್ಯತಿತಸ್ಯೇಷ್ಟಂತಸ್ಯಾ ಏವಪ್ರಸಾದತಃ ॥ ಎಂದೂ ವಿವರಿಸಿದೆ. ॥೨೦॥

ಓ ಜಗನ್ಮಾತೆಯಾದ ದೇವಿಯೇ, ಸುಖಗಳನ್ನು ಆಶಿಸಿ ಪಾಪಕಾರ್ಯಗಳಲ್ಲಿ ತೊಡಗಿದ್ದ ಶತ್ರುಗಳನ್ನು ನೀನು ಯುದ್ಧದಲ್ಲಿ ಹರಿತವಾದ ಬಾಣಗಳಿಂದ ಕೊಂದು ಅವರ ಪಾಪಗಳಿಗಾಗಿ ಅವರನ್ನು ಶಿಕ್ಷಿಸಿ, ಆ ಮೇಲೆ ಅವರೂ ನಿನ್ನ ಮಕ್ಕಳೇ ಆಗಿರುವುದರಿಂದ ಅವರ ಸುಖಾಶೆಯನ್ನೂ ಸಲ್ಲಿಸಲು ಅವರನ್ನು ಸ್ವರ್ಗಲೋಕವನ್ನು ಹೊಂದಿಸುವುದೂ ದಯೆಯಿಂದಲೇ ಮಾಡಿದ ಕೆಲಸವಾಗಿರುತ್ತದೆ. ಲೋಕದಲ್ಲಿ ನಿನ್ನಂತಹ ದಯೆಯುಳ್ಳವರು ಕೊಲ್ಲುವುದೂ, ಶಿಕ್ಷೆಯನ್ನು ಹೊಂದುವವರಿಗೆ ಆ ಮೇಲೆ ಸದ್ಗತಿಯನ್ನು ಕೊಡುವುದೂ, ಇವೆರಡೂ ದಯೆಯ ಕಾರ್ಯವೆಂಬುದು

ಬ್ರಹ್ಮಾ ಹರಶ್ಚ ಹರಿರಪ್ಯುತ ಗರ್ವಭಾವಾ
ಜ್ಜಾನಂತಿ ತೇಽಪಿ ವಿಬುಧಾ ನ ತವ ಪ್ರಭಾವಂ ।
ಕೇಽನ್ಯೇ ಭವಂತಿ ಮನುಜಾ ವಿದಿತುಂ ಸಮರ್ಥಾಃ
ಸಂಮೋಹಿತಾಸ್ತವ ಗುಣೈರಮಿತಪ್ರಭಾವೈಃ ॥೨೨॥

ಕ್ಲಿಶ್ಯಂತಿ ತೇಽಪಿ ಮುನಯಸ್ತವ ದುರ್ವಿಭಾವ್ಯಂ
ಪಾದಾಂಬುಜಂ ನ ಹಿ ಭಜಂತಿ ವಿಮೂಢಚಿತ್ತಾಃ ।
ಸೂರ್ಯಾಗ್ನಿಸೇವನಪರಾಃ ಪರಮಾರ್ಥತತ್ತ್ವಂ
ಜ್ಞಾತಂ ನ ತೈಃ ಶ್ರುತಿಶತೈರಪಿ ವೇದಸಾರಂ ॥೨೩॥

---

ಆಶ್ಚರ್ಯಕರವಾಗಿರುವುದು ! ಹೀಗೆ ಆಶ್ಚರ್ಯವನ್ನುಂಟುಮಾಡುವ ನಿನ್ನ ದಯೆಯು ಅವರ ವಿಷಯದಲ್ಲಿ ನಿನಗೆ ಇಲ್ಲದಿದ್ದರೆ ಶತ್ರುಸಮೂಹವು ತನ್ನ ಪಾಪಕರ್ಮದಿಂದ ಬಂದು ಒದಗುವ ನರಕದಲ್ಲಿ ಬಹಳಮಟ್ಟಿಗೆ ದುಃಖವನ್ನು ಅನುಭವಿಸಿ, ಆ ಮೇಲೆ ಅದಕ್ಕಿಂತಲೂ ಹೆಚ್ಚಾದ ಎಂದರೆ ಹಿಂದಿನ ಮತ್ತು ಆಗಿನ ಪಾಪದಿಂದ ಕಷ್ಟತರ ವಾದ ದುರ್ಗತಿಯನ್ನು ಹೊಂದಬೇಕಾಗುತ್ತಿತ್ತು! ಪಾತಕಿಗಳಾದ ರಾಕ್ಷಸರ ವಿಷಯ ದಲ್ಲಿಯೇ ನಿನ್ನ ದಯೆಯು ಹೀಗೆ ಮೇಲಾಗಿ ಇರುವಾಗ ಸಾಧುಗಳಾಗಿರುವವರ ವಿಷಯದಲ್ಲಿ ನೀನು ದಯಾಳುವಾಗಿರುವೆ ಎಂದು ಹೇಳತಕ್ಕದ್ದೇನು ? ಎಂದರೆ ನಿನ್ನ ದಯೆಯು ನಿರತಿಶಯವಾದುದೆಂಬುದು ಭಾವವು. ॥೨೧॥

ಹೇ ಜಗದಂಬೇ, ಬ್ರಹ್ಮನು, ಈಶ್ವರನು, ವಿಷ್ಣುವು ಇತರರು ದೊಡ್ಡವರೂ ತಮ್ಮ ದೊಡ್ಡ ಪದವಿಯ ಮಹಿಮೆಯಿಂದ ಉಂಟಾದ ತಾವು ದೊಡ್ಡ ದೇವತೆಗಳೆಂಬ ಅಹಂಕಾರದಿಂದ ನಿನ್ನ ಮಹಿಮೆಯನ್ನು ತಿಳಿಯಲಾರದೆ ಇರುತ್ತಾರೆ. ಅಂತಹ ದೊಡ್ಡ ದೇವತೆಗಳಿಗೇ ಹೀಗಿರುವಲ್ಲಿ, ಅಳತೆಗೆ ಸಿಕ್ಕದಿರುವ ಆ ನಿನ್ನ ಮಹಿಮೆ ಯನ್ನು ಮನುಷ್ಯರಾಗಿರುವ ಇತರರು ಹೇಗೆತಾನೇ ತಿಳಿಯುವರು ? ಇದನ್ನು " ಯಸ್ಯಾಸ್ಸ್ವರೂಪಂ ಬ್ರಹ್ಮಾದಯೋಽಪಿನಜಾನಂತಿ ತಸ್ಮಾದುಚ್ಯತೇ ಅಜ್ಞೇಯಾ ಇತಿ " ಎಂದು ಪಂಚೋಪನಿಷತ್ತಿನ ದೇವ್ಯುಪನಿಷತ್ತಿನಲ್ಲಿ ಹೇಳಿದೆ. ॥೨೨॥

ದೇವಿಯ ನಿಜಸ್ವರೂಪವನ್ನು ಸಂಪೂರ್ಣವಾಗಿ ತಿಳಿಯಲು ಬ್ರಹ್ಮಾದಿಗ ಳಿಗೂ ಅಸಾಧ್ಯವಾದರೆ ಅಂತಹ ತಿಳಿವಳಿಕೆ ಇಲ್ಲದೆ ಆ ದೇವಿಯ ಆರಾಧನೆಯಿಂದ ಎಲ್ಲ ಇಷ್ಟಾರ್ಥಗಳನ್ನೂ ಪಡೆಯಬಹುದೆಂದು ಹೇಳುವುದಾದರೂ ಹೇಗೆ ಸಂಗತವು ? ಎಂದು ಸಂಶಯವುಂಟಾಗುತ್ತದೆ. ಅದನ್ನು ಹೀಗೆ ನಿವಾರಿಸಬಹುದು. ದೃಶ್ಯ

ಮಾನರಾದ, ಸುಲಭವಾಗಿ ತಿಳಿಯಬಹುದಾದ, ಸ್ವರೂಪವುಳ್ಳ ಸೂರ್ಯ, ಅಗ್ನಿ, ಮುಂತಾದ ದೇವಿಯ ಅಂಶಾಂಶರಾದ ಚಿಕ್ಕದೇವತೆಗಳನ್ನು ಸೇವಿಸುವುದರಲ್ಲಿ ಆಸಕ್ತ ರಾದ ವೈದಿಕರೂ ಆಹಿತಾಗ್ನಿಗಳೂ ಆದ ಮುನಿಗಳು ಕೂಡ ಬ್ರಹ್ಮಾದಿಗಳಂತೆ ಊಹಿಸಲಶಕ್ಯವಾದ, ನಿನ್ನ ಪಾರಮಾರ್ಥಿಕವಾದ ತತ್ವಸ್ವರೂಪವನ್ನು ತಿಳಿಯಲು ಆಗದೆ ಭ್ರಾಂತಿಯುಂಟಾಗಿರುವುದರಿಂದ ಕ್ಲೇಶವನ್ನು ಮಾತ್ರ ಹೊಂದಿರುತ್ತಾರೆ ಎಂಬುದು ನಿಜವು. ಆದುದರಿಂದಲೇ ಅವರು ಸರ್ವೇಶ್ವರಿಯಾದ ನಿನ್ನ ಆರಾಧನೆ ಯಲ್ಲಿ ತೊಡಗದೆ ಇರುತ್ತಾರೆ. ಅಲ್ಲದೆ ಅವರು ವೇದಗಳೆಲ್ಲಕ್ಕೂ ಸಾರವಾಗಿರುವ, ಎಲ್ಲ ಶ್ರುತಿಗಳ ಮುಖ್ಯ ತಾತ್ಪರ್ಯವಿಷಯವಾಗಿರುವ, ನಿನ್ನ ತತ್ವವನ್ನು ಅನೇಕ ಶ್ರುತಿವಾಕ್ಯಗಳನ್ನು ಚನ್ನಾಗಿ ವಿಚಾರ ಮಾಡಿದಾಗ್ಯೂ ಅವರ ಮನಸ್ಸಿನ ಭ್ರಾಂತಿಯು ಹೋಗದಿರುವ ಕಾರಣ ತಿಳಿಯಲಾರದೆ ಇರುತ್ತಾರೆ. ಪರಬ್ರಹ್ಮಸ್ವರೂಪಿಣಿಯಾದ ನಿನ್ನ ಪಾರಮಾರ್ಥಿಕ ಸ್ವರೂಪವನ್ನು ಸ್ಪಷ್ಟವಾಗಿ ಹೇಳುವುದು ಅಸಾಧ್ಯವಾದುದ ರಿಂದ ಎಲ್ಲಿಯೂ ಹಾಗೆ ಹೇಳಲ್ಪಟ್ಟಿಲ್ಲವು. ಆದರೂ ಸತ್ತಾಮಾತ್ರದಿಂದ ಗಮ್ಯ ವಾದ ಆ ನಿನ್ನ ತತ್ವವನ್ನು ತಿಳಿದು ಉಪಾಸನೆಯನ್ನು ಮಾಡಬೇಕೇ ಹೊರತು ಆ ವಿಷಯದಲ್ಲಿ ಸಂಶಯವನ್ನು ಹೊಂದಿ ಇತರ ದೇವತೋಪಾಸನೆಯನ್ನು ಮಾಡಿ ದರೆ ಕ್ಲೇಶವು ಎಂದಿಗೂ ತಪ್ಪಲಾರದು. ಆದುದರಿಂದಲೇ ಶ್ರುತಿಯಲ್ಲೂ " ಅಸ್ತಿತ್ಯೇ ವೋಪಲಬ್ಧವ್ಯಸ್ತತ್ವಭಾವೇನ ಚೋಭಯೋಃ । ಅಸ್ತೀತ್ಯೇವೋಪಲಬ್ಧಸ್ಯ ತತ್ವಭಾವಃ ಪ್ರಸೀದತಿ ॥ " ಎಂದರೆ ಸತ್ತಾಮಾತ್ರ ಗಮ್ಯವೆಂದು ನಂಬಿಕೊಂಡು ಉಪಾಸನೆ ಮಾಡುವವನಿಗೆ ಆ ಪರತತ್ವಭಾವವು ಪ್ರಸನ್ನವಾಗುವುದು. ಎಂದು ಶ್ರುತಿಯಲ್ಲಿ ಉಕ್ತವಾಗಿರುವ ಕಾರಣದಿಂದ ಹಾಗೆಯೇ ಆ ತತ್ವವನ್ನು ಧ್ಯಾನಿಸುತ್ತಾ ಮನಗಾಣ ಬೇಕಾಗಿದೆ. ಅಲ್ಲದೆ, " ನೇತಿ ನೇತಿ " ಎಂದು ಮೊದಲಾಗಿರುವ ಶ್ರುತಿವಾಕ್ಯದಲ್ಲಿ ತತ್ವವನ್ನು ನಿರೂಪಿಸಿರುವ ರೀತಿಯಿಂದಲೂ, ಎಂದರೆ ಈ ಎಲ್ಲ ನಿಷೇಧಗಳಿಗೆ ಅವಧಿರೂಪವಾಗಿರುವ ಸತ್ತಾರೂಪವಾದ ಅಧಿಷ್ಠಾನತತ್ವವೇ ಭಗವತೀದೇವಿಯ ಪಾರ ಮಾರ್ಥಿಕತತ್ವವೆಂದು ಉಪಾಸನೆಯಿಂದಲೂ, ಅದನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಈ ರೀತಿಯಲ್ಲಿ ಉಪಾಸನೆ ಮಾಡುವವರು ಸೂಕ್ಷ್ಮವೂ ಗಹನವೂ ಆದರೂ ತತ್ವವನ್ನು ಮನಗಂಡು ಇಷ್ಟಾರ್ಥಸಿದ್ಧಿಯನ್ನು ಪಡೆಯುತ್ತಾರೆ. ಎಂದು ತಾತ್ಪರ್ಯವು. ॥೨೩॥

ಹಾಗೆ ಮಾಡದೆ ಭ್ರಾಂತರಾಗಿರುವವರಿಗೆ ಆ ಉಪಾಸನೆಯು ಕ್ಲೇಶಕ್ಕೆ ಕಾರಣ ವಾಗಿರುತ್ತದೆ ಎಂಬುದು ಅನಿವಾರ್ಯವಾದುದು. ಶ್ರುತಿಯಲ್ಲಿ ಈ ವಿಷಯವನ್ನು " ಯೋವಾಏತದಕ್ಷರಮವಿದಿತ್ವಾಗಾರ್ಗಿ ಅಸ್ಮಿನ್ ಲೋಕೇಜುಹೋತಿ ವದಾತಿತಪಸ್ಯ

**ಮನ್ಯೇ ಗುಣಾಸ್ತವ ಭುವಿ ಪ್ರಥಿತಪ್ರಭಾವಾಃ**
**ಕುರ್ವಂತಿ ಯೇ ಹಿ ವಿಮುಖಾನ್ನನು ಭಕ್ತಿಭಾವಾತ್ ।**
**ಲೋಕಾನ್ಸ್ವಬುದ್ಧಿರಚಿತೈರ್ವಿವಿಧಾಗಮೈಶ್ಚ**
**ವಿಷ್ಣ್ವೀಶಭಾಸ್ಕರಗಣೇಶಪರಾನ್ವಿಧಾಯ ॥೨೪॥**

---

ತ್ಯಪಿ ಬಹೂನಿ ವರ್ಷಸಹಸ್ರಾಣಿ ಅಂತವಾನೇ ವಾಸ್ಯ ಲೋಕೋ ಭವತಿ." ಎಂದು ವಿವರಿಸಿದೆ. ಆದುದರಿಂದ ದೇವಿಯ ಪಾರಮಾರ್ಥಿಕ ಸ್ವರೂಪದ ಉಪಾಸನೆಯೇ ಸರ್ವೋತ್ಕೃಷ್ಟವಾದುದೆಂದು ತಾತ್ಪರ್ಯವು. ಆದರೂ ಶೈವವೈಷ್ಣವಾದಿಮತಗಳಂತೆ ಇದೂ ಒಂದು ಎಂದು ಯಾರೂ ಭ್ರಮಿಸಬಾರದು. ಏಕೆಂದರೆ ಆ ಮತಗಳಲ್ಲಿ ತ್ರಿಮೂರ್ತಿಗಳ ಅಥವಾ ಅವರ ಶಕ್ತಿದೇವಿಯರ ಪೈಕಿ ಒಬ್ಬರನ್ನು ಪರಮೋತ್ತಮ ತತ್ವವೆಂದು ವರ್ಣಿಸಿದೆ. ಈ ದೇವೀಭಾಗವತದಲ್ಲಿಯಾದರೋ ಆ ತ್ರಿಮೂರ್ತಿಗಳಿಗೂ ಅವರ ಶಕ್ತಿಗಳಿಗೂ ಕಾರಣವಾದ ಪರಬ್ರಹ್ಮತತ್ವಕ್ಕೆ ಸಮವಾದುದರಿಂದ ಮೇಲಿನದಾದ ತತ್ವವನ್ನು ನಿರೂಪಿಸಿರುವುದು ಇತರ ಮತಗಳಿಗಿಂತ ಮಿಗಿಲಾದ ವಿಶೇಷಗುಣವಾಗಿದೆ, ಎಂಬುದನ್ನು ಯಾವಾಗಲೂ ನೆನಪಿನಲ್ಲಿಡಬೇಕು.

ಓ ತಾಯಿಯೆ! ಸರ್ವೋತ್ಕೃಷ್ಟವಾದ, ಸುಲಭವಾಗಿರುವ, ಸರ್ವಫಲಗಳನ್ನೂ ಕೊಡುವ ನಿನ್ನ ಉಪಾಸನೆಯನ್ನು ಮಾಡದೆ ಜನರು ದಡ್ಡರಾಗಿ ಸುಮ್ಮನೆ ಇರಲು ಕಾರಣವು ನಿನ್ನ ಗುಣಗಳೇ ಆಗಿವೆ ಎಂದು ನಾವು ತಿಳಿಯುತ್ತೇವೆ. ಏಕೆಂದರೆ ಈ ಸತ್ವ ರಜಸ್ತಮೋಗುಣಗಳ ಪ್ರಭಾವವು ಬಹಳ ಮಟ್ಟಿನ ಪ್ರಸಿದ್ಧಿಯನ್ನು ಹೊಂದಿರುತ್ತದೆ. ಭಕ್ತರಲ್ಲಿ ಮುಂದಾಗಿರುವ ಇವುಗಳು ಲೋಕದಲ್ಲಿ ವಿಷ್ಣು, ಶಿವ, ಭಾಸ್ಕರ, ಗಣೇಶ ಮುಂತಾದ ಇತರ ಚಿಕ್ಕ ದೇವತೆಗಳನ್ನು ಪೂಜೆಮಾಡಿ ಉಪಾಸನೆಯನ್ನು ಮಾಡುವುದರಲ್ಲಿ ಆಸಕ್ತರಾಗಿರುವಂತೆ ಜನಗಳನ್ನು ಪ್ರೇರಿಸಿ, ಅವರು ಅದಕ್ಕನುಸಾರವಾದ ಅನೇಕ ವಿಧವಾದ ಆಗಮಗಳನ್ನು ತಾವೇ ರಚಿಸಿಕೊಂಡು, ಅವರವರ ರುಚಿಗಳಿಗೂ ಬುದ್ಧಿಶಕ್ತಿಗೂ ಅನುಗುಣವಾಗಿ ಉಂಟಾಗುವ ಭಕ್ತಿಯಿಂದ ಆ ದೇವತಾಪೂಜೆಯನ್ನೇ ಮಾಡುವುದರಿಂದ ವಿಮುಖರಾಗದಿರುವಂತೆ ಮಾಡುತ್ತವೆ. ಅನ್ಯಾದೃಶವಾದ ನಿನ್ನ ಗುಣಗಳ ಮಹಿಮೆಯನ್ನು ಅವರು ತಿಳಿಯಲಾರದೆ ನಿನ್ನ ಉಪಾಸನೆಯನ್ನು ಅವರು ಮಾಡದಂತೆಯೂ ಇತರ ದೇವತೆಗಳನ್ನು ಸೇವೆಮಾಡುವಂತೆಯೂ ಆ ಸತ್ವರಜಸ್ತಮೋಗುಣಗಳೇ ಮಾಡುತ್ತವೆ! ॥೨೪॥

**ಕುರ್ವಂತಿ ಯೇ ತವ ಪದಾದ್ವಿಮುಖಾನ್ನರಾಗ್ರ್ಯಾನ್**
**ಸ್ವೋಕ್ತಾಗಮೈರ್ಹರಿಹರಾರ್ಚನಭಕ್ತಿಯೋಗ್ಯೈಃ ।**
**ತೇಷಾಂ ನ ಕುಪ್ಯಸಿ ದಯಾಂ ಕುರುಷೇಂಬಿಕೇ ತ್ವಂ**
**ತಾನ್ಮೋಹಮಂತ್ರನಿಪುಣಾನ್ಪ್ರಥಯಸ್ಯಲಂ ಚ ॥೨೫॥**

---

ಜಗನ್ಮಾತೆಯಾದ ತಾಯಿಯೇ ! ನಿನ್ನ ರಜಸ್ತಮೋಗುಣಗಳು ಜನರನ್ನು ಅವರ ರಾಜಸ ಅಥವಾ ತಾಮಸವೃತ್ತಿಯನ್ನನುಸರಿಸಿ ಇತರ ದೇವತೋಪಾಸನೆಯಲ್ಲಿ ಆಸಕ್ತರಾಗಿರುವ ಹಾಗೆ ಪ್ರೇರಿಸುತ್ತಾ ನರರಲ್ಲಿ ಉತ್ತಮರಾದ ಬ್ರಾಹ್ಮಣರನ್ನೂ ನಿನ್ನ ಉಪಾಸನೆಯಿಂದ ವಿಮುಖರಾಗುವಂತೆಯೂ ಮಾಡುತ್ತವೆ. ಈ ವಿಷಯದಲ್ಲಿ ನೀನು ನಿನ್ನ ಅನಭಿಮತವನ್ನೂ ಸೂಚಿಸದಿರುವುದೂ ವ್ಯಕ್ತವಾಗುತ್ತದೆ. ಹೇಗೆಂದರೆ— ಲೋಕದಲ್ಲಿ ನಿನ್ನ ಸೇವೆಯಲ್ಲಿ ವಿಮುಖರಾದವರು ಆ ಇತರ ದೇವತೋಪಾಸನೆಗ ಳಿಂದಲೂ ಶ್ರೇಷ್ಠರೇ ಆಗುವಂತೆಯೂ, ಅವರು ತಾವಾಗಿಯೇ ಅನುಸರಿಸುವ ಮಾರ್ಗಕ್ಕೆ ಅನುಕೂಲವಾಗಿರುವಂತೆ ಉಕ್ತವಾದ, ಎಂದರೆ ಪುರುಷಕಲ್ಪಿತವಾಗಿ ಪೌರುಷೇಯಗಳಾದ, ಆಗಮಶಾಸ್ತ್ರಗಳನ್ನು ಅನುಸರಿಸಿ, ಹರಿ, ಹರ, ಇವರ ಉಪಾಸನೆಯನ್ನು ಭಕ್ತಿಯಿಂದ ಆಚರಿಸುವಂತೆಯೂ ನೂಡಿ, ಅಂಥವರ ಆ ಭಕ್ತಿ ಯನ್ನೂ ಮೆಚ್ಚಿ, ಆ ದೇವತೆಗಳ ಮೂಲಕವಾಗಿಯೇ ಆಭಕ್ತರಿಗೂ ಫಲಗಳನ್ನು ಕೊಡುತ್ತಾ, ದಯೆಯನ್ನು ತೋರಿಸುತ್ತೀಯೆ ! ಆಲ್ಲದೆ ಕೋಪವನ್ನೂ ಅಂಥವರಲ್ಲಿ ಮಾಡುವುದಿಲ್ಲವು. ಅಂಥವರನ್ನು ಮೋಹಕ ಮಂತ್ರಗಳಲ್ಲಿ ಎಂದರೆ ಆಕರ್ಷಕ ವಾಗಿರುವ ವಶ್ಯ, ಸ್ತಂಭನ, ಆಕರ್ಷಣ, ಮಾರಣ ಇತ್ಯಾದಿ ಮಂತ್ರಗಳ ಸಿದ್ಧಿಗಳಲ್ಲಿ ಕುಶಲರನ್ನು ಮಾಡಿ ಅವರು ಲೋಕದಲ್ಲಿ ಪ್ರಸಿದ್ಧಿಗೆ ಬರುವಂತೆಯೂ ಮಾಡು ತ್ತೀಯೆ. ನಿನ್ನ ಸೇವೆಯನ್ನು ಮಾಡದೆ ವಿಮುಖರಾದವರಿಗೆ ನಿನ್ನಿಂದ ಶಿಕ್ಷೆಯು ಆಗಬೇಕಾದುದು ತಪ್ಪಿ, ಪ್ರಕೃತದಲ್ಲಿ ಅವರಿಗೆ ಅವರು ಮಾಡುವ ಪೂಜಾ-ಉಪಾ ಸನಾ ಮುಂತಾದ ಕಾರ್ಯಾನುಗುಣವಾದ ಅಲ್ಪ ಫಲಗಳ ಪ್ರಾಪ್ತಿಯೂ, ಎಲ್ಲ ಅನು ಗ್ರಹಗಳಿಗೂ ಮೂಲಕಾರಣಳಾದ ನಿನ್ನಿಂದಲೇ ಉಂಟಾಗುತ್ತದೆ. ಈ ಕಾರ್ಯ ಗಳೆಲ್ಲವೂ ಆಯಾಯ ಪ್ರಾಣಿಗಳ ಕರ್ಮವಶದಿಂದ, ಸಂಸ್ಕಾರರುಚಿ ವಿಶೇಷಗಳಿಂದ, ಅವರವರ ಬುದ್ಧಿಯು ನಿನ್ನ ಉಪಾಸನೆಯ ವಿಷಯದಲ್ಲಿ ವಿಮುಖವಾಯಿತೆಂದು ನಾವುಗಳು ನಿಶ್ಚಯಿಸಿದರೂ, ಅಂಥವರ ವಿಷಯದಲ್ಲೂ ನೀನು ತೋರಿಸುವ ದಯೆ ಗಾಗಿ ನಿನ್ನನ್ನು ಕೊಂಡಾಡುತ್ತೇವೆ. ॥೨೫॥

**ತುರ್ಯೇ ಯುಗೇ ಭವತಿ ಚಾತಿಬಲಂ ಗುಣಸ್ಯ**
**ತುರ್ಯಸ್ಯ ತೇನ ಮಥಿತಾನ್ಯಸದಾಗಮಾನಿ ।**
**ತ್ವಾಂ ಗೋಪಯಂತಿ ನಿಪುಣಾಃ ಕವಯಃ ಕಲೌ ನೈ**
**ತ್ವತ್ಕಲ್ಪಿತಾನ್ಸುರಗಣಾನಪಿ ಸಂಸ್ತುವಂತಿ** ॥೨೬॥

---

ಲೋಕದಲ್ಲಿ ನಿನ್ನ ಸತ್ವರಜಸ್ತಮೋಗುಣಗಳ ಬಲಾಧಿಕ್ಯವು ಕೃತಯುಗವೇ ಮೊದಲಾದ ಯುಗಗಳಲ್ಲಿ ಕ್ರಮವಾಗಿ ಇತ್ತು. ಸಾಧಾರಣವಾದ ಮಿಶ್ರ ಸತ್ವ-ರಜಸ್ಸು ಮತ್ತು ತಮಸ್ಸೆಂಬ ಈ ಮೂರು ಗುಣಗಳಿಗಿಂತ ಮೇಲಾದ ಅತಿ ಶುದ್ಧ ಸತ್ವಗುಣಕ್ಕೆ ತುರ್ಯಗುಣವೆಂದೂ, ಆ ಗುಣವೇ ಪ್ರಾಧಾನ್ಯವನ್ನು ಪಡೆದು ಮುಂದಾಗಿರುವ ಸ್ವಭಾವವುಳ್ಳ ಜನರು ಅವತರಿಸಿರುವ ಕೃತಯುಗಕ್ಕೆ ತುರ್ಯ ಯುಗವೆಂದೂ ವ್ಯವಹಾರವಿದೆ. ಹೇಗೆಂದರೆ ಕೃತಯುಗದಲ್ಲಿ ನಿನ್ನ ಅತಿಶುದ್ಧ ಸತ್ವ ಗುಣವೂ, ತ್ರೇತಾಯುಗದಲ್ಲಿ ಮಿಶ್ರಸತ್ವಗುಣವೂ, ದ್ವಾಪರಯುಗದಲ್ಲಿ ರಜೋ ಗುಣವೂ, ಕಲಿಯುಗದಲ್ಲಿ ತಮೋಗುಣವೂ ಹೆಚ್ಚು ಪ್ರಬಲವಾಗಿಯೂ ಮುಂದಾ ಗಿಯೂ ಇರುತ್ತವೆ. ಅದರಂತೆಯೇ ಜನರಲ್ಲಿಯೂ ಅಂತಹ ಮನೋವೃತ್ತಿಯು ಪ್ರಮುಖವಾಗಿರುತ್ತದೆ. ಆಗ ಅತಿ ಶುದ್ಧವಾದ ಸತ್ವಗುಣವು ಹೆಚ್ಚಾಗಿ ಇತರ ಗುಣ ಗಳಿಗೆ ಅಭಿವೃದ್ಧಿಯು ಇರಲಿಲ್ಲವು. ಅದರಿಂದ ಒಳ್ಳೆಯ ಪ್ರಾರಬ್ಧಕರ್ಮವುಳ್ಳ ಪುಣ್ಯವಂತರಾದವರು ಆಗ ಅವತರಿಸಿ ಸಾಕ್ಷಾತ್ತಾಗಿ ನಿನ್ನ ಉಪಾಸನೆಯನ್ನು ಅವರು ಮಾಡುತ್ತಿದ್ದುದಲ್ಲದೆ ಎಲ್ಲರಿಗೂ ಬೋಧಿಸುತ್ತಿದ್ದರು. ಮತ್ತು ನಿಕೃಷ್ಟವಾದ ಇತರ ದೇವತೆಗಳೇ ಸರ್ವೋತ್ತಮರೆಂದು ಬೋಧಿಸುವ ಆಗಮುಗಳು ಅವರಿಂದ ಪ್ರೋತ್ಸಾಹ ವನ್ನು ಪಡೆಯದೆ ನಾಶವನ್ನು ಹೊಂದುತ್ತಿದ್ದುವು. ಆದರೆ ಈಚೆಗೆ ಬುದ್ಧಿವಂತರೆನಿಸಿ ಕೊಂಡಿರುವವರು ಉತ್ತಮವಾದ ಫಲವನ್ನು ಕೊಡುವ ನಿನ್ನ ಪೂಜಾಕ್ರಮ, ಮಂತ್ರೋಪಾಸನೆ ಇವುಗಳನ್ನು ಈ ಕಲಿಯುಗದಲ್ಲಿ ಬಚ್ಚಿಡುವರು! ತಾವೂ ಆಚರಿ ಸರು! ಈಗ ಅತಿ ಶುದ್ಧವಾದ ಸತ್ವಗುಣದ ಪ್ರಾಬಲ್ಯವು ತಪ್ಪಿರುವುದರಿಂದ ನೀನು ಸೃಷ್ಟಿಮಾಡಿರುವ ಇತರ ಸಣ್ಣ ದೇವತೆಗಳನ್ನು ಎಲ್ಲಕ್ಕೂ ಮಿಗಿಲಾದವರೆಂದು ಅಂಥ ವರು ಹೊಗಳುವರು. ಕೃತಾದಿ ಯುಗಗಳಲ್ಲಿಯಾದರೋ ಉತ್ತಮ ಪ್ರಾರಬ್ಧಕರ್ಮ ವಶದಿಂದ ಪುಣ್ಯವಂತರಾದವರು ಕೇವಲ ಅತಿಶುದ್ಧ ಸತ್ವಗುಣದ ಪ್ರಾಧಾನ್ಯದಿಂದ ಅವತರಿಸಿ ನಿನ್ನ ಸೇವೆಯನ್ನು ಮಾಡುತ್ತಿದ್ದರು. ಆದರೆ ಈ ಕಲಿಯುಗದಲ್ಲಿ ಅದಕ್ಕೆ ಸಂಭವವಿಲ್ಲದ್ದರಿಂದ ಇತರ ದೇವತೆಗಳ ಸೇವೆಯೂ ಅದಕ್ಕೆ ತಕ್ಕ ಫಲವೂ ಇವು

ಧ್ಯಾಯಂತಿ ಮುಕ್ತಿಫಲದಾಂ ಭುವಿ ಯೋಗಸಿದ್ಧಾಂ
ವಿದ್ಯಾಂ ಪರಾಂ ಚ ಮುನಯೋऽತಿವಿಶುದ್ಧಸತ್ತ್ವಾಃ ।
ತೇ ನಾಪ್ನುವಂತಿ ಜನನೀಜಠರೇ ತು ದುಃಖಂ
ಧನ್ಯಾಸ್ತ ಏವ ಮನುಜಾಸ್ತ್ವಯಿ ಯೇ ವಿಲೀನಾಃ ॥೨೭॥

ಚಿಚ್ಛಕ್ತಿರಸ್ತಿ ಪರಮಾತ್ಮನಿ ತೇನ ಸೋऽಪಿ
ವ್ಯಕ್ತೋऽಜಗತ್ಸು ವಿದಿತೋ ಭವಕೃತ್ಯಕರ್ತಾ ।

---

ಗಳಿಗೇ ಪ್ರಚಾರವು ಉಂಟಾಯಿತು. ಇದನ್ನು ಅನುಸರಿಸುವ ಜನಗಳು ಹೆಚ್ಚಿದುದ ರಿಂದ ಸಾಕ್ಷಾತ್ತಾಗಿ ನಿನ್ನ ಸೇವೆಯು ಲೋಕದಲ್ಲಿ ವಿರಳವಾಯಿತು. ಹೀಗೆ ನೀನೇ ಎಲ್ಲಕ್ಕೂ ಕಾರಣಳಾದರೂ ಜನರೂ ತಾವು ಆಚರಿಸಿಕೊಂಡು ಬಂದಿರುವ ಕರ್ಮ ಗಳು, ಅವರಿಂದ ಏರ್ಪಡುವ ಸಂಸ್ಕಾರ, ರುಚಿವಿಶೇಷಗಳು ಇವುಗಳಿಗೆ ಅನುಸಾರ ವಾಗಿ ಅವರಲ್ಲಿ ಈ ನಾಲ್ಕು ಗುಣಗಳ ಪ್ರಾಬಲ್ಯ ದೌರ್ಬಲ್ಯಗಳುಂಟಾಗುತ್ತವಾದುದ ರಿಂದ ಅಂತಹ ಅವರ ಸ್ವಭಾವ, ಕರ್ಮ ಇವುಗಳಿಗೆ ಅವರೇ ಮುಖ್ಯವಾದ ಜವಾಬು ರಿಯುಳ್ಳವರಾಗಿರುತ್ತಾರೆ. ಆದುದರಿಂದ ದೇವಿಗೆ ವೈಷಮ್ಯ ನೈರ್ಘೃಣ್ಯಗಳಿಲ್ಲ ವೆಂಬುದು ತಾತ್ಪರ್ಯವು. ॥೨೬॥

ಓ ತಾಯಿಯೇ, ಭೂಮಿಯಲ್ಲಿ ಹೀಗೆ ಪಾಮರ ಜನರು ಇತರ ದೇವತೆಗಳ ಪೂಜೆ ಉಪಾಸನೆಗಳಲ್ಲಿ ಆಸಕ್ತರಾದರೂ, ಪರಿಶುದ್ಧವಾದ ಸತ್ವಗುಣದಿಂದ ಕೂಡಿದ ಮುನಿಗಳು ಮುಕ್ತಿಫಲವನ್ನು ಕೊಡುವವಳಾದ, ಯೋಗಸಿದ್ಧಳಾದ, ಪರಾವಿದ್ಯಾ ರೂಪಳಾಗಿರುವ ನಿನ್ನನ್ನು ಧ್ಯಾನಮಾಡುತ್ತಾರೆ. ಧ್ಯಾನಮಾಡಿ ಧ್ಯಾನಪ್ರಕರ್ಷದಿಂದ ನಿನ್ನಲ್ಲಿ ಲೀನವಾದ ಚಿತ್ತವೃತ್ತಿಯುಳ್ಳವರಾಗಿ ಪುನಃ ಮಾತೃಗರ್ಭದಲ್ಲಿ ಉಂಟಾಗುವ ದುಃಖವನ್ನು ಎಂದರೆ ಪುನಃ ಜನ್ಮವನ್ನು ಅನುಭವಿಸುವುದಿಲ್ಲವು. ಯಾರು ಹೀಗೆ ಇರುವರೋ ಅವರೇ ಧನ್ಯರು. ಈ ಅಂಶವನ್ನು ಉಮಾಸಂಹಿತೆಯಲ್ಲಿ " ತೇಧನ್ಯಾಃ ಕೃತಕೃತ್ಯಾಸ್ಸ್ಯುಃ ಧನ್ಯಾ ತೇಷಾಂ ಪ್ರಸೂಃ ಕುಲಂ । ಯೇಷಾಂ ಚಿತ್ತಂ ಭವೇಲ್ಲೀನಂ ಶ್ರೀದೇವ್ಯಾಂ ಪರಸಂವಿದಿ ॥ " ಎಂದು ವಿವರಿಸಿದೆ. ॥೨೭॥

ದೇವತೆಗಳು ಇದುವರೆಗೂ ಮಾಯಾವಿಶಿಷ್ಟವಾದ ಪರಬ್ರಹ್ಮಸ್ವರೂಪವು ಪುಂರೂಪದಿಂದಲಾದರೂ, ಸ್ತ್ರೀರೂಪದಿಂದಲಾದರೂ ಇರಬಹುದಾದಕಾರಣ ಆ ಪುಂರೂಪವನ್ನು ವರ್ಣಿಸಿ ಈಗ ಸ್ತ್ರೀರೂಪವುಳ್ಳ ಪ್ರಕೃತಿರೂಪವನ್ನು ವರ್ಣಿಸುವರು.

**ಕೋಽನ್ಯಸ್ತ್ವಯಾ ವಿರಹಿತಃ ಪ್ರಭವತ್ಯಮುಷ್ಮಿನ್**
**ಕರ್ತುಂ ವಿಹರ್ತುಮಪಿ ಸಂಚಲಿತುಂ ಸ್ವಶಕ್ತ್ಯಾ** ॥೨೮॥

**ತತ್ತ್ವಾನಿ ಚಿದ್ವಿರಹಿತಾನಿ ಜಗದ್ವಿಧಾತುಂ**
**ಕಿಂ ವಾ ಕ್ಷಮಾಣಿ ಜಗದಂಬ ಯತೋ ಜಡಾನಿ ।**
**ಕಿಂ ಚೇಂದ್ರಿಯಾಣಿ ಗುಣಕರ್ಮಯುತಾನಿ ಸಂತಿ**
**ದೇವಿ ತ್ವಯಾ ವಿರಹಿತಾನಿ ಫಲಂ ಪ್ರದಾತುಂ** ॥೨೯॥

---

ಓ ತಾಯಿಯೇ, ಪರಬ್ರಹ್ಮನ ಸ್ವರೂಪವಾದ ಶುದ್ಧವಾದ ಜ್ಞಾನವು ಎಂದರೆ ಚೈತನ್ಯವು ಚಿಚ್ಛಕ್ತಿಯೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಅಂಶವನ್ನು "ಚಿಚ್ಛಕ್ತಿಃ ಪರಮೇಶ್ವರಸ್ಯ ವಿಮಲಾ ಚೈತನ್ಯಮೇವೋಚ್ಯತೇ" ಎಂಬಂತೆ ಸಂಕ್ಷೇಪ ಶಾರೀರಕ ಮುಂತಾದ ಗ್ರಂಥಗಳಲ್ಲೂ ವಿವರಿಸಿರುತ್ತದೆ. ಆದುದರಿಂದ ಅವನು ನಾಮರೂಪಗಳಿಂದ ವ್ಯಕ್ತನಾಗಿ ಪ್ರಸಿದ್ಧಿಯನ್ನು ಪಡೆದು ಈ ಲೋಕದಲ್ಲಿ ಸೃಷ್ಟ್ಯಾದಿಕಾರ್ಯಗಳನ್ನು ಮಾಡುವವನಾಗಿರುವನು. ಅಷ್ಟೇ ಅಲ್ಲದೆ ಈ ಚಿಚ್ಛಕ್ತಿಯ ಸಂಬಂಧವಿಲ್ಲದೆ ಯಾವನಾದರೂ ಈ ಲೋಕದಲ್ಲಿ ಸಾಧಾರಣವಾದ ಸೃಷ್ಟಿಯನ್ನು ಮಾಡುವುದಕ್ಕೂ, ಲೀಲೆಯಿಂದ ವಿಹರಿಸುವುದಕ್ಕೂ, ಕಡೆಗೆ ತನ್ನ ಶಕ್ತಿಯಿಂದಲೇ ಸಂಚರಿಸುವುದಕ್ಕೂ, ಸಮರ್ಥನಾಗುವನೇನು ? ಎಲ್ಲ ಬಗೆಯ ದೊಡ್ಡ ಮತ್ತು ಚಿಕ್ಕ ಕಾರ್ಯಗಳಿಗೂ ನೀನೇ ಮೂಲಕಾರಣಳಾಗಿರುವೆ. ಈ ಅಂಶವನ್ನು ದಕ್ಷಿಣಾಮೂರ್ತಿಸಂಹಿತೆಯಲ್ಲಿ "ಶಕ್ತ್ಯಾ ವಿನಾ ಶಿವೇ ಸೂಕ್ಷ್ಮೇ ನಾಮ ಧಾಮ ನ ವಿದ್ಯತೇ ॥" ಎಂದು ವಿವರಿಸಿದೆ. ಆದುದರಿಂದ, ಜ್ಞಾನಶಕ್ತಿಸ್ವರೂಪಿಣಿಯಾದ ದೇವಿಯ ಸರ್ವೋತ್ಕರ್ಷವು ಹೀಗೆ ಪ್ರಸಿದ್ಧವಾಗಿ ಇರುವುದೆಂದು ಅಭಿಪ್ರಾಯವು. ॥೨೮॥

ಓ ಜಗನ್ಮಾತೆಯೇ, ಚೈತನ್ಯಾಂಶದಿಂದ ವಿಯುಕ್ತವಾದ ಆ ಚಿಚ್ಛಕ್ತಿಯ ಬೆಂಬಲವಿಲ್ಲದೆ ಪ್ರಕೃತಿ, ಮಹತ್ತತ್ತ್ವ, ಅಹಂಕಾರ ಮುಂತಾದ ತತ್ತ್ವಗಳು ಜಡಗಳಾದ ಕಾರಣ ಜಗತ್ತನ್ನು ನಿರ್ಮಿಸಲು ಸಮರ್ಥಗಳಾಗುವುವೇನು ? ಓ ದೇವಿಯೇ, ಗುಣಕರ್ಮಗಳಿಂದ ಕೂಡಿದ ಇಂದ್ರಿಯಗಳು ನಿನ್ನ ಸಂಬಂಧವಿಲ್ಲದಿದ್ದರೆ ತಮ್ಮ ತಮ್ಮ ಪ್ರಯೋಜನಗಳನ್ನು ಉಂಟುಮಾಡಿ ಕೊಡಬಲ್ಲವುಗಳು ಆದಾವೇನು ? ಎಂದಿಗೂ ಆಗಲಾರವು. ಹೀಗೆ ಆ ಇಪ್ಪತ್ತುನಾಲ್ಕು ಸಾಂಖ್ಯತತ್ತ್ವಗಳೂ ನಿನ್ನ ಬೆಂಬಲದಿಂದಲೇ ತಮ್ಮ ಕಾರ್ಯಗಳನ್ನು ನೆರವೇರಿಸುತ್ತಿರುತ್ತವೆ. ॥೨೯॥

ದೇವಾ ಮಖೇಷ್ವಪಿ ಹುತಂ ಮುನಿಭಿಃ ಸ್ವಭಾಗಂ
ಗೃಹ್ಣೀಯುರಂಬ ವಿಧಿವತ್ಪ್ರತಿಪಾದಿತಂ ಕಿಂ।
ಸ್ವಾಹಾ ನ ಚೇತ್ತ್ವಮಸಿ ತತ್ರ ನಿಮಿತ್ತಭೂತಾ
ತಸ್ಮಾತ್ತ್ವಮೇವ ನನು ಪಾಲಯಸೀವ ವಿಶ್ವಂ ॥೩೦॥

ಸರ್ವಂ ತ್ವಯೇದಮಖಿಲಂ ವಿಹಿತಂ ಭವಾದೌ
ತ್ವಂ ಪಾಸಿ ವೈ ಹರಿಹರಪ್ರಮುಖಾನ್ ದಿಗೀಶಾನ್ ।
ಕಾಲೇಽತ್ಸಿ ವಿಶ್ವಮಪಿ ತೇ ಚರಿತಂ ಭವಾದ್ಯಂ
ಜಾನಂತಿ ನೈವ ಮನುಜಾಃ ಕ್ವ ನು ಮಂದಭಾಗ್ಯಾಃ ॥೩೧॥

---

ಓ ದೇವಿಯೇ! ನೀನು, ದೇವತೆಗಳಾದ ನಮಗೂ ಯಜ್ಞದಲ್ಲಿ ನಮನಮಗೆ ಬರಬೇಕಾದ, ಋಷಿಗಳಿಂದ ವಿಧಿವತ್ತಾಗಿ ಕೊಡಲ್ಪಟ್ಟ, ಹವಿಸ್ಸನ್ನು ಹೊಂದಲು ನೀನು ಸ್ವಾಹಾರೂಪಳಾಗಿರುತ್ತಾ ಸಹಾಯಮಾಡುತ್ತಿದೀಯೆ. ನಮಗೆ ಯಜ್ಞಭಾಗ ಪ್ರಾಪಕ ನಿಮಿತ್ತಳಾದ ನೀನು ಇಲ್ಲದಿದ್ದರೆ ನಮಗೆ ಅದು ದೊರೆಯುತ್ತಿದ್ದಿಲ್ಲವು. ನಮ್ಮೆಲ್ಲರಿಗೂ ಹೀಗೆ ರಕ್ಷಣೆಯನ್ನು ಕೊಡುವ ನಿನ್ನಿಂದ ಸಮಸ್ತವಾದ ಪ್ರಪಂಚವೂ ರಕ್ಷಿಸಲ್ಪಡುತ್ತಿರುವುದು. ಈ ಅಂಶವನ್ನು ಭಗವದ್ಗೀತೆಯಲ್ಲಿ " ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ | ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ " ಎಂದು ಶ್ರೀಕೃಷ್ಣಪರಮಾತ್ಮನೂ ವಿವರಿಸಿರುವನು. ॥೩೦॥

ಓ ದೇವಿಯೇ, ಈ ಪ್ರಪಂಚವೆಲ್ಲವೂ ನಿನ್ನಿಂದ ಸೃಷ್ಟಿಯ ಮೊದಲಿನಲ್ಲಿ ಸೃಷ್ಟಿಮಾಡಲ್ಪಟ್ಟಿತು. ನೀನು ಹರಿ, ಹರ, ಇವರೇ ಮೊದಲಾದವರನ್ನೂ, ಮತ್ತು ಇಂದ್ರಾದಿ ದಿಕ್ಪಾಲಕರನ್ನೂ ಸಹ ಸೃಷ್ಟಿಮಾಡಿ ಅವರನ್ನೂ ಅವರ ಮೂಲಕವಾಗಿ ಈ ಪ್ರಪಂಚವನ್ನೂ ರಕ್ಷಿಸುತ್ತೀಯೆ. ಅಲ್ಲದೆ ಪ್ರಳಯಕಾಲದಲ್ಲಿ ಈ ಪ್ರಪಂಚವೆಲ್ಲವನ್ನೂ ಭಕ್ಷಿಸುತ್ತೀಯೆ, ಸಂಹಾರಮಾಡುತ್ತೀಯೆ, ಎಂದರೆ ಕಾರಣರೂಪಳಾದ ನಿನ್ನಲ್ಲಿಯೇ ಅಡಗಿಸಿಕೊಳ್ಳುತ್ತೀಯೆ. ಪ್ರಪಂಚಕ್ಕೆ ಮುಂಚಿನಿಂದಲೂ ಇರುವ ನಿನ್ನ ಈ ಚರಿತೆಯನ್ನು ಸಮಗ್ರವಾಗಿ ದೇವತೆಗಳೂ ಸಹ ತಿಳಿದಿರುವುದಿಲ್ಲ! ಹೀಗಿರುವಲ್ಲಿ ಅದೃಷ್ಟಹೀನರಾಗಿರುವ ಮನುಷ್ಯರು ಹೇಗೆತಾನೆ ತಿಳಿಯುವರು? ॥೩೧॥

ಹತ್ವಾಽಸುರಂ ಮಹಿಷರೂಪಧರಂ ಮಹೋಗ್ರಂ
ಮಾತಸ್ತ್ವಯಾ ಸುರಗಣಾಃ ಕಿಲ ರಕ್ಷಿತೋಽಯಂ ।
ಕಾಂ ತೇ ಸ್ತುತಿಂ ಜನನಿ ಮಂದಧಿಯೋ ವಿದಾಮೋ
ವೇದಾ ಗತಿಂ ತವ ಯಥಾರ್ಥತಯಾ ನ ಜಗ್ಮುಃ ॥೩೨॥

ಕಾರ್ಯಂ ಕೃತಂ ಜಗತಿ ನೋ ಯದಸೌ ದುರಾತ್ಮಾ
ವೈರೀ ಹತೋ ಭುವನಕಂಟಕದುರ್ವಿಭಾವ್ಯಃ ।
ಕೀರ್ತಿಃ ಕೃತಾ ನನು ಜಗತ್ಸು ಕೃಪಾ ವಿಧೇಯಾ
ಪ್ಯಸ್ಮಾಂಶ್ಚ ಪಾಹಿ ಜನನಿ ಪ್ರಥಿತಪ್ರಭಾವೇ ॥೩೩॥

---

ಓ ತಾಯಿಯೇ, ದೇವತೆಗಳಾದ ನಮಗೆ ನೀನೇ ಎಲ್ಲ ವಿಷಯಗಳಲ್ಲಿಯೂ ಸಹಾಯಮಾಡಿ ಕಾಪಾಡುತ್ತಿರುವೆ. ಈಗ ಮಹಿಷನ ಆಕಾರವನ್ನು ಧರಿಸಿದ್ದ ಬಹಳ ಭಯಂಕರನಾದ ರಾಕ್ಷಸನನ್ನು ಕೊಂದು ನೀನು ದೇವತೆಗಳ ಸಮೂಹವನ್ನು ರಕ್ಷಿಸಿರುತ್ತೀಯೆ. ವೇದಗಳಿಗೂ ನಿಷ್ಕರ್ಷೆಯಾಗಿ ವಾಚ್ಯರೀತಿಯಿಂದ ಗೋಚರವಾಗದಿರುವ ನಿನ್ನ ಪಾರಮಾರ್ಥಿಕವಾದ ತತ್ವದಸ್ವರೂಪವನ್ನು ದಡ್ಡರಾದ ನಾವು ಯಾವ ಪ್ರಕಾರವಾಗಿ ಸ್ತುತಿಯನ್ನು ಮಾಡಲು ಸಮರ್ಥರಾದೇವು? ವೇದವೇ ನಿನ್ನ ಸ್ವರೂಪವನ್ನು ವಿವರಿಸಿ ಹೇಳುವುದಕ್ಕೆ ಪ್ರಾರಂಭಿಸಿದರೂ, ಆ ತತ್ವವು ಮನಸ್ಸು ಮತ್ತು ಮಾತು ಇವುಗಳಿಗೂ ಗೋಚರವಲ್ಲವು, ಎಂಬುದಾಗಿ ಸಾರಿ ಹೇಳಿ ನಿನ್ನ ರೂಪವನ್ನು ಅಷ್ಟು ಮಾತ್ರವಾಗಿಯೇ ಹೇಳಿರುವುದು. ಆದುದರಿಂದ ನಿನ್ನನ್ನು ಹೇಗೆ ಸ್ತೋತ್ರಮಾಡಲೂ ನಮಗೆ ವಾಸ್ತವವಾಗಿ ಶಕ್ತಿಯು ಇಲ್ಲವು. ಅದಕ್ಕೂ ನಿನ್ನ ಪ್ರೇರಣೆಯ ಸಹಾಯವೇ ಬೇಕಾಗಿರುವುದು, ಎಂದು ತಾತ್ಪರ್ಯವು. ಈ ಅಂಶವನ್ನು " ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । " ಎಂದು ಶ್ರುತಿಯಲ್ಲಿಯೇ ಹೇಳಿ ವಿವರಿಸಿದೆ. ॥೩೨॥

ಪ್ರಸಿದ್ಧಿಯನ್ನು ಹೊಂದಿರುವ ಮಹಿಮೆಯುಳ್ಳ ಓ ದೇವಿಯೇ, ನಮಗೆ ನಿನ್ನಿಂದಲೇ ಆಗಬೇಕಾಗಿದ್ದ ಹಿತಕರವಾದ ರಕ್ಷಣೆಯ ಕಾರ್ಯವು ಮಾಡಲ್ಪಟ್ಟಿತು. ಹೇಗೆಂದರೆ ಎಲ್ಲ ಲೋಕಕ್ಕೆ ಮುಳ್ಳಿನಂತೆ ಹಿಂಸೆಯನ್ನು ಕೊಡುವವನಾಗಿದ್ದ, ಮನಸ್ಸಿನಲ್ಲಿ ಯೋಚಿಸಿದರೂ ದುಃಖವನ್ನುಂಟುಮಾಡುತ್ತಿದ್ದ, ದುಷ್ಟನಾದ ಮಹಿಷಾಸುರನೆಂಬ ಶತ್ರುವು ನಿನ್ನಿಂದ ಸಂಹರಿಸಲ್ಪಟ್ಟನು. ಲೋಕದಲ್ಲಿ ಕೀರ್ತಿಯೂ ಹರಡಲ್ಪ

|| ವ್ಯಾಸ ಉವಾಚ ||

**ಏವಂ ಸ್ತುತಾ ಸುರೈರ್ದೇವೀ ತಾನುವಾಚ ಮೃದುಸ್ವರಾ ।**
**ಅನ್ಯತ್ಕಾರ್ಯಂ ಚ ದುಃಸಾಧ್ಯಂ ಬ್ರುವಂತು ಸುರಸತ್ತಮಾಃ ||೩೪||**

**ಯದಾ ಯದಾ ಹಿ ದೇವಾನಾಂ ಕಾರ್ಯಂ ಸ್ಯಾದತಿದುರ್ಘಟಂ ।**
**ಸ್ಮರ್ತವ್ಯಾಹಂ ತದಾ ಶೀಘ್ರಂ ನಾಶಯಿಷ್ಯಾಮಿ ಚಾಽಽಪದಂ ||೩೫||**

|| ದೇವಾ ಊಚುಃ ||

**ಸರ್ವಂ ಕೃತಂ ತ್ವಯಾ ದೇವಿ ಕಾರ್ಯಂ ನಃ ಖಲು ಸಾಂಪ್ರತಂ ।**
**ಯದಯಂ ನಿಹತಃ ಶತ್ರುರಸ್ಮಾಕಂ ಮಹಿಷಾಸುರಃ ||೩೬||**

**ಸ್ಮರಿಷ್ಯಾಮೋ ಯಥಾ ತೇಽಮ್ಬ ಸದೈವ ಪದಪಂಕಜಂ ।**
**ತಥಾ ಕುರು ಜಗನ್ಮಾತರ್ಭಕ್ತಿಂ ತ್ವಯ್ಯಪ್ಯಚಂಚಲಾಂ ||೩೭||**

---

ಟ್ಟಿತು. ಓ ತಾಯಿಯೇ, ಲೋಕಗಳನ್ನು ಯಾವಾಗಲೂ ನೀನು ದಯೆಯಿಂದ ನೋಡುತ್ತಿರು. ನಮ್ಮನ್ನೂ ಈಗಿನಂತೆಯೇ ಮುಂದೆಯೂ ಕಾಪಾಡುತ್ತಿರು. ||೩೩||

ವ್ಯಾಸಋಷಿಯು ಹೇಳಿದನು--ದೇವತೆಗಳು ದೇವಿಯನ್ನು ಹೀಗೆ ಸ್ತೋತ್ರ ಮಾಡಲು ಅದನ್ನು ಕೇಳಿ ದೇವಿಯು ಮೃದುವಾದ ಸ್ವರದಿಂದ ಅವರನ್ನು ಕುರಿತು ಎಲೈ ದೇವತೆಗಳಿರಾ, ನೀವು ನಿಮ್ಮಿಂದಲೇ ಸಾಧ್ಯವಾಗದಿರುವ ಬೇರೆ ಯಾವುದಾದರೂ ಕಾರ್ಯವಿದ್ದಲ್ಲಿ ಅದನ್ನು ನನಗೆ ಹೇಳಿ. ದೇವತೆಗಳಾದ ನಿಮಗೆ ಅಸಾಧ್ಯವಾದ ಕಾರ್ಯವು ಯಾವಾಗ ಒದುಗುವುದೋ ಆಗ ನೀವು ನನ್ನನ್ನು ಸ್ಮರಿಸಿಕೊಳ್ಳಿರಿ. ಆವಾಗಲೆಲ್ಲವೂ ನಾನು ಬೇಗನೆ ಬಂದು ನಿಮ್ಮ ವಿಪತ್ತುಗಳನ್ನು ಪರಿಹರಿಸುವೆನು. ಎಂದು ಹೇಳಿದಳು. ||೩೪-೩೫||

ದೇವತೆಗಳು ಹೇಳಿದರು—ಓ ದೇವಿಯೇ, ಈಗ ನಮ್ಮ ಕೆಲಸಗಳೆಲ್ಲವೂ ನಿನ್ನಿಂದ ಸಂಪೂರ್ಣವಾಗಿ ಮಾಡಲ್ಪಟ್ಟಿತು. ನಮ್ಮ ಶತ್ರುವಾಗಿದ್ದ ಮಹಿಷಾಸುರನು ಸಂಹರಿಸಲ್ಪಟ್ಟನು. ಓ ಜಗನ್ಮಾತೆಯೇ, ನಾವು ನಿನ್ನ ಪಾದಕಮಲಗಳನ್ನು ಹೇಗಾದರೆ ಯಾವಾಗಲೂ ಸ್ಮರಿಸುತ್ತಿರಬಹುದೋ ಹಾಗೆ ನೀನು ನಮಗೆ ಅನುಗ್ರಹವನ್ನು ಮಾಡಬೇಕು ಮತ್ತು ನಿನ್ನಲ್ಲಿ ಸ್ಥಿರವಾದಭಕ್ತಿಯನ್ನೂ ನಮಗೆ ಕರುಣಿಸಿ ಕೊಡಬೇಕು. ||೩೬-೩೭||

**ಅಪರಾಧಸಹಸ್ರಾಣಿ ಮಾತೈವ ಸಹತೇ ಸದಾ ।**
**ಇತಿ ಜ್ಞಾತ್ವಾ ಜಗದ್ಯೋನಿಂ ನ ಭಜಂತೇ ಕುತೋ ಜನಾಃ   ॥೩೮॥**

**ದ್ವೌ ಸುಪರ್ಣೌ ತು ದೇಹೇಽಸ್ಮಿಂಸ್ತಯೋಃ ಸಖ್ಯಂ ನಿರಂತರಂ ।**
**ನಾನ್ಯಃ ಸಖಾ ತೃತೀಯೋಽಸ್ತಿ ಯೋಽಪರಾಧಂ ಸಹೇತ ಹಿ   ॥೩೯॥**

---

ಹೇ ಜಗದಂಬಿಕೇ, ಯಾವಾಗಲೂ ತಾಯಿಯು ಮಾತ್ರವೇ ನಿರ್ವ್ಯಾಜ ಕರುಣೆಯ ಮನೋವೃತ್ತಿಯಿಂದ ಮಕ್ಕಳ ಅನೇಕ ಅಪರಾಧಗಳನ್ನೂ ಸಹಿಸಿ ಕ್ಷಮಿಸುವಳು. ಈ ಲೋಕದಲ್ಲೂ ಸಾಮಾನ್ಯವಾಗಿ ಕಾಣಬರುತ್ತಿರುವ ಈ ಸ್ವಭಾವವನ್ನು ತಿಳಿದಿದ್ದರೂ ಜನರು ಇಷ್ಟುಮಟ್ಟಿನ ಅಪಾರವಾದ ದಯೆಯುಳ್ಳ ಜಗತ್ಕಾರಣಳಾದ ದೇವಿಯನ್ನು ಏತಕ್ಕೆ ಪೂಜಿಸುವುದಿಲ್ಲವೋ ! ॥೩೮॥

ಈ ಶರೀರದಲ್ಲಿ ಒಳ್ಳೆಯ ರೆಕ್ಕೆಗಳುಳ್ಳ ಮತ್ತು ಚನ್ನಾಗಿ ಹಾರಬಲ್ಲ ಎರಡು ಹಕ್ಕಿಗಳಿರುತ್ತವೆ. ಯಾವಾಗಲೂ ಎಡೆಬಿಡದೆ ಇರುವ ಅವುಗಳಿಗೆ ಸ್ನೇಹವು ಸರ್ವದಾ ಇರುತ್ತದೆ. ಇವುಗಳಲ್ಲಿ ಒಂದು ಹಕ್ಕಿಯು ಮಾಡುತ್ತಿರುವ ಅಪರಾಧವನ್ನು ಇನ್ನೊಂದು ಹಕ್ಕಿಯು ಸಾಕ್ಷಿಯಾಗಿ ನೋಡುತ್ತಾ ಸಹಿಸುತ್ತದೆ. ಇವೆರಡಕ್ಕಿಂತ ಬೇರೆಯಾದ ಸ್ನೇಹಿತನಾದ, ಮೂರನೆಯ ಪದಾರ್ಥವಿಲ್ಲವು. "ದ್ವಾಸುಪರ್ಣಾ" ಎಂಬ ಮುಂಡಕೋಪನಿಷತ್ತಿನ ಶ್ರುತಿಯಲ್ಲಿ ಈ ರೀತಿಯಾಗಿ ವಿವರಿಸುವರು. ಈ ಎರಡು ಹಕ್ಕಿಗಳು ಜೀವ-ಪರಮಾತ್ಮರು. ಜೀವನಿಗೆ ಉಂಟಾಗಿರುವ ಈ ಜೀವ ಸ್ವರೂಪವು ಪರಮಾತ್ಮನ ವಿಷಯದಲ್ಲಿ ಉಂಟಾಗಿರುವ ಭ್ರಾಂತಿಜ್ಞಾನದಿಂದ ಉಂಟಾಗಿದೆ. ಈ ಅಜ್ಞಾನವು ಯಥಾರ್ಥಜ್ಞಾನದಿಂದ ಎಂದರೆ ಈ ಜೀವಾತ್ಮ-ಪರಮಾತ್ಮರು ಪಾರಮಾರ್ಥಿಕವಾದ ಸ್ವರೂಪದಲ್ಲಿ ಸಚ್ಚಿದಾನಂದಾತ್ಮಕರಾಗಿ ಅಭಿನ್ನರಾಗಿರುತ್ತಾರೆ. ಎಂಬ ತಿಳಿವಳಿಕೆಯಿಂದ ನಷ್ಟವಾಗುತ್ತದೆ. ಈ ಚೈತನ್ಯವೇ ನಿನ್ನ ಚಿಚ್ಛಕ್ತಿಯ ರೂಪವೆಂದು ಪ್ರಸಿದ್ಧವಾಗಿರುವುದು. ಹೀಗಿರುವಲ್ಲಿ ಜೀವಭಾವದಿಂದ ಮಾಡಲ್ಪಟ್ಟ ಅಪರಾಧಗಳೆಲ್ಲವೂ ಸಚ್ಚಿದಾನಂದಾತ್ಮಕವಾದ ಪರಮಾತ್ಮನ ಚೈತನ್ಯರೂಪಳಾದ ಚಿಚ್ಛಕ್ತಿಯ ಸ್ವರೂಪದಿಂದ ಇರುವ ನಿನ್ನಿಂದ ಸರ್ವದಾ ಸಹ್ಯವಾಗಿಯೂ, ಕ್ಷಮ್ಯವಾಗಿಯೂ ಇರುವುವು. ಅಪರಾಧವನ್ನು ಸಹಿಸಿ ಕಾಪಾಡುವ ಸ್ನೇಹಿತನು ನೀನು ಹೊರತು ಬೇರೆಯಾದ ಮೂರನೆಯವನು ಇಲ್ಲವು. ಅಜ್ಞಾನದಿಂದ ಜೀವನಾಗಿರುವ ಚೈತನ್ಯವು ಅಪರಾಧವನ್ನು ಮಾಡಿ ಅದನ್ನು ನಾಶಮಾಡಿಕೊಳ್ಳುವುದಕ್ಕಾಗಿ ಪರ

**ತಸ್ಮಾಜ್ಜೀವಃ ಸಖಾಯಂ ತ್ವಾಂ ಹಿತ್ವಾ ಕಿಂ ನು ಕರಿಷ್ಯತಿ ।**
**ಪಾಪಾತ್ಮಾ ಮಂದಭಾಗ್ಯೋಽಸೌ ಸುರಮಾನುಷಯೋನಿಷು ॥೪೦॥**

**ಪ್ರಾಪ್ಯ ದೇಹಂ ಸುದುಷ್ಪ್ರಾಪಂ ನ ಸ್ಮರೇತ್ತ್ವಾಂ ನರಾಧಮಃ ।**
**ಮನಸಾ ಕರ್ಮಣಾ ವಾಚಾ ಬ್ರೂಮಃ ಸತ್ಯಂ ಪುನಃ ಪುನಃ ॥೪೧॥**

---

ಮಾತ್ಮನಲ್ಲಿ ಬೇಡುವನು. ಆದುದರಿಂದ ಜೀವನ ಅಪರಾಧವನ್ನು ಸಹಿಸುವವನು ಪರಮಾತ್ಮನೇ; ಎಂದರೆ ಆ ಪರಮಾತ್ಮನಲ್ಲಿರುವ ಚಿಚ್ಛಕ್ತಿರೂಪಳೂ ಜಗನ್ಮಾತೆಯೂ ಆದ ನೀನೇ, ಹೊರತು ಬೇರೆ ಯಾರೂ ಮೂರನೆಯವನು ಇಲ್ಲವು ಎಂದು ತಾತ್ಪರ್ಯವು. ॥೩೯॥

ಆದುದರಿಂದ ಜೀವನು ತಾನು ಮಾಡಿದ ಅಪರಾಧವನ್ನು ಸಹಿಸತಕ್ಕ, ಕ್ಷಮಿಸ ತಕ್ಕ ಸ್ನೇಹಿತನು ಪರಮಾತ್ಮನ ಚಿಚ್ಛಕ್ತಿರೂಪಿಯಾದ ನೀನು ಹೊರತು ಬೇರೆ ಯಿಲ್ಲದೆ ಇರುವಾಗ, ಅಂತಹ ನಿನ್ನನ್ನು ಬಿಟ್ಟು ಜೀವನು ಏನನ್ನು ಮಾಡಬಲ್ಲನು? ಏಕೆಂದರೆ ಎಲ್ಲರಿಗೂ ನೀನೇ ತಾಯಿ, ತಂದೆ ಮತ್ತು ಸ್ನೇಹಿತನೂ ಆಗಿರುವೆ. ಆದುದ ರಿಂದ ನಿನ್ನನ್ನು ಬಿಟ್ಟು ಬೇರೆ ಗತಿ ಇಲ್ಲವು. ಪಾಪವುಳ್ಳ, ಕ್ಷೀಣಿಸಿರುವ ಭಾಗ್ಯವುಳ್ಳ ಜೀವನು, ಅವನು ದೇವತೆಗಳಲ್ಲಿ ಒಬ್ಬನಾಗಿರಲಿ ಅಥವಾ ಮಾನವರಲ್ಲಿ ಒಬ್ಬನಾಗಿ ರಲಿ, ನಿನ್ನ ಪೂಜೆ ಮತ್ತು ಉಪಾಸನೆಗಳಿಂದಲೇ ಸದ್ಗತಿಯನ್ನು ಪಡೆಯಬೇಕಾಗಿದೆ ಎಂದು ತಾತ್ಪರ್ಯವು. ॥೪೦॥

ಹೀಗಿದ್ದರೂ ದೇವಜನ್ಮವನ್ನಾಗಲಿ, ಮಾನವಜನ್ಮವನ್ನಾಗಲಿ ಪಡೆಯುವುದು ಸುಲಭವಲ್ಲವು. ಅದು ತುಂಬ ಕಷ್ಟಪಟ್ಟು ಆಚರಿಸಿದ ಧರ್ಮದಿಂದ ಲಭ್ಯವಾಗು ತ್ತದೆ. ಅಂತಹ ಜನ್ಮವು ದೊರೆತಿರುವಾಗಲೂ ಯಾವ ಮಾನವನು ನಿನ್ನನ್ನು ಮನ ಸ್ಸಿನಲ್ಲಿ ಧ್ಯಾನಿಸುವುದಿಲ್ಲವೋ, ಮಾತಿನಲ್ಲಿ ನಿನ್ನ ಗುಣವರ್ಣನೆಯ ಸ್ತೋತ್ರಗಳನ್ನು ಹೇಳುವುದಿಲ್ಲವೋ, ಮತ್ತು ಕಾರ್ಯದಲ್ಲಿ ನಿನ್ನ ಅರ್ಚನೆ, ಸೇವೆ ಇವನ್ನೂ, ನಿನ್ನ ಭಕ್ತರಿಗೆ ಉಪಕಾರ ಮಾಡುವುದರ ಮೂಲಕವಾಗಿಯೂ ನಿನ್ನ ಸೇವೆಯನ್ನು ಮಾಡು ತ್ತಿರುವುದಿಲ್ಲವೋ ಅಂಥವನು ಪಾಪಿಷ್ಠನೂ, ಅದೃಷ್ಟಹೀನನೂ ಆಗಿರುವ ನೀಚ ಮನುಷ್ಯನೆನಿಸುವನೆಂಬುದಾಗಿ ನಾವು ಅನೇಕವೇಳೆ ಸತ್ಯವಾಗಿ ಸಾರಿಸಾರಿ ಹೇಳು ತ್ತೀವೆ. ॥೪೧॥

**ಸುಖೇ ವಾಪ್ಯಥ ವಾ ದುಃಖೇ ತ್ವಂ ನಃ ಶರಣಮದ್ಭುತಂ ।**
**ಪಾಹಿ ನಃ ಸತತಂ ದೇವಿ ಸರ್ವೈಸ್ತ್ವವ ವರಾಯುಧೈಃ ॥೪೨॥**
**ಅನ್ಯಥಾ ಶರಣಂ ನಾಸ್ತಿ ತ್ವತ್ಪಾದಾಂಬುಜರೇಣುತಃ ।**

---

ಓ ತಾಯಿಯೇ, ನಾವು ಸುಖವನ್ನು ಅನುಭವಿಸುವಾಗಲಾದರೂ, ಅಥವಾ ದುಃಖಾನುಭವದ ವೇಳೆಯಲ್ಲಾದರೂ ಆಶ್ಚರ್ಯಕರಳಾದ ನೀನೇ ನಮಗೆ ರಕ್ಷಕಳಾಗಿ ಇರುತ್ತೀಯೆ. ಹೇಗೆಂದರೆ, ಸುಖವನ್ನು ಪಡೆದಾಗ ನಾವೇ ಆ ಸುಖವನ್ನು ಸಂಪಾದಿಸಿದೆವೆಂಬ ಅಹಂಕಾರ ಬಂದು ದೇವಿಯ ಬೆಂಬಲವನ್ನು, ಕೇನೋಪನಿಷತ್ತಿನಲ್ಲಿ ವಿವರಿಸಿರುವಂತೆ, ಮರೆಯಬಹುದು. ಹಾಗೆಯೇ ದುಃಖ ಬಂದಾಗ ದೇವಿಯು ಕರುಣೆ ಇಲ್ಲದೆ ಕ್ರೂರಳು ಎಂದು ದೂಷಿಸಬಹುದು. ಅಥವಾ ದೇವಿಯೇ ಇಲ್ಲವೆಂಬ ತಪ್ಪು ತಿಳಿವಳಿಕೆಗೆ ಗುರಿಯಾಗಬಹುದು. ಇವೆರಡನ್ನೂ ತಪ್ಪಿಸಿ ಕಾಪಾಡು. ಎಂದು ಭಾವವು. ಓ ದೇವಿಯೇ, ನಿನ್ನ ಶ್ರೇಷ್ಠವಾದ ಎಲ್ಲ ಆಯುಧಗಳಿಂದಲೂ ನಮ್ಮನ್ನು ಯಾವಾಗಲೂ ರಕ್ಷಿಸುತ್ತಿರು. ನಿನ್ನ ಪಾದಕಮಲದ ಧೂಳು ಹೊರತು ನಮಗೆ ಬೇರೆ ರಕ್ಷಕರೂ ಯಾರೂ ಇಲ್ಲವು.

ದೇವಿಯ ಮಹಿಮೆಯ ಹೆಚ್ಚುಗಾರಿಕೆಯನ್ನು ಗುಣವಿಶೇಷಗಳನ್ನು ಹೀಗೆ ಸಂಗ್ರಹಿಸಬಹುದು. ದೇವಿಯು ಶುದ್ಧ ಪರಬ್ರಹ್ಮತತ್ವದ ಪ್ರಥಮಸ್ಪಂದಶಕ್ತಿರೂಪಳು. ಬ್ರಹ್ಮಾ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಿಗೂ ಅವರ ಸಹಧರ್ಮಿಣಿಯರಾದ ವಾಣೀ, ಲಕ್ಷ್ಮೀ, ಉಮಾದೇವಿಯರಿಗೂ, ಇತರರಿಗೂ, ಈ ಪ್ರಪಂಚಕ್ಕೂ ಮೂಲ ಕಾರಣಳು. ತ್ರಿಮೂರ್ತಿಗಳಲ್ಲಿರುವ ಸೃಷ್ಟಿ, ಪಾಲನ, ಸಂಹರಣ ಶಕ್ತಿಗಳು ಆ ದೇವಿಯ ದಯೆಯಿಂದಲೇ ತ್ರಿಮೂರ್ತಿಗಳಿಗೆ ದೊರೆತಿವೆ. ಆದುದರಿಂದ ದೇವಿಯು ಆದಿಶಕ್ತಿ, ಪರಾಶಕ್ತಿರೂಪಳು. ರಾಮ, ಕೃಷ್ಣ ಮುಂತಾದಅವತಾರಗಳೂ, ಮಾರೀಚ, ಕಶ್ಯಪ, ನಾರದ ಮುಂತಾದ ಬ್ರಹ್ಮಮಾನಸಪುತ್ರರೂ, ಇಂದ್ರಾದಿ ಲೋಕಪಾಲಕರೂ ಆ ದೇವಿಯ ಅಂಶಾಂಶರು. ತ್ರಿಮೂರ್ತಿಗಳೇ ಮುಂತಾದವರೂ ಕರ್ಮಬದ್ಧರು, ಹುಟ್ಟು-ಸಾವುಗಳುಳ್ಳವರು, ಶಾಪಾದಿದೋಷಗ್ರಸ್ತರು. ದೇವಿಯು ನಿರ್ದೋಷಿಯು ! ತ್ರಿಮೂರ್ತಿಗಳನ್ನೂ ಅವರಿಗೆ ಬಂದೊದಗಿದ್ದ ವಿಪತ್ತು ಮತ್ತು ಅಪಾಯಗಳಿಂದ ದೇವಿಯೇ ಕಾಪಾಡಿದಾಳೆ. ತ್ರಿಮೂರ್ತಿಗಳು ತಮ್ಮ ಭಕ್ತರ ಕೋರಿಕೆಗಳನ್ನು ಸಲ್ಲಿಸುವುದೂ ಆ ದೇವಿಯ ಅನುಗ್ರಹದ ಮುಖಾಂತರವಾಗಿಯೇ. ತ್ರಿಮೂರ್ತಿಗಳೂ ಆ ದೇವಿಯನ್ನು ಆರಾಧಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದಿದಾರೆ, ತಮ್ಮ ಕರ್ತವ್ಯಧರ್ಮಗಳನ್ನು ನೆರವೇರಿಸಿರುತ್ತಾರೆ. ಆದರೂ ತ್ರಿಮೂರ್ತಿಗಳು ನಮಗಿಂತ

॥ ವ್ಯಾಸ ಉವಾಚ ॥

ಏವಂ ಸ್ತುತಾ ಸುರೈರ್ದೇವೀ ತತ್ರೈವಾಂತರಧೀಯತ ।
ವಿಸ್ಮಯಂ ಪರಮಂ ಜಗ್ಮುರ್ದೇವಾಸ್ತಾಂ ವೀಕ್ಷ್ಯ ನಿರ್ಗತಾಂ ॥೪೩॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಏಕೋನವಿಂಶೋಽಧ್ಯಾಯಃ

---

ತುಂಬ ಮೇಲಾದವರು. ನಮ್ಮನ್ನು ಕ್ರಮವಾಗಿ ಸ್ವಲ್ಪಸ್ವಲ್ಪವಾಗಿ ಮೇಲಕ್ಕೇರಲು ಸಹಾಯ ಮಾಡುತ್ತಾರೆ. ಆದುದರಿಂದ ನಮಗೆ ಪೂಜ್ಯರು. ಆದರೂ ತ್ರಿಮೂರ್ತಿಗಳ ಪೂಜೆಯನ್ನು, ಧ್ಯಾನವನ್ನು ಮಾಡುವಾಗ ಪರತತ್ವರೂಪಳಾದ ದೇವಿಯನ್ನೂ ಧ್ಯಾನಮಾಡುವುದನ್ನು ಯಾವಾಗಲೂ ಮರೆಯಬಾರದು ಎಂದು ಭಾವವು. ॥೪೨॥

ವ್ಯಾಸಋಷಿಯು ಹೇಳಿದನು—ದೇವಿಯು ಹೀಗೆ ದೇವತೆಗಳಿಂದ ಸ್ತೋತ್ರ ಮಾಡಲ್ಪಟ್ಟವಳಾಗಿ ಅಲ್ಲಿಯೇ ಕಣ್ಣಿಗೆ ಕಾಣಿಸದಂತಾದಳು. ದೇವತೆಗಳೆಲ್ಲರೂ ಜಗನ್ಮಾತೆಯಾದ ದೇವಿಯು ಹಾಗೆ ಅಂತರ್ಧಾನವನ್ನು ಹೊಂದಿ ಹೊರಟು ಹೋದುದನ್ನು ನೋಡಿ ಬಹಳ ಆಶ್ಚರ್ಯದಿಂದ ಸಂತೋಷಪಟ್ಟರು.

ಇಲ್ಲಿಗೆ ದೇವೀಭಾಗವತ ಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ವಿಂಶೋಽಧ್ಯಾಯಃ ||

### ಇಪ್ಪತ್ತನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಅಥಾದ್ಭುತಂ ವೀಕ್ಷ್ಯ ಮುನೇ ಪ್ರಭಾವಂ**
**ದೇವ್ಯಾ ಜಗಚ್ಛಾಂತಿಕರಂ ವರಂ ಚ ।**
**ನ ತೃಪ್ತಿರಸ್ತಿ ದ್ವಿಜವರ್ಯ ಶೃಣ್ವತಃ**
**ಕಥಾಮೃತಂ ತೇ ಮುಖಪದ್ಮಜಾತಂ** ||೧||

**ಅಂತರ್ಹಿತಾಯಾಂ ಚ ತದಾ ಭವಾನ್ಯಾಂ**
**ಚಕ್ರುಶ್ಚ ಕಿಂ ದೇವಪುರೋಗಮಾಸ್ತೇ ।**
**ದೇವ್ಯಾಶ್ಚರಿತ್ರಂ ಪರಮಂ ಪವಿತ್ರಂ**
**ದುರಾಪಮೇವಾಲ್ಪಪುಣ್ಯೈರ್ನರಾಣಾಂ** ||೨||

---

ಜನಮೇಜಯರಾಯನು ಹೇಳಿದನು—ಓ ವ್ಯಾಸಮಹರ್ಷಿಯೇ, ದೇವಿಯ ಆಶ್ಚರ್ಯಕರವಾದ ಮಹಿಮೆಯನ್ನು ನೋಡಿ, ಜಗತ್ತಿನ ವ್ಯವಹಾರದಲ್ಲಿ ಶಾಂತಿಯನ್ನುಂಟುಮಾಡುವ ದೇವಿಯ ವರವನ್ನು ಕೇಳಿ, ಪದ್ಮದಿಂದ ಮಕರಂದದ ಅಮೃತವು ಬರುವಹಾಗೆ, ನಿನ್ನ ಕಮಲದಂತಿರುವ ಮುಖದಿಂದ ಅಮೃತದಂತಿರುವ ದೇವಿಯ ಕಥೆಯನ್ನು ಕೇಳುತ್ತಿರುವ ನನಗೆ ತೃಪ್ತಿಯು ಉಂಟಾಗುವುದಿಲ್ಲವು. ||೧||

ಆಗ ದೇವಿಯು ಅಂತರ್ಧಾನವನ್ನು ಹೊಂದಿದ ಅನಂತರದಲ್ಲಿ ದೇವಶ್ರೇಷ್ಠರಾದ ಅವರು ಏನನ್ನು ಮಾಡಿದರು? ದೇವಿಯ ಬಹಳ ಪರಿಶುದ್ಧವಾದ ಚರಿತ್ರೆಯ ದರ್ಶನ ಶ್ರವಣ ಮುಂತಾದುದರಲ್ಲಿ ಆಸಕ್ತಿಯು ಮನುಷ್ಯರಿಗೆ ತುಂಬ ಪುಣ್ಯವಿದ್ದರೆ

ಕಸ್ತೃಪ್ತಿಮಾಪ್ನೋತಿ ಕಥಾಮೃತೇನ
ಭಿನ್ನೋಽಲ್ಪಭಾಗ್ಯಾತ್ಪಟುಕರ್ಣರಂಧ್ರಃ ।
ಪೀತೇನ ಯೇನಾಽಮರತಾಂ ಪ್ರಯಾತಿ
ಧಿಕ್ ತಾನ್ನರಾನ್ ಯೇ ನ ಪಿಬಂತಿ ಸಾದರಂ ॥೩॥

ಲೀಲಾಚರಿತ್ರಂ ಜಗದಂಬಿಕಾಯಾ
ರಕ್ಷಾನ್ವಿತಂ ದೇವಮಹಾಮುನೀನಾಂ ।
ಸಂಸಾರವಾರ್ಧೇಸ್ತರಣಂ ನರಾಣಾಂ
ಕಥಂ ಕೃತಜ್ಞಾ ಹಿ ಪರಿತ್ಯಜೇಯುಃ ॥೪॥

ಮುಕ್ತಾಶ್ಚ ಯೇ ಚೈವ ಮುಮುಕ್ಷವಶ್ಚ
ಸಂಸಾರಿಣೋ ರೋಗಯುತಾಶ್ಚ ಕೇಚಿತ್ ।

---

ದೊರೆಯುತ್ತದೆಯೇ ಹೊರತು ಕೊಂಚ ಪುಣ್ಯವಿದ್ದಲ್ಲಿ ಸಿಕ್ಕುವುದು ಕಷ್ಟವಾಗಿ ಇರುವುದು. ॥೨॥

ಸ್ವಲ್ಪವೇ ಪುಣ್ಯವುಳ್ಳವನಲ್ಲದೆ ತುಂಬ ಪುಣ್ಯಶಾಲಿಯಾಗಿರುವ, ಶ್ರವಣ ಪಾಟವದಿಂದ ಕೂಡಿದ ಕಿವಿಗಳನ್ನೂ ಪಡೆದಿರುವ, ಯಾವ ಮಾನವನಿಗೆತಾನೇ ದೇವಿಯ ಚರಿತೆಯನ್ನು ಕೇಳಿ ಸಾಕೆನ್ನಿಸುವುದು ? ಅಲ್ಲದೆ ದೇವಿಯ ಚರಿತೆಯನ್ನು ಚನ್ನಾಗಿ ಎಂದರೆ ಇನ್ನೂ ವಿವರವಾಗಿ ಮತ್ತು ಆಳವಾಗಿ ಕೇಳಬೇಕೆಂಬ ಕುತೂಹಲವೇ ಹೆಚ್ಚುತ್ತಿರುವುದು ಎಂದು ತಾತ್ಪರ್ಯವು. ಅಲ್ಲದೆ ಈ ದೇವಿಯ ಚರಿತೆಯನ್ನು ಆದರ ದಿಂದ ಕೇಳಿದವರಿಗೆ ದೇವತ್ವವೂ ಉಂಟಾಗುವುದು. ಎಂದರೆ ಸ್ವರ್ಗವೇ ಮುಂತಾದ ಸದ್ಗತಿಯೂ ದೊರೆಯುವುದು. ಆದುದರಿಂದ ಇಂತಹ ದೇವಿಯ ಪುರಾಣವನ್ನು ಆದರ ದೊಡನೆ ಯಾರು ಕೇಳುವುದಿಲ್ಲವೋ ಅಂಥವರು ತಿರಸ್ಕಾರಕ್ಕೆ ಅರ್ಹರಾಗುತ್ತಾರೆ. ॥೩॥

ಜಗನ್ಮಾತೆಯ ವಿಲಾಸಯುಕ್ತವಾದ ಈ ಚರಿತೆಯು ದೇವತೆಗಳಿಗೂ, ಮಹ ರ್ಷಿಗಳಿಗೂ ಸಹ ಸಂರಕ್ಷಣೆಯನ್ನು ಮಾಡುವುದು. ಮನುಷ್ಯರಿಗೆ ಸಂಸಾರ ಸಮುದ್ರ ವನ್ನು ದಾಟಲು ತೆಪ್ಪದಂತಿರುವುದು. ಹೀಗಿರುವ ದೇವಿಯ ಚರಿತೆಯನ್ನು ಕೃತಜ್ಞ ರಾದವರು ಹೇಗೆ ಕೇಳದೆ ಬಿಡುವರು ? ॥೪॥

ದೇವಿಯ ಚರಿತ್ರೆಯನ್ನು ಮುಕ್ತರಾದವರೂ, ಮುಕ್ತಿಯನ್ನು ಹೊಂದಲು ಇಚ್ಛೆಯುಳ್ಳವರೂ, ಸಂಸಾರಿಗಳೂ, ರೋಗಬಾಧೆಯನ್ನು ಅನುಭವಿಸುತ್ತಿರುವವರೂ,

ತೇಷಾಂ ಸದಾ ಶ್ರೋತ್ರಪುಟೈಶ್ಚ ಪೇಯಂ
ಸರ್ವಾರ್ಥದಂ ವೇದವಿದೋ ವದಂತಿ ॥೫॥

ತಥಾ ವಿಶೇಷೇಣ ಮುನೇ ನೃಪಾಣಾಂ
ಧರ್ಮಾರ್ಥಕಾಮೇಷು ಸದಾ ರತಾನಾಂ ।
ಮುಕ್ತಾಶ್ಚ ಯಸ್ಮಾತ್ಖಲು ತತ್ಪಿಬಂತಿ
ಕಥಂ ನ ಪೇಯಂ ರಹಿತೈಶ್ಚ ತೇಭ್ಯಃ ॥೬॥

ಯೈಃ ಪೂಜಿತಾ ಪೂರ್ವಭವೇ ಭವಾನೀ
ಸತ್ಕುಂದಪುಷ್ಪೈರಥ ಚಂಪಕೈಶ್ಚ ।
ಬೈಲ್ವೈರ್ದಲೈಸ್ತೇ ಭುವಿ ಭೋಗಯುಕ್ತಾ
ನೃಪಾ ಭವಂತೀತ್ಯನುಮೇಯಮೇವ ॥೭॥

ಯೇ ಭಕ್ತಿಹೀನಾಃ ಸಮವಾಪ್ಯ ದೇಹಂ
ತಂ ಮಾನುಷಂ ಭಾರತಭೂಮಿಭಾಗೇ ।

---

ಇವರೇ ಮುಂತಾದವರೆಲ್ಲರೂ ಯಾವಾಗಲೂ ಕಿವಿಗಳಿಂದ ಅವಶ್ಯಕವಾಗಿ ಕೇಳಬೇಕೆಂದೂ, ಅದರಿಂದ ಅವರ ಎಲ್ಲ ಬಗೆಯ ಇಷ್ಟಾರ್ಥಗಳೂ ಕೈಗೂಡುವುವೆಂದೂ ವೇದಗಳನ್ನು ತಿಳಿದವರು ಹೇಳುತ್ತಾರೆ. ॥೫॥

ಓ ವ್ಯಾಸಮಹರ್ಷಿಯೆ, ಹಾಗೆಯೇ ಧರ್ಮ, ಅರ್ಥ, ಕಾಮಗಳಲ್ಲಿ ಯಾವಾಗಲೂ ಆಸಕ್ತರಾಗಿರುವ ರಾಜರು ಈ ಚರಿತ್ರೆಯನ್ನು ಹೆಚ್ಚಾದ ಆದರದಿಂದ ಅವಶ್ಯಕವಾಗಿ ಕೇಳಬೇಕು. ಮುಕ್ತರಾದವರೇ ಲೋಕಸಂಗ್ರಹ ಅನುಗ್ರಹಗಳಿಗಾಗಿ ಈ ಚರಿತ್ರೆಯನ್ನು ಕೇಳುವುದರಲ್ಲಿ ಆದರವುಳ್ಳವರಾಗಿರುವಾಗ ಮುಕ್ತಿಯನ್ನು ಇನ್ನೂ ಪಡೆಯದೆ ಇರುವವರು ಹೇಗೆತಾನೆ ಕೇಳದಿರಲಾದೀತು ? ॥೬॥

ಯಾರು ಪೂರ್ವಜನ್ಮದಲ್ಲಿ ದೇವಿಯನ್ನು ಒಳ್ಳೆಯದಾದ ಮಲ್ಲಿಗೆ, ಸಂಪಿಗೆಯ ಹೂವು ಇವುಗಳಿಂದಲೂ, ಬಿಲ್ವಪತ್ರೆಯಿಂದಲೂ ಪೂಜೆಯನ್ನು ಮಾಡಿರುವರೋ ಅಂಥವರೇ ಈಗ ಭೂಲೋಕದಲ್ಲಿ ಐಶ್ವರ್ಯ ಸಂಪತ್ತುಗಳ ಸುಖಗಳನ್ನು ಅನುಭವಿಸುವ ರಾಜರಾಗಿಯೂ ಇರುವರೆಂದು ಊಹೆ ಮಾಡತಕ್ಕದ್ದಾಗಿರುತ್ತದೆ. ॥೭॥

ಯಾರು ಭರತಖಂಡದಲ್ಲಿ ಮನುಷ್ಯ ದೇಹವನ್ನು ಹೊಂದಿ ಭಕ್ತಿಯಿಲ್ಲದವರಾಗಿ ದೇವಿಯ ಪೂಜೆಯನ್ನು ಮಾಡುವುದಿಲ್ಲವೋ ಅವರು ಧನ-ಧಾನ್ಯ-ಆಸ್ತಿ ಇವು

ಯೈರ್ನಾರ್ಚಿತಾ ತೇ ಧನಧಾನ್ಯಹೀನಾ
ರೋಗಾನ್ವಿತಾಃ ಸಂತತಿವರ್ಜಿತಾಶ್ಚ ॥೮॥

ಭ್ರಮಂತಿ ನಿತ್ಯಂ ಕಿಲ ದಾಸಭೂತಾ
ಆಜ್ಞಾಕರಾಃ ಕೇವಲಭಾರವಾಹಾಃ ।
ದಿವಾನಿಶಂ ಸ್ವಾರ್ಥಪರಾಃ ಕದಾಪಿ
ನೈವಾಪ್ನುವಂತ್ಯೌದರಪೂರ್ತಿಮಾತ್ರಂ ॥೯॥

ಅಂಧಾಶ್ಚ ಮೂಕಾ ಬಧಿರಾಶ್ಚ ಖಂಜಾಃ
ಕುಷ್ಠಾನ್ವಿತಾ ಯೇ ಭುವಿ ದುಃಖಭಾಜಃ ।
ತತ್ರಾನುಮಾನಂ ಕವಿಭಿರ್ವಿಧೇಯಂ
ನಾರಾಧಿತಾ ತೈಃ ಸತತಂ ಭವಾನೀ ॥೧೦॥

---

ಗಳಿಲ್ಲದ ದರಿದ್ರರಾಗಿ ಯಾವಾಗಲೂ ರೋಗಗ್ರಸ್ತರಾಗಿ ಇರುವರು. ಮತ್ತು ಅವರಿಗೆ ಮಕ್ಕಳಿಂದ ಸಂತತಿಯೂ ಸಹ ಮುಂದುವರಿಯುವುದಿಲ್ಲವು. ॥೮॥

ದೇವಿಯ ಪೂಜೆಯನ್ನು ಮಾಡದಿರುವವರು ಯಾವಾಗಲೂ ಇತರರಿಗೆ ದಾಸರಾಗಿ ಇನ್ನೊಬ್ಬರ ಅಪ್ಪಣೆಗೆ ಅಧೀನರಾಗಿ, ಆಳುಗಳಂತೆ ಮೂಟೆಯನ್ನು ಹೊರುವವರಾಗಿ ಇರುವರಲ್ಲದೆ ಹಗಲೂ ರಾತ್ರೆ ಸಹ ತಮ್ಮ ಪ್ರಯೋಜನಕ್ಕಾಗಿ ಕೆಲಸ ಮಾಡಿದರೂ ತಮ್ಮ ಹೊಟ್ಟೆ ತುಂಬುವಷ್ಟನ್ನೂ ಸಹ ಯಾವ ದಿನವೂ ಸಂಪಾದಿಸಲಾರದವರಾಗಿರುತ್ತಾರೆ! ॥೯॥

ದುಡಿದು ಜೀವಿಸುವುದು ಕೀಳಾದ ವೃತ್ತಿಯು ಎಂಬ ಭಾವವು ಇಲ್ಲಿ ಸೂಚಿತವಾಗಿಲ್ಲವು. ಏಕೆಂದರೆ ದುಡಿದರೇ ಫಲವಾಗುವುದೆಂಬುದು ಕರ್ಮವಾದದ ಸಿದ್ಧಾಂತದ ಮೊದಲನೆಯ ಅಡಿಗಲ್ಲಾಗಿದೆ. ಮತ್ತೇನೆಂದರೆ ದುಡಿಯಲು ತಕ್ಕ ಕೆಲಸವೇ ದೊರೆಯದಿರುವ, ದುಡಿದರೂ ಅದು ಅನವಶ್ಯಕವೂ, ಅನುಚಿತವೂ, ಆಗಿ ಫಲವನ್ನು ಉಂಟುಮಾಡಲಾರದೆ ವ್ಯರ್ಥವಾಗುವ ಸಂಭವವೂ ಉಂಟೆಂಬುದನ್ನು ಸೂಚಿಸಿ ಅದನ್ನೂ ಪರಿಹರಿಸೆಂದು ಪ್ರಾರ್ಥಿಸಲಾಗಿದೆ.

ಅಲ್ಲದೆ ಕುರುಡರೂ, ಮೂಗರೂ, ಕಿವುಡರೂ, ಕುಂಟರೂ, ಕುಷ್ಠರೋಗವುಳ್ಳವರೂ ಇವರೇ ಮೊದಲಾದ ದುಃಖವನ್ನು ಅನುಭವಿಸುವ ಜನರನ್ನು ನೋಡಿ ತಿಳಿವಳಿಕೆಯುಳ್ಳವರು ಇಂಥವರು ದೇವಿಯ ಪೂಜೆಯನ್ನು ಹಿಂದೆ ಯಾವಾಗಲೂ ಮಾಡಿಲ್ಲವೆಂದು ಊಹಿಸತಕ್ಕದ್ದು. ॥೧೦॥

ಯೇ ರಾಜಭೋಗಾನ್ವಿತಋದ್ಧಿಪೂರ್ಣಾಃ
ಸಂಸೇವ್ಯಮಾನಾ ಬಹುಭಿರ್ಮನುಷ್ಯೈಃ ।
ದೃಶ್ಯಂತಿ ಯೇ ವಾ ವಿಭವೈಃ ಸಮೇತಾಃ
ತೈಃ ಪೂಜಿತಾಽಂಬೇತ್ಯನುಮೇಯಮೇವ ॥೧೧॥

ತಸ್ಮಾತ್ಸತ್ಯವತೀಸೂನೋ ದೇವ್ಯಾಶ್ಚರಿತಮುತ್ತಮಂ ।
ಕಥಯಸ್ವ ಕೃಪಾಂ ಕೃತ್ವಾ ದಯಾವಾನಸಿ ಸಾಂಪ್ರತಂ ॥೧೨॥

ಹತ್ವಾ ತಂ ಮಹಿಷಂ ಪಾಪಂ ಸ್ತುತಾ ಸಂಪೂಜಿತಾ ಸುರೈಃ ।
ಕ್ವ ಗತಾ ಸಾ ಮಹಾಲಕ್ಷ್ಮೀಃ ಸರ್ವತೇಜಃಸಮುದ್ಭವಾ ॥೧೩॥

ಕಥಿತಂ ತೇ ಮಹಾಭಾಗ ಗತಾಽಂತರ್ಧಾನಮಾಶು ಸಾ ।
ಸ್ವರ್ಗೇ ವಾ ಮೃತ್ಯುಲೋಕೇ ವಾ ಸಂಸ್ಥಿತಾ ಭುವನೇಶ್ವರೀ ॥೧೪॥

---

ಮತ್ತು ಯಾರು ರಾಜಭೋಗದಿಂದ ಕೂಡಿದ ಅಪಾರವಾದ ಐಶ್ವರ್ಯದಿಂದ ತುಂಬಿದವರೂ, ಧನಧಾನ್ಯಸಂಪತ್ತುಗಳುಳ್ಳವರೂ, ಅನೇಕ ಜನಗಳಿಂದ ಸೇವಿಸಲ್ಪಡುವವರೂ, ಮಹಿಮೆಗಳಿಂದ ಕೂಡಿದವರಾಗಿ ಕಂಡುಬರುವವರೂ, ಆಗಿರುತ್ತಾರೋ, ಇಂಥವರೆಲ್ಲರೂ ದೇವಿಯ ಪೂಜೆಯನ್ನು ಹಿಂದೆ ಮಾಡಿದ್ದವರೆಂದು ಊಹಿಸತಕ್ಕದ್ದಾಗಿರುವುದು ॥೧೧॥

ಸತ್ಯವತೀ ಪುತ್ರನಾದ ಓ ವ್ಯಾಸಋಷಿಯೇ, ನೀನು ಯಾವಾಗಲೂ ನನ್ನಲ್ಲಿ ದಯೆವುಳ್ಳವನಾಗಿ ಇರುತ್ತೀಯೆ. ದೇವಿಯ ಮಹಿಮೆಯು ಈ ಪ್ರಕಾರ ಶ್ರೇಷ್ಠವಾಗಿರುವುದರಿಂದ ಈಗಲೂ ನನ್ನಲ್ಲಿ ದಯವಿಟ್ಟು ನೀನು ಬಹಳ ಶ್ರೇಷ್ಠವಾದ ಆ ದೇವಿಯ ಚರಿತ್ರೆಯನ್ನು ಮುಂದುವರಿಯಿಸಿ ಹೇಳು. ॥೧೨॥

ಎಲ್ಲ ದೇವತೆಗಳ ತೇಜಸ್ಸಿನಿಂದಲೂ ಆವಿರ್ಭವಿಸಿದ್ದ ಆ ಮಹಾಲಕ್ಷ್ಮಿಯು ಪಾಪಿಷ್ಠನಾದ ಮಹಿಷಾಸುರನನ್ನು ಕೊಂದು, ದೇವತೆಗಳಿಂದ ಪೂಜಿಸಲ್ಪಟ್ಟು ಸ್ತುತಿಸಲ್ಪಟ್ಟವಳಾದ ಮೇಲೆ ಎಲ್ಲಿಗೆ ಹೋದಳು ? ॥೧೩॥

ಮಹಾಮಹಿಮನಾದ ಓ ವ್ಯಾಸಋಷಿಯೇ, ಆ ದೇವಿಯು ಅಂತರ್ಧಾನವನ್ನು ಹೊಂದಿದಳೆಂದು ಹೇಳಲ್ಪಟ್ಟಿತು. ಲೋಕಗಳಿಗೆ ಅಧಿಪತಿಯಾದ ಆ ದೇವಿಯು ಈಗಲೂ ಸ್ವರ್ಗದಲ್ಲಿಯಾಗಲಿ, ಮೃತ್ಯುಲೋಕದಲ್ಲಿಯಾಗಲಿ ವಾಸವಾಗಿರುತ್ತಾಳೆಯೇ ಏನು ? ॥೧೪॥

ಲಯಂ ಗತಾ ವಾ ತತ್ರೈವ ವೈಕುಂಠೇ ವಾ ಸಮಾಶ್ರಿತಾ ।
ಅಥವಾ ಹೇಮಶೈಲೇ ಸಾ ತತ್ತ್ವತೋ ಮೇ ವದಾಧುನಾ ॥೧೫॥

॥ ವ್ಯಾಸ ಉವಾಚ ॥

ಪೂರ್ವಂ ಮಯಾ ತೇ ಕಥಿತಂ ಮಣಿದ್ವೀಪಂ ಮನೋಹರಂ ।
ಕ್ರೀಡಾಸ್ಥಾನಂ ಸದಾ ದೇವ್ಯಾ ವಲ್ಲಭಂ ಪರಮಂ ಸ್ಮೃತಂ ॥೧೬॥

ಯತ್ರ ಬ್ರಹ್ಮಾ ಹರಿಃ ಸ್ಥಾಣುಃ ಸ್ತ್ರೀಭಾವಂ ತೇ ಪ್ರಪೇದಿರೇ ।
ಪುರುಷತ್ವಂ ಪುನಃ ಪ್ರಾಪ್ಯ ಸ್ವಾನಿ ಕಾರ್ಯಾಣಿ ಚಕ್ರಿರೇ ॥೧೭॥

ಯಃ ಸುಧಾಸಿಂಧುಮಧ್ಯೇಽಸ್ತಿ ದ್ವೀಪಃ ಪರಮಶೋಭನಃ ।
ನಾನಾರೂಪೈಃ ಸದಾ ತತ್ರ ವಿಹಾರಂ ಕುರುತೇಽಂಬಿಕಾ ॥೧೮॥

---

ಅಥವಾ ಆ ದೇವಿಯು ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರಗಳ ಕ್ರಮದಲ್ಲಿ ತನ್ನಲ್ಲಿಯೇ ಲೀನವಾದಳೋ, ಅಥವಾ ವೈಕುಂಠದಲ್ಲಿ ವಾಸವನ್ನು ಹೊಂದಿದಳೋ, ಹಾಗಿಲ್ಲದಿದ್ದರೆ ಮೇರುಪರ್ವತದಲ್ಲಿ ವಾಸವಾಗಿರುವಳೋ ಯಾವುದನ್ನೂ ನಿಜವಾದ ರೀತಿಯಿಂದ ನನಗೆ ತಿಳಿಯಹೇಳು. ॥೧೫॥

ವ್ಯಾಸಋಷಿಯು ಹೇಳಿದನು.— ನನ್ನಿಂದ ಮೊದಲೇ ಮಣಿದ್ವೀಪವು ದೇವಿಗೆ ಬಹಳ ಪ್ರೀತಿಕರವಾದ ಆವಾಸಸ್ಥಾನವಾಗಿ ಎಣಿಸಲ್ಪಟ್ಟಿರುತ್ತದೆಯೆಂಬುದಾಗಿಯೂ ಮತ್ತು ಅದು ದೇವಿಯ ಮನಸ್ಸಿಗೆ ಹಿತಕರವಾದ ವಿನೋದಸ್ಥಾನವೆಂಬುದಾಗಿಯೂ ನಿನಗೆ ಹೇಳಲ್ಪಟ್ಟಿರುವುದು. ॥೧೬॥

ಯಾವ ಮಣಿದ್ವೀಪಕ್ಕೆ ಹೋಗಿ, ವಿಷ್ಣು, ಬ್ರಹ್ಮ, ಈಶ್ವರ, ಇವರೆಲ್ಲರೂ ಸ್ತ್ರೀಭಾವವನ್ನು ಹೊಂದಿದರೋ, ಅನಂತರದಲ್ಲಿ ದೇವಿಯ ಅನುಗ್ರಹದಿಂದ ಪುರುಷತ್ವವನ್ನು ಪುನಃ ಪಡೆದು ಹಿಂತಿರುಗಿ ಬಂದು, ತಮ್ಮ ತಮ್ಮ ಕೆಲಸಗಳನ್ನು ಮಾಡಿದರೋ, ॥೧೭॥

ಯಾವ ಮಣಿದ್ವೀಪವು ಅಮೃತ ಸಮುದ್ರ ಮಧ್ಯದಲ್ಲಿರುತ್ತಾ ಬಹಳಮಟ್ಟಿಗೆ ಎಲ್ಲರಿಗೂ ಮಂಗಳಕರವಾಗಿ ಇರುವುದೋ, ಅಷ್ಟುಮಟ್ಟಿನ ವಿಭವದಿಂದ ಕೂಡಿದ ಆ ಮಣಿದ್ವೀಪದಲ್ಲಿ ಜಗನ್ಮಾತೆಯಾದ ದೇವಿಯು ಯಾವಾಗಲೂ ಅನೇಕ ವಿಧವಾದ ಆಕಾರಗಳಿಂದ ವಿಹರಿಸುತ್ತಿರುವಳು. ॥೧೮॥

ಸ್ತುತಾ ಸಂಪೂಜಿತಾ ದೇವೈಃ ಸಾ ತತ್ರೈವ ಗತಾ ಶಿವಾ ।
ಯತ್ರ ಸಂಕ್ರೀಡತೇ ನಿತ್ಯಂ ಮಾಯಾಶಕ್ತಿಃ ಸನಾತನೀ ॥೧೯॥

ದೇವಾಸ್ತಾಂ ನಿರ್ಗತಾಂ ವೀಕ್ಷ್ಯ ದೇವೀಂ ಸರ್ವೇಶ್ವರೀಂ ತಥಾ ।
ರವಿವಂಶೋದ್ಭವಂ ಚಕ್ರುರ್ಭೂಮಿಪಾಲಂ ಮಹಾಬಲಂ ॥೨೦॥

ಅಯೋಧ್ಯಾಧಿಪತಿಂ ವೀರಂ ಶತ್ರುಘ್ನಂ ನಾಮ ಪಾರ್ಥಿವಂ ।
ಸರ್ವಲಕ್ಷಣಸಂಪನ್ನಂ ಮಹಿಷಸ್ಯಾऽऽಸನೇ ಶುಭೇ ॥೨೧॥

ದತ್ವಾ ರಾಜ್ಯಂ ತದಾ ತಸ್ಮೈ ದೇವಾ ಇಂದ್ರಪುರೋಗಮಾಃ ।
ಸ್ವಕೀಯೈರ್ವಾಹನೈಃ ಸರ್ವೇ ಜಗ್ಮುಃ ಸ್ವಾನ್ಯಾಲಯಾನಿ ತೇ ॥೨೨॥

---

ಯಾವ ಮಣಿದ್ವೀಪದಲ್ಲಿ ನಿತ್ಯಳಾಗಿರುವ ಮಾಯಾಶಕ್ತಿ ವಿಶಿಷ್ಟಬ್ರಹ್ಮರೂಪಿಣಿಯಾದ ದೇವಿಯು ವಿಹರಿಸುತ್ತಿರುವಳೋ, ಮಂಗಳಕರಳಾದ ಆ ದೇವಿಯ ಅಂಶದಿಂದ ಅವತರಿಸಿದ್ದ ಮಾತೆಯೂ, ಆಮೇಲೆ ದೇವತೆಗಳೇ ಮುಂತಾದವರೆಲ್ಲರಿಂದಲೂ ಪೂಜಿಸಿ ಸ್ತೋತ್ರಮಾಡಲ್ಪಟ್ಟವಳಾಗಿ ಆ ಮಣಿದ್ವೀಪಕ್ಕೇ ಹಿಂತಿರುಗಿ ಹೋಗಿ ಸೇರಿದಳು. ||೧೯||

ಆಮೇಲೆ ಸರ್ವಕ್ಕೂ ಅಧಿಪತಿಯಾಗಿರುವ ಆ ದೇವಿಯು, ಹಾಗೆ ಹೊರಟು ಕಣ್ಮರೆಯಾಗಿ ಹೋದುದನ್ನು ನೋಡಿ, ದೇವತೆಗಳು ಬಹಳ ಬಲಿಷ್ಠನಾದ, ಸೂರ್ಯವಂಶದಲ್ಲಿ ಹುಟ್ಟಿದ ಶತ್ರುಘ್ನನನ್ನು ರಾಜನನ್ನಾಗಿ ಮಾಡಿದರು. ||೨೦||

ದೇವತೆಗಳು ಮಹಿಷಾಸುರನ ಸ್ಥಾನದಲ್ಲಿ ಪಟ್ಟಕಟ್ಟಿದ ಶತ್ರುಘ್ನ ರಾಜನು ಅಯೋಧ್ಯೆಗೆ ಅಧಿಪತಿಯಾಗಿ, ಅನೇಕವಾದ ರಾಜಲಕ್ಷಣಗಳಿಂದ ಕೂಡಿ, ಶೂರನಾಗಿ ಪ್ರಸಿದ್ಧನಾದನು. ||೨೧||

ಆ ಬಳಿಕ ಇಂದ್ರನೇ ಮುಂದಾಳಾಗಿರುವ ದೇವತೆಗಳು ಆ ಶತ್ರುಘ್ನನಿಗೆ ರಾಜ್ಯವನ್ನು ವಹಿಸಿಕೊಟ್ಟು, ತಮ್ಮ ತಮ್ಮ ವಾಹನಗಳಿಂದ ಅವರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿ ಹೋಗಿ ಸೇರಿದರು. ||೨೨||

**ಗತೇಷು ತೇಷು ದೇವೇಷು ಪೃಥಿವ್ಯಾಂ ಪೃಥಿವೀಪತೇ ।**
**ಧರ್ಮರಾಜ್ಯಂ ಬಭೂವಾಥ ಪ್ರಜಾಶ್ಚ ಸುಖಿತಾಸ್ತಥಾ ॥೨೩॥**

**ಪರ್ಜನ್ಯಃ ಕಾಲವರ್ಷೀ ಚ ಧರಾ ಧಾನ್ಯಗುಣಾವೃತಾ ।**
**ಪಾದಪಾಃ ಫಲಪುಷ್ಪಾಢ್ಯಾ ಬಭೂವುಃ ಸುಖದಾಃ ಸದಾ ॥೨೪॥**

**ಗಾವಶ್ಚ ಕ್ಷೀರಸಂಪನ್ನಾ ಘಟೋಧ್ನ್ಯಃ ಕಾಮದಾ ನೃಣಾಂ ।**
**ನದ್ಯಃ ಸುಮಾರ್ಗಗಾಃ ಸ್ವಚ್ಛಾಃ ಶೀತೋದಾಃ ಖಗಸಂಯುತಾಃ॥೨೫॥**

**ಬ್ರಾಹ್ಮಣಾ ವೇದತತ್ತ್ವಜ್ಞಾಶ್ಚ ಯಜ್ಞಕರ್ಮರತಾಸ್ತಥಾ ।**
**ಕ್ಷತ್ರಿಯಾ ಧರ್ಮಸಂಯುಕ್ತಾ ದಾನಾಧ್ಯಯನತತ್ಪರಾಃ ॥೨೬॥**

---

ಎಲೈ ಜನಮೇಜಯರಾಜನೇ, ಆ ದೇವತೆಗಳು ತಮ್ಮ ತಮ್ಮ ಸ್ಥಾನಗಳನ್ನು ಕುರಿತು ಹೊರಟುಹೋದ ಮೇಲೆ ಭೂಮಿಯಲ್ಲಿ ಧರ್ಮದಿಂದ ರಾಜ್ಯಭಾರವು ನಡೆಯಿತು. ಅದರಿಂದ ಪ್ರಜೆಗಳೂ ಸುಖವುಳ್ಳವರಾಗಿದ್ದರು. ||೨೩||

ಮೇಘಾಭಿಮಾನಿಯಾದ ದೇವನು ಆಯಾಯ ಕಾಲದಲ್ಲಿ ಮಳೆಯನ್ನು ಹುಯ್ಯುವಂತೆ ಮಾಡುತ್ತಿದ್ದನು. ಭೂಮಿಯು ಅನೇಕ ಬಗೆಯ ಧಾನ್ಯಗಳಿಂದಲೂ, ಉತ್ತಮವಾದ ಗುಣಗಳಿಂದಲೂ ಕೂಡಿರುವುದಾಯಿತು. ಮರಗಳು ಹೂವುಗಳಿಂದಲೂ ಹಣ್ಣುಗಳಿಂದಲೂ ತುಂಬಿದ್ದುವು ಮತ್ತು ಯಾವಾಗಲೂ ಸುಖವನ್ನುಂಟುಮಾಡುತ್ತಿದ್ದುವು ! ||೨೪||

ಹಸುಗಳು ಗಡಿಗೆಯಗಾತ್ರದ ತುಂಬಿದ ಕೆಚ್ಚಲುಗಳುಳ್ಳವುಗಳಾಗಿ ತುಂಬ ಹಾಲನ್ನು ಕೊಡುತ್ತಿದ್ದುವು. ನದಿಗಳು ಸರಿಯಾದ ಮಾರ್ಗದಲ್ಲಿ ಮೇರೆ ಮೀರದೆ ಹರಿಯುವವುಗಳಾಗಿ, ತಿಳಿಯಾದ ಮತ್ತು ತಣ್ಣಗೆ ತಂಪಾಗಿರುವ ನೀರಿನಿಂದಲೂ ಹಕ್ಕಿಗಳಿಂದಲೂ ಕೂಡಿದವುಗಳಾಗಿ, ಜನಗಳಿಗೆ ಅನುಕೂಲವಾಗಿದ್ದುವು. ||೨೫||

ಬ್ರಾಹ್ಮಣರು ವೇದಾಧ್ಯಯನ ಮಾಡಿ, ತತ್ವಗಳನ್ನು ತಿಳಿದುಕೊಂಡು ಯಜ್ಞಗಳನ್ನು ಆದರದಿಂದ ಮಾಡುವವರಾಗಿದ್ದರು. ಕ್ಷತ್ರಿಯರು ಅವರ ಧರ್ಮವಾದ ದುಷ್ಟಶಿಕ್ಷಣ, ಶಿಷ್ಟಪರಿಪಾಲನೆಯನ್ನು ಮಾಡುತ್ತಾ, ದಾನಮಾಡುವುದರಲ್ಲಿಯೂ ವಿದ್ಯಾಭಿವರ್ಧನದಲ್ಲಿಯೂ ಆಸಕ್ತಿಯುಳ್ಳವರಾಗಿ ಇದ್ದರು. ||೨೬||

ಶಸ್ತ್ರವಿದ್ಯಾರತಾ ನಿತ್ಯಂ ಪ್ರಜಾರಕ್ಷಣತತ್ಪರಾಃ ।
ನ್ಯಾಯದಂಡಧರಾಃ ಸರ್ವೇ ರಾಜಾನಃ ಶಮಸಂಯುತಾಃ ॥೨೭॥

ಅವಿರೋಧಸ್ತು ಭೂತಾನಾಂ ಸರ್ವೇಷಾಂ ಸಂಬಭೂವ ಹ ।
ಆಕರಾ ಧನದಾ ನೃಣಾಂ ವ್ರಜಾ ಗೋಯೂಥಸಂಯುತಾಃ ॥೨೮॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ನೃಪಸತ್ತಮ ।
ದೇವೀಭಕ್ತಿಪರಾ ಸ್ಸರ್ವೇ ಸಂಬಭೂವುರ್ಧರಾತಲೇ ॥೨೯॥

ಸರ್ವತ್ರ ಯಜ್ಞಯೂಪಾಶ್ಚ ಮಂಡಪಾಶ್ಚ ಮನೋಹರಾಃ ।
ಮಖೈಃ ಪೂರ್ಣಾಧರಾಶ್ಚಾಸನ್ ಬ್ರಾಹ್ಮಣೈಃ ಕ್ಷತ್ರಿಯೈಃ ಕೃತೈಃ॥೩೦॥

---

ಅಲ್ಲದೆ ಆಗ ರಾಜರೆಲ್ಲರೂ ಶಸ್ತ್ರಾಸ್ತ್ರಗಳ ವಿದ್ಯೆಯಾದ ಧನುರ್ವೇದವನ್ನು ಅಭ್ಯಾಸ ಮಾಡುವುದರಲ್ಲಿ ಆಸಕ್ತರಾಗಿಯೂ, ಯಾವಾಗಲೂ ಪ್ರಜೆಗಳನ್ನು ರಕ್ಷಣೆ ಮಾಡುವುದರಲ್ಲಿ ಅಭಿರುಚಿಯುಳ್ಳವರಾಗಿಯೂ, ಅಪರಾಧಕ್ಕೆ ಅನುರೂಪವಾದ ನ್ಯಾಯ ವಾದ ಶಿಕ್ಷೆಯನ್ನು ವಿಧಿಸುವವರಾಗಿಯೂ, ಉಪಶಾನ್ತಿಯಿಂದ ಕೂಡಿದವರಾಗಿಯೂ ಇದ್ದರು. ॥೨೭॥

ಎಲ್ಲ ಪ್ರಾಣಿಗಳಿಗೂ ಪರಸ್ಪರವಾಗಿ ವಿರೋಧವಿಲ್ಲದಿರುವಿಕೆಯು ಎಂದರೆ ಅನ್ಯೋನ್ಯವಾದ ಪ್ರೀತಿ-ವಿಶ್ವಾಸಗಳು ಉಂಟಾಗಿದ್ದುವು. ಮನುಷ್ಯರಿಗೆ ಅಲ್ಲಲ್ಲಿ ಗಣಿ ಗಳಲ್ಲಿ ತುಂಬ ಧನವೂ ಇತರ ಸಂಪತ್ತುಗಳೂ ದೊರೆಯುತ್ತಿದ್ದುವು. ॥೨೮॥

ಎಲೈ ಜನಮೇಜಯರಾಜನೆ ಕೇಳು-ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಇವರೆಲ್ಲರೂ ಭೂಮಿಯಲ್ಲಿ ಜಗನ್ಮಾತೆಯಾದ ದೇವಿಯ ಭಕ್ತಿಯಲ್ಲಿ ಎಂದರೆ ದೇವಿಯ, ಪೂಜಾ, ಸ್ತೋತ್ರ, ಪುರಾಣಪಠನ, ಧ್ಯಾನ ಇವೇ ಮೊದಲಾದ ಧರ್ಮಾಚರಣೆಗಳಲ್ಲಿ ಏಕರೀತಿಯಾದ ಆದರದಿಂದ ಕೂಡಿದ ಚಿತ್ತವೃತ್ತಿಯುಳ್ಳವರಾಗಿ ದ್ದರು. ॥೨೯॥

ಎಲ್ಲ ಕಡೆಯಲ್ಲಿಯೂ, ಯಜ್ಞದ ಯೂಪಸ್ತಂಭಗಳೂ, ಮಂಡಪಗಳೂ ಸಹ ಮನೋಹರವಾಗಿದ್ದುವು. ಭೂಮಿಯಲ್ಲಿ ಬಹಳ ಪ್ರದೇಶಗಳು ಬ್ರಾಹ್ಮಣರೂ, ಕ್ಷತ್ರಿಯರೂ ಮಾಡಿದ ಯಜ್ಞಗಳಿಂದ ತುಂಬಿದವುಗಳಾಗಿದ್ದುವು. ॥೩೦॥

**ಪತಿವ್ರತಧರಾಃ ನಾರ್ಯಃ ಸುಶೀಲಾಃ ಸತ್ಯಸಂಯುತಾಃ ।**
**ಪಿತೃಭಕ್ತಿಪರಾಃ ಪುತ್ರಾಃ ಆಸನ್ಧರ್ಮಪರಾಯಣಾಃ ॥೩೧॥**

**ನ ಪಾಖಂಡಂ ನ ವಾಽಧರ್ಮಃ ಕುತ್ರಾಪಿ ಪೃಥಿವೀತಲೇ ।**
**ವೇದವಾದಾಃ ಶಾಸ್ತ್ರವಾದಾ ನಾನ್ಯೇ ವಾದಾಸ್ತಥಾಽಭವನ್ ॥೩೨॥**

**ಕಲಹೋ ನೈವ ಕೇಷಾಂಚಿನ್ನ ದೈನ್ಯಂ ನಾಽಶುಭಾಮತಿಃ ।**
**ಸರ್ವತ್ರ ಸುಖಿನೋ ಲೋಕಾಃ ಕಾಲೇ ಚ ಮರಣಂ ತಥಾ ॥೩೩॥**

**ಸುಹೃದಾಂ ನ ವಿಯೋಗಶ್ಚ ನಾಪದಶ್ಚ ಕದಾಚನ।**
**ನಾಽನಾವೃಷ್ಟಿರ್ನ ದುರ್ಭಿಕ್ಷಂ ನ ಮಾರೀ ದುಃಖದಾ ನೃಣಾಂ ॥೩೪॥**

---

ಸ್ತ್ರೀಯರು ಪಾತಿವ್ರತ್ಯವುಳ್ಳವರಾಗಿ, ಒಳ್ಳೆಯ ಸ್ವಭಾವಗಳುಳ್ಳವರಾಗಿ, ನಿಜವಾದ ಮಾತು ಮತ್ತು ನಡತೆ ಇವುಗಳುಳ್ಳವರಾಗಿ ಇದ್ದರು. ಮಕ್ಕಳು ಅವರವರ ತಂದೆ-ತಾಯಿಯರಲ್ಲಿ ಭಕ್ತಿಯುಳ್ಳವರಾಗಿಯೂ, ಧರ್ಮಗಳ ಆಚರಣೆಯಲ್ಲಿ ಆಸಕ್ತರಾಗಿ ಇದ್ದರು. ॥೩೧॥

ಭೂಲೋಕದಲ್ಲಿ ಎಲ್ಲಿಯೂ ವೇದವಿರುದ್ಧವಾದ ಪಾಷಂಡಮತವೂ ಮತ್ತು ಅಧರ್ಮವೂ ಇರಲಿಲ್ಲ. ಹಾಗೆಯೇ ವೇದಗಳ ಮತ್ತು ಶಾಸ್ತ್ರಗಳ ಅರ್ಥವಿಚಾರಗಳೂ ಎಲ್ಲ ದೇಶಗಳಲ್ಲೂ ನಡೆಯುತ್ತಾ, ಬೇರೆಯಾದ ನಾಸ್ತಿಕ ಮತ್ತು ಸಂಶಯವಾದಗಳೂ ಕಲಹಗಳೂ ಇರಲಿಲ್ಲವು. ॥೩೨॥

ಹಾಗೆಯೇ ಭೂಮಿಯಲ್ಲಿ ಯಾರಿಗೂ ಜಗಳಗಳು ಇರುತ್ತಿರಲಿಲ್ಲ. ದುಃಖದಿಂದ ಕೊರಗುವಿಕೆಯೂ, ಕೆಟ್ಟಬುದ್ಧಿಯೂ ಸಹ ಇರಲಿಲ್ಲವು. ಎಲ್ಲ ಕಡೆಯಲ್ಲಿಯೂ ಜನಗಳು ಸುಖವುಳ್ಳವರಾಗಿಯೂ, ಬಾಲ್ಯ, ಯೌವನ, ವಾರ್ಧಕ್ಯವೆಂಬ ವಯೋಧರ್ಮಗಳನ್ನು ಅನುಭವಿಸಿ ಅನಂತರ ಕಾಲಧರ್ಮಕ್ಕನುಸಾರವಾಗಿ ಎಂದರೆ ಅಕಾಲಮರಣಗಳಿಲ್ಲದೆ, "ಜಾತಸ್ಯ ಮರಣಂ ಧ್ರುವಂ" ಎಂಬ ವಚನಕ್ಕನುಸಾರವಾಗಿ ಪೂರ್ಣವಾದ ಆಯುಸ್ಸಿನ ಕಡೆಯಲ್ಲಿ ಮರಣವನ್ನು ಹೊಂದುತ್ತಿದ್ದರು. ॥೩೩॥

ಅಲ್ಲದೆ ಜನಗಳಿಗೆ ಸ್ನೇಹಿತರನ್ನು ಅಗಲಿರುವಿಕೆಯೂ, ವಿಪತ್ತನ್ನು ಪಡೆಯುವುದೂ, ಅನಾವೃಷ್ಟಿಯೂ ಕ್ಷಾಮವೂ ಯಾವಾಗಲೂ ಉಂಟಾಗುತ್ತಿರಲಿಲ್ಲವು. ಮಾರಿ ಸಂಬಂಧವಾದ ಸಾಂಕ್ರಾಮಿಕ ರೋಗಗಳು ಆಗ ಜನಗಳಿಗೆ ಸಂಭವಿಸುತ್ತಿರಲಿಲ್ಲವು. ॥೩೪॥

ನ ರೋಗೋ ನ ಚ ಮಾತ್ಸರ್ಯಂ ನ ವಿರೋಧಃ ಪರಸ್ಪರಂ ।
ಸರ್ವತ್ರ ಸುಖಸಂಪನ್ನಾ ನರಾ ನಾರ್ಯಃ ಸುಖಾನ್ವಿತಾಃ ॥೩೫॥

ಕ್ರೀಡಂತಿ ಮಾನವಾಃ ಸರ್ವೇ ಸ್ವರ್ಗೇ ದೇವಗಣಾ ಇವ ।
ನ ಚೋರಾ ನೈವ ಪಾಖಂಡಾ ವಂಚಕಾ ದಂಭಕಾಸ್ತಥಾ ॥೩೬॥

ಪಿಶುನಾ ಲಂಪಟಾಃ ಸ್ತಬ್ಧಾ ನ ಬಭೂವುಸ್ತದಾ ನೃಪ ।
ನ ವೇದದ್ವೇಷಿಣಃ ಪಾಪಾ ಮಾನವಾಃ ಪೃಥಿವೀಪತೇ ॥೩೭॥

ಸರ್ವಧರ್ಮರತಾ ನಿತ್ಯಂ ದ್ವಿಜಸೇವಾಪರಾಯಣಾಃ ।
ತ್ರಿಧಾತ್ವಾತ್ಸೃಷ್ಟಿಧರ್ಮಸ್ಯ ತ್ರಿವಿಧಾ ಬ್ರಾಹ್ಮಣಾಸ್ತತಃ ॥೩೮॥

---

ಆಗ ಲೋಕದಲ್ಲಿ ರೋಗಗಳು ಇರಲಿಲ್ಲ. ದ್ವೇಷವು ಎಂದರೆ, ಬಹಳ ಕಾಲದ ವರೆಗೂ ದೃಢವಾಗಿ ನಿಂತ ಹಗೆತನದ ಕೋಪವು, ಜನಗಳಿಗೆ ಉಂಟಾಗುತ್ತಿರಲಿಲ್ಲವು. ಒಬ್ಬರೊಬ್ಬರಿಗೆ ಜಗಳಕ್ಕೆ ಕಾರಣವಾದ ಅಭಿಪ್ರಾಯ ಅಥವಾ ನಡೆವಳಿಕೆಯ ಭೇದ ದಿಂದ ವಿರೋಧವೂ ಹುಟ್ಟುತ್ತಿರಲಿಲ್ಲ. ಹೆಂಗುಸರಾಗಲಿ, ಗಂಡಸರಾಗಲಿ, ಎಲ್ಲರೂ ಎಲ್ಲ ಕಡೆಯಲ್ಲಿಯೂ ಹೆಚ್ಚಾದ ಸುಖದ ಅತಿಶಯವುಳ್ಳವರಾಗಿ ಇದ್ದರು. ಸ್ವರ್ಗ ದಲ್ಲಿ ದೇವತೆಗಳು ಗುಂಪುಗುಂಪಾಗಿ ವಿಹರಿಸುವಂತೆ, ಭೂಮಿಯಲ್ಲಿ ಜನಗಳು ವಿಹಾರ ಗಳಲ್ಲಿಯೂ ವಿನೋದಗಳಲ್ಲಿಯೂ ನಿರತರಾಗಿದ್ದರು. ॥೩೫॥

ಎಲೈ ಜನಮೇಜಯರಾಜನೇ, ಆ ಕಾಲದಲ್ಲಿ ಕಳ್ಳರೂ, ಪಾಷಂಡರೂ, ಮೋಸಗಾರರೂ, ಧರ್ಮಾಚರಣೆಯ ನಟನೆಯುಳ್ಳ ಡಾಂಭಿಕರೂ, ಜಂಭಗಾರರೂ, ಚಾಡಿಹೇಳುವವರೂ, ಸ್ರಕ್ಚಂದನವನಿತಾದಿ ವಿಷಯ ಭೋಗಗಳಲ್ಲಿ ಹೆಚ್ಚಾದ ಪ್ರೀತಿ ಯುಳ್ಳವರೂ, ಮತ್ತು ಅಲಸರಾಗಿ ಮಂಕಾಗಿರುವವರೂ ಇರಲಿಲ್ಲ. ಅಲ್ಲದೆ ವೇದ ಗಳನ್ನು ದ್ವೇಷಿಸುವ ಮತ್ತು ಇತರ ಪಾಪಕಾರ್ಯಗಳನ್ನು ಮಾಡುವ ಮನುಷ್ಯರು ಆಗ ಇರಲಿಲ್ಲವು. ॥೩೬-೩೭॥

ಎಲೈ ರಾಜನೇ, ಜನಗಳು ಪಾಪಿಷ್ಠರಾಗಿರಲಿಲ್ಲ, ವೇದಗಳ ವಿಷಯದಲ್ಲಿ ಜನ ರೆಲ್ಲರೂ•ಧರ್ಮಾಚರಣೆಯಲ್ಲಿಯೂ ಬ್ರಾಹ್ಮಣರ, ಕ್ಷತ್ರಿಯರ, ವೈಶ್ಯರ ಸಹಾಯದ ಲ್ಲಿಯೂ ಆಸಕ್ತರಾಗಿದ್ದರು. ಪ್ರಪಂಚದ ಸೃಷ್ಟಿಯಲ್ಲಿ ಮೂರು ಬಗೆಯು ಕಾಣುವುದ ರಿಂದ ಬ್ರಾಹ್ಮಣರೂ ಅದಕ್ಕನುಗುಣವಾಗಿ ಸಾತ್ವಿಕರೂ, ರಾಜಸರೂ, ತಾಮಸರೂ ಎಂಬುದಾಗಿ ಮೂರು ವಿಧವಾಗಿರುತ್ತಿದ್ದರು. ॥೩೮॥

**ಸಾತ್ತ್ವಿಕಾ ರಾಜಸಾಶ್ಚೈವ ತಾಮಸಾಶ್ಚ ತಥಾಪರೇ ।**
**ಸರ್ವೇ ವೇದವಿದೋ ದಕ್ಷಾಃ ಸಾತ್ತ್ವಿಕಾಃ ಸತ್ಯವೃತ್ತಯಃ ॥೩೯॥**

**ಪ್ರತಿಗ್ರಹವಿಹೀನಾಶ್ಚ ದಯಾದಮಪರಾಯಣಾಃ ।**
**ಯಜ್ಞಾಂಸ್ತೇ ಸಾತ್ತ್ವಿಕೈರನ್ನೈಃ ಕುರ್ವಾಣಾ ಧರ್ಮತತ್ಪರಾಃ॥೪೦॥**

**ಪುರೋಡಾಶವಿಧಾನೈಶ್ಚ ಪಶುಭಿರ್ನ ಕದಾಚನ ।**
**ದಾನಮಧ್ಯಯನಂ ಚೈವ ಯಜನಂ ತು ತೃತೀಯಕಂ ॥೪೧॥**

**ತ್ರಿಕರ್ಮರಸಿಕಾಸ್ತೇ ವೈ ಸಾತ್ತ್ವಿಕಾ ಬ್ರಾಹ್ಮಣಾ ನೃಪ ।**
**ರಾಜಸಾ ವೇದವಿದ್ವಾಂಸಃ ಕ್ಷತ್ರಿಯಾಣಾಂ ಪುರೋಹಿತಾಃ ॥೪೨॥**

---

ಸಾತ್ತ್ವಿಕಸ್ವಭಾವದಿಂದ ಕೂಡಿರುವ ಬ್ರಾಹ್ಮಣರೆಲ್ಲರೂ ಸತ್ವಗುಣವು ಮೇಲಾಗಿರುವ ಚಿತ್ತವೃತ್ತಿಯುಳ್ಳವರಾದುದರಿಂದ ಅಂಥವರು ವೇದಾಧ್ಯಯನ ಸಂಪನ್ನರಾಗಿಯೂ, ಕೆಲಸ ಮಾಡುವುದರಲ್ಲಿ ಸಮರ್ಥರಾಗಿಯೂ, ದಾನಗಳನ್ನು ತೆಗೆದುಕೊಳ್ಳುವುದರಲ್ಲಿ ಹಿಂತೆಗೆಯುವ ಸ್ವಭಾವದವರಾಗಿಯೂ, ಪ್ರಾಣಿಗಳ ಹೀನಸ್ಥಿತಿಗಳನ್ನು ನೋಡಿ ಕರಗಿದ ಮನಸ್ಸುಳ್ಳವರಾಗಿಯೂ, ಅತಿಭೋಗ, ದುಷ್ಟಭೋಗಗಳಲ್ಲಿ ಮನೋನಿಗ್ರಹವುಳ್ಳವರಾಗಿಯೂ ಇರುತ್ತಿದ್ದರು. ॥೩೯॥

ಸಾತ್ವಿಕರಾದುದರಿಂದ ಧರ್ಮಾಚರಣೆಯಲ್ಲಿ ಆಸಕ್ತರಾದ ಇವರು ಯಜ್ಞಗಳನ್ನು ಪಶುಹಿಂಸೆಯಿಂದ ಮಾಡುತ್ತಿರಲಿಲ್ಲವು. ಆದರೆ, 'ಪುರೋಡಾಶ' ವೆಂದರೆ ಹವಿಷ್ಯಾನ್ನದ ಮೂಲಕವಾಗಿಯೇ ಯಜ್ಞಗಳನ್ನು ಮಾಡಿ ದೇವತೆಗಳನ್ನು ಆರಾಧಿಸುತ್ತಿದ್ದರು. ಹೀಗೆ ಸಾತ್ವಿಕವಾದ ಅನ್ನದಿಂದಲೇ ಯಜ್ಞಗಳನ್ನು ಮಾಡುತ್ತಾ ಧರ್ಮದಲ್ಲಿ ಆಸಕ್ತರಾಗಿದ್ದರೇ ಹೊರತು ಪ್ರಾಣಿಹಿಂಸೆಯನ್ನು ಯಾವಾಗಲೂ ಮಾಡುತ್ತಿರಲಿಲ್ಲವು. ॥೪೦॥

ಓ ದೊರೆಯೇ, ಈ ಬ್ರಾಹ್ಮಣರು ಇನ್ನೊಬ್ಬರಿಗೆ ದಾನಮಾಡುವುದೂ, ಪಾಠಗಳನ್ನೂ, ವೇದಗಳನ್ನೂ, ಹೇಳಿಕೊಡುವುದೂ, ಯಜ್ಞಗಳನ್ನು ಮಾಡುವುದೂ, ಎಂಬುದಾಗಿ ಮೂರು ವಿಧವಾದ ಧರ್ಮಗಳನ್ನು ಆಸಕ್ತಿಯಿಂದ ಆಚರಿಸುವುದರಲ್ಲಿ ನಿಪುಣರಾಗಿ ಇದ್ದುಕೊಂಡು ಉಳಿದ ಪ್ರತಿಗ್ರಹ, ಯಾಜನ ಇವುಗಳಲ್ಲಿ ಆಶೆಯಿಂದ ನಿವೃತ್ತರಾಗಿರುವವರೇ ಸಾತ್ವಿಕರಾದ ಬ್ರಾಹ್ಮಣರೆನಿಸುವರು. ॥೪೧॥

ವೇದಾಧ್ಯಯನವನ್ನು ಸಂಪೂರ್ಣವಾಗಿ ಮಾಡಿ, ಕ್ಷತ್ರಿಯರಿಗೆ ಪೌರೋಹಿತ್ಯವನ್ನು ಮಾಡಿಸುತ್ತಾ ಪುರೋಹಿತರಾಗಿ ಇರುವವರು ರಾಜಸರೆನಿಸುವರು. ಇಂಥವ

**ಷಟ್ಕರ್ಮನಿರತಾಃ ಸರ್ವೇ ವಿಧಿವನ್ಮಾಂಸಭಕ್ಷಕಾಃ ।**
**ಯಜನಂ ಯಾಜನಂ ದಾನಂ ತಥೈವ ಚ ಪ್ರತಿಗ್ರಹಃ ॥೪೩॥**

**ಅಧ್ಯಯನಂ ತು ವೇದಾನಾಂ ತಥೈವಾಧ್ಯಾಪನಂ ತು ಷಟ್ ।**
**ತಾಮಸಾಃ ಕ್ರೋಧಸಂಯುಕ್ತಾ ರಾಗದ್ವೇಷಪರಾಃ ಪುನಃ ॥೪೪॥**

**ರಾಜ್ಞಾಂ ಕರ್ಮಕರಾ ನಿತ್ಯಂ ಕಿಂಚಿದಧ್ಯಯನೇ ರತಾಃ ।**
**ಮಹಿಷೇ ನಿಹತೇ ಸರ್ವೇ ಸುಖಿನೋ ವೇದತತ್ಪರಾಃ ॥೪೫॥**

**ಬಭೂವುರ್ವ್ರತನಿಷ್ಣಾತಾ ದಾನಧರ್ಮಪರಾಸ್ತಥಾ ।**
**ಕ್ಷತ್ರಿಯಾಃ ಪಾಲನೇ ಯುಕ್ತಾ ವೈಶ್ಯಾ ವಣಿಜವೃತ್ತಯಃ ॥೪೬॥**

---

ರೆಲ್ಲರೂ ಷಟ್ಕರ್ಮಗಳಲ್ಲಿಯೂ ಆಸಕ್ತರು. ಶಾಸ್ತ್ರದಲ್ಲಿ ಹೇಳಿದ ಕ್ರಮದಂತೆ ಯಾಗಗಳ ಅನಿವಾರ್ಯಸಂದರ್ಭಗಳಲ್ಲಿ ಮಾತ್ರ ಮಾಂಸವನ್ನು ತಿನ್ನುವವರು. ॥೪೨॥

ಮೇಲೆ ಹೇಳಿರುವ ಷಟ್ಕರ್ಮಗಳು ಯಾವುವೆಂದರೆ (೧) ತಾನು ಯಜ್ಞಗಳನ್ನು ಮಾಡುವುದು. (೨) ಇತರರಿಂದ ಯಜ್ಞಗಳನ್ನು ಮಾಡಿಸುವುದು. (೩) ತಾನು ಇತರರಿಗೆ ದಾನಮಾಡುವುದು. (೪) ಇತರರು ಕೊಡುವ ದಾನವನ್ನು ತಾನು ತೆಗೆದು ಕೊಳ್ಳುವುದು. (೫) ವೇದಗಳನ್ನು ಮತ್ತು ಶಾಸ್ತ್ರಗಳನ್ನು ತಾನು ಗಟ್ಟಿಯಾಗಿ ಅಭ್ಯಾಸ ಮಾಡಿರುವುದು. (೬) ತಾನು ಕಲಿತ ವೇದಶಾಸ್ತ್ರಗಳನ್ನು ಇತರರಿಗೆ ಪಾಠಹೇಳುವುದು. ಈ ಧರ್ಮಗಳು ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿರುತ್ತವೆ. ॥೪೩॥

ತಾಮಸರಾದವರು ಕೋಪದಿಂದ ಕೂಡಿದವರಾಗಿರುವರು. ಮತ್ತು ಕಾಮ, ಕ್ರೋಧಗಳಿಗೆ ಅಧೀನರಾಗಿ ನಡೆಯುವವರು. ಕೊಂಚಮಟ್ಟಿಗೆ ವೇದಾಧ್ಯಯನವನ್ನೂ ಮಾಡಿಕೊಂಡು ಯಾವಾಗಲೂ ರಾಜರಹತ್ತಿರದಲ್ಲಿ ಕೆಲಸಮಾಡುತ್ತಿರುವವರು. ॥೪೪॥

ಮಹಿಷಾಸುರನ ಸಂಹಾರವಾದ ಅನಂತರದಲ್ಲಿ ಮೇಲೆ ಹೇಳಿದ ಮೂರು ವಿಧವಾದ ಸಾತ್ವಿಕ, ರಾಜಸ, ತಾಮಸರಾದ ಬ್ರಾಹ್ಮಣರೆಲ್ಲರೂ ವೇದಾಧ್ಯಯನ ಮಾಡುವುದರಲ್ಲಿ ಆಸಕ್ತರಾಗಿಯೂ, ವ್ರತನಿಯಮಗಳನ್ನು ಕ್ಲೃಪ್ತವಾದ ಕಾಲದಲ್ಲಿ ಮಾಡತಕ್ಕ ದೇವತಾಪೂಜೆಗಳನ್ನು ನಡೆಸುವುದರಲ್ಲಿ ಕುಶಲರಾಗಿಯೂ, ಹಾಗೆಯೇ ದಾನ ಮೊದಲಾದ ತಮಗೆ ಉಕ್ತವಾದ ಧರ್ಮಗಳನ್ನು ಆಚರಿಸುತ್ತಲೂ ಇದ್ದರು. ॥೪೫-೪೬॥

ಕೃಷಿವಾಣಿಜ್ಯಗೋರಕ್ಷಾಕುಸೀದವೃತ್ತಯಃ ಪರೇ ।
ಏವಂ ಪ್ರಮುದಿತೋ ಲೋಕೋ ಮಹಿಷೇ ವಿನಿಪಾತಿತೇ ॥೪೭॥

ಅನುದ್ವೇಗಃ ಪ್ರಜಾನಾಂ ವೈ ಸಂಬಭೂವ ಧನಾಗಮಃ ।
ಬಹುಕ್ಷೀರಾಃ ಶುಭಾ ಗಾವೋ ನದ್ಯಶ್ಚೈವ ಬಹೂದಕಾಃ ॥೪೮॥

ವೃಕ್ಷಾ ಬಹುಫಲಾಶ್ಚಾಸನ್ಮಾನವಾ ರೋಗವರ್ಜಿತಾಃ ।
ನಾಽಽಧಯೋ ನೇತಯಃ ಕ್ವಾಪಿ ಪ್ರಜಾನಾಂ ದುಃಖದಾಯಕಾಃ॥೪೯॥

ನ ನಿಧನಮುಪಯಾಂತಿ ಪ್ರಾಣಿನಸ್ತೇಽಪ್ಯಕಾಲೇ
ಸಕಲವಿಭವಯುಕ್ತಾ ರೋಗಹೀನಾಃ ಸದೈವ ।

---

ಕ್ಷತ್ರಿಯರಾದವರು ಪ್ರಜೆಗಳನ್ನು ರಕ್ಷಿಸುವುದರಲ್ಲಿ ನಿರತರಾಗಿದ್ದರು. ವೈಶ್ಯರು ವ್ಯಾಪಾರ ಮಾಡುವುದು, ವ್ಯವಸಾಯಮಾಡುವುದು, ದನಗಳನ್ನು ರಕ್ಷಿಸುವುದು ಮತ್ತು ಇತರರು ಲೇವಾದೇವಿಯನ್ನು ಎಂದರೆ ಧನವನ್ನು ವೃದ್ಧಿಗಾಗಿ ಕೊಟ್ಟು ಅದರಿಂದ ಬರುವ ಬಡ್ಡಿರೂಪವಾದ ಆದಾಯದಿಂದ ಜೀವಿಸುವುದು ಇವೇ ಮುಂತಾದ ಜೀವನೋಪಾಯಗಳಿಂದ ಜನರು ಜೀವನ ಮಾಡುತ್ತಿದ್ದರು. ಮೇಲೆ ಹೇಳಿದ ಕ್ರಮದಂತೆ ಜನಗಳೆಲ್ಲರೂ ಮಹಿಷಾಸುರನ ಸಂಹಾರವಾದ ಅನಂತರದಲ್ಲಿ ಧರ್ಮಾಚರಣೆಯ ಫಲವಾಗಿ ಸಂತೋಷವುಳ್ಳವರಾಗಿ ಇದ್ದರು. ||೪೭||

ಪ್ರಜೆಗಳಿಗೆ ದುಷ್ಟನಿಗ್ರಹ ಶಿಷ್ಟಪಾಲನವೆಂಬ ಧರ್ಮದಿಂದ ಅತ್ಯಾಶೆ ದುರಾಶೆಗಳಿಲ್ಲದೆ ಮನಸ್ಸಿನಲ್ಲಿ ಸಮಾಧಾನ ಸ್ಥಿತಿಯು ಉಂಟಾಗಿತ್ತು ಮತ್ತು ಪ್ರಜೆಗಳಿಗೆ ಆದಾಯವೂ ಬಹಳವಾಗಿ ಬರುತ್ತಿತ್ತು. ಹಸುಗಳು ಒಳ್ಳೆಯವುಗಳಾಗಿ ತುಂಬ ಹಾಲನ್ನು ಕೊಡುತ್ತಿದ್ದುವು. ಹೊಳೆಗಳಲ್ಲಿ ನೀರು ತುಂಬಿರುತ್ತಿದ್ದಿತು. ||೪೮||

ಮರಗಳೆಲ್ಲವೂ ಬಹಳ ಹಣ್ಣುಗಳಿಂದ ಕೂಡಿದ್ದುವು, ಮನುಷ್ಯರು ರೋಗವಿಲ್ಲದೆ ಆರೋಗ್ಯವಾಗಿದ್ದರು. ಪ್ರಜೆಗಳಿಗೆ ಮನೋವ್ಯಥೆಯಾಗಲಿ, ಈತಿಬಾಧೆಯಾಗಲಿ, ಎಲ್ಲಿಯೂ ದುಃಖವನ್ನು ಕೊಡುತ್ತಿರಲಿಲ್ಲ. (ಅತಿವೃಷ್ಟಿ, ಅನಾವೃಷ್ಟಿ, ಶಲಭ, ಮೂಷಿಕ, ಶುಕ, ಅತಿ ಸಮೀಪದಲ್ಲಿರುವ ರಾಜರು, ಇವು ಆರೂ ಈತಿಬಾಧೆಗಳು). ||೪೯||

ಲೋಕದಲ್ಲಿ ಪ್ರಾಣಿಗಳು ಎಲ್ಲರೂ ತಮ ತಮಗೆ ಕ್ಲ್ಪಪ್ತವಾಗಿರುವ ಆಯುಸ್ಸನ್ನೂ ಹೊಂದಿ ಬದುಕುತ್ತಿದ್ದರು. ಹಿರಿಯರ ಮುಂದೆ ಕಿರಿಯರೂ, ಯುವಕರಾದ ಮಕ್ಕಳೂ ಅಕಾಲಮರಣವನ್ನು ಹೊಂದುತ್ತಿರಲಿಲ್ಲವು. ಪ್ರಜೆಗಳೆಲ್ಲರೂ ರೋಗದ

ನಿಗಮವಿಹಿತಧರ್ಮೇ ತತ್ಪರಾಶ್ಚಂಡಿಕಾಯಾ-
ಶ್ಚರಣಸರಸಿಜಾನಾಂ ಸೇವನೇ ದಕ್ಷಚಿತ್ತಾಃ ॥೫೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ವಿಂಶೋಽಧ್ಯಾಯಃ

---

ಭಯವೂ, ಮನೋವ್ಯಾಧಿಯೂ, ಯಾವುದಾದರೂ ದುಃಖವೂ, ಇವು ಒಂದೂ ಇಲ್ಲದೆ ಸುಖವಾಗಿ ಎಲ್ಲ ಬಗೆಯ ಸಂಪತ್ತಿನಿಂದ ಕೂಡಿದವರಾಗಿ ಬದುಕುತ್ತಿದ್ದರು.

ಅಲ್ಲದೆ ವೇದೋಕ್ತವಾದ, ಧರ್ಮದ ಆಚರಣೆಯಲ್ಲಿಯೂ, ಚಂಡಿಕಾ ದೇವಿಯ ಪಾದಪದ್ಮಗಳ ಸೇವೆಯಲ್ಲಿಯೂ ದೃಢವಾದ ಮನಸ್ಸುಳ್ಳವರಾಗಿ ದೇವಿಯ ಸೇವೆಯನ್ನು ಯಾವಾಗಲೂ ಮಾಡುತ್ತಾ ಸುಖವಾಗಿರುತ್ತಿದ್ದರು. ॥೫೦॥

ಹೀಗೆ ಪರಾಶಕ್ತಿಸ್ವರೂಪಳಾದ ದೇವಿಯ ಆರಾಧನೆಯಿಂದ ದುಷ್ಟನಿಗ್ರಹವೂ, ವರ್ಣಾಶ್ರಮಧರ್ಮಗಳ ಆಚರಣೆಯಿಂದಲೂ, ಜೀವಿಕಾವೃತ್ತಿಗಳ ವ್ಯವಸ್ಥೆಯಿಂದಲೂ, ಅನುಚಿತವೂ ಅಧಾರ್ಮಿಕವೂ ಆದ ಸ್ಪರ್ಧೆಗಳು ತಪ್ಪುವುದರಿಂದಲೂ, ದೇಶದಲ್ಲಿ ಎಲ್ಲರಿಗೂ ಶಾಂತಿ. ನೆಮ್ಮದಿ, ಪುರೋಽಭಿವೃದ್ಧಿಗಳುಂಟಾಗಿ ಎಲ್ಲಜನರ ಆರ್ಥಿಕ, ಸಾಮಾಜಿಕ, ರಾಜಕೀಯ, ಮತ್ತು ಆಧ್ಯಾತ್ಮಿಕವಾದ ಪ್ರಗತಿ, ಏಳಿಗೆಗಳೂ ಮುಂದುವರಿಯುತ್ತವೆ. ಈ ಅಂಶವನ್ನೇ "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂದು ಶ್ರುತಿಯೂ, "ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ।" ಎಂದು ಸ್ಮೃತಿಧರ್ಮಶಾಸ್ತ್ರಗಳೂ ವಿಧಿಸುತ್ತಿವೆ. ಪುರಾಣಗಳೂ ಈ ಅರ್ಥವನ್ನೇ ವಿವರಿಸುತ್ತಿವೆ. ಎಂಬುದನ್ನು ಗಮನಿಸಬೇಕು.

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಏಕವಿಂಶೋऽಧ್ಯಾಯಃ ||

### ಇಪ್ಪತ್ತೊಂದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಶೃಣು ರಾಜನ್ಪ್ರವಕ್ಷ್ಯಾಮಿ ದೇವ್ಯಾಶ್ಚರಿತಮುತ್ತಮಂ ।**
**ಸುಖದಂ ಸರ್ವಜಂತೂನಾಂ ಸರ್ವಪಾಪಪ್ರಣಾಶನಂ ||೧||**

**ಯಥಾ ಶುಂಭೋ ನಿಶುಂಭಶ್ಚ ಭ್ರಾತರೌ ಬಲವತ್ತರೌ ।**
**ಬಭೂವತುರ್ಮಹಾವೀರಾವವಧ್ಯೌ ಪುರುಷೈಃ ಕಿಲ ||೨||**

---

ವ್ಯಾಸಋಷಿಯು ಹೇಳಿದನು—ಎಲೈ ರಾಜನೇ, ಎಲ್ಲ ಪ್ರಾಣಿಗಳಿಗೂ ಸುಖವನ್ನು ಉಂಟುಮಾಡುವುದಾಗಿಯೂ, ಎಲ್ಲ ಪಾತಕಗಳನ್ನೂ ನಾಶಮಾಡುವುದಾಗಿಯೂ, ಇರುವ ದೇವಿಯ ಶ್ರೇಷ್ಠವಾದ ಚರಿತ್ರೆಯನ್ನು ಇನ್ನೂ ಹೇಳುವೆನು ಕೇಳು. ದೇವಿಯು ಮಹಿಷಾಸುರನನ್ನು ನಿಗ್ರಹ ಮಾಡಿದ ಒಂದು ಚರಿತ್ರೆಯನ್ನು ಇದುವರೆಗೆ ಹೇಳಿದುದಾಯಿತು. ಈಗ ದೇವಿಯು ಇತರ ದುಷ್ಟರನ್ನೂ ನಿಗ್ರಹಿಸಿದ ಚರಿತ್ರೆಯನ್ನೂ ಹೇಳುವೆನು. ||೧||

ಹೇಗೆಂದರೆ, ಶುಂಭ ಮತ್ತು ನಿಶುಂಭನೆಂಬ ಹೆಸರುಳ್ಳ ಇಬ್ಬರು ಅಣ್ಣತಮ್ಮಂದಿರು ತುಂಬ ಬಲಿಷ್ಠರಾಗಿಯೂ, ಬಹಳ ಶೂರರಾಗಿಯೂ ಗಂಡಸರಿಂದ ಕೊಲ್ಲಲ್ಪಡಲು ಅಸಾಧ್ಯರಾಗಿಯೂ ಇದ್ದರು. ||೨||

ಬಹುಸೇನಾವೃತೌ ಶೂರೌ ದೇವಾನಾಂ ದುಃಖದೌ ಸದಾ ।
ದುರಾಚಾರೌ ಮದೋತ್ಸಿಕ್ತೌ ಬಹುದಾನವಸಂಯುತೌ ॥೩॥

ಹತಾವಂಬಿಕಯಾ ತೌ ತು ಸಂಗ್ರಾಮೇಽತೀವದಾರುಣೇ ।
ದೇವಾನಾಂ ಚ ಹಿತಾರ್ಥಾಯ ಸರ್ವೈಃ ಪರಿಚರೈಃ ಸಹ ॥೪॥

ಚಂಡಮುಂಡೌ ಮಹಾಬಾಹೂ ರಕ್ತಬೀಜೋಽತಿದಾರುಣಃ ।
ಧೂಮ್ರಲೋಚನನಾಮಾ ಚ ನಿಹತಾಸ್ತೇ ರಣಾಂಗಣೇ ॥೫॥

ತಾನ್ನಿಹತ್ಯ ಸುರಾಣಾಂ ಸಾ ಜಹಾರ ಭಯಮುತ್ತಮಂ ।
ಸ್ತುತಾ ಸಂಪೂಜಿತಾ ದೇವೈರ್ಗೀತಾ ಹೇಮಾಚಲೇ ಶುಭೇ ॥೬॥

---

ಇವರಿಬ್ಬರೂ ಬಹಳ ಸೇನೆಯಿಂದ ಸುತ್ತುವರಿಯಲ್ಪಟ್ಟವರಾಗಿಯೂ, ಶೂರರಾಗಿಯೂ, ಯಾವಾಗಲೂ ದೇವತೆಗಳಿಗೆ ದುಃಖವನ್ನುಂಟುಮಾಡುವವರಾಗಿಯೂ, ಕೆಟ್ಟನಡತೆಯುಳ್ಳವರಾಗಿಯೂ, ಮದದಿಂದ ವಿವೇಕ ಜ್ಞಾನವಿಲ್ಲದವರಾಗಿಯೂ, ಮತ್ತು ಅಂತಹ ಅನೇಕ ರಾಕ್ಷಸರಿಂದ ಕೂಡಿದವರಾಗಿಯೂ ಇದ್ದರು. ||೩||

ದೇವತೆಗಳಿಗೆ ಹಿತವನ್ನುಂಟುಮಾಡುವುದಕ್ಕಾಗಿ ದೇವಿಯಿಂದ ಅವರಿಬ್ಬರೂ ಬಹಳ ಭಯಂಕರವಾದ ಯುದ್ಧದಲ್ಲಿ ತಮ್ಮ ತಮ್ಮ ಅನುಚರರೊಡನೆ ಹೇಗೆ ಸಂಹಾರ ಮಾಡಲ್ಪಟ್ಟರೋ ಆ ಕಥೆಯನ್ನು ವಿಸ್ತಾರವಾಗಿ ಹೇಳುತ್ತೇನೆ. ||೪||

ಬಲವಾದ ದೊಡ್ಡ ತೋಳುಗಳುಳ್ಳವರಾದ, ಚಂಡ, ಮುಂಡ ಎಂಬ ಹೆಸರುಳ್ಳ ರಾಕ್ಷಸರೂ, ಬಹಳ ಕ್ರೂರನಾದ ರಕ್ತಬೀಜನೆಂಬ ರಾಕ್ಷಸನೂ, ಧೂಮ್ರಲೋಚನನೆಂಬ ದಾನವನೂ ಸಹ ಯುದ್ಧರಂಗದಲ್ಲಿ ಹಾಗೆಯೇ ಕೊಲ್ಲಲ್ಪಟ್ಟರು. ||೫||

ದೇವಿಯು ಮಂಗಳಕರವಾದ ಮೇರುಪರ್ವತದಲ್ಲಿ ಆ ರಾಕ್ಷಸರನ್ನು ನಿಗ್ರಹಮಾಡಿ ದೇವತೆಗಳಿಗೆ, ಎಂದರೆ ಲೋಕಗಳಲ್ಲಿ ಎಲ್ಲರಿಗೂ, ಇವರಿಂದ ಪ್ರಾಪ್ತವಾಗಿದ್ದ ಹೆಚ್ಚಾದ ಭಯವನ್ನು ಪರಿಹರಿಸಿದಳು. ಅನಂತರದಲ್ಲಿ ಆ ದೇವತೆಗಳು ದೇವಿಯನ್ನು ಸ್ತೋತ್ರಮಾಡಿ ಪೂಜಿಸಿದರು. ||೬||

॥ ರಾಜೋವಾಚ ॥

ಕಾವೇತಾವಸುರಾವಾದೌ ಕಥಂ ತೌ ಬಲಿನಾಂ ವರೌ ।
ಕೇನ ಸಂಸ್ಥಾಪಿತೌ ಚೇಹ ಸ್ತ್ರೀವಧ್ಯತ್ವಂ ಕುತೋ ಗತೌ ॥೭॥

ತಪಸಾ ವರದಾನೇನ ಕಸ್ಯ ಜಾತೌ ಮಹಾಬಲೌ ।
ಕಥಂ ಚ ನಿಹತೌ ಸರ್ವಂ ಕಥಯಸ್ವ ಸವಿಸ್ತರಂ ॥೮॥

॥ ವ್ಯಾಸ ಉವಾಚ ॥

ಶೃಣು ರಾಜನ್ಕಥಾಂ ದಿವ್ಯಾಂ ಸರ್ವಪಾಪಪ್ರಣಾಶಿನೀಂ ।
ದೇವ್ಯಾಶ್ಚರಿತಸಂಯುಕ್ತಾಂ ಸರ್ವಾರ್ಥಫಲದಾಂ ಶುಭಾಂ ॥೯॥

ಪುರಾ ಶುಂಭನಿಶುಂಭೌ ದ್ವಾವಸುರೌ ಭೂಮಿಮಂಡಲೇ ।
ಪಾತಾಲತಶ್ಚ ಸಂಪ್ರಾಪ್ತೌ ಭ್ರಾತರೌ ಶುಭದರ್ಶನೌ ॥೧೦॥

---

ಜನಮೇಜಯರಾಜನು ಕೇಳಿದನು — ಓ ವ್ಯಾಸನೇ, ಮೊದಲಾಗಿ ಆ ಅಸುರರು ಯಾರು ? ಅವರು ಹೇಗೆ ಬಲಿಷ್ಠರಲ್ಲಿ ಶ್ರೇಷ್ಠರಾದರು ? ಯಾರಿಂದ ಈ ಭೂಮಿಯಲ್ಲಿ ಅಧಿಕಾರದ ಸ್ಥಿತಿಯನ್ನು ಹೊಂದಿದ್ದರು ? ಇವರಿಗೆ ಸ್ತ್ರೀಯಿಂದಲೇ ಮರಣವೆಂಬುದು ಹೇಗೆ ಕ್ಲೃಪ್ತವಾಯಿತು ? ॥೭॥

ಓ ವ್ಯಾಸಮುನಿಯೇ, ಇವರು ತಪಸ್ಸನ್ನು ಮಾಡಿದವರಾಗಿ ಯಾವ ದೇವರ ವರದಿಂದ ತುಂಬ ಬಲವಂತರಾದರು ? ಇಷ್ಟು ಶೂರರಾದ ಇವರ ಸಂಹಾರವು ಹೇಗೆ ಆಯಿತು ? ಎಂಬ ಕಥೆ ಎಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳು. ॥೮॥

ವ್ಯಾಸಋಷಿಯು ಹೇಳಿದನು — ಎಲೈ ರಾಜನೇ, ಪವಿತ್ರವಾದ, ಎಲ್ಲ ಪಾಪಗಳನ್ನೂ ನಾಶಮಾಡುವ, ಎಲ್ಲ ವಿಧವಾದ ಪುರುಷಾರ್ಥಗಳನ್ನೂ ಕೊಡುವ, ದೇವಿಯ ಚರಿತ್ರೆಯ ವಿವರಗಳಿಂದ ಕೂಡಿರುವ ಕಥೆಯನ್ನು ಹೇಳುತ್ತೇನೆ ಕೇಳು. ॥೯॥

ಪೂರ್ವದಲ್ಲಿ — ಶುಂಭ, ನಿಶುಂಭ ಎಂಬ ಹೆಸರುಳ್ಳ ಇಬ್ಬರು ರಾಕ್ಷಸರು ಅಣ್ಣ ತಮ್ಮಂದಿರು ನೋಡಲು ಶುಭಕರವಾದ ಲಕ್ಷಣದಿಂದ ಕೂಡಿದವರಾಗಿ ಪಾತಾಳ ಲೋಕದಿಂದ ಭೂಮಿಗೆ ಬಂದರು. ॥೧೦॥

ತೌ ಪ್ರಾಪ್ತಯೌವನೌ ಚೈವ ಚೇರತುಸ್ತಪ ಉತ್ತಮಮ್ ।
ಅನ್ನೋದಕಂ ಪರಿತ್ಯಜ್ಯ ಪುಷ್ಕರೇ ಲೋಕಪಾವನೇ ॥೧೧॥

ವರ್ಷಾಣಾಮಯುತಂ ಯಾವದ್ಯೋಗವಿದ್ಯಾಪರಾಯಣೌ ।
ಏಕತ್ರೈವಾಸನಂ ಕೃತ್ವಾ ಕೇಪಾತೇ ಪರಮಂ ತಪಃ ॥೧೨॥

ತಯೋಸ್ತುಷ್ಟೋಽಭವದ್ಬ್ರಹ್ಮಾ ಸರ್ವಲೋಕಪಿತಾಮಹಃ ।
ತತ್ರಾಗತಶ್ಚ ಭಗವಾನಾರುಹ್ಯ ವರಟಾಪತಿಮ್ ॥೧೩॥

ತಾವುಭೌ ಚ ಜಗತ್ಸ್ರಷ್ಟಾ ದೃಷ್ಟ್ವಾ ಧ್ಯಾನಪರೌ ಸ್ಥಿತೌ ।
ಉತ್ತಿಷ್ಠತಂ ಮಹಾಭಾಗೌ ತುಷ್ಟೋಽಹಂ ತಪಸಾ ಕಿಲ ॥೧೪॥

---

ಪ್ರಾಯದ ವಯಸ್ಸನ್ನು ಪಡೆದಿದ್ದ ಅವರಿಬ್ಬರೂ ಜನರನ್ನು ಪವಿತ್ರಗೊಳಿಸುವ ಪುಷ್ಕರವೆಂಬ ಕ್ಷೇತ್ರದಲ್ಲಿ ಅನ್ನೋದಕಗಳನ್ನು ಬಿಟ್ಟು ಉತ್ತಮವಾದ ತಪಸ್ಸನ್ನು ಮಾಡಿದರು. ॥೧೧॥

ಆ ಶುಂಭ-ನಿಶುಂಭರಿಬ್ಬರೂ ಹತ್ತು ಸಾವಿರ ವರ್ಷಗಳು ಕಳೆಯುವವರೆಗೂ ಯೋಗಾಂಗಗಳ ಅನುಷ್ಠಾನ ಮಾಡುವುದರಲ್ಲಿ ಆಸಕ್ತರಾಗಿ ಒಂದೇ ಕಡೆಯಲ್ಲಿ ಕೂತುಕೊಂಡು ಉತ್ಕೃಷ್ಟವಾದ ತಪಸ್ಸನ್ನು ಮಾಡಿದರು. ॥೧೨॥

ಎಲ್ಲ ಲೋಕಗಳಿಗೂ ಅಜ್ಜನಾಗಿರುವ ಬ್ರಹ್ಮನು ಅವರಿಬ್ಬರೂ ಆಚರಿಸಿದ ತಪಸ್ಸಿನ ವಿಷಯದಲ್ಲಿ ಸಂತೋಷವನ್ನು ಹೊಂದಿದನು. ಮತ್ತು ತನ್ನ ವಾಹನವಾದ (ವರಟಾ ಎಂದರೆ ಹೆಣ್ಣುಹಂಸ) ಪಕ್ಷಿಗೆ ಪತಿಯಾದ ಗಂಡು ಹಂಸಪಕ್ಷಿಯನ್ನು ಹತ್ತಿಕೊಂಡು, ಷಡ್ಗುಣೈಶ್ವರ್ಯಸಂಪನ್ನನಾದ ಆ ಬ್ರಹ್ಮನು ಇವರಿಬ್ಬರೂ ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಬಂದನು. ॥೧೩॥

ಜಗತ್ತನ್ನು ಸೃಷ್ಟಿಮಾಡುವ ಆ ಬ್ರಹ್ಮನು ಅಲ್ಲಿಗೆ ಬಂದು ಧ್ಯಾನದಲ್ಲಿ ಆಸಕ್ತರಾಗಿ ಅಂತರ್ಮುಖಿಗಳಾಗಿದ್ದ ಅವರಿಬ್ಬರನ್ನೂ ನೋಡಿ, ಎಲೈ ಅದೃಷ್ಟಶಾಲಿಗಳಾದ ಶುಂಭ-ನಿಶುಂಭರೇ, ನೀವಿಬ್ಬರೂ ಏಳಿರಿ. ನಾನು ನಿಮ್ಮ ತಪಸ್ಸಿನಿಂದ ಸಂತೋಷವನ್ನು ಪಡೆದು ಬಂದಿದ್ದೇನೆ. ॥೧೪॥

ವಾಂಛಿತಂ ವಾ ವರಂ ಕಾಮಂ ದದಾಮಿ ಬ್ರುವತಾಮಿ ಹ ।
ಕಾಮದೋಽಹಂ ಸಮಾಯಾತೋ ದೃಷ್ಟ್ವಾ ವಾಂ ತಪಸೋ ಬಲಂ ॥೧೫॥

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಪ್ರಬುದ್ಧೌ ತೌ ಸಮಾಹಿತೌ ।
ಪ್ರದಕ್ಷಿಣಕ್ರಿಯಾಂ ಕೃತ್ವಾ ಪ್ರಣಾಮಂ ಚಕ್ರತುಸ್ತದಾ ॥೧೬॥

ದಂಡವತ್ಪ್ರಣಿಪಾತಂ ಚ ಕೃತ್ವಾತೌ ದುರ್ಬಲಾಕೃತೀ ।
ಊಚತುರ್ಮಧುರಾಂ ವಾಚಂ ದೀನೌ ಗದ್ಗದಯಾ ಗಿರಾ ॥೧೭॥

ದೇವದೇವ ದಯಾಸಿಂಧೋ ಭಕ್ತಾನಾಮಭಯಪ್ರದ ।
ಅಮರತ್ವಂ ಚ ನೌ ಬ್ರಹ್ಮನ್ ದೇಹಿ ತುಷ್ಟೋಽಸಿ ಚೇತ್ಪ್ರಭೋ॥೧೮॥

---

ನಾನು ನಿಮ್ಮ ಇಷ್ಟವನ್ನು ಕೊಡುವುದಕ್ಕಾಗಿ ಇಲ್ಲಿಗೆ ಬಂದಿದೇನೆ. ನಿಮ್ಮ ತಪಸ್ಸಿನ ಬಲವನ್ನು ನೋಡಿದೆನು. ನೀವು ತಪಸ್ಸು ಮಾಡುತ್ತಿರುವುದನ್ನು ನಿಲ್ಲಿಸಿರಿ. ಮತ್ತು ನಿಮ್ಮ ಮನಸ್ಸಿನ ಇಷ್ಟವಾದ ವರವನ್ನು ನಿಮ್ಮ ಇಚ್ಛೆಬಂದಂತೆ ಕೇಳಿರಿ. ನಾನು ಅದನ್ನು ನಿಮಗೆ ಕೊಡುತ್ತೇನೆ. ಎಂದು ಹೇಳಿದನು. ||೧೫||

ವ್ಯಾಸಋಷಿಯು ಹೇಳಿದನು—ಹೀಗೆ ಹೇಳುತ್ತಿರುವ ಆ ಬ್ರಹ್ಮನ ಮಾತನ್ನು ಕೇಳಿ ಯೋಗಾಭ್ಯಾಸದಿಂದ ಸಮಾಧಿಯಲ್ಲಿದ್ದ ಅವರಿಬ್ಬರೂ ಎಚ್ಚರಗೊಂಡು ಆ ಬ್ರಹ್ಮನಿಗೆ ಆಗ ಪ್ರದಕ್ಷಿಣೆಯನ್ನು ಮಾಡಿ ನಮಸ್ಕಾರವನ್ನು ಮಾಡಿದರು. ||೧೬||

ತಪಸ್ಸಿನಿಂದ ಬಳಲಿ ಬಲವಿಲ್ಲದಿರುವ ಶರೀರವುಳ್ಳವರಾದ ಆ ಶುಂಭ-ನಿಶುಂಭರು ದೀರ್ಘವಾಗಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ಸಂತೋಷಾಶ್ಚರ್ಯಗಳಿಂದ ಕೂಡಿದ ಸ್ವರದಿಂದ ತೊದಲುತ್ತಿರುವ ಮಾತುಗಳನ್ನು ಹೀಗೆ ಹೇಳಿದರು. ||೧೭||

ದೇವತೆಗಳೆಲ್ಲರಿಗೂ ದೇವನಾದ ಸ್ವಾಮಿಯೇ, ಓ ಕೃಪಾಸಮುದ್ರನೇ, ಭಕ್ತರಿಗೆಲ್ಲರಿಗೂ ಅಭಯವನ್ನು ಕೊಡುವ ಬ್ರಹ್ಮನೇ, ಹೇ ಪ್ರಭುವೇ, ನೀನು ನಮ್ಮ ತಪಸ್ಸಿಗೆ ಮೆಚ್ಚಿರುವುದಾದರೆ ನಮಗೆ ದೇವತ್ವವನ್ನು ಎಂದರೆ, ಸಾವಿಲ್ಲದಿರುವಿಕೆಯನ್ನು ಕೊಡು. ||೧೮||

ಮರಣಾದಪರಂ ಕಿಂಚಿದ್ಭಯಂ ನಾಸ್ತಿ ಧರಾತಲೇ ।
ತಸ್ಮಾದ್ಭಯಾಚ್ಚ ಸಂತ್ರಸ್ತೌ ಯುಷ್ಮಾಕಂ ಶರಣಂ ಗತೌ ॥೧೯॥

ತ್ರಾಹಿ ತ್ವಂ ದೇವದೇವೇಶ ಜಗತ್ಕರ್ತಃ ಕ್ಷಮಾನಿಧೇ ।
ಪರಿಸ್ಫೋಟಯ ವಿಶ್ವಾತ್ಮನ್ಸದ್ಯೋ ಮರಣಜಂ ಭಯಂ ॥೨೦॥

॥ ಬ್ರಹ್ಮೋವಾಚ ॥

ಕಿಮಿದಂ ಪ್ರಾರ್ಥನೀಯಂ ವೋ ವಿಪರೀತಂ ತು ಸರ್ವಥಾ ।
ಅದೇಯಂ ಸರ್ವಥಾ ಸರ್ವೈಃ ಸರ್ವೇಭ್ಯೋ ಭುವನತ್ರಯೇ ॥೨೧॥

ಜಾತಸ್ಯ ಹಿ ಧ್ರುವಂ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ಮರ್ಯಾದಾ ವಿಹಿತಾ ಲೋಕೇ ಪೂರ್ವಂ ವಿಶ್ವಕೃತಾ ಕಿಲ ॥೨೨॥

---

ಭೂಮಿಯಲ್ಲಿ ಮರಣಕ್ಕಿಂತಲೂ ಮಿಗಿಲಾದ ಇನ್ನೊಂದು ಭಯವು ಯಾವುದೂ ಇಲ್ಲ. ನಾವಿಬ್ಬರೂ ಆ ಮರಣಭಯದಿಂದ ಹೆದರಿಕೊಂಡು ನಿನ್ನನ್ನು ಶರಣುಹೊಂದಿದೇವೆ. ॥೧೯॥

ಜಗತ್ತನ್ನು ಸೃಷ್ಟಿಮಾಡತಕ್ಕವನೇ, ದೇವತೆಗಳಿಗೂ ಒಡೆಯರಾದ ಇಂದ್ರ ಮೊದಲಾದವರಿಗೂ ಅಧಿಪತಿಯಾಗಿರುವವನೇ, ಉಪಶಾನ್ತಿಗುಣಕ್ಕೆ ನಿಧಿಯಾಗಿರುವ ಬ್ರಹ್ಮನೇ, ನೀನು ನಮ್ಮನ್ನು ರಕ್ಷಿಸು. ಓ ಜಗದ್ರೂಪಿಯೇ, ನಮಗೆ ಮರಣದಿಂದುಂಟಾಗಬಹುದಾದ ಭಯವನ್ನು ಈಗಲೇ ಪರಿಹರಿಸು. ॥೨೦॥

ಬ್ರಹ್ಮನು ಹೇಳಿದನು—ನೀವುಗಳು ಬೇಡುವುದು ಇದು ಏನು? ಎಲ್ಲ ರೀತಿಯ ಬೇಡಿಕೆಗಳಿಂದಲೂ ಇದು ವ್ಯತ್ಯಾಸವಾಗಿರುವುದು. ಮೂರು ಲೋಕಗಳಲ್ಲಿಯೂ ಯಾವಾಗಲೂ ಯಾರಿಂದಲೂ, ಯಾರಿಗೂ, ನೀವು ಕೇಳುವ ಈ ವರವು ಕೊಡತಕ್ಕುದಲ್ಲವು. ॥೨೧॥

ಹುಟ್ಟಿದವನಿಗೆ ಮರಣವು ನಿಯತವಾದುದು. ಸತ್ತವನಿಗೆ ಹುಟ್ಟುವಿಕೆಯೂ ನಿಯತವಾದುದು. ಎಂಬುದಾಗಿ ಈ ಪ್ರಪಂಚವನ್ನು ಸೃಷ್ಟಿಮಾಡಿದವನೇ ಲೋಕದಲ್ಲಿ ಕ್ಲೃಪ್ತಮಾಡಿರುವ ಇದು ಒಂದು ನಿಯಮವಾಗಿದೆ. ॥೨೨॥

**ಮರ್ತವ್ಯಂ ಸರ್ವಥಾ ಸರ್ವೈಃ ಪ್ರಾಣಿಭಿರ್ನಾತ್ರ ಸಂಶಯಃ ।**
**ಅನ್ಯಂ ಪ್ರಾರ್ಥಯತಾಂ ಕಾಮಂ ದದಾಮಿ ಯಚ್ಚ ವಾಂಛಿತಂ॥೨೩॥**

॥ ವ್ಯಾಸ ಉವಾಚ ॥

**ತದಾಕರ್ಣ್ಯ ವಚಸ್ತಸ್ಯ ಸುವಿಮೃಶ್ಯ ಚ ದಾನವೌ ।**
**ಊಚತುಃ ಪ್ರಣಿಪತ್ಯಾಥ ಬ್ರಹ್ಮಾಣಂ ಪುರತಃ ಸ್ಥಿತಂ ॥೨೪॥**

**ಪುರುಷೈರಮರಾದ್ಯೈಶ್ಚ ಮಾನವೈರ್ಮೃಗಪಕ್ಷಿಭಿಃ ।**
**ಅವಧ್ಯತ್ವಂ ಕೃಪಾಸಿಂಧೋ ದೇಹಿ ನೌ ವಾಂಛಿತಂ ವರಂ ॥೨೫॥**

**ನಾರೀ ಬಲವತೀ ಕ್ವಾಸ್ತಿ ಯಾ ನೌ ನಾಶಂ ಕರಿಷ್ಯತಿ ।**
**ನ ಬಿಭೀವಃ ಸ್ತ್ರಿಯಃ ಕಾಮಂ ತ್ರೈಲೋಕ್ಯೇ ಸಚರಾಚರೇ ॥೨೬॥**

---

ದೇವನ ಈ ನಿಯಮಕ್ಕೆ ಅನುಸಾರವಾಗಿ ಪ್ರಾಣಿಗಳೆಲ್ಲರೂ ಈ ಲೋಕದಲ್ಲಿ ಹುಟ್ಟಿದ ಮೇಲೆ ಸಾಯಲೇಬೇಕು. ಇದರಲ್ಲಿ ಸಂದೇಹವೇ ಇಲ್ಲವು. ಆದಕಾರಣ ನೀವು ಈಗ ಕೇಳಿರುವ ವರವೊಂದನ್ನು ಬಿಟ್ಟು ಬೇರೆಯ ವರವನ್ನು ನಿಮಗೆ ಬೇಕಾದುದನ್ನು ಕೇಳಿರಿ. ಅದನ್ನು ನಾನು ಕೊಡುತ್ತೇನೆ. ॥೨೩॥

ವ್ಯಾಸಮುನಿಯು ಹೇಳಿದನು—ಆ ರಾಕ್ಷಸರಿಬ್ಬರೂ ಆ ಬ್ರಹ್ಮನ ಮಾತನ್ನು ಕೇಳಿ, ಅನಂತರದಲ್ಲಿ ತಾವು ಚನ್ನಾಗಿ ವಿಚಾರ ಮಾಡಿ ನಿಶ್ಚಯಿಸಿಕೊಂಡು ಎದುರಿಗೆ ನಿಂತಿರುವ ಬ್ರಹ್ಮನಿಗೆ ನಮಸ್ಕಾರ ಮಾಡಿ ಅವನ ಸಂಗಡ ಹೀಗೆ ಮಾತನಾಡಿದರು. ॥೨೪॥

ದೇವತೆಗಳೇ ಮೊದಲಾದ ಗಂಡಸರಿಂದಲೂ, ಮನುಷ್ಯರೂ, ಮೃಗಗಳೂ, ಹಕ್ಕಿಗಳೂ ಇವರಲ್ಲಿ ಗಂಡಸರಿಂದ ನಾವುಗಳು ಕೊಲ್ಲಲ್ಪಡಲಾಗದಂತಿರಬೇಕು. ಓ ದಯಾಸಮುದ್ರನೇ, ಹೀಗೆ ಇರುವ ನಮ್ಮ ಈ ಅಭಿಲಾಷೆಯನ್ನು ನಡೆಸಿಕೊಡು. ॥೨೫॥

ಓ ಬ್ರಹ್ಮನೇ, ಯಾವ ಹೆಂಗಸು ತಾನೇ ನಮ್ಮಿಬ್ಬರಿಗೂ ಮರಣವನ್ನುಂಟು ಮಾಡಬಲ್ಲಳು? ಅಂಥಾ ಅಷ್ಟುಬಲವುಳ್ಳ ಹೆಂಗುಸು ಈ ಮೂರು ಲೋಕಗಳಲ್ಲೂ ಎಲ್ಲಿ, ಯಾರು, ಇರುವಳು? ಸ್ಥಿರ, ಚರಪ್ರಾಣಿಗಳಿಂದ ತುಂಬಿರುವ ಈ ಮೂರು ಲೋಕಗಳಲ್ಲಿಯೂ ಇರುವ ಹೆಂಗುಸರಿಂದಲಾದರೋ ನಾವಿಬ್ಬರೂ ಹೆದರುವುದಿಲ್ಲವು. ॥೨೬॥

ಅವಧ್ಯೌ ಭ್ರಾತರೌ ಸ್ಯಾತಾಂ ನರೇಭ್ಯಃ ಪಂಕಜೋದ್ಭವ ।
ಭಯಂ ನ ಸ್ತ್ರೀಜನೇಭ್ಯಶ್ಚ ಸ್ವಭಾವಾದಬಲಾ ಹಿ ಸಾ ॥೨೭॥

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ತಯೋರ್ವಾಕ್ಯಂ ಪ್ರದದೌ ವಾಂಛಿತಂ ವರಂ ।
ಬ್ರಹ್ಮಾ ಪ್ರಸನ್ನಮನಸಾ ಜಗಾಮಾಥ ಸ್ವಮಾಲಯಂ ॥೨೮॥

ಗತೇಽಥ ಭುವನೇ ತಸ್ಮಿನ್ದಾನವೌ ಸ್ವಗೃಹಂ ಗತೌ ।
ಭೃಗುಂ ಪುರೋಹಿತಂ ಕೃತ್ವಾ ಚಕ್ರತುಃ ಪೂಜನಂ ತದಾ ॥೨೯॥

ಶುಭೇ ದಿನೇ ಸುನಕ್ಷತ್ರೇ ಜಾತರೂಪಮಯಂ ಶುಭಂ ।
ಕೃತ್ವಾ ಸಿಂಹಾಸನಂ ದಿವ್ಯಂ ರಾಜ್ಯಾರ್ಥಂ ಪ್ರದದೌ ಮುನಿಃ ॥೩೦॥

---

ಕಮಲದಲ್ಲಿ ಹುಟ್ಟಿದ ಓ ಬ್ರಹ್ಮನೇ, ನಾವು ಅಣ್ಣತಮ್ಮಂದಿರಿಬ್ಬರೂ ಗಂಡಸರಿಂದ ವಧೆಗೆ ಅಸಾಧ್ಯರಾಗಿರುವಂತಾಗಲಿ! ಅಷ್ಟನ್ನು ಮಾತ್ರ ನೀನು ಕರುಣಿಸಿದರೆ ಸಾಕು! ಹೆಂಗುಸರ ದೆಸೆಯಿಂದ ನಮಗೆ ಭಯವುಂಟಾಗಲಾರದು. ಏಕೆಂದರೆ, ಸ್ವಾಭಾವಿಕವಾಗಿ ಹೆಂಗುಸರು ಬಲವಿಲ್ಲದವರಲ್ಲವೆ? ॥೨೭॥

ವ್ಯಾಸಮುಷಿಯು ಹೇಳಿದನು—ಬ್ರಹ್ಮನು ಅವರಿಬ್ಬರ ಮಾತನ್ನೂ ಕೇಳಿ, ಆ ಶುಂಭ-ನಿಶುಂಭರಿಬ್ಬರಿಗೂ ಮನಸ್ಸಿಗೆ ಹಿತವಾದ ಆ ವರವನ್ನು ಕೊಟ್ಟನು. ಆ ಮೇಲೆ ಸಂತೋಷವುಳ್ಳ ಮನಸ್ಸಿನಿಂದ ತನ್ನ ಮನೆಯನ್ನು ಎಂದರೆ ತನ್ನ ಅಧಿಕಾರ ಸ್ಥಾನವಾದ ಸತ್ಯಲೋಕವನ್ನು ಸೇರಿದನು. ॥೨೮॥

ಬ್ರಹ್ಮನಿಂದ ವರವನ್ನು ಹೊಂದಿದ ಬಳಿಕ, ಬ್ರಹ್ಮನು ತನ್ನ ಮನೆಯನ್ನು ಪಡೆದಮೇಲೆ, ಶುಂಭ, ನಿಶುಂಭರಿಬ್ಬರೂ ತಮ್ಮ ತಮ್ಮ ಮನೆಗಳಿಗೆ ಹೋದರು. ಆ ಮೇಲೆ ಅವರು ಭೃಗುಮಹರ್ಷಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡು ಆ ಋಷಿಯ ಪೂಜೆಯನ್ನು ಮಾಡಿದರು. ॥೨೯॥

ಉತ್ತಮವಾದ ನಕ್ಷತ್ರದಿಂದ ಕೂಡಿದ ಮಂಗಳಕರವಾದ ದಿವಸದಲ್ಲಿ ಭೃಗುಮಹರ್ಷಿಯು ಚಿನ್ನದಿಂದ ಮಾಡಿದ ಮಂಗಳಕರವಾದ ಶ್ರೇಷ್ಠವಾದ ಸಿಂಹಾಸನವನ್ನು ಮಾಡಿಸಿ ಇವರಿಗೆ ರಾಜ್ಯವಾಳುವುದಕ್ಕಾಗಿ ಕೊಟ್ಟನು. ॥೩೦॥

**ಶುಂಭಾಯ ಜ್ಯೇಷ್ಠಭೂತಾಯ ದದೌ ರಾಜ್ಯಾಸನಂ ಶುಭಂ ।**
**ಸೇವನಾರ್ಥಂ ತದೈವಾಶು ಸಂಪ್ರಾಪ್ತಾ ದಾನವೋತ್ತಮಾಃ ॥೩೧॥**

**ಚಂಡಮುಂಡೌ ಮಹಾವೀರೌ ಭ್ರಾತರೌ ಬಲದರ್ಪಿತೌ ।**
**ಸಂಪ್ರಾಪ್ತೌ ಸೈನ್ಯಸಂಯುಕ್ತೌ ರಥವಾಜಿಗಜಾನ್ವಿತೌ ॥೩೨॥**

**ಧೂಮ್ರಲೋಚನನಾಮಾ ಚ ತದ್ರೂಪಶ್ಚಂಡವಿಕ್ರಮಃ ।**
**ಶುಂಭಂ ಚ ಭೂಪತಿಂ ಶ್ರುತ್ವಾ ತದಾಗಾದ್ಬಲಸಂಯುತಃ ॥೩೩॥**

**ರಕ್ತಬೀಜಸ್ತಥಾ ಶೂರೋ ವರದಾನಬಲಾಧಿಕಃ ।**
**ಅಕ್ಷೌಹಿಣೀಭ್ಯಾಂ ಸಂಯುಕ್ತಸ್ತತ್ರೈವಾಗತ್ಯ ಸಂಗತಃ ॥೩೪॥**

**ತಸ್ಯೈಕಂ ಕಾರಣಂ ರಾಜನ್ಸಂಗ್ರಾಮೇ ಯುಧ್ಯತಃ ಸದಾ ।**
**ದೇಹಾದ್ರುಧಿರಸಂಪಾತಸ್ತಸ್ಯ ಶಸ್ತ್ರಾಹತಸ್ಯ ಚ ॥೩೫॥**

---

ಶುಂಭ-ನಿಶುಂಭರೆಂಬ ಈ ಅಣ್ಣತಮ್ಮಂದಿರಲ್ಲಿ ಹಿರಿಯವನಾದ ಶುಂಭನಿಗೆ ಋಷಿಯು ಮಂಗಳಕರವಾದ ಸಿಂಹಾಸನವನ್ನು ಕೊಟ್ಟನು. ಆಗಲೇ ಇವನನ್ನು ಸೇವಿಸುವುದಕ್ಕಾಗಿ ಶ್ರೇಷ್ಠರಾದ ರಾಕ್ಷಸರು ಬೇಗ ಬೇಗನೆ ಬಂದು ಸೇರಿದರು. ||೩೧||

ಹೇಗೆಂದರೆ ಶಕ್ತಿಯಿಂದ ಗರ್ವವುಳ್ಳವರಾದ, ಶೂರರಾದ, ಅಣ್ಣ-ತಮ್ಮಂದಿರಾದ ಚಂಡ, ಮುಂಡ ಎಂಬ ರಾಕ್ಷಸರು ಸೇನೆಯಿಂದ ಕೂಡಿದವರಾಗಿ ರಥ, ಕುದುರೆ, ಆನೆ ಇವುಗಳನ್ನು ತಮ್ಮ ಸಂಗಡ ತೆಗೆದುಕೊಂಡು ಬಂದು ಸೇರಿಹರು. ||೩೨||

ಹಾಗೆಯೇ ಸಹಿಸಲಶಕ್ಯವಾದ ಪರಾಕ್ರಮವುಳ್ಳ ಧೂಮ್ರಲೋಚನನೆಂಬುವನು ತನ್ನ ಹೆಸರಿಗೆ ಅನುಸಾರವಾದ ಹೊಗೆಯ ಬಣ್ಣವುಳ್ಳ ಕಣ್ಣುಳ್ಳವನಾಗಿದ್ದನು. ಅವನೂ ಶುಂಭನು ದೊರೆಯಾದುದನ್ನು ಕೇಳಿ ಸೇನೆಯಿಂದ ಕೂಡಿದವನಾಗಿ ಶುಂಭನ ಹತ್ತಿರಕ್ಕೆ ಒತ್ತಾಸೆಯಾಗಿ ಬಂದು ಸೇರಿದನು. ||೩೩||

ಅಲ್ಲದೆ ಈಶ್ವರನು ವರವನ್ನು ಕೊಟ್ಟಿರುವುದರಿಂದ ಹೆಚ್ಚಾದ ಬಲವುಳ್ಳವನಾದ, ಶೂರನಾದ, ರಕ್ತಬೀಜನೆಂಬುವನು ಎರಡು ಅಕ್ಷೋಹಿಣಿ ಸೇನೆಯಿಂದ ಕೂಡಿದವನಾಗಿ ಅಲ್ಲಿಗೆ ಬಂದು ಸೇರಿಕೊಂಡನು. ||೩೪||

ಓ ಜನಮೇಜಯರಾಜನೇ, ಆ ರಕ್ತಬೀಜನಿಗೆ ಯಾವಾಗಲೂ ಯುದ್ಧ ಮಾಡುವಾಗ ಮುಖ್ಯವಾದ ಒಂದು ಮಹಿಮೆಯು ಕಾರಣವಿರುವುದು. ಏನೆಂದರೆ ಆಯುಧದಿಂದ ಹೊಡೆಯಲ್ಪಟ್ಟ ಅವನ ಶರೀರದಿಂದ ರಕ್ತದ ಹನಿಯು ||೩೫||

ಜಾಯಂತೇ ಚ ಯದಾ ಭೂಮಾವುತ್ಪದ್ಯಂತೇ ಹ್ಯನೇಕಶಃ ।
ತಾದೃಶಾಃ ಪುರುಷಾಃ ಕ್ರೂರಾ ಬಹವಃ ಶಸ್ತ್ರಪಾಣಯಃ ॥೩೬॥

ಸಂಭವಂತಿ ತದಾಕಾರಾಸ್ತದ್ರೂಪಾಸ್ತತ್ಪರಾಕ್ರಮಾಃ ।
ಯುದ್ಧಂ ಪುನಸ್ತೇ ಕುರ್ವಂತಿ ಪುರುಷಾ ರಕ್ತಸಂಭವಾಃ ॥೩೭॥

ಅತಃ ಸೋऽಪಿ ಮಹಾವೀರ್ಯಃ ಸಂಗ್ರಾಮೇऽತೀವ ದುರ್ಜಯಃ ।
ಅವಧ್ಯಃ ಸರ್ವಭೂತಾನಾಂ ರಕ್ತಬೀಜೋ ಮಹಾಸುರಃ ॥೩೮॥

ಅನ್ಯೇ ಚ ಬಹವಃ ಶೂರಾಶ್ಚತುರಂಗಸಮನ್ವಿತಾಃ ।
ಶುಂಭಂ ಚ ನೃಪತಿಂ ಮತ್ವಾ ಬಭೂವುಸ್ತಸ್ಯ ಸೇವಕಾಃ ॥೩೯॥

ಅಸಂಖ್ಯಾತಾ ತದಾ ಜಾತಾ ಸೇನಾ ಶುಂಭನಿಶುಂಭಯೋಃ ।
ಪೃಥಿವ್ಯಾಃ ಸಕಲಂ ರಾಜ್ಯಂ ಗೃಹೀತಂ ಬಲವತ್ತಯಾ ॥೪೦॥

---

ಯಾವಾಗ ಭೂಮಿಯಲ್ಲಿ ಬೀಳುವುದೋ, ಆಗಲೇ ಶಕ್ತಿಯಲ್ಲಿ ಅವನಿಗೆ ಸಮಾನರಾದ, ಕ್ರೂರರಾದ, ಶಸ್ತ್ರಗಳನ್ನು ಕೈಯಲ್ಲಿ ಹಿಡಿದುಕೊಂಡಿರುವವರಾದ ಅನೇಕ ರಾಕ್ಷಸರು ಹುಟ್ಟುವರು. ॥೩೬॥

ಅವನ ಆ ರಕ್ತದಿಂದ ಹುಟ್ಟುವ ಆ ರಾಕ್ಷಸರು ಆ ರಕ್ತಬೀಜನಿಗೆ ಸಮನಾದ ಆಕಾರವೂ, ರೂಪವೂ, ಪರಾಕ್ರಮವೂ, ಇವುಗಳುಳ್ಳವರಾಗಿ ಅವರೆಲ್ಲರೂ ಕೂಡ ಆ ರಕ್ತಬೀಜನ ಬಲಕ್ಕೆ ಸಮವಾಗಿ ಯುದ್ಧವನ್ನು ಮಾಡುವರು. ॥೩೭॥

ಈ ಕಾರಣದಿಂದ ಮಹಾಸುರನಾದ ಆ ರಕ್ತಬೀಜನೂ ಕೂಡ ಬಹಳ ಪರಾಕ್ರಮವುಳ್ಳವನಾಗಿ ಕಾಳಗದಲ್ಲಿ ಬಹಳಮಟ್ಟಿಗೆ ಯುದ್ಧ ಮಾಡಿದರೂ ಜಯಿಸಲ ಸಾಧ್ಯನಾಗಿರುವನು. ಎಲ್ಲ ಪ್ರಾಣಿಗಳೂ ಒಟ್ಟಾದರೂ, ಅದರಿಂದಲೂ ಕೊಲ್ಲಲು ಆಗದಿರುವವನು. ॥೩೮॥

ಶೂರರಾಗಿರುವ ಇತರ ರಾಕ್ಷಸರೂ ಕೂಡ ಆನೆ, ಕುದುರೆ, ರಥ, ಕಾಲಾಳು ಎಂದು ನಾಲ್ಕು ವಿಧವಾಗಿರುವ ಸೇನೆಯಿಂದ ಕೂಡಿದವರಾಗಿ ಬಹಳ ಜನರು ಒಟ್ಟಾಗಿ ಶುಂಭನನ್ನು ರಾಜನಾದನೆಂದು ತಿಳಿದು ಅವನಿಗೆ ಸೇವಕರಾಗಿ ಬಂದು ನಿಂತರು. ॥೩೯॥

ಹೀಗೆ ರಾಕ್ಷಸರೆಲ್ಲರೂ ಸೇನಾಸಮೇತರಾಗಿ ಶುಂಭ, ನಿಶುಂಭರನ್ನು ಸೇರಿದ ತರುವಾಯ ರಾಕ್ಷಸರ ಸೇನೆಯು ಲೆಕ್ಕವಿಲ್ಲದಷ್ಟಾಯಿತು. ಸೇನೆಯು ಬಹಳವಾಗಿ ಶಕ್ತಿ

ಸೇನಾಯೋಗಂ ತದಾ ಕೃತ್ವಾ ನಿಶುಂಭಃ ಪರವೀರಹಾ ।
ಜಗಾಮ ತರಸಾ ಸ್ವರ್ಗೇ ಶಚೀಪತಿಜಯಾಯ ಚ ॥೪೧॥

ಚಕಾರಾಸೌ ಮಹಾಯುದ್ಧಂ ಲೋಕಪಾಲೈಃ ಸಮಂತತಃ ।
ವೃತ್ರಹಾ ವಜ್ರಪಾತೇನ ತಾಡಯಾಮಾಸ ವಕ್ಷಸಿ ॥೪೨॥

ಸ ವಜ್ರಾಭಿಹತೋ ಭೂಮೌ ಪಪಾತ ದಾನವಾನುಜಃ ।
ಭಗ್ನಂ ಬಲಂ ತದಾ ತಸ್ಯ ನಿಶುಂಭಸ್ಯ ಮಹಾತ್ಮನಃ ॥೪೩॥

ಭ್ರಾತರಂ ಮೂರ್ಚ್ಛಿತಂ ಶ್ರುತ್ವಾ ಶುಂಭಃ ಪರಬಲಾರ್ದನಃ ।
ತತ್ರಾಗತ್ಯ ಸುರಾನ್ಸರ್ವಾಂಸ್ತಾಡಯಾಮಾಸ ಸಾಯಕೈಃ ॥೪೪॥

---

ಯುಳ್ಳದ್ದಾಗಿ ಪ್ರಸಿದ್ಧಿಯನ್ನೂ ಪಡೆದು ಭೂಮಿಯಲ್ಲಿರುವ ರಾಜ್ಯವೆಲ್ಲವನ್ನೂ ಆಕ್ರಮಿಸಿ ಶುಂಭ, ನಿಶುಂಭರ ಅಧೀನತೆಗೆ ಒಳಪಡಿಸಿತು. ॥೪೦॥

ಶತ್ರುವೀರರನ್ನು ನಾಶಮಾಡುವವನಾದ ನಿಶುಂಭನು ಸೇನೆಯನ್ನು ಕಟ್ಟಿಕೊಂಡು ಭೂಮಿಯೆಲ್ಲವನ್ನೂ ಕೈವಶಮಾಡಿಕೊಂಡಮೇಲೆ, ಸ್ವರ್ಗದಲ್ಲಿ ಇಂದ್ರನನ್ನೂ ಜಯಿಸುವುದಕ್ಕಾಗಿ ಬೇಗನೆ ಹೊರಟನು. ॥೪೧॥

ಈ ನಿಶುಂಭನು ಅಲ್ಲಿ ಲೋಕಪಾಲಕರೊಡನೆ ಎಲ್ಲ ಕಡೆಗಳಲ್ಲಿಯೂ ದೊಡ್ಡದಾದ ಯುದ್ಧವನ್ನು ಮಾಡಿದನು. ಆಗ ವೃತ್ರಾಸುರನನ್ನು ಸಂಹಾರ ಮಾಡಿದ ಇಂದ್ರನು ವಜ್ರಾಯುಧದಿಂದ ನಿಶುಂಭನನ್ನು ಎದೆಯಲ್ಲಿ ಹೊಡೆದನು. ॥೪೨॥

ಶುಂಭನಿಗೆ ತಮ್ಮನಾದ ಆ ನಿಶುಂಭನು ವಜ್ರಾಯುಧದಿಂದ ಹೊಡೆಯಲ್ಪಟ್ಟವನಾಗಿ ಭೂಮಿಯಲ್ಲಿ ಬಿದ್ದನು. ಮಹಾತ್ಮನಾದ ಆ ನಿಶುಂಭನ ಸೇನೆಯು ಆಗ ಚದುರಿ ಒಡೆದು ಸೋತುಹೋಯಿತು. ॥೪೩॥

ಶತ್ರುಸೇನೆಯನ್ನು ನಾಶಮಾಡುವವನಾದ ಶುಂಭನು ತನ್ನ ತಮ್ಮನಾದ ನಿಶುಂಭನು ಮೂರ್ಛೆಹೊಂದಿದುದನ್ನು ಕೇಳಿ ಆ ಸ್ಥಳಕ್ಕೆ ಬಂದು ದೇವತೆಗಳೆಲ್ಲರನ್ನೂ ಬಾಣಗಳಿಂದ ಹೊಡೆದನು. ॥೪೪॥

ಕೃತಂ ಯುದ್ಧಂ ಮಹತ್ತೇನ ಶುಂಭೇನಾಕ್ಲಿಷ್ಟಕರ್ಮಣಾ ।
ನಿರ್ಜಿತಾಸ್ತು ಸುರಾಸ್ಸರ್ವೇ ಸೇಂದ್ರಾಃ ಪಾಲಾಶ್ಚ ಸರ್ವಶಃ ॥೪೫॥

ಐಂದ್ರಂ ಪದಂ ತದಾ ತೇನ ಗೃಹೀತಂ ಬಲವತ್ತಯಾ ।
ಕಲ್ಪಪಾದಪಸಂಯುಕ್ತಂ ಕಾಮಧೇನುಸಮನ್ವಿತಂ ॥೪೬॥

ತ್ರೈಲೋಕ್ಯಂ ಯಜ್ಞಭಾಗಾಶ್ಚ ಹೃತಾಸ್ತೇನ ಮಹಾತ್ಮನಾ ।
ನಂದನಂ ಚ ವನಂ ಪ್ರಾಪ್ಯ ಮುದಿತೋಽಭೂನ್ಮಹಾಸುರಃ ॥೪೭॥

ಸುಧಾಯಾಶ್ಚೈವ ಪಾನೇನ ಸುಖಮಾಪ ಮಹಾಸುರಃ ।
ಕುಬೇರಂ ಸ ಚ ನಿರ್ಜಿತ್ಯ ತಸ್ಯ ರಾಜ್ಯಂ ಚಕಾರ ಹ ॥೪೮॥

ಅಧಿಕಾರಂ ತಥಾ ಭಾನೋಃ ಶಶಿನಶ್ಚ ಚಕಾರ ಹ ।
ಯಮಂ ಚೈವ ವಿನಿರ್ಜಿತ್ಯ ಜಗ್ರಾಹ ತತ್ಪದಂ ತಥಾ ॥೪೯॥

---

ನಿರಾಯಾಸವಾಗಿ ದೊಡ್ಡ ಕೆಲಸಗಳನ್ನೂ ಮಾಡುವವನಾದ ಶುಂಭನಿಂದ ದೊಡ್ಡದಾದ ಯುದ್ಧವು ಮಾಡಲ್ಪಟ್ಟಿತು. ಆಗ ಇಂದ್ರನೂ ಲೋಕಪಾಲಕರೂ, ದೇವತೆಗಳೂ ಸಹ ಎಲ್ಲರೂ ಸೋಲಿಸಲ್ಪಟ್ಟರು. ॥೪೫॥

ಆ ಶುಂಭನು ಬಲಿಷ್ಠನಾದುದರಿಂದ ಆಗ ದೇವತೆಗಳನ್ನು ಗೆದ್ದ ಬಳಿಕ ಕಲ್ಪವೃಕ್ಷಗಳೂ, ಕಾಮಧೇನುವೂ ಇವುಗಳಿಂದ ಕೂಡಿದ ಇಂದ್ರನ ಅಧಿಕಾರ ಮತ್ತು ವಾಸಸ್ಥಳವಾದ ಸ್ವರ್ಗಲೋಕವನ್ನು ಆಕ್ರಮಿಸಿಕೊಂಡನು. ॥೪೬॥

ಬಹಳ ಬಲವುಳ್ಳವನಾದ ಆ ಶುಂಭನಿಂದ ಮೂರು ಲೋಕಗಳೂ ಆಕ್ರಮಿಸಲ್ಪಟ್ಟುವು. ದೇವತೆಗಳ ಯಜ್ಞಭಾಗವೂ ಅಪಹರಿಸಲ್ಪಟ್ಟಿತು. ಮಹಾಸುರನಾದ ಶುಂಭನು ನಂದನವನವನ್ನೂ ಹೊಂದಿ ಸಂತೋಷವನ್ನು ಪಡೆದನು. ॥೪೭॥

ಆ ಮಹಾಸುರನಾದ ಶುಂಭನು ಅಮೃತವನ್ನೂ ಕುಡಿದು ತೃಪ್ತಿಯನ್ನು ಹೊಂದಿ ಸುಖವಾಗಿದ್ದನು. ಅಲ್ಲದೆ ಕುಬೇರನನ್ನೂ ಜಯಿಸಿ ಆ ಶುಂಭನು ಅವನ ರಾಜ್ಯವನ್ನು ತನ್ನ ಅಧೀನತೆಗೆ ತೆಗೆದುಕೊಂಡನು. ॥೪೮॥

ಆ ಶುಂಭನು ಕುಬೇರನನ್ನು ಜಯಿಸಿದಂತೆಯೇ ಸೂರ್ಯನನ್ನೂ, ಚಂದ್ರನನ್ನೂ ಜಯಿಸಿ ಅವರವರ ಸ್ಥಾನಗಳನ್ನು ವಶಪಡಿಸಿಕೊಂಡನು. ಮತ್ತು ಯಮ

**ವರುಣಸ್ಯ ತಥಾ ರಾಜ್ಯಂ ಚಕಾರ ವಹ್ನಿಕರ್ಮ ಚ ।**
**ವಾಯೋಃ ಕಾರ್ಯಂ ನಿಶುಂಭಶ್ಚ ಚಕಾರ ಸ್ವಬಲಾನ್ವಿತಃ ॥೫೦॥**

**ತತೋ ದೇವಾ ವಿನಿರ್ಧೂತಾ ಹೃತರಾಜ್ಯಾ ಹೃತಶ್ರಿಯಃ ।**
**ಸಂತ್ಯಜ್ಯ ನಂದನಂ ಸರ್ವೇ ನಿರ್ಯಯುರ್ಗಿರಿಗಹ್ವರೇ ॥೫೧॥**

**ಹೃತಾಧಿಕಾರಾಸ್ತೇ ಸರ್ವೇ ಬಭ್ರಮುರ್ವಿಜನೇ ವನೇ ।**
**ನಿರಾಲಂಬಾ ನಿರಾಧಾರಾ ನಿಸ್ತೇಜಸ್ಕಾ ನಿರಾಯುಧಾಃ ॥೫೨॥**

**ವಿಚೇರುರಮರಾಃ ಸರ್ವೇ ಪರ್ವತಾನಾಂ ಗುಹಾಸು ಚ ।**
**ಉದ್ಯಾನೇಷು ಚ ಶೂನ್ಯೇಷು ನದೀನಾಂ ಗಹ್ವರೇಷು ಚ ॥೫೩॥**

---

ನನ್ನು ಜಯಿಸಿ ಅವನ ಸ್ಥಳವನ್ನೂ ಅವನ ಅಧಿಕಾರವನ್ನೂ ಸಹ ತನ್ನ ಹತೋಟಿಯಲ್ಲಿಟ್ಟುಕೊಂಡನು. ॥೪೯॥

ಇತರ ದಿಕ್ಪಾಲಕರನ್ನು ಗೆದ್ದು ಅವರವರ ಅಧಿಕಾರವನ್ನೂ, ಸ್ಥಾನವನ್ನೂ ಆಕ್ರಮಿಸಿಕೊಂಡನು. ಮತ್ತು ಹಾಗೆಯೇ ವರುಣನನ್ನೂ ಗೆದ್ದನು. ನಿಶುಂಭನೂ ಕೂಡ ತನ್ನ ಸೇನೆಯೊಡನೆ ವಾಯುವನ್ನು ಗೆದ್ದು ಅವನ ಅಧಿಕಾರವನ್ನು ತನ್ನ ವಶಕ್ಕೆ ತೆಗೆದುಕೊಂಡನು. ॥೫೦॥

ಆ ಮೇಲೆ ದೇವತೆಗಳೆಲ್ಲರೂ ಈ ಶುಂಭ, ನಿಶುಂಭರಿಂದ ತಮ್ಮ ತಮ್ಮ ಅಧಿಕಾರವನ್ನೂ ರಾಜ್ಯವನ್ನೂ ಕಳೆದುಕೊಂಡು ತಮ್ಮ ಐಶ್ವರ್ಯವೆಲ್ಲವೂ ಹೋದ ಬಳಿಕ ನಂದನವನವನ್ನು ಬಿಟ್ಟು ಬೆಟ್ಟದ ಗುಹೆಗಳನ್ನು ಹುಡುಕಿಕೊಂಡು ಹೋಗಿ ಅವುಗಳಲ್ಲಿ ಸೇರಿದರು. ॥೫೧॥

ಆ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಮಾನಗಳನ್ನು ಕಳೆದುಕೊಂಡು, ಯಾವ ಆಶ್ರಯವೂ ಇಲ್ಲದೆ, ಯಾರ ಸಹಾಯವೂ ಇಲ್ಲದವರಾಗಿ, ಪರಾಕ್ರಮದ ತೇಜಸ್ಸೂ ಮತ್ತು ಯಾವ ಆಯುಧವೂ ಇಲ್ಲದವರಾಗಿ ಜನಸಂಚಾರವಿಲ್ಲದಿರುವ ಕಾಡಿನಲ್ಲಿ ಅಲೆಯುತ್ತಿದ್ದರು. ॥೫೨॥

ಹೀಗೆ ದೇವತೆಗಳು ಎಲ್ಲರೂ, ಪರ್ವತಗಳ ಗುಹೆಗಳಲ್ಲಿಯೂ, ಯಾರೂ ಇಲ್ಲದಿರುವ ಉದ್ಯಾನವನಗಳಲ್ಲಿಯೂ, ಹೊಳೆಗಳ ಹತ್ತಿರವಿರುವ (ಪೊಟರೆ) ಹಳ್ಳಗಳಲ್ಲಿಯೂ ಸಹ ಸುತ್ತುತ್ತಿದ್ದರು. ॥೫೩॥

ನ ಪ್ರಾಪುಸ್ತೇ ಸುಖಂ ಕ್ವಾಪಿ ಸ್ಥಾನಭ್ರಷ್ಟಾ ವಿಚೇತಸಃ ।
ಲೋಕಪಾಲಾ ಮಹಾರಾಜ ದೈವಾಧೀನಂ ಸುಖಂ ಕಿಲ ॥೫೪॥

ಬಲವಂತೋ ಮಹಾಭಾಗಾ ಬಹುಜ್ಞಾ ಧನಸಂಯುತಾಃ ।
ಕಾಲೇ ದುಃಖಂ ತಥಾ ದೈನ್ಯಮಾಪ್ನುವಂತಿ ನರಾಧಿಪ ॥೫೫॥

ಚಿತ್ರಮೇತನ್ಮಹಾರಾಜ ಕಾಲಸ್ಯೈವ ವಿಚೇಷ್ಟಿತಂ ।
ಯಃ ಕರೋತಿ ನರಂ ತಾವದ್ರಾಜಾನಂ ಭಿಕ್ಷುಕಂ ತತಃ ॥೫೬॥

ದಾತಾರಂ ಯಾಚಕಂ ಚೈವ ಬಲವಂತಂ ತಥಾಽಬಲಂ ।
ಪಂಡಿತಂ ವಿಕಲಂ ಕಾಮುಂ ಶೂರಂ ಚಾತೀವ ಕಾತರಂ ॥೫೭॥

ಮಖಾನಾಂ ಚ ಶತಂ ಕೃತ್ವಾ ಪ್ರಾಪ್ಯೇಂದ್ರಾಸನಮುತ್ತಮಂ ।
ಪುನರ್ದುಃಖಂ ಪರಂ ಪ್ರಾಪ್ತಂ ಕಾಲಸ್ಯ ಗತಿರೀದೃಶೀ ॥೫೮॥

---

ಆ ದೇವತೆಗಳು ಲೋಕಪಾಲರಾಗಿದ್ದರೂ, ತಮ್ಮ ತಮ್ಮ ಸ್ಥಾನಗಳಿಂದ ಭ್ರಷ್ಟ ರಾಗಿ ಸ್ಥಿರವಾದ ಮನಸ್ಸಿಲ್ಲದವರಾಗಿ ಎಲ್ಲಿಯೂ ಸ್ವಲ್ಪ ಸುಖವನ್ನೂ ಪಡೆಯಲಿಲ್ಲ. ಎಲೈ ರಾಜನೇ, ಸುಖವೆಂಬುದು ದೇವರ ದಯೆಯಿಂದ ಉಂಟಾಗತಕ್ಕುದಲ್ಲವೆ ? ॥೫೪॥

ಎಲೈ ಜನಮೇಜಯರಾಯನೇ, ಕೇಳು—ಬಲವುಳ್ಳವರೂ, ಅದೃಷ್ಟಶಾಲಿ ಗಳಾದವರೂ, ಹೆಚ್ಚಾದ ತಿಳಿವಳಿಕೆಯುಳ್ಳವರೂ, ಧನವುಳ್ಳವರೂ ಕೂಡ ಆಯಾಯ ದುರದೃಷ್ಟದ ಕಾಲದಲ್ಲಿ ದುಃಖವನ್ನೂ ಮತ್ತು ದುಃಖದಿಂದುಂಟಾಗುವ ಕೊರಗು ವಿಕೆಯನ್ನೂ ದೀನತೆಯನ್ನೂ ಸಹ ಹೊಂದುತ್ತಾರೆ. ॥೫೫॥

ಎಲೈ ಜನಮೇಜಯಮಹಾರಾಯನೇ—ಅದೃಷ್ಟದ ಈ ಫಲಕಾಲವು ಪೂರ್ವಾರ್ಜಿತಕರ್ಮವೆಂಬ ದೈವಗತಿ ಅಥವಾ ವಿಧಿವಿಲಾಸವು ವಿಚಿತ್ರವಾದುದು ! ದಾನಮಾಡುತ್ತಿದ್ದವನನ್ನು ಯಾಚಕನನ್ನಾಗಿಯೂ, ಬಲವುಳ್ಳವನನ್ನು ಬಲಹೀನ ನನ್ನಾಗಿಯೂ, ತಿಳಿವಳಿಕೆಯುಳ್ಳವನಾದ ಪಂಡಿತನನ್ನು ಇಂದ್ರಿಯಗಳಿಗೆ ಅಧೀನ ನಾಗಿದ್ದುಕೊಂಡಿರುವ ಕಾಮಿಯನ್ನಾಗಿಯೂ, ಶೂರನಾದವನನ್ನು ಬಹಳಮಟ್ಟಿಗೆ ಹೆದರುವವನನ್ನಾಗಿಯೂ, ಮಾಡುತ್ತಿರುವ ಅಂಥಾಕಾಲದ ಪರಿವರ್ತನೆಯ ಕೆಲಸವೇ ಬಹಳ ಆಶ್ಚರ್ಯಕರವಾಗಿರುವುದು ! ॥೫೬-೫೭॥

ನೂರು ಅಶ್ವಮೇಧಯಜ್ಞಗಳನ್ನು ಮಾಡಿ ಮೂರು ಲೋಕಕ್ಕೂ ಅಧಿಪತಿ ಯಾಗಿದ್ದ ಶ್ರೇಷ್ಠವಾದ ಇಂದ್ರನ ಸಾಮ್ರಾಜ್ಯಪದವಿಯ ಪೀಠವನ್ನು ಹೊಂದಿದ್ದವನಿಗೆ

ಕಾಲಃ ಕರೋತಿ ಧರ್ಮಿಷ್ಠಂ ಪುರುಷಂ ಜ್ಞಾನಸಂಯುತಂ ।
ತಮೇವಾತೀವ ಪಾಪಿಷ್ಠಂ ಜ್ಞಾನಲೇಶವಿವರ್ಜಿತಂ ॥೫೯॥

ನ ವಿಸ್ಮಯೋಽತ್ರ ಕರ್ತವ್ಯಃ ಸರ್ವಥಾ ಕಾಲಚೇಷ್ಟಿತೇ ।
ಬ್ರಹ್ಮವಿಷ್ಣುಹರಾದೀನಾಮಪೀದೃಕ್ಕಷ್ಟಚೇಷ್ಟಿತಂ ॥೬೦॥

ವಿಷ್ಣುರ್ಜನನಮಾಪ್ನೋತಿ ಸೂಕರಾದಿಷು ಯೋನಿಷು ।
ಹರಃ ಕಪಾಲೀ ಸಂಜಾತಃ ಕಾಲೇನೈವ ಬಲೀಯಸಾ ॥೬೧॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಏಕವಿಂಶೋಽಧ್ಯಾಯಃ

---

ಈಗ ಅದಕ್ಕೆ ಬದಲಾಗಿ ದುಃಖವು ಅಪಾರವಾಗಿ ಬಂದಿತು! ಕಾಲದ ಪರಿವರ್ತನದ ಗತಿಯು ಯಾವಾಗಲೂ ಹೀಗೆಯೇ ಇರುವುದು! ಕಾಲವು ಯಾರಿಗೂ, ಯಾವಾಗಲೂ, ಸುಖವನ್ನೇ, ದುಃಖವನ್ನೇ, ಒಂದೇ ಸಮನಾಗಿ ನಡೆಯಿಸುವುದಿಲ್ಲ. ॥೫೮॥

ಕಾಲವು ಮನುಷ್ಯನನ್ನು, ಧರ್ಮವನ್ನು ಆಚರಿಸುವವನನ್ನಾಗಿಯೂ, ಮತ್ತು ಜ್ಞಾನವುಳ್ಳವನನ್ನಾಗಿಯೂ ಮಾಡುವುದು! ಕೆಲವು ಕಾಲದ ತರುವಾಯ ಅದೇ ಮನುಷ್ಯನನ್ನು ಬಹಳ ಕೆಟ್ಟ ಕೆಲಸಮಾಡುವ ಪಾಪಿಯನ್ನಾಗಿಯೂ, ಮತ್ತು ಅಲ್ಪಜ್ಞಾನವೂ ಇಲ್ಲದವನನ್ನಾಗಿಯೂ ಮಾಡುವುದು! ॥೫೯॥

ಬ್ರಹ್ಮನೂ, ವಿಷ್ಣುವೂ, ಈಶ್ವರನೂ ಇವರೇ ಮೊದಲಾದ ದೊಡ್ಡವರಿಗೂ ಕೂಡ, ಈಗ ದೇವತೆಗಳಿಗೆ ಒದಗಿರುವಂತಿರುವ ಕಷ್ಟಕರವಾದ ಹೀನಸ್ಥಿತಿಯು ಕಾಲದಿಂದ ಒದಗುತ್ತಿರುವಲ್ಲಿ, ಕಾಲವು ಮಾಡತಕ್ಕ ಬದಲಾವಣೆಯ ವಿಚಾರದಲ್ಲಿ ಸರ್ವಪ್ರಕಾರದಿಂದಲೂ ಯಾರೂ ಆಶ್ಚರ್ಯಪಡಬೇಕಾದುದಿಲ್ಲ! ॥೬೦॥

ವಿಷ್ಣುವು ಹಂದಿಯೇ ಮೊದಲಾದ ಜನ್ಮಗಳಲ್ಲಿ ಹುಟ್ಟುವನು! ಸರ್ವಲೋಕಗಳನ್ನು ನಾಶಮಾಡುವವನಾದ ಈಶ್ವರನು ತಲೆಚಿಪ್ಪನ್ನು ತೆಗೆದುಕೊಂಡು ಕಾಪಾಲಿಕನಾಗಿ ತಿರುಗುವನು! ಇವೆಲ್ಲವೂ ಬಲಿಷ್ಠವಾದ ಕಾಲದ ಕೆಲಸಗಳು! ಆದುದರಿಂದ ಈ ಕಾಲವು ನಡೆಸುವ ಬದಲಾವಣೆಗಳಿಂದ ವಿವೇಕಿಯಾದವನು ಹರ್ಷವನ್ನೂ ದುಃಖವನ್ನೂ ಪಡಬಾರದು ಎಂದು ತಾತ್ಪರ್ಯವು. ॥೬೧॥

ಇಲ್ಲಿಗೆ ದೇವೀಭಾಗವತ ಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ದ್ವಾವಿಂಶೋಽಧ್ಯಾಯಃ ||

### ಇಪ್ಪತ್ತೆರಡನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಪರಾಜಿತಾಃ ಸುರಾಃ ಸರ್ವೇ ರಾಜ್ಯಂ ಶುಂಭಃ ಶಶಾಸ ಹ ।**
**ಏವಂ ವರ್ಷಸಹಸ್ರಂ ತು ಜಗಾಮ ನೃಪಸತ್ತಮ ॥೧॥**

**ಭ್ರಷ್ಟರಾಜ್ಯಾಸ್ತತೋ ದೇವಾಶ್ಚಿಂತಾಮಾಪುಃ ಸುದುಸ್ತರಾಂ ।**
**ಗುರುಂ ದುಃಖಾತುರಾಸ್ತೇ ತು ಪಪ್ರಚ್ಛುರಿದಮಾದೃತಾಃ ॥೨॥**

**ಕಿಂ ಕರ್ತವ್ಯಂ ಗುರೋ ಬ್ರೂಹಿ ಸರ್ವಜ್ಞಸ್ತ್ವಂ ಮಹಾಮುನಿಃ ।**
**ಉಪಾಯೋಽಸ್ತಿ ಮಹಾಭಾಗ ದುಃಖಸ್ಯ ವಿನಿವೃತ್ತಯೇ ॥೩॥**

---

ವ್ಯಾಸಮುಷಿಯು ಹೇಳಿದನು—ಎಲೈ ರಾಜಶ್ರೇಷ್ಠನಾದ ಜನಮೇಜಯನೇ ಕೇಳು—ದೇವತೆಗಳೆಲ್ಲರೂ ಸೋತವರಾದರು. ಶುಂಭನು ರಾಜ್ಯವನ್ನು ಆಳುತ್ತಿದ್ದನು. ಆ ಶುಂಭನ ಆಳ್ವಿಕೆಯಲ್ಲಿಯೇ ಒಂದು ಸಹಸ್ರ ವರ್ಷಗಳು ಕಳೆದುವು. ||೧||

ಅನಂತರದಲ್ಲಿ ರಾಜ್ಯವನ್ನು ಕಳೆದುಕೊಂಡ ದೇವತೆಗಳು ಸುಖವಾಗಿ ತಪ್ಪಿಸಿಕೊಳ್ಳಲು ಅಶಕ್ಯವಾದಷ್ಟು ಆತಂಕದ ಯೋಚನೆಯನ್ನು ಹೊಂದಿದರು. ಆಗ ಅವರು ದುಃಖದಿಂದ ಕೂಡಿದವರಾಗಿ ತಮಗೆ ಗುರುವಾದ ಬೃಹಸ್ಪತಿಯನ್ನು ಆದರದಿಂದ ಹೀಗೆ ಪ್ರಶ್ನೆ ಮಾಡಿದರು. ||೨||

ಓ ಬೃಹಸ್ಪತಿಯೇ, ನೀನು ಎಲ್ಲವನ್ನೂ ತಿಳಿದಿರುತ್ತೀಯೆ. ಮಹರ್ಷಿಯಾಗಿರುತ್ತೀಯೆ. ಓ ಭಾಗ್ಯವಂತನೇ, ಈಗ ನಾವುಗಳು ಏನನ್ನು ಮಾಡಬೇಕು?

**ಉಪಚಾರಪರಾ ನೂನಂ ವೇದಮಂತ್ರಾಃ ಸಹಸ್ರಶಃ ।**
**ವಾಂಛಿತಾರ್ಥಕರಾ ನೂನಂ ಸೂತ್ರೈಃ ಸಂಲಕ್ಷಿತಾಃ ಕಿಲ ॥೪॥**

**ಇಷ್ಟಯೋ ವಿವಿಧಾಃ ಪ್ರೋಕ್ತಾಃ ಸರ್ವಕಾಮಫಲಪ್ರದಾಃ ।**
**ತಾಃ ಕುರುಷ್ವ ಮುನೇ ನೂನಂ ತ್ವಂ ಜಾನಾಸಿ ಚ ತತ್ಕ್ರಿಯಾಃ ॥೫॥**

**ವಿಧಿಃ ಶತ್ರುವಿನಾಶಾಯ ಯಥೋದ್ದಿಷ್ಟಃ ಸದಾಗಮೇ ।**
**ತಂ ಕುರುಷ್ವಾದ್ಯ ವಿಧಿವದ್ಯಥಾ ನೋ ದುಃಖಸಂಕ್ಷಯಃ ॥೬॥**

**ಭವೇದಾಂಗಿರಸಾದ್ಯೈವ ತಥಾ ತ್ವಂ ಕರ್ತುಮರ್ಹಸಿ ।**
**ದಾನವಾನಾಂ ವಿನಾಶಾಯ ಅಭಿಚಾರಂ ಯಥಾಮತಿ ॥೭॥**

---

ನಮಗೆ ಬಂದಿರುವ ಈ ದುಃಖವು ನಾಶವಾಗುವುದಕ್ಕೆ ಯಾವ ಉಪಾಯವು ಇರುವುದು ? ಅದನ್ನು ನಮಗೆ ಹೇಳು. ॥೩॥

ವೇದಮಂತ್ರಗಳು ಅನೇಕ ಬಗೆಯವಾಗಿ ಇರುವುವು. ಅವೆಲ್ಲವೂ ಜೈಮಿನಿ ಮುಂತಾದ ಋಷಿಪ್ರೋಕ್ತವಾದ ಸೂತ್ರಗಳಲ್ಲಿ, ಶಿವಸೂತ್ರ, ಮತ್ತು ಆಗಮಗಳಲ್ಲಿ ಹೇಳಲ್ಪಟ್ಟುವುಗಳಾಗಿವೆ. ಆಯಾಯ ಮಂತ್ರಗಳ ವಿನಿಯೋಗ ಕ್ರಮವು ಆಯಾಯ ಸೂತ್ರದಿಂದ ಹೇಳಲ್ಪಟ್ಟಿರುವ ಮೇರೆಗೆ ಆ ಕರ್ಮಗಳು ಆದರ ಉಪಚಾರಗಳೊಡನೆ ಉಪಾಸಕರಿಂದ ಅನುಷ್ಠಿತಗಳಾದರೆ ಅವರವರಿಗೆ ಅವು ಬೇಕಾದ ಇಷ್ಟಾರ್ಥಗಳನ್ನು ಕೊಡುವುವು. ॥೪॥

ಅಲ್ಲದೆ ಎಲ್ಲ ವಿಧವಾದ ಇಷ್ಟಾರ್ಥಗಳನ್ನೂ ಕೊಡುವ ಅನೇಕ ವಿಧವಾದ ಇಷ್ಟಿಗಳು ಹೇಳಲ್ಪಟ್ಟಿರುತ್ತವೆ. ಓ ಬೃಹಸ್ಪತಿಯೇ, ನೀನು ನಿಜವಾಗಿಯೂ ಆ ಇಷ್ಟಿಗಳನ್ನು ಮಾಡುವ ಕ್ರಮಗಳನ್ನು ತಿಳಿದಿರುತ್ತೀಯೆ. ಆದುದರಿಂದ ನಮಗೋಸ್ಕರ ಅವುಗಳನ್ನು ಮಾಡು. ॥೫॥

ಸಚ್ಛಾಸ್ತ್ರದಲ್ಲಿ ಶತ್ರುವು ನಾಶವಾಗುವುದಕ್ಕಾಗಿ ಮಾಡಬೇಕಾದ ಕರ್ಮದ ಕ್ರಮವು ಹೇಗೆ ಹೇಳಲ್ಪಟ್ಟಿರುವುದೋ, ಹೇಗಾದರೆ ನಮ್ಮ ದುಃಖಗಳು ನಾಶವನ್ನು ಹೊಂದುವುವೋ ಆ ಪ್ರಕಾರವಾದ ಫಲವನ್ನು ಕೊಡುವ ಕರ್ಮವನ್ನು ಶಾಸ್ತ್ರಕ್ಕೆ ಅನುಸಾರವಾಗಿ ಈಗ ನೀನು ನಡೆಯಿಸು. ॥೬॥

ಆಂಗಿರಸ್ಸಿನ ಗೋತ್ರೋತ್ಪನ್ನನಾದ ಓ ಬೃಹಸ್ಪತಿಯೇ, ದಾನವರು ನಾಶವನ್ನು ಹೊಂದುವುದಕ್ಕಾಗಿ ನಿನ್ನ ಬುದ್ಧಿಗೆ ಹೇಗೆ ತೋರುತ್ತದೆಯೋ ಆ ರೀತಿ

|| ಬೃಹಸ್ಪತಿರುವಾಚ ||

**ಸರ್ವೇ ಮಂತ್ರಾಶ್ಚ ವೇದೋಕ್ತಾ ದೈವಾಧೀನಫಲಾಶ್ಚ ತೇ ।**
**ನ ಸ್ವತಂತ್ರಾಃ ಸುರಾಧೀಶ ತಥೈಕಾಂತಫಲಪ್ರದಾಃ ॥೮॥**

**ಮಂತ್ರಾಣಾಂ ದೇವತಾ ಯೂಯಂ ತೇ ತು ದುಃಖೈಕಭಾಜನಂ ।**
**ಜಾತಾಃ ಸ್ಮ ಕಾಲಯೋಗೇನ ಕಿಂ ಕರೋಮಿ ಪ್ರಸಾಧನಂ ॥೯॥**

**ಇಂದ್ರಾಗ್ನಿವರುಣಾದೀನಾಂ ಯಜನಂ ಯಜ್ಞಕರ್ಮಸು ।**
**ತೇ ಯೂಯಂ ವಿಪದಂ ಪ್ರಾಪ್ತಾಃ ಕರಿಷ್ಯಂತಿ ಕಿಮಿಷ್ಟಯಃ ॥೧೦॥**

---

ಯಾಗಿ ಈಗಲೇ ಅಭಿಚಾರ ಕರ್ಮವನ್ನೂ ಮಾಡು ಎಂದು ದೇವತೆಗಳು ಬೃಹಸ್ಪತಿಯನ್ನು ಕುರಿತು ಪ್ರಾರ್ಥಿಸಿ ಹೇಳಿದರು. ||೭||

ಬೃಹಸ್ಪತಿಯು ಹೇಳಿದನು—ಓ ದೇವತೆಗಳಿರಾ, ಎಲ್ಲ ಮಂತ್ರಗಳೂ ವೇದದಲ್ಲಿ ಹೇಳಲ್ಪಟ್ಟಿರುತ್ತವೆ. ಅವುಗಳಿಂದ ಉಂಟಾಗಬಹುದಾದ ಫಲಗಳೆಲ್ಲವೂ ದೇವತೆಗಳ ಮತ್ತು ಪೂರ್ವಾರ್ಜಿತ ಕರ್ಮದ ಅಧೀನದಲ್ಲಿರತಕ್ಕವಾಗಿವೆ. ಸ್ವತಂತ್ರಗಳಲ್ಲವು. ಓ ಇಂದ್ರನೇ, ಆದರೂ ಅವು ನಿಯತವಾಗಿ ತಪ್ಪದೆ ಫಲವನ್ನು ಕೊಡತಕ್ಕವುಗಳು. ||೮||

ಮಂತ್ರಗಳು ಫಲವನ್ನು ಕೊಡುವಂತೆ ಮಾಡುವ, ಮಂತ್ರಪ್ರತಿಪಾದ್ಯರಾದ ದೇವತೆಗಳು ನೀವೇ ಆಗಿರುತ್ತೀರಿ. ಈಗ ನೀವಾದರೋ ಕಾಲಕರ್ಮ ಸಂಬಂಧದಿಂದ ದುಃಖಕ್ಕೆ ಪಾತ್ರರಾಗಿರುತ್ತೀರಿ. ಆದುದರಿಂದ ಮಂತ್ರಗಳ ವಿನಿಯೋಗ ಪ್ರಕಾರದಿಂದ ಅಭಿಚಾರಾದಿ ಕರ್ಮಗಳನ್ನು ನಡೆಯಿಸಲು ಮತ್ತೆ ಯಾವ ಉಪಾಯವನ್ನು ಹೇಗೆ ಮಾಡಲಿ? ||೯||

ಓ ಇಂದ್ರಾದಿದೇವತೆಗಳಿರಾ, ಯಜ್ಞಕರ್ಮಗಳಲ್ಲಿ ಇಂದ್ರ, ಅಗ್ನಿ, ವರುಣ ಇವರೇ ಮೊದಲಾದವರನ್ನು ಕುರಿತು ಆಹುತಿಗಳನ್ನು ಕೊಡುವುದು ಹೇಳಲ್ಪಟ್ಟಿದೆ. ಆ ಯಜ್ಞಾಹುತಿಗಳನ್ನು ಸ್ವೀಕರಿಸಿ ಯಜ್ಞಮಾಡಿದವರ ಇಷ್ಟಾರ್ಥಗಳನ್ನು ಕೊಡುವವರಾದ ನೀವುಗಳು ವಿಪತ್ತನ್ನು ಈಗ ಹೊಂದಿರುತ್ತೀರಿ. ವಿಪತ್ತನ್ನು ಹೊಂದಿರುವ ನಿಮ್ಮ ಸ್ಥಿತಿಯು ಅಧಿಕಾರ ಸಾಮರ್ಥ್ಯಗಳಿಲ್ಲದೆ ಸರಿಯಾಗಿಲ್ಲದಿರುವ ಕಾರಣ ನಿಮ್ಮ ಪ್ರೀತ್ಯರ್ಥವಾದ ಇಷ್ಟಿಗಳು ಏನನ್ನು ಮಾಡಬಲ್ಲವು? ಮತ್ತು—ಇಷ್ಟಿಯಲ್ಲಿ

**ಅವಶ್ಯಂಭಾವಿಭಾವಾನಾಂ ಪ್ರತೀಕಾರೋ ನ ವಿದ್ಯತೇ ।**
**ಉಪಾಯಸ್ತ್ವಥ ಕರ್ತವ್ಯ ಇತಿ ಶಿಷ್ಟಾನುಶಾಸನಂ ॥೧೧॥**

**ದೈವಂ ಹಿ ಬಲವತ್ಕೇಚಿತ್ಪ್ರವದಂತಿ ಮನೀಷಿಣಃ ।**
**ಉಪಾಯವಾದಿನೋ ದೈವಂ ಪ್ರವದಂತಿ ನಿರರ್ಥಕಂ ॥೧೨॥**

**ದೈವಂ ಚೈವಾಪ್ಯುಪಾಯಶ್ಚ ದ್ವಾವೇವಾಽಭಿಮತೌ ನೃಣಾಂ ।**
**ಕೇವಲಂ ದೈವಮಾಶ್ರಿತ್ಯ ನ ಸ್ಥಾತವ್ಯಂ ಕದಾಚನ ॥೧೩॥**

---

ಮಂತ್ರಪ್ರತಿಪಾದ್ಯರಾದ ದೇವತೆಗಳೂ ಇಂದ್ರನೇ ಮುಂತಾದ ದೇವರಾಗಿರುವರು. ಈಗ ಇಷ್ಟಿಯಿಂದ ಫಲವನ್ನು ಅಪೇಕ್ಷಿಸುವವರೂ ಇಂದ್ರಾಗ್ನಿಗಳೇ ಆಗಿರುವರು. ಫಲವನ್ನು ಕೊಡುವ ದೇವತೆಯೇ ಆ ಫಲಾಭಿಲಾಷಿಯಾಗಿರುವಾಗ ಇಷ್ಟಿಯು ಸಫಲವಾಗುವುದು ಹೇಗೆ? ||೧೦||

ಅವಶ್ಯಕವಾಗಿ ನಡೆಯಬೇಕಾಗಿರುವ ದುರದೃಷ್ಟಕ್ಕೆ ವಿರುದ್ಧವಾಗಿ ತಡೆದು ತಪ್ಪಿಸಬಲ್ಲ ಪ್ರತೀಕಾರದ ಉಪಾಯವು ಯಾವುದೂ ಇಲ್ಲವು. ಆದುದರಿಂದ ಈಗ ಬೇರೊಂದು ಬಗೆಯ ಉಪಾಯವನ್ನು ಮಾಡಬೇಕು ಎಂಬುದಾಗಿ ದೊಡ್ಡವರು ಹೇಳುತ್ತಾರೆ. ||೧೧||

ಓ ದೇವತೆಗಳಿರಾ, ಬುದ್ಧಿವಂತರಾದ ಕೆಲವರು ದೈವಗತಿಯು ದೊಡ್ಡ ದೆಂದೂ, ದೇವತೆಗಳು ಯಜ್ಞಾದಿಕರ್ಮಗಳಿಂದ ತುಷ್ಟರಾಗಿ ಫಲವನ್ನು ಕೊಡುವ ಕಾರಣ ದೇವತೆಗಳೇ ಬಲಿಷ್ಠರೆಂತಲೂ, ಹೇಳಿ ಪುರುಷಪ್ರಯತ್ನವನ್ನು ಕಡೆಗಣಿಸು ತ್ತಾರೆ. ಆದರೆ ಸರಿಯಾಗಿ ವಿಚಾರಮಾಡಿ ಕೆಲಸಗಳನ್ನು ನಡೆಸಿದಲ್ಲಿ ಫಲವು ಆವಶ್ಯಕವಾಗಿ ತನ್ನಷ್ಟಕ್ಕೆ ತಾನೇ ಬರುವುದರ ಕಾರಣದಿಂದ ದೈವಗತಿಯೆಂಬ ಸಾಮಾನ್ಯ ಕಾರಣವು ಕಾರ್ಯಕ್ಕೆ ಬೇಕಾದ ಎಲ್ಲ ಕೆಲಸಗಳನ್ನೂ ನಡೆಸುವುದೆಂಬ ಪುರುಷಪ್ರಯತ್ನಕ್ಕಿಂತ ಬೇರೆ ಇಲ್ಲವೆಂತಲೂ, ಒಂದುವೇಳೆ ಇದ್ದರೂ ಅದು ಪ್ರಯೋ ಜನಕಾರಿಯಲ್ಲವೆಂತಲೂ, ಪುರುಷಪ್ರಯತ್ನವನ್ನೇ ಬಲಿಷ್ಠವೆಂದು ಹೇಳುವರು ವಾದಿಸುತ್ತಾರೆ. ||೧೨||

ಆದರೂ ಲೋಕದಲ್ಲಿ ಕಾರ್ಯಗಳನ್ನು ಮಾಡಿ ಫಲವನ್ನು ಹೊಂದುವವರು ಎಲ್ಲರೂ ದೈವಗತಿ, ಪುರುಷಪ್ರಯತ್ನವೆಂಬ ಇವೆರಡು ಸಾಧನಗಳನ್ನೂ ನಂಬಿಕೊಂಡಿ ರುವರು. ಈ ಎರಡು ಸಾಧನಗಳೂ ಮನುಷ್ಯರಿಗೆ ಇಷ್ಟವಾದುವೇ ಸರಿ. ಆದರೆ

ಉಪಾಯಃ ಸರ್ವಥಾ ಕಾರ್ಯೋ ವಿಚಾರ್ಯ ಸ್ವಧಿಯಾ ಪುನಃ ।
ತಸ್ಮಾದ್ಬ್ರವೀಮಿ ವಃ ಸರ್ವಾನ್ಸಂವಿಚಾರ್ಯ ಪುನಃ ಪುನಃ ॥೧೪॥

ಪುರಾ ಭಗವತೀ ತುಷ್ಟಾ ಜಘಾನ ಮಹಿಷಾಸುರಂ ।
ಯುಷ್ಮಾಭಿಸ್ತು ಸ್ತುತಾ ದೇವೀ ವರದಾನಂ ದದಾವಥ ॥೧೫॥

ಆಪದಂ ನಾಶಯಿಷ್ಯಾಮಿ ಸಂಸ್ಮೃತಾ ವಃ ಸದೈವ ಹಿ ।
ಯದಾ ಯದಾ ವೋ ದೇವೇಶಾ ಆಪದೋ ದೈವಸಂಭವಾಃ ॥೧೬॥

---

ಪುರುಷ ಪ್ರಯತ್ನವನ್ನು ಮಾಡದೇ, ಕೇವಲವಾದ ದೈವಗತಿಯೊಂದನ್ನೇ ಆಶ್ರಯಿಸಿ ಕೊಂಡು ಯಾರೂ ಯಾವಾಗಲೂ ಸುಮ್ಮನಿರಬಾರದು. ಕಣ್ಣಿಗೆ ಕಾಣುವ ಕಾರಣ ಗಳೆಲ್ಲವೂ ಕಾರ್ಯಕ್ಕೆ ಫಲಜನಕಗಳು. ಅದರಂತೆಯೇ ಕಣ್ಣಿಗೆ ಕಾಣಿಸದೇ ಕಾರ್ಯ ವನ್ನು ಸಫಲಗೊಳಿಸುವ ಕಾರಣವು ದೈವವೆಂಬುದು. ಆದುದರಿಂದ ಕೇವಲ ದೈವ ಗತಿಯನ್ನೇ ಆಗಲಿ ಕೇವಲ ಪುರುಷಕಾರವನ್ನೇ ಆಗಲಿ ಅವಲಂಬಿಸುವುದು ನಿರರ್ಥಕವಾಗುವುದುಂಟು. ||೧೩||

ಕಾರ್ಯವನ್ನು ಸಾಧಿಸುವುದರಲ್ಲಿ ಪ್ರಯತ್ನವನ್ನು ಮಾನವನು ತನ್ನ ಮನ ಸ್ಸಿನಲ್ಲಿ ಬುದ್ಧಿಯಿಂದ ಅನೇಕ ಸಾರಿ ಚನ್ನಾಗಿ ಸರ್ವಪ್ರಕಾರದಿಂದಲೂ ಯೋಚಿಸಿ ನಡೆಸತಕ್ಕದ್ದು. ಆದುದರಿಂದ ಈಗ ನಮಗೆ ಒದಗಿರುವ ವಿಪತ್ತು ಪರಿಹಾರವಾಗ ಬೇಕಾದರೆ ನಾನು ಅನೇಕಸಾರಿ ಚನ್ನಾಗಿ ವಿಚಾರಮಾಡಿ ನಿಮ್ಮೆಲ್ಲರಿಗೂ ತಿಳಿಸು ತ್ತೇನೆ. ||೧೪||

ಹಿಂದಿನ ಕಾಲದಲ್ಲಿ ಷಡ್ಗುಣೈಶ್ವರ್ಯಸಂಪನ್ನಳಾದ ಆ ದೇವಿಯು ನಿಮ್ಮ ಧ್ಯಾನ, ಪೂಜಾದಿಗಳಿಂದ ಸಂತೋಷಪಟ್ಟವಳಾಗಿ ನಿಮಗೆ ಶತ್ರುವಾಗಿದ್ದ ಮಹಿಷಾ ಸುರನನ್ನು ಕೊಂದಳು. ಅನಂತರದಲ್ಲಿ ನಿಮ್ಮೆಲ್ಲರ ಸ್ತುತಿಗಳಿಂದ ಆರಾಧಿಸಲ್ಪಟ್ಟವ ಳಾಗಿ ನಿಮಗೆಲ್ಲರಿಗೂ ಹೀಗೆ ವರವನ್ನೂ ಕೊಟ್ಟಿರುವಳು. ||೧೫||

ಓ ದೇವತೆಗಳಿರಾ, ಯಾವಾಗಲೂ ನೀವು ನನ್ನನ್ನು ಭಕ್ತಿಪೂರ್ವಕವಾಗಿ ಸ್ಮರಿಸಿ ದಲ್ಲಿ ನಿಮ್ಮ ದೈವಿಕವಾದ ವಿಪತ್ತುಗಳನ್ನು ನಾಶಗೊಳಿಸುವೆನು ! ಯಾವಾಗ ಯಾವಾಗ ದೈವಗತಿಯಿಂದ ನಿಮಗೆ ವಿಪತ್ತುಗಳು ಸಂಭವಿಸುವುವೋ ಆಗ ನೀವು ನನ್ನನ್ನು ಏಕಾಗ್ರವಾದ ಭಕ್ತಿಯಿಂದ ಸ್ಮರಿಸಬೇಕು. ಹಾಗೆ ನೀವು ನನ್ನನ್ನು ಸ್ಮರಿಸಿದಲ್ಲಿ

**ಪ್ರಭವಂತಿ ತದಾ ಕಾಮಂ ಸ್ಮರ್ತವ್ಯಾಽಹಂ ಸುರೈಃ ಸದಾ ।**
**ಸ್ಮೃತಾಽಹಂ ನಾಶಯಿಷ್ಯಾಮಿ ಯುಷ್ಮಾಕಂ ಪರಮಾಪದಃ ॥೧೭॥**

**ತಸ್ಮಾದ್ಧಿಮಾಚಲೇ ಗತ್ವಾ ಪರ್ವತೇ ಸುಮನೋಹರೇ ।**
**ಆರಾಧನಂ ಚಂಡಿಕಾಯಾಃ ಕುರುಧ್ವಂ ಪ್ರೇಮಪೂರ್ವಕಂ ॥೧೮॥**

**ಮಾಯಾಬೀಜವಿಧಾನಜ್ಞಾಸ್ತತ್ಪುರಶ್ಚರಣೇ ರತಾಃ ।**
**ಜಾನಾಮ್ಯಹಂ ಯೋಗಬಲಾತ್ಪ್ರಸನ್ನಾ ಸಾ ಭವಿಷ್ಯತಿ ॥೧೯॥**

---

ನಾನು ನಿಮ್ಮ ದೊಡ್ಡದಾದ ವಿಪತ್ತುಗಳೆಲ್ಲವನ್ನೂ ನಾಶಮಾಡುವೆನು. ಎಂದು ನಿಮಗೆ ವರವನ್ನು ದೇವಿಯು ಕೊಟ್ಟಿರುವಳು ! ॥೧೬-೧೭॥

ಆದುದರಿಂದ ನೀವು ಬಹಳ ಸುಂದರವೂ ಪವಿತ್ರವೂ ಆಗಿ ಚನ್ನಾಗಿರುವ ಹಿಮಾಲಯಪರ್ವತಕ್ಕೆ ಹೋಗಿ ಆ ಪರ್ವತದಲ್ಲಿ ಭಕ್ತಿವಿಶ್ವಾಸಗಳಿಂದ ಕೂಡಿದವ ರಾಗಿ ಚಂಡಿಕಾದೇವಿಯ ಧ್ಯಾನ, ಪೂಜೆ ಮುಂತಾದ ಸೇವೆಯನ್ನು ಮಾಡಿರಿ. ॥೧೮॥

ಓ ದೇವತೆಗಳಿರಾ, ಕೇಳಿರಿ. ಹ್ರೀಂಕಾರವೆಂಬ ಬಿಜಾಕ್ಷರದಿಂದ ಕೂಡಿದ ಭುವನೇಶ್ವರೀಮಂತ್ರವು ವಾಚ್ಯವಾಚಕಗಳಿಗೆ ಅಭೇದವೆಂಬ ನ್ಯಾಯದಂತೆಯೂ, 'ಹ್ರೀಂಕಾರ ಉಭಯಾತ್ಮಕಃ' ಎಂದು ಬ್ರಹ್ಮಾಂಡಪುರಾಣದಲ್ಲಿಯೂ ಹೇಳಿರು ವಂತೆಯೂ, ಮಾಯಾವಿಶಿಷ್ಟ ಬ್ರಹ್ಮಾತ್ಮಕವಾಗಿದೆ. ಆದುದರಿಂದ, ಆ ಮಂತ್ರದ ಪುರಶ್ಚರಣ ಕ್ರಮವನ್ನು ಚನ್ನಾಗಿ ತಿಳಿದುಕೊಂಡು, ಆ ಮಂತ್ರವನ್ನು ಜಪಮಾಡು ವುದರಲ್ಲಿ ಆಸಕ್ತರಾಗಿರುತ್ತಾ, ದೇವಿಯನ್ನು ಸಂತೋಷಪಡಿಸಿರಿ. ಈ ಮಂತ್ರವನ್ನು ಮೂವತ್ತೆರಡು ಲಕ್ಷ ಜಪಮಾಡಬೇಕೆಂದೂ, ಜಪದ ಹತ್ತನೆಯ ಒಂದುಭಾಗ ಹೋಮವನ್ನು ಮಾಡಬೇಕೆಂದೂ, ಶಾರದಾತಿಲಕದಲ್ಲಿ ಹೇಳಿರುತ್ತದೆ. ದಕ್ಷಿಣಾ ಮೂರ್ತಿ ಸಂಹಿತೆಯಲ್ಲಿ ಹನ್ನೆರಡುಲಕ್ಷ ಜಪ ಮಾಡಬೇಕೆಂತ ಹೇಳಿರುತ್ತದೆ. ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ಒಂದು ಲಕ್ಷ ಜಪ ಮಾಡುವುದರಿಂದ ದೇವಿಯ ಸಾಲೋಕ್ಯವೂ, ಎರಡು ಲಕ್ಷ ಜಪದಿಂದ ದೇವಿಯ ಸಾಮಿಪ್ಯವೂ, ನಾಲ್ಕು ಲಕ್ಷ ಜಪದಿಂದ ದೇವಿಯಲ್ಲಿ ಸಾಯುಜ್ಯವೂ ಉಂಟಾಗುವುದೆಂದು ಹೇಳಿರುತ್ತದೆ. ಆದುದ ರಿಂದ ಇವುಗಳಲ್ಲಿ ನಿಮಗೆ ಯಾವ ಕ್ರಮವು ಹಿತವಾಗಿರುವುದೋ ಆ ಕ್ರಮದಿಂದ ದೇವಿಯ ಸೇವೆಯನ್ನು ನೀವು ಮಾಡಿದರೆ ಆ ದೇವಿಯು ನಿಮಗೆ ಪ್ರಸನ್ನಳಾಗುವ ಳೆಂತ ನಾನು ಧ್ಯಾನಯೋಗಶಕ್ತಿಯಿಂದ ತಿಳಿದವನಾಗಿ ಹೇಳಿರುತ್ತೇನೆ. ॥೧೯॥

ದುಃಖಸ್ಯಾಂತೋಽದ್ಯ ಯುಷ್ಮಾಕಂ ದೃಶ್ಯತೇ ನಾತ್ರ ಸಂಶಯಃ ।
ತಸ್ಮಿನ್ ಶೈಲೇ ಸದಾ ದೇವೀ ತಿಷ್ಠತೀತಿ ಮಯಾ ಶ್ರುತಂ ॥೨೦॥

ಸ್ತುತಾ ಸಂಪೂಜಿತಾ ಸದ್ಯೋ ವಾಂಛಿತಾರ್ಥಾನ್ಪ್ರದಾಸ್ಯತಿ ।
ನಿಶ್ಚಯಂ ಪರಮಂ ಕೃತ್ವಾ ಗಚ್ಛಧ್ವಂ ವೋ ಹಿಮಾಲಯಂ ॥೨೧॥

ಸುರಾಃ ಸರ್ವಾಣಿ ಕಾರ್ಯಾಣಿ ಸಾ ವಃ ಕಾಮಂ ವಿಧಾಸ್ಯತಿ ।

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ದೇವಾಸ್ತೇ ಪ್ರಯಯುರ್ಗಿರಿಂ ॥೨೨॥

ಹಿಮಾಲಯಂ ಮಹಾರಾಜ ದೇವೀಧ್ಯಾನಪರಾಯಣಾಃ ।
ಮಾಯಾಬೀಜಂ ಹೃದಾ ನಿತ್ಯಂ ಜಪಂತಃ ಸರ್ವ ಏವ ಹಿ ॥೨೩॥

---

ಓ ದೇವತೆಗಳಿರಾ, ನೀವು ಅನುಭವಿಸುತ್ತಿರುವ ಈ ದುಃಖಕ್ಕೆ ಈಗ ವಿನಾಶ ಕಾಲವು ಬಂದಿರುತ್ತದೆ! ಇದರಲ್ಲಿ ಸ್ವಲ್ಪವೂ ಸಂಶಯ ಪಡಬೇಡಿರಿ. ಆ ಹಿಮವತ್ಪರ್ವತದಲ್ಲಿ ದೇವಿಯು ಯಾವಾಗಲೂ ಇರುತ್ತಾಳೆಂತ ನಾನು ಕೇಳಿರುತ್ತೇನೆ. ॥೨೦॥

ಆ ದೇವಿಯು ಸ್ತೋತ್ರ ಮಾಡಲ್ಪಟ್ಟವಳಾಗಿ, ಚನ್ನಾಗಿ ಪೂಜಿಸಲ್ಪಟ್ಟರೆ ಆ ಕ್ಷಣದಲ್ಲಿಯೇ ಅವರವರ ಇಷ್ಟಾರ್ಥಗಳನ್ನು ಅನುಗ್ರಹಿಸಿ ಕೊಡುವಳು. ನೀವು ನಿಮ್ಮ ಮನಸ್ಸನ್ನು ದೃಢ ಮಾಡಿಕೊಂಡು ದೇವಿಯ ಸೇವೆಯನ್ನು ಮಾಡುವುದಕ್ಕಾಗಿ ಹಿಮಾಲಯಕ್ಕೆ ಹೋಗಿರಿ. ॥೨೧॥

ಎಲೈ ದೇವತೆಗಳಿರಾ, ನೀವು ಹಿಮಾಲಯ ಪರ್ವತಕ್ಕೆ ಹೋಗಿ ದೇವಿಯನ್ನು ಪೂಜಿಸಿರಿ. ಆ ದೇವಿಯು ನಿಮ್ಮ ಎಲ್ಲ ಕಾರ್ಯಗಳನ್ನೂ ಮತ್ತು ನಿಮ್ಮ ಇಷ್ಟಾರ್ಥಗಳನ್ನೂ ನೆರವೇರಿಸುವಳು. ॥೨೨॥

ವ್ಯಾಸಋಷಿಯು ಹೇಳಿದನು—ಎಲೈ ಜನಮೇಜಯ ಮಹಾರಾಜನೇ, ಕೇಳು. ಬೃಹಸ್ಪತಿಯು ಹೇಳಿದ ಈ ಮಾತುಗಳನ್ನು ಕೇಳಿ ಆ ದೇವತೆಗಳೆಲ್ಲರೂ ಹಿಮಾಲಯ ಪರ್ವತಕ್ಕೆ ಹೋದರು. ಮತ್ತು ಅಲ್ಲಿ ಅವರೆಲ್ಲರೂ ದೇವಿಯ ಧ್ಯಾನವನ್ನು ಮಾಡುವುದರಲ್ಲಿ ಆಸಕ್ತರಾಗಿಯೂ, ಯಾವಾಗಲೂ ಮನಸ್ಸಿನಲ್ಲಿ ಹ್ರೀಂಕಾರ ಯುಕ್ತವಾದ ಮಂತ್ರವನ್ನು ಜಪಮಾಡುವವರಾಗಿಯೂ ಇದ್ದರು. ॥೨೩॥

ನಮಶ್ಚಕ್ರುರ್ಮಹಾಮಾಯಾಂ ಭಕ್ತಾನಾಮಭಯಪ್ರದಾಂ ।
ತುಷ್ಟುವುಃ ಸ್ತೋತ್ರಮಂತ್ರೈಶ್ಚ ಭಕ್ತ್ಯಾ ಪರಮಯಾ ಯುತಾಃ ॥೨೪॥

ನಮೋ ದೇವಿ ವಿಶ್ವೇಶ್ವರಿ ಪ್ರಾಣನಾಥೇ
ಸದಾನಂದರೂಪೇ ಸುರಾನಂದದೇ ತೇ ।
ನಮೋ ದಾನವಾಂತಪ್ರದೇ ಮಾನವಾನಾ
ಮನೇಕಾರ್ಥದೇ ಭಕ್ತಿಗಮ್ಯಸ್ವರೂಪೇ ॥೨೫॥

ನ ತೇ ನಾಮಸಂಖ್ಯಾಂ ನ ತೇ ರೂಪಮಿದೃ
ಕ್ತಥಾ ಕೋಽಪಿ ವೇದಾದಿದೇವಾದಿರೂಪೇ ।
ತ್ವಮೇವಾಸಿ ಸರ್ವೇಷು ಶಕ್ತಿಸ್ವರೂಪಾ ।
ಪ್ರಜಾಸೃಷ್ಟಿಸಂಹಾರಕಾಲೇ ಸದೈವ ॥೨೬॥

---

ದೇವತೆಗಳು ಮಾಯಾವಿಶಿಷ್ಟ ಬ್ರಹ್ಮಸ್ವರೂಪಿಣಿಯಾದ ಭಕ್ತರೆಲ್ಲರ ಭಯ ವನ್ನು ಪರಿಹರಿಸುವ ಭುವನೇಶ್ವರೀ ದೇವಿಯನ್ನು ಉತ್ತಮವಾದ ಭಕ್ತಿಯಿಂದ ಕೂಡಿದವರಾಗಿ ನಮಸ್ಕರಿಸಿದರು ಮತ್ತು ದೇವಿಯನ್ನು ಸ್ತೋತ್ರಮಂತ್ರಗಳಿಂದ ನವವಿಧ ಭಕ್ತಿಯೊಡನೆ ಸ್ತುತಿಸಿದರು. ॥೨೪॥

ಪ್ರಪಂಚಕ್ಕೆ ಅಧಿಪತಿಯಾಗಿರುವ, ಎಲ್ಲ ಪ್ರಾಣಿಗಳ ಪ್ರಾಣವನ್ನೂ ಕಾಪಾ ಡುವ, ಯಾವಾಗಲೂ ಆನಂದರೂಪಳಾದ, ಬ್ರಹ್ಮಸ್ವರೂಪಿಣಿಯಾದ, ಮತ್ತು ದೇವತೆ ಗಳಿಗೆ ಸಂತೋಷವನ್ನುಂಟುಮಾಡುವ, ಓ ಭುವನೇಶ್ವರೀ ದೇವಿಯೇ, ನಿನಗೆ ನಮ ಸ್ಕಾರವು. ದಾನವರನ್ನು ನಾಶಮಾಡುವ ಓ ದೇವಿಯೇ, ಮನುಷ್ಯರಿಗೆ ಬೇಕಾದ ಇಷ್ಟಾರ್ಥಗಳನ್ನು ಕರುಣಿಸಿ ಕೊಡುವ ಮತ್ತು ಭಕ್ತಿಯಿಂದ ಸಾಕ್ಷಾತ್ಕರಿಸಿ ತಿಳಿಯ ಬಹುದಾದ ಆಕಾರವುಳ್ಳ, ನಿನಗೆ ನಾವು ನಮಸ್ಕಾರಗಳನ್ನು ಮಾಡುತ್ತೇವೆ. ॥೨೫॥

ಓ ದೇವಿಯೇ, ನಿನ್ನ ಹೆಸರುಗಳ ಸಂಖ್ಯೆಯು ಇಷ್ಟೇ ಎಂದು ನಿಷ್ಕರ್ಷೆಯಾಗಿ ಯಾರಿಂದಲೂ ಹೇಳಲಾಗುವುದಿಲ್ಲವು. ನಿನ್ನ ಆಕಾರವೂ ಹೀಗೆಯೇ ಇರುವುದೆಂದು ಗೊತ್ತಾಗಿ ಯಾರೂ ತಿಳಿಯಲು ಸಾಧ್ಯವಾಗಿಲ್ಲವು. ಆದರೂ ನೀನು ವೇದಗಳಿಗೂ, ದೇವತೆಗಳಿಗೂ ಸಹ ಆದಿಯಾಗಿರುವ ರೂಪವು ಯಾವುದೋ ಅಂತಹ ಆ ಹಿರಣ್ಯ ಗರ್ಭನೇ ಮೊದಲಾದ ದೇವತೆಗಳ ಆಕಾರವುಳ್ಳವಳು. ಇಂತಹ ನಿನ್ನ ಸ್ವರೂಪ ವನ್ನು ಯಾರು ತಿಳಿಯಬಲ್ಲರು ? ಅಲ್ಲದೆ ಬ್ರಹ್ಮ-ವಿಷ್ಣು-ಮಹೇಶ್ವರರೇ ಮೊದಲಾದವ

ಸ್ಮೃತಿಸ್ತ್ವಂ ಧೃತಿಸ್ತ್ವಂ ತ್ವಮೇವಾಸಿ ಬುದ್ಧಿ
ರ್ಜರಾ ಪುಷ್ಟಿತುಷ್ಟೀ ಧೃತಿಃ ಕಾಂತಿಶಾಂತೀ ।
ಸುವಿದ್ಯಾ ಸುಲಕ್ಷ್ಮೀರ್ಗತಿಃ ಕೀರ್ತಿಮೇಧೇ
ತ್ವಮೇವಾಸಿ ವಿಶ್ವಸ್ಯ ಬೀಜಂ ಪುರಾಣಂ ॥೨೭॥

ಯದಾ ಯೈಃ ಸ್ವರೂಪೈಃ ಕರೋಷೀಹ ಕಾರ್ಯಂ
ಸುರಾಣಾಂ ಚ ತೇಭ್ಯೋ ನಮಾಮೋಽದ್ಯ ಶಾಂತ್ಯೈ ।
ಕ್ಷಮಾ ಯೋಗನಿದ್ರಾ ದಯಾ ತ್ವಂ ವಿವಕ್ಷಾ
ಸ್ಥಿತಾ ಸರ್ವಭೂತೇಷು ಶಸ್ತ್ರೈಃ ಸ್ವರೂಪೈಃ ॥೨೮॥

---

ರೆಲ್ಲರಲ್ಲಿಯೂ ಇರುವ, ಪ್ರಜೆಗಳ ಸೃಷ್ಟಿ, ರಕ್ಷಣೆ, ಸಂಹಾರಗಳ ಕಾಲದಲ್ಲಿ ಪ್ರಕಟವಾಗಿ ತೋರುವ, ಕಾರ್ಯಗಳನ್ನು ನಿರ್ವಹಿಸುವ ಸಾಮರ್ಥ್ಯರೂಪವಾಗಿ ನೀನು ಇರುತ್ತೀಯೆ. ಈ ರೂಪದಿಂದ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರಲ್ಲಿಯೂ ನೀನು ಇಲ್ಲದಿದ್ದರೆ ಅವರು ತಮ್ಮ ತಮ್ಮ ಸೃಷ್ಟಿ-ಸ್ಥಿತಿ-ಸಂಹಾರ ರೂಪವಾದ ಕಾರ್ಯಗಳನ್ನು ಮಾಡಲು ಯಾವಾಗಲೂ ಸಮರ್ಥರಾಗುತ್ತಿರಲಿಲ್ಲವು ! ॥೨೬॥

ನೀನು ಸ್ಮೃತಿ, ಸ್ಮರಣಶಕ್ತಿಯು, ಧೈರ್ಯವು, ಹೆದರದಿರುವಿಕೆಯು, ನೀನೇ ಬುದ್ಧಿ, ಮುಪ್ಪು, ಆರ್ಥಿಕಸಾಮರ್ಥ್ಯ, ಸಂತೋಷ, ಧಾರಣಶಕ್ತಿ, ಕಾಂತಿ, ಕಷ್ಟನಿಷ್ಠೂರಗಳನ್ನು ಸಮಾಧಾನದಿಂದ ಸಹಿಸುವ ಶಕ್ತಿ, ಉತ್ತಮವಾದ ಜ್ಞಾನ, ಅನುಕೂಲವಾದ ಐಶ್ವರ್ಯ, ಸರಿಯಾದ ಮಾರ್ಗದಲ್ಲಿ ನಡೆಯುವ ಶಕ್ತಿ, ಒಳ್ಳೆಯದಾದ ಯಶಸ್ಸು, ಪ್ರಾಣಿಗಳಿಗೆ ಜ್ಞಾನವನ್ನು ಪಡೆಯಲು ಅತ್ಯವಶ್ಯಕವಾದ ಮೇಧಾ ಎಂಬ ಶಕ್ತಿಯು, ಇವೇ ಮೊದಲಾದ ಸಕಲ ವಿಧವಾದ ಮಾನಸಿಕವಾದ ಶಕ್ತಿಸ್ವರೂಪಳಾಗಿ ನೀನು ಪ್ರಪಂಚವನ್ನು ರಕ್ಷಿಸುತ್ತಿರುತ್ತೀಯೆ. ಮತ್ತು ಪ್ರಪಂಚಕ್ಕೆ ಮೂಲಕಾರಣವಾದ ಸೂಕ್ಷ್ಮರೂಪದಿಂದಿರುವ ಮಾಯಾವಿಶಿಷ್ಟ ಬ್ರಹ್ಮರೂಪವೆಂದೆನಿಸುವ ಅವ್ಯಕ್ತರೂಪದಿಂದಲೂ ಪ್ರಕಾಶಿಸುತ್ತಿರುತ್ತೀಯೆ. ॥೨೭॥

ಓ ಜಗನ್ಮಾತೆಯೇ, ನೀನು ದೇವತೆಗಳ ಹಿತಕ್ಕಾಗಿ ಅವರ ಕೆಲಸಗಳನ್ನು ಯಾವಾಗ ಯಾವ ಯಾವ ಆಕಾರವನ್ನು ಧರಿಸಿ ನೆರವೇರಿಸುವೆಯೋ ಮಂಗಳಕರವಾದ ಆಯಾಯ ರೂಪಗಳಿಗೆಲ್ಲಕ್ಕೂ ನಾವುಗಳು ಈಗ ನಮಸ್ಕಾರವನ್ನು ಮಾಡುತ್ತಿರುವೆವು. ಸರ್ವ ಪ್ರಾಣಿಗಳಲ್ಲಿಯೂ ಕಂಡುಬರುವ ಸೌಖ್ಯವನ್ನು ಉಂಟುಮಾಡುತ್ತಿರುವ ನಿನ್ನ ಸಂಬಂಧಿಯಾದ ಕ್ಷಮಾ ಎಂಬ ಗುಣವೂ, ಮಂಗಳಕರವಾದ,

ಕೃತಂ ಕಾರ್ಯಮಾದೌ ತ್ವಯಾ ಯತ್ಸುರಾಣಾಂ
ಹತೋಽಸೌ ಮಹಾರಿರ್ಮದಾಂಧೋ ಹಯಾರಿಃ ।
ದಯಾ ತೇ ಸದಾ ಸರ್ವದೇವೇಷು ದೇವಿ
ಪ್ರಸಿದ್ಧಾ ಪುರಾಣೇಷು ವೇದೇಷು ಗೀತಾ ॥೨೯॥

ಕಿಮತ್ರಾಸ್ತಿ ಚಿತ್ರಂ ಯದಂಬಾ ಸುತಂ ಸ್ವಂ
ಮುದಾ ಪಾಲಯೇತ್ಪೋಷಯೇತ್ಸಮ್ಯಗೇವ ।
ಯತಸ್ತ್ವಂ ಜನಿತ್ರೀ ಸುರಾಣಾಂ ಸಹಾಯಾ
ಕುರುಷ್ವೈಕಚಿತ್ತೇನ ಕಾರ್ಯಂ ಸಮಗ್ರಂ ॥೩೦॥

---

ಪೂಜ್ಯವಾದ ಯೋಗನಿದ್ರಾ ಎಂಬ ರೂಪವೂ, ಮತ್ತು ದಯಾ, ಎಂಬ ಈ ರೂಪಗಳಲ್ಲಿಯೂ ನೀನು ಇರುವೆ. ಇಂತಹ ನಿನ್ನನ್ನು ನಾವು ನಮಸ್ಕರಿಸುವೆವು. ॥೨೮॥

ಪೂರ್ವದಲ್ಲಿ ನಿನ್ನಿಂದ ದೇವತೆಗಳಿಗೆ ಹಿತಕರವಾದ ಕೆಲಸವು ಮಾಡಲ್ಪಟ್ಟಿತು. ಆ ಕೆಲಸದಿಂದ ಮದದಿಂದ ಕೊಬ್ಬಿದ್ದ, ದೇವಶತ್ರುವಾಗಿದ್ದ ಮಹಿಷಾಸುರನು ನಾಶವನ್ನು ಹೊಂದಿದನು. ಓ ದೇವಿಯೇ, ಈ ಮಹಿಷಾಸುರನನ್ನು ಕೊಂದು, ದೇವತೆಗಳೆಲ್ಲರಿಗೂ ಹಿತವನ್ನುಂಟುಮಾಡಿದ್ದರಿಂದ ನಿನಗೆ ದೇವತೆಗಳ ವಿಷಯದಲ್ಲಿರುವ ದಯೆಯು ವೇದಗಳಲ್ಲಿಯೂ ಪುರಾಣಗಳಲ್ಲಿಯೂ ಸಹ ಪ್ರಸಿದ್ಧವಾಗಿ ಹೊಗಳಲ್ಪಟ್ಟಿರುವುದು. ॥೨೯॥

ಓ ಮಾತೆಯೇ, ಲೋಕದಲ್ಲಿ ತಾಯಿಯು ತನ್ನ ಮಗುವನ್ನು ಸಂತೋಷದಿಂದ ಚನ್ನಾಗಿ ಪೋಷಣೆ ಮಾಡುವುದು ಏನೂ ಆಶ್ಚರ್ಯವಲ್ಲವು. ಇದರಂತೆ ನೀನು ನಿನ್ನ ಮಕ್ಕಳಾದ ದೇವತೆಗಳಾಗಿರುವ ನಮ್ಮ ಶತ್ರುಗಳನ್ನು ನಾಶಮಾಡಿ ನಮ್ಮನ್ನು ಹಿಂದೆ ಪೋಷಿಸಿರುವುದು ಎಲ್ಲರಿಗೂ ತಾಯಿಯಾದ ನಿನಗೆ ಸ್ವಾಭಾವಿಕವಾಗಿರುವುದರಿಂದ ಅದು ಏನೂ ಆಶ್ಚರ್ಯಕರವಲ್ಲವು. ಅಲ್ಲದೆ ನಮ್ಮ ಶತ್ರುವಾಗಿದ್ದ ಆ ಮಹಿಷಾಸುರನನ್ನು ಸಂಹರಿಸಿದುದು ಆಯಿತೆಂದು ಉದಾಸೀನಳಾಗಿ ಇರಲಾಗದು. ಏಕೆಂದರೆ ವಿಪತ್ತುಗಳು, ಒದಗಿರುವ ಈಗ ನಮಗೆ ಪುನಃ ನೀನು ಸಹಾಯವನ್ನು ಮಾಡಿ ಒಂದೇ ಮನಸ್ಸಿನಿಂದ ನಮ್ಮ ರಕ್ಷಣೆಯ ಕೆಲಸವನ್ನು ಸಂಪೂರ್ಣವಾಗಿ ನೆರವೇರಿಸಿ ಪೂರ್ವದಂತೆಯೇ ಈಗಲೂ ನಮ್ಮನ್ನು ಕಾಪಾಡುವುದು ನಮ್ಮ ತಾಯಿಯೂ ಸಹಾಯಕಳೂ ಆದ ನಿನಗೆ ಮುಖ್ಯವಾದ ಕೆಲಸವಾಗಿರುತ್ತದೆ. ॥೩೦॥

ನ ವಾ ತೇ ಗುಣಾನಾಮಿಯತ್ತಾ ಸ್ವರೂಪಂ
ವಯಂ ದೇವಿ ಜಾನೀಮಹೇ ವಿಶ್ವವಂದ್ಯೇ ।
ಕೃಪಾಪಾತ್ರಮಿತ್ಯೇವ ಮತ್ವಾ ತಥಾಽಸ್ಮಾನ್
ಭಯೇಭ್ಯಃ ಸದಾ ಪಾಹಿ ಪಾತುಂ ಸಮರ್ಥೇ ॥೩೧॥

ವಿನಾ ಬಾಣಪಾತೈರ್ವಿನಾ ಮುಷ್ಟಿಘಾತೈ
ರ್ವಿನಾ ಶೂಲಖಡ್ಗೈರ್ವಿನಾ ಶಕ್ತಿದಂಡೈಃ ।
ರಿಪೂನ್ ಹಂತುಮೇವಾಸಿ ಶಕ್ತಾ ವಿನೋದಾ
ತ್ತಥಾಪೀಹ ಲೋಕೋಪಕಾರಾಯ ಲೀಲಾ ॥೩೨॥

---

ಓ ದೇವಿಯೇ, ಪ್ರಪಂಚಕ್ಕೆಲ್ಲಕ್ಕೂ ನಮಸ್ಕಾರಾರ್ಹಳಾದ, ನಿನ್ನ ಗುಣಗಳು ಇಷ್ಟೇ ಪರಿಮಾಣದಿಂದಿರುವುವು, ಇವುಗಳ ಸ್ವರೂಪವೂ ಇಂಥಾದ್ದೇ ಸರಿ, ಎಂಬುವುದನ್ನು ನಾವು ತಿಳಿಯಲಾರೆವು. ಆದುದರಿಂದ ನಾವು ನಿನ್ನನ್ನು ಸರಿಯಾಗಿ ಸ್ತೋತ್ರಮಾಡಿ ನಮ್ಮ ಶ್ರದ್ಧಾಭಕ್ತಿಗಳಿಂದ ನಿನ್ನ ಮೆಚ್ಚುಗೆಯನ್ನು ಪಡೆಯುವವರೆಗೂ ನಿರೀಕ್ಷಿಸದೆ, ನೀನು ಮಾತ್ರ ನಮ್ಮನ್ನು, ಇವರು ದಯೆಯನ್ನು ತೋರಿಸಲು ಯೋಗ್ಯರು, ಎಂದು ಇಷ್ಟುಮಾತ್ರವನ್ನೇ ತಿಳಿದು, ರಕ್ಷಣೆಯನ್ನು ಮಾಡಲು ನೀನು ಶಕ್ತಳಾಗಿಯೂ ಇರುವುದರಿಂದ, ಎಲ್ಲ ಕಾಲದಲ್ಲಿಯೂ ನಮಗೆ ಉಂಟಾಗುವ ಭಯಗಳಿಂದ ನಮ್ಮನ್ನು ರಕ್ಷಿಸುತ್ತಿರು. ||೩೧||

ಓ ತಾಯಿಯೇ, ನಮ್ಮ ರಕ್ಷಣೆಯ ಕಾರ್ಯದಿಂದ ನಿನಗೇನೂ ಶ್ರಮವೂ ಆಗುವುದಿಲ್ಲವು. ಏಕೆಂದರೆ ನೀನು ಶತ್ರುಗಳನ್ನು ಬಾಣಗಳನ್ನು ಬಿಡುವುದು, ಅಥವಾ ಮುಷ್ಟಿಯಿಂಗುದ್ದುವುದು, ಕತ್ತಿ, ಶೂಲ, ಶಕ್ತ್ಯಾಯುಧ ಮತ್ತು ದಂಡ ಇವುಗಳಿಂದ ಹೊಡೆಯುವುದು, ಇವುಗಳಲ್ಲಿ ಯಾವುದೂ ಇಲ್ಲದಿದ್ದರೂ ನಿನ್ನ ಸಂಕಲ್ಪಮಾತ್ರದಿಂದಲೇ ಶತ್ರುಗಳನ್ನು ಕೊಲ್ಲಲು ಸಮರ್ಥಳಾಗಿ ಇರುತ್ತೀಯೆ! ಆದರೂ ನೀನು ಹೀಗೆ ಶತ್ರುಗಳನ್ನು ನಿಗ್ರಹ ಮಾಡುವುದು ಹಿಂಸಾಕರವಾಗಿದ್ದರೂ ದುಷ್ಟನಿಗ್ರಹ-ಶಿಷ್ಟಪರಿಪಾಲನರೂಪವಾದ ಧರ್ಮಪಾಲನೆಯ ಕಾರ್ಯವಾದುದರಿಂದಲೂ, ಅಲ್ಲದೆ ನಿನ್ನ ಅವತಾರಗಳ ಕಥೆಗಳನ್ನು ವರ್ಣಿಸುವ ಪುರಾಣಗಳ ರಚನೆ, ಪಠನೆ, ಶ್ರವಣ, ವ್ಯಾಖ್ಯಾನ, ಪ್ರಚಾರಣೆಗಳಿಂದ ಪುಣ್ಯಕಲ್ಯಾಣಗಳು ಲಭಿಸುವಂತಾಗುವುದರಿಂದಲೂ, ಲೋಕಕ್ಕೆ ಉಪಕಾರಗಳನ್ನು ಮಾಡುತ್ತ ಪ್ರಪಂಚದಲ್ಲಿ

ಇದಂ ಶಾಶ್ವತಂ ನೈವ ಜಾನಂತಿ ಮೂಢಾ
ನ ಕಾರ್ಯಂ ವಿನಾ ಕಾರಣಂ ಸಂಭವೇದ್ವಾ ।
ವಯಂ ತರ್ಕಯಾಮೋಽನುಮಾನಂ ಪ್ರಮಾಣಂ
ತ್ವಮೇವಾಸಿ ಕರ್ತಾಽಸ್ಯ ವಿಶ್ವಸ್ಯ ಚೇತಿ ॥೩೩॥

---

ಇದು ನಿನ್ನ ಲೀಲೆಯಾಗಿ, ಎಂದರೆ ಧರ್ಮಸ್ಥಾಪನೆಯ ಅನಾಯಾಸಕರವಾದ ವಿನೋದವಾಗಿರುತ್ತದೆ! ॥೩೨॥

ಓ ತಾಯಿಯೇ, ಇಂತಹ ಸ್ತೋತ್ರವೆಲ್ಲವೂ ಈ ಪ್ರಪಂಚದ ಸೃಷ್ಟಿ, ರಕ್ಷಣೆಗಳನ್ನು ನಿರ್ವಹಿಸಬಲ್ಲ ದೇವನಿಗೆ ಸಲ್ಲುವುದೇ ಹೊರತು ನನಗೆ ಸಲ್ಲವು ಎಂದೂ ನೀನು ಹೇಳುವ ಹಾಗಿಲ್ಲವು. ಏಕೆಂದರೆ ಈ ಪ್ರಪಂಚವು (ಜನನ ಮರಣ) ಉತ್ಪತ್ತಿ ವಿನಾಶಾದಿಗಳಿಂತ ಕೂಡಿರುವ ಕಾರಣ ಇದನ್ನು ಲೋಕದಲ್ಲಿ ದಡ್ಡರಾದವರೂ ಕೂಡ ಯಾವಾಗಲೂ ಸ್ಥಿರವಾಗಿರುವುದೆಂದು ತಿಳಿದಿಲ್ಲವು. ಕಾರ್ಯವೆಂಬುದು ಕಾರಣವಿಲ್ಲದೆ ಉಂಟಾಗುವುದಿಲ್ಲವು. ಆದುದರಿಂದ ಉತ್ಪತ್ತಿಯುಳ್ಳ ಜಗದ್ರೂಪವಾದ ಈ ಕಾರ್ಯಕ್ಕೆ ಕಾರಣವು ಯಾವುದೆಂದು ವಿಚಾರಮಾಡಿದರೆ ಪರಮಾತ್ಮಾ, ಪ್ರಕೃತಿ ಎಂಬ ಎರಡು ಪದಾರ್ಥಗಳಲ್ಲಿ ಯಾವುದಾದರೂ ಒಂದು ಕಾರಣವಾಗಿರಬೇಕು ಎಂದು ಊಹಿಸಬೇಕಾಗಿದೆ. ಆದರೆ ನಿರ್ವಿಕಾರಿಯಾದ ಆತ್ಮನಾಗಲೀ, ಕೇವಲ ಜಡವಾದ ಪ್ರಕೃತಿಯಾಗಲೀ ಕಾರಣವೆಂದು ಹೇಳಲು ಆಗುವುದಿಲ್ಲವು. ಏಕೆಂದರೆ ವಿಕಾರವನ್ನು ಹೊಂದುವ ಪದಾರ್ಥವು ವಿಕಾರವನ್ನು ಹೊಂದುವ ಕಾರ್ಯಕ್ಕೆ ಕಾರಣವೆಂದರೆ ಸರಿಹೋಗುವುದು. ಆತ್ಮನು ನಿರ್ವಿಕಾರಿಯಾದವನು. ಆದುದರಿಂದ ವಿಕಾರಿಯಾದ ಜಗತ್ತಿಗೆ ಕಾರಣವಲ್ಲವು. ಇರುವ ಎರಡು ಕಾರಣಗಳಲ್ಲಿ ಒಂದಂತೂ ಹೀಗಾಯಿತು. ಇನ್ನೊಂದಾದ ಜಡವಾದ ಪ್ರಕೃತಿಯು ವಿಕಾರಿಪದಾರ್ಥವಾದಾಗ್ಯೂ ಜಡವಾದುದರಿಂದ ಅನೇಕ ವಿಧವಾದ ಭೋಗ್ಯವಾದ ಮತ್ತು ನಿಯತವಾದ ವಸ್ತುಗಳನ್ನು ಒಳಗೊಂಡಿರುವ ಜಗತ್ತಿಗೆ ಕಾರಣವಾಗಲು, ಇದರಲ್ಲಿ ಅಂಥಾ ಸಾಮರ್ಥ್ಯವಿಲ್ಲದಿರುವುದರಿಂದ, ಸಾಧ್ಯವಿಲ್ಲವು. ಎಂದರೆ ಈ ಜಗತ್ತು ಚೇತನ ಮತ್ತು ಜಡ ಇವೆರಡರಿಂದ ಕೂಡಿರುವುದು. ಆದುದರಿಂದ ಬರಿಯ ನಿರ್ವಿಕಾರಿಯಾದ ಚೈತನ್ಯಕ್ಕೂ, ಬರಿಯ ಜಡವಸ್ತುವಿಗೂ ಈ ಪ್ರಪಂಚಕ್ಕೆ ಕಾರಣತ್ವವನ್ನು ಹೇಳಿದರೆ ಕಾರ್ಯಕಾರಣಭಾವವು ಸರಿಯಾಗುವುದಿಲ್ಲವು. ಏಕೆಂದರೆ ಕಾರಣಗುಣಗಳು ಕಾರ್ಯದಲ್ಲಿ ನಿಯತವಾಗಿರಲೇಬೇಕು. ಆದುದರಿಂದ ಮಾಯಾವಿಶಿಷ್ಟ ಬ್ರಹ್ಮರೂಪವಾದ ಪದಾರ್ಥವು ಈ

ಅಜಃ ಸೃಷ್ಟಿಕರ್ತಾ ಮುಕುಂದೋऽವಿತಾऽಯಂ
ಹರೋ ನಾಶಕೃದ್ವೈ ಪುರಾಣೇ ಪ್ರಸಿದ್ಧಃ ।
ನ ಕಿಂ ತ್ವತ್ಪ್ರಸೂತಾಸ್ತ್ರಯಸ್ತೇ ಯುಗಾದೌ
ತ್ವಮೇವಾಸಿ ಸರ್ವಸ್ಯ ತೇನೈವ ಮಾತಾ ॥೩೪॥

ತ್ರಿಭಿಸ್ತ್ವಂ ಪುರಾऽऽರಾಧಿತಾ ದೇವಿ ದತ್ತಾ
ತ್ವಯಾ ಶಕ್ತಿರುಗ್ರಾ ಚ ತೇಭ್ಯಃ ಸಮುಗ್ರಾ ।
ತ್ವಯಾ ಸಂಯುತಾಸ್ತೇ ಪ್ರಕುರ್ವಂತಿ ಕಾಮಂ
ಜಗತ್ಪಾಲನೋತ್ಪತ್ತಿಸಂಹಾರಮೇವ ॥೩೫॥

---

ಪ್ರಪಂಚಕ್ಕೆ ಕಾರಣವೆಂಬುದಾಗಿ ನಾವು ಅನುಮಾನವೆಂಬ ಪ್ರಮಾಣವನ್ನು ಬಿಟ್ಟು, ಅನ್ಯಥಾನುಪಪತ್ತಿಪ್ರಮಾಣದಿಂದ ನಿಶ್ಚಯಿಸಬೇಕಾಗಿದೆ. ಆದುದರಿಂದ ಮಾಯಾ ವಿಶಿಷ್ಟಬ್ರಹ್ಮರೂಪಿಣಿಯಾದ ನೀನೇ ಈ ಪ್ರಪಂಚವನ್ನು ನಿರ್ಮಿಸಿರುತ್ತೀಯೆ ಎಂದು ನಾವು ಊಹಿಸಿ ಸ್ತೋತ್ರಮಾಡುತ್ತೇವೆ. ||೩೩||

ಲೋಕದಲ್ಲಿಯೂ ಪುರಾಣಗಳಲ್ಲಿಯೂ ಸಹ ಚತುರ್ಮುಖಬ್ರಹ್ಮನು ಸೃಷ್ಟಿ ಮಾಡುವವನು, ವಿಷ್ಣುವು ರಕ್ಷಿಸುವವನು, ಹರನು ಎಲ್ಲವನ್ನೂ ನಾಶಮಾಡುವವನು, ಎಂಬುದಾಗಿ ಪ್ರಸಿದ್ಧವಾಗಿರುವುದು. ಅದು ನಿಜವೂ ಹೌದು. ಆದರೂ ಇವರೆಲ್ಲರೂ ಆಕಾರವುಳ್ಳವರಾಗಿ ಹುಟ್ಟು, ಸಾವುಗಳುಳ್ಳವರಾಗಿ ಅನಿತ್ಯವೂ ವಿನಾಶಿಯೂ ಆದ ಕಾರ್ಯರೂಪರಾಗಿರುವುದರಿಂದ ಇವರಿಗೂ ಕಾರಣವು ಯಾರೆಂದು ವಿಮರ್ಶಿಸಿದರೆ ನಿನ್ನನ್ನು ಹೊರತು ಬೇರೆಯಾದ ಕಾರಣವನ್ನು ಹೇಳಲು ಅವಕಾಶವಿಲ್ಲವು. ಆದುದ ರಿಂದ ನೀನೇ ಎಲ್ಲರನ್ನೂ ಬ್ರಹ್ಮಕಲ್ಪದ ಆದಿಯಲ್ಲಿ ಪ್ರಸವಿಸಿ ಮೂಲಕಾರಣಳಾಗಿ ತಾಯಿಯಾಗಿರುತ್ತೀಯೆ ! ಮೈತ್ರಾಣೀಯ ಶ್ರುತಿಯೂ ಈ ವಿಷಯವನ್ನು ಬೋಧಿ ಸುತ್ತಿದೆ. ||೩೪||

ಓ ದೇವಿಯೇ, ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳೂ ಮೊದಲು ನಿನ್ನನ್ನು ಪೂಜಿಸಿ ಸೇವೆಮಾಡಿದರು. ಅದರಿಂದ ಸಂತೋಷಪಟ್ಟ ನೀನು ಅವರಿಗೆ ಉಗ್ರವಾದ ಕಾರ್ಯನಿರ್ವಾಹಸಾಮರ್ಥ್ಯವುಳ್ಳ, ಸಂಪೂರ್ಣವಾದ ಶಕ್ತಿಗಳನ್ನು ಅನುಗ್ರಹಿ ಸಿದೆ. ಹೀಗೆ ನೀನು ಕೊಟ್ಟ ಸಮುಗ್ರವಾದ ಶಕ್ತಿಯಿಂದ ಕೂಡಿದವರಾಗಿ ಅವರು ಈ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರಗಳೆಂಬ ದೊಡ್ಡ ಕೆಲಸಗಳನ್ನೂ ನೆರವೇರಿಸು ತ್ತಿದ್ದಾರೆ! ||೩೫||

ತೇ ಕಿಂ ನ ಮಂದಮತಯೋ ಯತಯೋ ವಿಮೂಢಾ-
ಸ್ತ್ವಾಂ ಯೇ ನ ವಿಶ್ವಜನನೀಂ ಸಮುಪಾಶ್ರಯಂತಿ ।
ವಿದ್ಯಾಂ ಪರಾಂ ಸಕಲಕಾಮಫಲಪ್ರದಾಂ ತಾಂ
ಮುಕ್ತಿಪ್ರದಾಂ ವಿಬುಧವೃಂದಸುವಂದಿತಾಂಘ್ರಿಂ ॥೩೬॥

ಯೇ ವೈಷ್ಣವಾಃ ಪಾಶುಪತಾಶ್ಚ ಸೌರಾ
ದಂಭಾಸ್ತ ಏವ ಪ್ರತಿಭಾಂತಿ ನೂನಂ ।
ಧ್ಯಾಯಂತಿ ನ ತ್ವಾಂ ಕಮಲಾಂ ಚ ಲಜ್ಜಾಂ
ಕಾಂತಿಂ ಸ್ಥಿತಿಂ ಕೀರ್ತಿಮಥಾಪಿ ಪುಷ್ಟಿಂ ॥೩೭॥

---

ಓ ಮಾತೆಯೇ, ಯಾರು ಈ ಪ್ರಪಂಚಕ್ಕೆಲ್ಲಕ್ಕೂ ತಾಯಿಯಾಗಿರುವ, ಎಲ್ಲರ ಇಷ್ಟಾರ್ಥಗಳನ್ನೂ ಕೊಡುವವಳಾದ, ದೇವತೆಗಳ ಗುಂಪಿನಿಂದಲೂ ನಮಸ್ಕರಿಸಲ್ಪಟ್ಟ ಪಾದಗಳುಳ್ಳ, ಪರಾವಿದ್ಯಾಸ್ವರೂಪಳಾದ ಮತ್ತು ಮುಕ್ತಿಯನ್ನೂ ಕೊಡುವ, ನಿನ್ನನ್ನು ಪೂಜೆಮಾಡಿ ಸೇವಿಸುವುದಿಲ್ಲವೋ, ಅಂಥವರು ಯತಿಗಳೇ ಆಗಿದ್ದರೂ ದಡ್ಡತನದಿಂದ ಕೂಡಿದ ಬುದ್ಧಿಯುಳ್ಳವರಲ್ಲವೆ ? ಶೈವರೂ ವೈಷ್ಣವರೂ ಸೌರಮತದವರೂ ಸಹ ದೇವಿಯನ್ನು ಆರಾಧಿಸುವುದಿಲ್ಲವು. ಆದುದರಿಂದ ಶಿವ-ವಿಷ್ಣು ಮೊದಲಾದವರೇ ಪೂಜಿಸಿದ ನಿನ್ನನ್ನು ಆ ಶಿವ ವಿಷ್ಣುಗಳನ್ನು ಪೂಜಿಸುವವರು ಆರಾಧಿಸದೇ ಇರುವುದು ದಡ್ಡತನವೆಂಬುದು ಸ್ಪಷ್ಟವಾಗಿರುವುದು ! ||೩೬||

ಓ ದೇವಿಯೇ, ವಿಷ್ಣುಭಕ್ತರೂ, ಪಶುಪತಿ ಮತದವರೂ ಎಂದರೆ ಶೈವರೂ, ಸೂರ್ಯನನ್ನೇ ಸರ್ವೋತ್ತಮನೆಂದು ಪೂಜಿಸುವ ಸೌರಮತದವರೂ, ಸಹ ಪರಮಾರ್ಥ ಸ್ಥಿತಿಯನ್ನು ತಿಳಿಯದೆ ದಂಭಾಚಾರವುಳ್ಳವರಾಗಿರುತ್ತಾರೆ. ಏಕೆಂದರೆ ನೀನೇ ಲಕ್ಷ್ಮೀ, ಲಜ್ಜಾ, ಕಾಂತಿ, ಸ್ಥಿತಿ, ಕೀರ್ತಿ, ಪುಷ್ಟಿ ಮುಂತಾದ ರೂಪಗಳಿಂದ ಇರುತ್ತಾ, ಯಾರು ಯಾರನ್ನು ಪೂಜಿಸಿದರೂ ಅವರವರ ವಿಷಯದಲ್ಲಿ ವೈಷಮ್ಯವನ್ನು ಹೊಂದದೆ, ಅವರವರಿಗೆ ಆಯಾಯ ಸಿದ್ಧಿಗಳನ್ನು ಕೊಡುತ್ತಿರುವೆ? ಹೀಗಿದ್ದಾಗ್ಯೂ ನಿನ್ನನ್ನು ಧ್ಯಾನಮಾಡದೇ ದೇವತಾಂತರಾರಾಧಕರನ್ನು ದಾಂಭಿಕರೆಂದು ಖಂಡಿತವಾಗಿಯೂ ಹೇಳಬಹುದು ! ||೩೭||

ಹರಿಹರಾದಿಭಿರಪ್ಯಥ ಸೇವಿತಾ
ತ್ವಮಿಹ ದೇವವರೈರಸುರೈಸ್ತಥಾ ।
ಭುವಿ ಭಜಂತಿ ನ ಯೇಽಲ್ಪಧಿಯೋ ನರಾ
ಜನನಿ ತೇ ವಿಧಿನಾ ಖಲು ವಂಚಿತಾಃ ॥೩೮॥

ಜಲಧಿಜಾಪದಪಂಕಜರಂಜನಂ
ಜತುರಸೇನ ಕರೋತಿ ಹರಿಃ ಸ್ವಯಂ ।
ತ್ರಿನಯನೋಽಪಿ ಧರಾಧರಜಾಂಘ್ರಿಪಂ
ಕಜಪರಾಗನಿಷೇವಣತತ್ಪರಃ ॥೩೯॥

ಕಿಮುಪರಸ್ಯ ನರಸ್ಯ ಕಥಾನಕೈ
ಸ್ತವ ಪದಾಬ್ಜಯುಗಂ ನ ಭಜಂತಿ ಕೇ ।
ವಿಗತರಾಗಗೃಹಾಶ್ಚ ದಯಾಂ ಕ್ಷಮಾಂ
ಕೃತಧಿಯೋ ಮುನಯೋಽಪಿ ಭಜಂತಿ ತೇ ॥೪೦॥

---

ಓ ದೇವಿಯೇ, ನೀನು ವಿಷ್ಣು, ಶಿವ, ಬ್ರಹ್ಮಾ ಎಂಬ ತ್ರಿಮೂರ್ತಿಗಳಿಂದಲೂ ಮತ್ತು ದೇವಶ್ರೇಷ್ಠರು, ರಾಕ್ಷಸರು ಇವರುಗಳಿಂದಲೂ ಸಹ ಪೂಜಿಸಲ್ಪಡುತ್ತಿದೀಯೆ. ಹೀಗಿದ್ದರೂ ಲೋಕದಲ್ಲಿ ಮಾನವರೂ, ರಾಜಸೇವಕರ ಸೇವೆಯನ್ನು ಬಿಟ್ಟು ರಾಜರನ್ನೇ ಸಾಕ್ಷಾತ್ತಾಗಿ ಸೇವಿಸುವಂತೆ, ನೇರವಾಗಿ ನಿನ್ನನ್ನೇ ಏತಕ್ಕೆ ಸೇವೆ ಮಾಡಿ ಫಲವನ್ನು ಪಡೆಯಬಾರದು ? ಇಷ್ಟು ಅಂಶವೂ ಅವರಿಗೆ ತಿಳಿಯಲಿಲ್ಲವಾದ್ದರಿಂದ ನಿನ್ನನ್ನು ಪೂಜಿಸದಿರುವ, ಕಡಿಮೆಯಾದ ಬುದ್ಧಿಯುಳ್ಳ, ಅವರು ತಮ್ಮ ದುರ್ದೈವದಿಂದ ಮೋಸಗೊಳಿಸಲ್ಪಟ್ಟಿದಾರಲ್ಲವೆ ? ॥೩೮॥

ಓ ದೇವಿಯೇ, ವಿಷ್ಣುವೂ ಸ್ವಂತವಾಗಿ ಅರಗಿನ ರಸವನ್ನು ನಿನ್ನ ಅಂಶರೂಪಳಾದ ಲಕ್ಷ್ಮಿಯ ಪಾದಕಮಲಗಳಿಗೆ ಹತ್ತಿಸುವುದಿಲ್ಲವೇ ? ಮುಕ್ಕಣ್ಣನಾದ ಈಶ್ವರನೂ ಪಾರ್ವತಿಯ ಪಾದಕಮಲದ ಪರಿಮಳವನ್ನು ಸೇವಿಸುತ್ತಿಲ್ಲವೇ ? ಹೀಗಿರುವಾಗ ಇತರರೂ ನಿನ್ನ ಸೇವೆಯನ್ನು ಮಾಡಲೇಬೇಕೆಂಬುದು ಉಚಿತವಾದುದು. ॥೩೯॥

ಓ ತಾಯಿಯೇ, ತ್ರಿಮೂರ್ತಿಗಳಂತಹ ದೊಡ್ಡವರೇ ನಿನ್ನ ಪಾದಕಮಲಗಳನ್ನು ಸೇವಿಸಿ ಕೃತಾರ್ಥರಾಗಿರುವಾಗ, ಇತರ ಸಾಮಾನ್ಯ ಜನರ ಸಮಾಚಾರವನ್ನು ಹೇಳಬೇಕಾದುದೇನು ? ಎಲ್ಲರೂ ನಿನ್ನನ್ನು ಸೇವಿಸಿಯೇ ಕೃತಾರ್ಥರಾಗಬೇಕಾಗಿದೆ.

ದೇವಿ ತ್ವದಂಘ್ರಿಭಜನೇ ನ ಜನಾ ರತಾ ಯೇ
ಸಂಸಾರಕೂಪಪತಿತಾಃ ಪತಿತಾಃ ಕಿಲಾಮೀ ।
ತೇ ಕುಷ್ಠಗುಲ್ಮಶಿರಆಧಿಯುತಾ ಭವಂತಿ
ದಾರಿದ್ರ್ಯದೈನ್ಯಸಹಿತಾ ರಹಿತಾಃ ಸುಖೌಘ್ಯೈಃ ॥೪೧॥

ಯೇ ಕಾಷ್ಠಭಾರವಹನೇ ಯವಸಾವಹಾರೇ
ಕಾರ್ಯೇ ಭವಂತಿ ನಿಪುಣಾ ಧನದಾರಹೀನಾಃ ।
ಜಾನೀಮಹೇಽಲ್ಪಮತಿಭಿರ್ಭವದಂಘ್ರಿಸೇವಾ
ಪೂರ್ವೇ ಭವೇ ಜನನಿ ತೈರ್ನ ಕೃತಾ ಕದಾಪಿ ॥೪೨॥

॥ ವ್ಯಾಸ ಉವಾಚ ॥

ಏವಂ ಸ್ತುತಾ ಸುರೈಃ ಸರ್ವೈರಂಬಿಕಾ ಕರುಣಾನ್ವಿತಾ ।
ಪ್ರಾದುರ್ಬಭೂವ ತರಸಾ ರೂಪಯೌವನಸಂಯುತಾ ॥೪೩॥

---

ಮನೆ, ಮಕ್ಕಳು, ಹೆಂಡಿತಿ, ಇವರಲ್ಲಿರುವ ಈಷಣಾತ್ರಯಗಳನ್ನೂ ಬಿಟ್ಟಿರುವ ಜ್ಞಾನಿಗಳಾದ ಮುನಿಗಳೂ ನಿನ್ನ ಅನುಗ್ರಹರೂಪವಾದ ದಯೆಯನ್ನೂ ಕ್ಷಮೆಯನ್ನೂ ಅವಲಂಬಿಸಿಕೊಂಡು ಕೃತಾರ್ಥರಾಗಿ ಮುಕ್ತರಾಗುತ್ತಾರೆ! ॥೪೦॥

ಓ ದೇವಿಯೇ, ಯಾವ ಜನಗಳು ನಿನ್ನ ಪಾದಸೇವೆಯನ್ನು ಮಾಡುವುದಿಲ್ಲವೋ ಅಂಥವರು ಸಂಸಾರವೆಂಬ ಆಳವಾದ ಭಾವಿಯಲ್ಲಿ ಬಿದ್ದವರಲ್ಲದೆ, ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಪತಿತ, ಎಂದರೆ ಧರ್ಮಮಾರ್ಗದಿಂದ ತಪ್ಪಿದವನು, ಎಂಬ ಹೆಸರನ್ನು ಹೊಂದುವರು! ಮತ್ತು ಅವರು ಗುಲ್ಮರೋಗ, ಕುಷ್ಠರೋಗ, ಶಿರೋರೋಗ ಮುಂತಾದ ರೋಗಗಳಿಂದ ಕೂಡಿದವರಾಗುತ್ತಾರೆ. ಅಲ್ಲದೆ ಬಡತನದಿಂದ ದೀನರಾಗಿರುವಿಕೆಯಿಂದಲೂ ಕೂಡಿದವರಾಗಿ ಸುಖಸಂಪತ್ತುಗಳಿಲ್ಲದವರಾಗಿರುತ್ತಾರೆ!॥೪೧॥

ಓ ತಾಯಿಯೇ, ಯಾವ ಜನಗಳು ಕಟ್ಟಿಗೆಯ ಹೊರೆಯನ್ನು ಹೊರುವವರೂ, ದುಡ್ಡು ಹೆಂಡಿತಿ ಇವರಿಲ್ಲದೆ ಹುಲ್ಲು ಹೊರೆಯನ್ನು ಹೊರುವುದರಲ್ಲಿ ನಿಪುಣರೂ ಆಗಿರುವರೋ, ಅವರೆಲ್ಲರೂ ಹಿಂದಿನ ಜನ್ಮದಲ್ಲಿ ದಡ್ಡತನದಿಂದ ನಿನ್ನ ಪಾದಸೇವೆಯನ್ನು ಯಾವಾಗಲೂ ಮಾಡಿಲ್ಲವೆಂದು ನಾವು ತಿಳಿಯುತ್ತೇವೆ. ॥೪೨॥

ವ್ಯಾಸಋಷಿಯು ಹೇಳಿದನು—ದೇವತೆಗಳೆಲ್ಲರೂ ಹೀಗೆ ಸ್ತೋತ್ರವನ್ನು ಮಾಡಲು ಜಗನ್ಮಾತೆಯು ದಯೆಯಿಂದ ಕೂಡಿದವಳಾಗಿ ಉತ್ತಮವಾದ ಸೌಂದ

ದಿವ್ಯಾಂಬರಧರಾ ದೇವೀ ದಿವ್ಯಭೂಷಣಭೂಷಿತಾ ।
ದಿವ್ಯಮಾಲ್ಯಸಮಾಯುಕ್ತಾ ದಿವ್ಯಚಂದನಚರ್ಚಿತಾ ॥೪೪॥

ಜಗನ್ಮೋಹನಲಾವಣ್ಯಾ ಸರ್ವಲಕ್ಷಣಲಕ್ಷಿತಾ ।
ಅದ್ವಿತೀಯಸ್ವರೂಪಾ ಸಾ ದೇವಾನಾಂ ದರ್ಶನಂ ಗತಾ ॥೪೫॥

ಜಾಹ್ನವ್ಯಾಂ ಸ್ನಾತುಕಾಮಾ ಸಾ ನಿರ್ಗತಾ ಗಿರಿಗಹ್ವರಾತ್ ।
ದಿವ್ಯರೂಪಧರಾ ದೇವೀ ವಿಶ್ವಮೋಹನಮೋಹಿನೀ ॥೪೬॥

ದೇವಾನ್ ಸ್ತುತಿಪರಾನಾಹ ಮೇಘಗಂಭೀರಯಾ ಗಿರಾ ।
ಪ್ರೇಮಪೂರ್ವಂ ಸ್ಮಿತಂ ಕೃತ್ವಾ ಕೋಕಿಲಾಮಂಜುವಾದಿನೀ ॥೪೭॥

---

ರ್ಯವೂ ಮತ್ತು ಯೌವನವೂ ಇವುಗಳಿಂದ ಕೂಡಿದವಳಾಗಿ ದೇವತೆಗಳಿಗೆ ಕಾಣಿಸಿಕೊಂಡಳು. ॥೪೩॥

ಆ ದೇವಿಯು ಉತ್ತಮವಾದ ವಸ್ತ್ರವನ್ನು ಧರಿಸಿದವಳಾಗಿಯೂ, ಶ್ರೇಷ್ಠವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವಳಾಗಿಯೂ, ದಿವ್ಯವಾದ ಹೂವಿನ ಹಾರದಿಂದ ಕೂಡಿದವಳಾಗಿಯೂ, ಬಹಳ ಪರಿಮಳಯುಕ್ತವಾದ ಗಂಧದಿಂದ ಲೇಪಿಸಲ್ಪಟ್ಟವಳಾಗಿಯೂ, ಇರುತ್ತಾ, ಪ್ರಪಂಚವನ್ನೆಲ್ಲವನ್ನೂ ಬೆರಗುಮಾಡುವಷ್ಟು ಸೌಂದರ್ಯದಿಂದ ಕೂಡಿಕೊಂಡು, ಸಮಸ್ತ ವಿಧವಾದ ಶುಭಲಕ್ಷಣಗಳಿಂದ ತುಂಬಿದ, ಸೌಂದರ್ಯದಲ್ಲಿ ತನಗೆ ಸಮಾಭ್ಯಧಿಕರಹಿತವಾದ, ಉತ್ತಮೋತ್ತಮವಾದ ಆಕಾರವನ್ನು ಧರಿಸಿ ದೇವತೆಗಳಿಗೆ ಕಾಣಿಸಿಕೊಂಡಳು. ॥೪೪-೪೫॥

ಪ್ರಪಂಚವೆಲ್ಲವನ್ನೂ ಮೋಹಗೊಳಿಸುವ ವ್ಯಕ್ತಿಯನ್ನೂ ಕೂಡ ಮೋಹಗೊಳ್ಳುವಂತೆ ಮಾಡುತ್ತಿರುವ, ಉತ್ತಮವಾದ ಆಕಾರವನ್ನು ಧರಿಸಿರುವ ದೇವಿಯು, ಹಿಮವಂತನ ಗುಹೆಯಿಂದ ಗಂಗಾನದಿಯಲ್ಲಿ ಸ್ನಾನ ಮಾಡಲಿಚ್ಛೆಯುಳ್ಳವಳಾಗಿ ಹೊರಟು, ತನ್ನನ್ನು ಹೊಗಳುತ್ತಿರುವ ದೇವತೆಗಳನ್ನು ನೋಡಿ ಪ್ರೀತಿಪೂರ್ವಕವಾಗಿ, ನಗುತ್ತಾ, ಕೋಗಿಲೆಯ ಧ್ವನಿಯಂತೆ ಇಂಪಾಗಿಯೂ, ಮೇಘದ ಧ್ವನಿಯಂತೆ ಗಂಭೀರವಾಗಿಯೂ ಇರುವ ಧ್ವನಿಯಿಂದ ದೇವತೆಗಳ ಸಂಗಡ ಹೀಗೆ ಮಾತನಾಡಿದಳು. ॥೪೬-೪೭॥

|| ದೇವ್ಯುವಾಚ ||

ಭೋ ಭೋಃ ಸುರವರಾಃ ಕ್ವಾತ್ರ ಭವದ್ಭಿಃ ಸ್ತೂಯತೇ ಭೃಶಂ ।
ಕಿಮರ್ಥಂ ಬ್ರೂತ ವಃ ಕಾರ್ಯಂ ಚಿಂತಾವಿಷ್ಟಾಃ ಕುತಃ ಪುನಃ ||೪೮||

|| ವ್ಯಾಸ ಉವಾಚ ||

ತಚ್ಛ್ರುತ್ವಾ ಭಾಷಿತಂ ತಸ್ಯಾ ಮೋಹಿತಾ ರೂಪಸಂಪದಾ ।
ಪ್ರೇಮಪೂರ್ವಂ ಹೃದುತ್ಸಾಹಾಸ್ತಾಮೂಚುಃ ಸುರಸತ್ತಮಾಃ ||೪೯||

|| ದೇವಾ ಉವಾಚ ||

ದೇವಿ ಸ್ತುಮಸ್ತ್ವಾಂ ವಿಶ್ವೇಶಿ ಪ್ರಣತಾಃಸ್ಮ ಕೃಪಾರ್ಣವೇ ।
ಪಾಹಿ ನಃ ಸರ್ವದುಃಖೇಭ್ಯೋ ಸಂವಿಗ್ನಾನ್ದೈತ್ಯತಾಪಿತಾನ್ ||೫೦||

ಪುರಾ ತ್ವಯಾ ಮಹಾದೇವಿ ನಿಹತ್ಯಾಽಸುರಕಂಟಕಂ ।
ಮಹಿಷಂ ನೋ ವರೋ ದತ್ತಃ ಸ್ಮರ್ತವ್ಯಾಽಹಂ ಸದಾಽಽಪದಿ ||೫೧||

---

ದೇವಿಯು ಹೇಳಿದಳು. ಎಲೈ ದೇವಶ್ರೇಷ್ಠರೇ, ನೀವು ಯಾರನ್ನು ಬಹಳ ಮಟ್ಟಿಗೆ ಹೀಗೆ ಸ್ತೋತ್ರ ಮಾಡುತ್ತಿದೀರಿ? ಏತಕ್ಕಾಗಿ ಸ್ತೋತ್ರ ಮಾಡುವುದು? ನೀವು ದುಃಖದಿಂದ ಏಕೆ ಕೂಡಿದವರಾಗಿರುವಿರಿ? ನಿಮಗೆ ಆಗಬೇಕಾಗಿರುವ ಕಾರ್ಯವು ಏನು? ಹೇಳಿರಿ. ||೪೮||

ವ್ಯಾಸಋಷಿಯು ಹೇಳಿದನು—ಆ ದೇವಿಯ ಮಾತನ್ನು ಕೇಳಿ ದೇವಶ್ರೇಷ್ಠರು ಆ ದೇವಿಯ ಸೌಂದರ್ಯದಿಂದ ಮೋಹಿತರಾಗಿ, ಮನಸ್ಸಿನಲ್ಲಿ ಉತ್ಸಾಹ ಉಳ್ಳವರಾಗಿ, ಆ ದೇವಿಯ ಸಂಗಡ ಪ್ರೀತಿಪೂರ್ವಕವಾಗಿ ಹೀಗೆ ಮಾತನಾಡಿದರು. ||೪೯||

ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾದ ಅಪಾರವಾದ ದಯೆಯುಳ್ಳ ಓ ದೇವಿಯೇ! ನಿನ್ನನ್ನು ನಾವು ನಮಸ್ಕರಿಸುತ್ತೇವೆ. ಸ್ತೋತ್ರ ಮಾಡುತ್ತೇವೆ. ರಾಕ್ಷಸರಿಂದ ಸಂಕಟಪಡುತ್ತಿರುವ, ದುಃಖದಿಂದ ನರಳುತ್ತಿರುವ, ನಮ್ಮನ್ನು ಎಲ್ಲ ಬಗೆಯ ದುಃಖಗಳಿಂದಲೂ ರಕ್ಷಿಸು. ||೫೦||

ಓ ಮಹಾದೇವಿಯೆ, ಹಿಂದೆ ಲೋಕಕ್ಕೆ ಕಂಟಕನಾಗಿದ್ದ ಮಹಿಷಾಸುರನನ್ನು ನೀನು ಕೊಂದು ಅನಂತರದಲ್ಲಿ ನಮ್ಮನ್ನು ಕುರಿತು, ನೀವುಗಳು ನನ್ನನ್ನು ನಿಮ್ಮ ಆಪತ್ಕಾಲದಲ್ಲಿ ಸ್ಮರಣೆಮಾಡಿರಿ, ಎಂದು ವರವನ್ನೂ ಅನುಗ್ರಹಿಸಿರುವೆ. ||೫೧||

ಸ್ಮರಣಾದ್ದೈತ್ಯಜಾಂ ಪೀಡಾಂ ನಾಶಯಿಷ್ಯಾಮ್ಯಸಂಶಯಮ್ ।
ತೇನ ತ್ವಂ ಸಂಸ್ಮೃತಾ ದೇವಿ ನೂನಮಸ್ಮಾಭಿರಿತ್ಯಪಿ ॥೫೨॥

ಅದ್ಯ ಶುಂಭನಿಶುಂಭೌ ದ್ವಾವಸುರೌ ಘೋರದರ್ಶನೌ ।
ಉತ್ಪನ್ನೌ ವಿಘ್ನಕರ್ತಾರಾವಹನ್ಯೌ ಪುರುಷೈಃ ಕಿಲ ॥೫೩॥

ರಕ್ತಬೀಜಶ್ಚ ಬಲವಾಂಶ್ಚಂಡಮುಂಡೌ ತಥಾಽಸುರೌ ।
ಏತೈರನ್ಯೈಶ್ಚ ದೇವಾನಾಂ ಹೃತಂ ರಾಜ್ಯಂ ಮಹಾಬಲೈಃ ॥೫೪॥

ಗತಿರನ್ಯಾ ನ ಚಾಸ್ಮಾಕಂ ತ್ವಮೇವಾಸಿ ಮಹಾಬಲೇ ।
ಕುರು ಕಾರ್ಯಂ ಸುರಾಣಾಂ ವೈ ದುಃಖಿತಾನಾಂ ಸುಮಧ್ಯಮೇ ॥೫೫॥

---

ಹಾಗೆ ಸ್ಮರಿಸಿದ ಮಾತ್ರದಿಂದಲೇ ದೈತ್ಯರಿಂದ ಉಂಟಾಗಿರುವ, ಉಂಟಾಗ ಬಹುದಾದ ತೊಂದರೆಯನ್ನು ಖಂಡಿತವಾಗಿಯೂ ನಾನು ನಾಶಮಾಡುವೆನು, ಎಂದು ನೀನು ನಮಗೆ ವರವನ್ನು ಕೊಟ್ಟಿರುತ್ತೀಯಾದುದರಿಂದ ಓ ದೇವಿಯೇ, ಈಗ ನಾವು ನಿನ್ನನ್ನು ಸ್ಮರಿಸುತ್ತಿರುತ್ತೇವೆ. ಏಕೆಂದರೆ

ಈಗ ಶುಂಭ-ನಿಶುಂಭರೆಂಬ ಇಬ್ಬರು ಭಯಂಕರವಾದ ಆಕಾರವುಳ್ಳವರಾಗಿ ರುವ ಅಣ್ಣತಮ್ಮಂದಿರು ನಮಗೆ ಎಲ್ಲ ವಿಷಯಗಳಲ್ಲೂ ವಿಘ್ನವನ್ನುಂಟುಮಾಡುವವ ರಾಗಿ ಹುಟ್ಟಿರುವರು. ಇವರು ಗಂಡಸರಿಂದ ಮರಣವನ್ನು ಹೊಂದಿಸಲು ಅಸಾಧ್ಯ ರಾಗಿರುತ್ತಾರೆ. ॥೫೩॥

ರಕ್ತಬೀಜನೆಂಬ ಇನ್ನೊಬ್ಬ ರಾಕ್ಷಸನೂ ಬಲವುಳ್ಳವನು. ಹಾಗೆಯೇ ಚಂಡ ಮುಂಡರೆಂಬ ಇಬ್ಬರು ರಾಕ್ಷಸರೂ ತುಂಬಾ ಶಕ್ತಿಯುಳ್ಳವರು. ಬಲಿಷ್ಠರಾದ ಇವ ರಿಂದಲೂ ಮತ್ತು ಇವರ ಸಹಾಯಕರಾದ ಇತರ ರಾಕ್ಷಸರಿಂದಲೂ ಸಹ ದೇವತೆಗಳ ರಾಜ್ಯವು ಅಪಹರಿಸಲ್ಪಟ್ಟಿರುತ್ತದೆ. ॥೫೪॥

ಮಹಾ ಬಲಿಷ್ಠಳಾದ ದೇವಿಯೇ, ನಮಗೆ ನೀನೇ ದಿಕ್ಕಾಗಿರುತ್ತೀಯೆ. ನಿನ್ನನ್ನು ಹೊರತು ಬೇರೆ ಗತಿಯು ಇಲ್ಲವು. ರಮ್ಯವಾದ ಮಧ್ಯಭಾಗವುಳ್ಳ ಓ ದೇವಿಯೇ, ದುಃಖವುಳ್ಳವರಾಗಿರುವ ದೇವತೆಗಳಾದ ನಮ್ಮ ರಕ್ಷಣ ಕಾರ್ಯವನ್ನು ನೆರವೇರಿಸು. ॥೫೫॥

ದೇವಾಸ್ತ್ವದಂಘ್ರಿಭಜನೇ ನಿರತಾಃ ಸದೈವ
ತೇ ದಾನವೈರತಿಬಲೈರ್ನಿಪದಂ ಸುನೀತಾಃ ।
ತಾನ್ ದೇವಿ ದುಃಖರಹಿತಾನ್ ಕುರು ಭಕ್ತಿಯುಕ್ತಾನ್ ।
ಮಾತಸ್ತ್ವಮೇವ ಶರಣಂ ಭವದುಃಖಿತಾನಾಂ ॥೫೬॥

ಸಕಲಭುವನರಕ್ಷಾ ದೇವಿ ಕಾರ್ಯಾ ತ್ವಯಾಽದ್ಯ
ಸ್ವಕೃತಮಿತಿ ವಿದಿತ್ವಾ ವಿಶ್ವಮೇತದ್ಯುಗಾದೌ ।
ಜನನಿ ಜಗತಿ ಪೀಡಾಂ ದಾನವಾ ದರ್ಪಯುಕ್ತಾಃ ।
ಸ್ವಬಲಮದಸಮೇತಾಸ್ತೇ ಪ್ರಕುರ್ವಂತಿ ಮಾತಃ ॥೫೭॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ದ್ವಾವಿಂಶೋಽಧ್ಯಾಯಃ

---

ಓ ತಾಯಿಯೇ, ದೇವತೆಗಳು ನಿನ್ನ ಪಾದಕಮಲದ ಸೇವೆಯನ್ನು ಮಾಡುವುದರಲ್ಲಿ ಯಾವಾಗಲೂ ಆಸಕ್ತರಾಗಿರುವರು. ಈಗ ಅವರು ಬಹಳ ಬಲಿಷ್ಠರಾದ ರಾಕ್ಷಸರಿಂದ ತೊಂದರೆಗೆ ಸಿಕ್ಕಿರುವರು. ನೀನು ಯಾವಾಗಲೂ ಸಂಸಾರದಲ್ಲಿ ದುಃಖವುಳ್ಳವರಾಗಿರುವವರಿಗೆ ತಾಯಿಯಂತೆ ರಕ್ಷಕಳಾಗಿರುತ್ತೀಯಾದುದರಿಂದ ನಮ್ಮ ದುಃಖವನ್ನು ಪರಿಹರಿಸಿ ನಾವು ನಿನ್ನಲ್ಲಿ ಭಕ್ತಿಯುಳ್ಳವರಾಗಿ ಇರುವಂತೆ ಮಾಡು. ಏಕೆಂದರೆ ದುಃಖಿಗಳಿಗೆ ನೀನೊಬ್ಬಳೇ ರಕ್ಷಕಳು. ॥೫೬॥

ಓ ದೇವಿಯೇ, ಹೇ ಮಾತೆಯೇ, ಆ ರಾಕ್ಷಸರು ಬಾಹುಬಲ, ಸೇನಾಬಲಗಳಿಂದ ಉಂಟಾದ ದುರಹಂಕಾರದ ಕೊಬ್ಬಿನಿಂದ ಕೂಡಿದವರಾಗಿ ಲೋಕದಲ್ಲಿ ಎಲ್ಲರಿಗೂ ಬಹಳ ಮಟ್ಟಿನ ತೊಂದರೆಯನ್ನೇ ಉಂಟುಮಾಡುತ್ತಿರುವರು. ಆದುದರಿಂದ ನೀನು ಉದಾಸೀನಳಾಗಿರದೆ ಈ ಪ್ರಪಂಚವನ್ನು ಸೃಷ್ಟಿಯ ಪ್ರಾರಂಭದಲ್ಲಿ ನೀನೇ ನಿರ್ಮಿಸಿದ್ದೆಂದು ತಿಳಿದು ಪ್ರೀತಿಯಿಂದ ಸಮಸ್ತವಾದ ಈ ಲೋಕಗಳನ್ನೂ ರಕ್ಷಿಸುವ ಕಾರ್ಯವನ್ನು ಈಗ ನೀನು ನೆರವೇರಿಸಬೇಕು. ॥೫೭॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

## || ತ್ರಯೋವಿಂಶೋಽಧ್ಯಾಯಃ ||

### ಇಪ್ಪತ್ತುಮೂರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಏವಂ ಸ್ತುತಾ ತದಾ ದೇವೀ ದೇವತೈಃ ಶತ್ರುತಾಪಿತೈಃ ।**
**ಸ್ವಶರೀರಾತ್ಪರಂ ರೂಪಂ ಪ್ರಾದುರ್ಭೂತಂ ಚಕಾರ ಹ ॥೧॥**

**ಪಾರ್ವತ್ಯಾಸ್ತು ಶರೀರಾದ್ವೈ ನಿಃಸೃತಾ ಚಾಂಬಿಕಾ ಯದಾ ।**
**ಕೌಶಿಕೀತಿ ಸಮಸ್ತೇಷು ತತೋ ಲೋಕೇಷು ಪಠ್ಯತೇ ॥೨॥**

---

ವ್ಯಾಸಋಷಿಯು ಹೇಳಿದನು—ಆಗ ದೇವಿಯು ಶತ್ರುಗಳಿಂದ ಸಂಕಟಪಟ್ಟಿದ್ದ ದೇವತೆಗಳಿಂದ ಹೀಗೆ ಸ್ತೋತ್ರ ಮಾಡಲ್ಪಟ್ಟವಳಾಗಿ, ರಾಕ್ಷಸರನ್ನು ನಿಗ್ರಹಿಸಿ ದೇವತೆಗಳ ಸಂರಕ್ಷಣೆಯನ್ನು ಮಾಡಲು ತನ್ನ ಶರೀರದಿಂದ ಬೇರೆಯಾಗಿರುವ ಇನ್ನೊಂದು ಶಕ್ತಿರೂಪವನ್ನು ಹೊರಹೊಮ್ಮುವಂತೆ ಮಾಡಿದಳು. ||೧||

ಪಾರ್ವತೀದೇವಿಯು ಶರೀರದಿಂದ ಹೊರಹೊಮ್ಮಿ ಅವತರಿಸಿದ ಆ ದೇವಿಗೆ ಅಂಬಿಕಾ ಎಂಬ ಹೆಸರಿನ ಜೊತೆಗೆ ಕೌಶಿಕೀ ಎಂಬುದಾಗಿ ಇನ್ನೊಂದು ಹೆಸರೂ ಉಂಟಾಗಿ ಎಲ್ಲ ಲೋಕಗಳಲ್ಲಿಯೂ ಪ್ರಸಿದ್ಧಿಯುಂಟಾಯಿತು. ಪಂಚಕೋಶಮಯವಾದ ಪಾರ್ವತಿಯ ಶರೀರ ಕೋಶದಿಂದ ಉತ್ಪನ್ನಳಾದ ಕಾರಣ ಕೌಶಿಕೀ ಎಂದು ಹೆಸರಾಯಿತು. ದುರ್ಗಾಸಪ್ತಶತಿಯಲ್ಲಿರುವ ವೈಕೃತಿರಹಸ್ಯವೆಂಬ ಗ್ರಂಥದಲ್ಲಿ ಗೌರೀ ದೇಹದಿಂದ ಹುಟ್ಟಿದ ಸತ್ವಗುಣಪ್ರಚುರವಾದ ಮೂರ್ತಿಯೇ ಸರಸ್ವತೀ ಎಂಬುದಾಗಿ ಪ್ರಸಿದ್ಧಿಯನ್ನು ಹೊಂದಿ ಶುಂಭಾಸುರನನ್ನು ಸಂಹಾರ ಮಾಡಿದಳು. ಆ ಸರಸ್ವತೀದೇವಿಯು ಎಂಟು ಕೈಗಳಿಂದಲೂ ಬಾಣ, ಮುಸಲ, ಶೂಲ, ಚಕ್ರ

ನಿಃ ಸೃತಾಯಾಂ ತು ತಸ್ಯಾಂ ಸಾ ಪಾರ್ವತೀತನುವ್ಯತ್ಯಯಾತ್ ।
ಕೃಷ್ಣರೂಪಾಽಥ ಸಂಜಾತಾ ಕಾಲಿಕಾ ಸಾ ಪ್ರಕೀರ್ತಿತಾ ॥೩॥

ಮಷೀವರ್ಣಾ ಮಹಾಘೋರಾ ದೈತ್ಯಾನಾಂ ಭಯವರ್ಧಿನೀ ।
ಕಾಲರಾತ್ರೀತಿ ಸಾ ಪ್ರೋಕ್ತಾ ಸರ್ವಕಾಮಫಲಪ್ರದಾ ॥೪॥

ಅಂಬಿಕಾಯಾಃ ಪರಂ ರೂಪಂ ವಿರರಾಜ ಮನೋಹರಂ ।
ಸರ್ವಭೂಷಣಸಂಯುಕ್ತಂ ಲಾವಣ್ಯಗುಣಸಂಯುತಂ ॥೫॥

ತತೋಽಮ್ಬಿಕಾ ತದಾ ದೇವಾನಿತ್ಯುವಾಚ ಹ ಸಸ್ಮಿತಾ ।
ತಿಷ್ಠಂತು ನಿರ್ಭಯಾ ಯೂಯಂ ಹರಿಷ್ಯಾಮಿ ರಿಪೂನಿಹ ॥೬॥

---

ಶಂಖ, ಘಂಟೆ, ನೇಗಿಲು, ಧನುಸ್ಸು ಎಂಬ ಆಯುಧಗಳನ್ನು ಧರಿಸಿ ಇರುವಳು. ಈ ಮಹಾಸರಸ್ವತೀ ದೇವಿಯನ್ನು ಭಕ್ತಿಯಿಂದ ಪೂಜಿಸಿದವರು ಸರ್ವಜ್ಞರಾಗುವರು ಎಂಬದಾಗಿ ಹೇಳಿರುತ್ತದೆ.) ||೨||

ಆ ಕೌಶಿಕಿಯು ಪಾರ್ವತಿಯ ಶರೀರದ ಪರಿಣಾಮದಿಂದ ಹೊರಹೊಮ್ಮಿದ ಅನಂತರದಲ್ಲಿ ಆ ಮೂರ್ತಿಯು ಕಪ್ಪಾದ ಆಕಾರವನ್ನು ಧರಿಸಿದಳು. ಆಗ ಆ ಶರೀರ ದಿಂದ ಆ ಶಕ್ತಿಗೆ ಕಾಳಿಕಾದೇವೀ ಎಂಬ ಹೆಸರಾಯಿತು. ದೇವೀಮಾಹಾತ್ಮ್ಯ ಪುಟ ೭೯-೮೦ ನೋಡಬೇಕು. ||೩||

ಆ ಕಾಳಿಕಾದೇವಿಯ ರೂಪವು ಕಪ್ಪು ಬಣ್ಣವುಳ್ಳದ್ದು ಮತ್ತು ಶತ್ರುಗಳಿಗೆ ಬಹಳ ಭಯವನ್ನುಂಟುಮಾಡತಕ್ಕದ್ದು. ಅಲ್ಲದೆ ರಾಕ್ಷಸರಿಗೆ ಭಯವನ್ನು ಹೆಚ್ಚಿ ಸುತ್ತಿರುವುದು. ಹೀಗಿರುವುದರಿಂದ ಈ ದೇವಿಗೆ ಕಾಳರಾತ್ರಿ ಎಂಬ ಹೆಸರಾ ಯಿತು. ಈ ದೇವತೆಯನ್ನು ಪೂಜಿಸುವವರಿಗೆ ಸಕಲವಾದ ಇಷ್ಟಾರ್ಥಗಳೂ ನೆರ ವೇರುವುವು. ಎಂದು ಪುರಾಣಗಳಲ್ಲೂ ಆಗಮಗಳಲ್ಲೂ ಹೇಳಿದೆ. ||೪||

ಅಂಬಿಕಾದೇವಿಯ ಶ್ರೇಷ್ಠವಾದ ಆಕಾರವಾದರೋ ಸರ್ವವಿಧವಾದ ಅಲಂಕಾರ ಗಳಿಂದಲೂ ಸೌಂದರ್ಯದಿಂದಲೂ ಕೂಡಿದ್ದಾಗಿ ಬಹಳ ಮನೋಹರವಾಗಿ ಪ್ರಕಾಶಿ ಸುತ್ತಿದ್ದಿತು. ||೫||

ಅನಂತರದಲ್ಲಿ ಅಂಬಿಕಾದೇವಿಯು ಮುಗುಳ್ನಗೆಯಿಂದ ಕೂಡಿದವಳಾಗಿ ದೇವ ತೆಗಳನ್ನು ಕುರಿತು, ನೀವು ಯಾವ ಭಯವೂ ಇಲ್ಲದವರಾಗಿ ಇರಿ. ನಿಮ್ಮ ಶತ್ರು ಗಳನ್ನು ಈಗಲೇ ನಾನು ಸಂಹರಿಸುವೆನು ಎಂದು ಅಭಯವನ್ನು ಹೇಳಿದಳು. ||೬||

ಕಾರ್ಯಂ ವಃ ಸರ್ವಥಾ ಕಾರ್ಯಂ ವಿಹರಿಷ್ಯಾಮ್ಯಹಂ ರಣೇ ।
ನಿಶುಂಭಾದೀನ್ವಧಿಷ್ಯಾಮಿ ಯುಷ್ಮಾಕಂ ಸುಖಹೇತವೇ ॥೭॥

ಇತ್ಯುಕ್ತ್ವಾ ಸಾ ತದಾ ದೇವೀ ಸಿಂಹಾರೂಢಾ ಮದೋತ್ಕಟಾ ।
ಕಾಲಿಕಾಂ ಪಾರ್ಶ್ವತಃ ಕೃತ್ವಾ ಜಗಾಮ ನಗರೇ ರಿಪೋಃ ॥೮॥

ಸಾ ಗತ್ವೋಪವನೇ ತಸ್ಥಾವಂಬಿಕಾ ಕಾಲಿಕಾನ್ವಿತಾ ।
ಜಗಾವಥ ಕಲಂ ತತ್ರ ಜಗನ್ಮೋಹನಮೋಹನಂ ॥೯॥

ಶ್ರುತ್ವಾ ತನ್ಮಧುರಂ ಗಾನಂ ಮೋಹಮಾಯುಃ ಖಗಾ ಮೃಗಾಃ ।
ಮುದಂ ಚ ಪರಮಾಂ ಪ್ರಾಪುರಮರಾ ಗಗನೇ ಸ್ಥಿತಾಃ ॥೧೦॥

---

ನಿಮ್ಮ ಕೆಲಸವು ನನಗೆ ಸರ್ವ ಪ್ರಕಾರದಿಂದಲೂ ಮಾಡತಕ್ಕದ್ದಾಗಿರುವುದು. ನಾನು ಯುದ್ಧರಂಗದಲ್ಲಿ ಅನಾಯಾಸವಾಗಿ ಆಟವಾಡುವಂತೆ ನಿಮ್ಮ ಕಾರ್ಯವನ್ನು ನೆರವೇರಿಸುವೆನು. ನಿಮ್ಮ ಸುಖಕ್ಕಾಗಿ ನಿಶುಂಭನೇ ಮೊದಲಾದ ರಾಕ್ಷಸರನ್ನು ಸಂಹಾರ ಮಾಡುವೆನು. ||೭||

ಆಗ ದೇವಿಯು ದೇವತೆಗಳಿಗೆ ಹೀಗೆ ಅಪ್ಪಣೆಯನ್ನು ಮಾಡಿ, ರಾಕ್ಷಸರ ನಿಗ್ರಹಕ್ಕಾಗಿ ಬಹಳಮಟ್ಟಿನ ಮದದಿಂದ ಕೂಡಿದವಳಾಗಿ, ಸಿಂಹವನ್ನು ವಾಹನ ಮಾಡಿಕೊಂಡು ತನ್ನ ಪಾರ್ಶ್ವದಲ್ಲಿ ಕಾಳೀದೇವಿಯನ್ನೂ ಕರೆದುಕೊಂಡು ಶತ್ರುವಿನ ನಗರಕ್ಕೆ ಪ್ರಯಾಣ ಮಾಡಿದಳು. ||೮||

ಆ ದೇವಿಯು ಅಲ್ಲಿಗೆ ಹೋಗಿ ಶತ್ರುವಿನ ನಗರದ ಸಮೀಪದಲ್ಲಿದ್ದ ಉದ್ಯಾನ ವನದಲ್ಲಿ ಕಾಳಿಕಾದೇವಿಯೊಡನೆ ಸ್ಥಿರವಾಗಿ ನಿಂತಳು. ಆ ಮೇಲೆ ಅಲ್ಲಿಯೇ ಪ್ರಪಂಚ ವನ್ನೆಲ್ಲವನ್ನೂ ಮೋಹಗೊಳಿಸುವವನಿಗೂ ಭ್ರಮೆಯು ಉಂಟಾಗುವಮಟ್ಟಿಗೆ ಬಹಳ ಇಂಪಾಗಿರುವ ಸಂಗೀತವನ್ನು ಮನೋಹರವಾಗಿರುವಂತೆ ಹಾಡಿದಳು. ||೯||

ಆ ದೇವಿಯ ಆ ರೀತಿಯಾದ ಸಂಗೀತವನ್ನು ಕೇಳಿ ಹಕ್ಕಿಗಳೂ ಮೃಗಗಳೂ ಕೂಡ ಸುಖಾವೇಶದಿಂದ ಮೈಮೇಲಿನ ಎಚ್ಚರವನ್ನು ಸಹ ಬಿಟ್ಟು ವಿಸ್ಮೃತಿಯನ್ನು ಹೊಂದಿದುವು. ಅಂತರಿಕ್ಷದಲ್ಲಿ ನಿಂತುಕೊಂಡು ಈ ಗಾನವನ್ನು ಕೇಳುತ್ತಿರುವ ದೇವತೆ ಗಳು ಬಹಳಮಟ್ಟಿನ ಸಂತೋಷವನ್ನು ಹೊಂದಿದರು ! ||೧೦||

ತಸ್ಮಿನ್ನವಸರೇ ತತ್ರ ದಾನವೌ ಶುಂಭಸೇವಕೌ ।
ಚಂಡಮುಂಡಾಭಿಧೌ ಘೋರೌ ರಮಮಾಣೌ ಯದೃಚ್ಛಯಾ ॥೧೧॥

ಆಗತೌ ದದೃಶಾತೇ ತು ತಾಂ ತದಾ ದಿವ್ಯರೂಪಿಣೀಂ ।
ಅಂಬಿಕಾಂ ಗಾನಸಂಯುಕ್ತಾಂ ಕಾಲಿಕಾಂ ಪುರತಃ ಸ್ಥಿತಾಂ ॥೧೨॥

ದೃಷ್ಟ್ವಾ ತಾಂ ದಿವ್ಯರೂಪಾಂ ಚ ದಾನವೌ ವಿಸ್ಮಯಾನ್ವಿತೌ ।
ಜಗ್ಮತುಸ್ತರಸಾ ಪಾರ್ಶ್ವಂ ಶುಂಭಸ್ಯ ನೃಪಸತ್ತಮ ॥೧೩॥

ತೌ ಗತ್ವಾ ತಂ ಸಮಾಸೀನಂ ದೈತ್ಯಾನಾಮಧಿಪಂ ಗೃಹೇ ।
ಊಚತುರ್ಮಧುರಾಂ ವಾಣೀಂ ಪ್ರಣಮ್ಯ ಶಿರಸಾ ನೃಪಂ ॥೧೪॥

ರಾಜನ್ ಹಿಮಾಲಯಾತ್ಕಾಮಂ ಕಾಮಿನೀ ಕಾಮಮೋಹಿನೀ ।
ಸಂಪ್ರಾಪ್ತಾ ಸಿಂಹಮಾರೂಢಾ ಸರ್ವಲಕ್ಷಣಸಂಯುತಾ ॥೧೫॥

---

ಹೀಗೆ ದೇವಿಯು ಆ ಉದ್ಯಾನವನದಲ್ಲಿ ಗಾನ ಮಾಡುತ್ತಿದ್ದ ಸಮಯಕ್ಕೆ ಸರಿಯಾಗಿ, ಶುಂಭನ ಸೇವಕರಾಗಿರುವ ಬಹಳ ಭಯಂಕರರಾದ ಚಂಡ-ಮುಂಡ ರೆಂಬ ಇಬ್ಬರು ರಾಕ್ಷಸರು ಆ ಉದ್ಯಾನವನದಲ್ಲಿಯೇ ಆಕಸ್ಮಿಕವಾಗಿ ಬಂದು ವಿಹಾರ ಮಾಡುವವರಾಗಿದ್ದರು. ಅಷ್ಟುಮಟ್ಟಿನ ಉತ್ತಮವಾದ ಸೌಂದರ್ಯದಿಂದ ಕೂಡಿ ರುವ, ಗಾನಮಾಡುವುದರಲ್ಲಿ ಆಸಕ್ತಳಾಗಿ ಇರುವ ದೇವಿಯನ್ನೂ ಆ ದೇವಿಯ ಮುಂದುಗಡೆಯಲ್ಲಿ ಕಾಳಿಕಾದೇವಿಯನ್ನೂ ಸಹ ನೋಡಿದರು. ||೧೧-೧೨||

ಓ ರಾಜೋತ್ತಮನೇ, ದಿವ್ಯ ಸೌಂದರ್ಯವತಿಯಾದ ಆ ದೇವಿಯನ್ನು ನೋಡಿ, ಆ ರಾಕ್ಷಸರಿಬ್ಬರೂ ಆಶ್ಚರ್ಯದಿಂದ ಕೂಡಿದವರಾದರು. ಆ ಸೇವಕ ರಿಬ್ಬರೂ ಬೇಗನೆ ತಮ್ಮ ದೊರೆಯಾದ ಶುಂಭನ ಹತ್ತಿರಕ್ಕೆ ಹೋದರು. ||೧೩||

ಅವರಿಬ್ಬರೂ ತಮ್ಮ ದೊರೆಯಾದ ಮತ್ತು ದೈತ್ಯರೆಲ್ಲರಿಗೂ ರಾಜನಾದ ಶುಂಭನ ಅರಮನೆಗೆ ಹೋದರು. ಅಲ್ಲಿ ಸುಖಾಸನದಲ್ಲಿ ಕೂತುಕೊಂಡಿರುವ ಆ ರಾಜನನ್ನು ನೋಡಿ, ಅವನಿಗೆ ನಮಸ್ಕಾರವನ್ನು ಮಾಡಿ ಮಧುರವಾದ ಮಾತನ್ನು ಹೀಗೆ ಹೇಳಿದರು. ||೧೪||

ಓ ಪ್ರಭುವೇ,—ಆ ಹಿಮಾಲಯ ಪರ್ವತದಿಂದ ಒಬ್ಬ ಸುಂದರಿಯಾದ ಸ್ತ್ರೀಯು ತಾನಾಗಿಯೇ ಬಂದಿರುವಳು. ಈ ರಮಣಿಯು ಕಾಮನಿಗೂ ಮೋಹ

**ನೇದೃಶೀ ದೇವಲೋಕೇಽಸ್ತಿ ನ ಗಂಧರ್ವಪುರೇ ತಥಾ ।**
**ನ ದೃಷ್ಟಾ ನ ಶ್ರುತಾ ಕ್ವಾಪಿ ಪೃಥಿವ್ಯಾಂ ಪ್ರಮದೋತ್ತಮಾ ॥೧೬॥**

**ಗಾನಂ ಚ ತಾದೃಶಂ ರಾಜನ್ ಕರೋತಿ ಜನರಂಜನಂ ।**
**ಮೃಗಾಸ್ತಿಷ್ಠಂತಿ ತತ್ಪಾರ್ಶ್ವೇ ಮಧುರಸ್ವರಮೋಹಿತಾಃ ॥೧೭॥**

**ಜ್ಞಾಯತಾಂ ಕಸ್ಯ ಪುತ್ರೀಯಂ ಕಿಮರ್ಥಮಿಹ ಚಾಗತಾ ।**
**ಗೃಹ್ಯತಾಂ ರಾಜಶಾರ್ದೂಲ ತವ ಯೋಗ್ಯಾಽಸ್ತಿ ಕಾಮಿನೀ ॥೧೮॥**

**ಜ್ಞಾತ್ವಾಽನಯ ಗೃಹೇ ಭಾರ್ಯಾಂ ಕುರು ಕಲ್ಯಾಣಲೋಚನಾಂ ।**
**ನಿಶ್ಚಿತಂ ನಾಸ್ತಿ ಸಂಸಾರೇ ನಾರೀ ತ್ವೇವಂವಿಧಾ ಕಿಲ ॥೧೯॥**

---

ವನ್ನುಂಟುಮಾಡುವಂತಿರುವಳು. ಅಲ್ಲದೆ ಉತ್ತಮ ಸ್ತ್ರೀಯರಿಗೆ ಇರಬೇಕಾದ ಎಲ್ಲ ಶುಭಲಕ್ಷಣಗಳಿಂದ ಕೂಡಿಕೊಂಡು, ಸಿಂಹವನ್ನು ವಾಹನವನ್ನಾಗಿ ಮಾಡಿಕೊಂಡಿರುವಳು. ॥೧೫॥

ಇಂಥಾ ಉತ್ತಮ ಸ್ತ್ರೀಯು ದೇವಲೋಕದಲ್ಲಿಯೂ ಇಲ್ಲವು. ಗಂಧರ್ವರ ಪಟ್ಟಣದಲ್ಲಿಯೂ ಸಹ ಕಂಡುಬಂದಿಲ್ಲವು. ಹೀಗಿರುವಾಗ ಭೂಮಿಯಲ್ಲಿ ಇಷ್ಟು ಉತ್ತಮಳಾದ ಸ್ತ್ರೀಯನ್ನು ಎಲ್ಲಿಯೂ ನೋಡಿಯೂ ಇಲ್ಲವು ಮತ್ತು ಕೇಳಿಯೂ ಇಲ್ಲವು ! ॥೧೬॥

ಓ ದೊರೆಯೇ—ಅಲ್ಲದೆ ಆ ಸ್ತ್ರೀಯು ಹಾಡುತ್ತಿರುವ ಗಾನವು ಜನಗಳೆಲ್ಲರನ್ನೂ ಆನಂದವುಳ್ಳವರನ್ನಾಗಿ ಮಾಡುತ್ತಿರುವುದು. ಅಷ್ಟುಮಾತ್ರವಲ್ಲದೆ ಮೃಗಗಳು ಕೂಡ ಅವಳ ಸಂಗೀತದ ಮಧುರವಾದ ಧ್ವನಿಯಿಂದ ಮೋಹವನ್ನು ಹೊಂದಿ, ಆ ಸ್ತ್ರೀಯ ಪಾರ್ಶ್ವದಲ್ಲಿ ಸುಖಪರವಶವಾಗಿ ಅಲುಗಾಡದೆ ನಿಂತಿರುವವು. ॥೧೭॥

ಓ ರಾಜಶ್ರೇಷ್ಠನೇ, ಈ ಹೆಂಗುಸು ಯಾರ ಮಗಳೆಂಬುದನ್ನು ವಿಚಾರಿಸಬೇಕು. ನಿನ್ನ ಉದ್ಯಾನವನಕ್ಕೆ ಬರಲು ಕಾರಣವೇನೆಂಬುದನ್ನು ತಿಳಿಯಬೇಕು. ಮತ್ತು ಈ ಸ್ತ್ರೀಯು ನಿನಗೆ ಭಾರ್ಯೆಯಾಗಲು ಅರ್ಹಳಾಗಿದ್ದಾಳೆ. ಆದುದರಿಂದ ಇವಳನ್ನು ನೀನು ಸ್ವೀಕರಿಸಬೇಕು. ॥೧೮॥

ಈಗ ನಾನು ಹೇಳಿದ ವಿಷಯಗಳನ್ನು ತಿಳಿದು, ಮಂಗಳಕರವಾದ ಕಣ್ಣುಗಳುಳ್ಳ ಈ ಸ್ತ್ರೀಯನ್ನು ನಿನ್ನ ಅರಮನೆಗೆ ಕರೆತಂದು, ಅವಳನ್ನು ನಿನ್ನ ಪತ್ನಿಯ

ದೇವಾನಾಂ ಸರ್ವರತ್ನಾನಿ ಗೃಹೀತಾನಿ ತ್ವಯಾ ನೃಪ ।
ಕಸ್ಮಾನ್ನೇಮಾಂ ವರಾರೋಹಾಂ ಪ್ರಗೃಹ್ಣಾಸಿ ನೃಪೋತ್ತಮ ॥೨೦॥

ಇಂದ್ರಸ್ಯೈರಾವತಃ ಶ್ರೀಮಾನ್ಪಾರಿಜಾತತರುಸ್ತಥಾ ।
ಗೃಹೀತೋಽಶ್ವಃ ಸಪ್ತಮುಖಸ್ತ್ವಯಾ ನೃಪ ಬಲಾತ್ಕಿಲ ॥೨೧॥

ವಿಮಾನಂ ವೈಧಸಂ ದಿವ್ಯಂ ಮರಾಲಧ್ವಜಸಂಯುತಂ ।
ತ್ವಯಾಽಽತ್ತಂ ರತ್ನಭೂತಂ ತದ್ಬಲೇನ ನೃಪ ಚಾದ್ಭುತಂ ॥೨೨॥

ಕುಬೇರಸ್ಯ ನಿಧಿಃ ಪದ್ಮಸ್ತ್ವಯಾ ರಾಜನ್ ಸಮಾಹೃತಃ ।
ಛತ್ರಂ ಜಲಪತೇಃ ಶುಭ್ರಂ ಗೃಹೀತಂ ತತ್ತ್ವಯಾ ಬಲಾತ್ ॥೨೩॥

---

ನ್ನಾಗಿ ಮಾಡಿಕೋ. ನಿಜವಾಗಿಯೂ ಈ ಪ್ರಕಾರವಾದ ಸೌಂದರ್ಯಲಾವಣ್ಯಗಳಿರುವ ಹೆಂಗುಸು ಈ ಪ್ರಪಂಚದ ಸಂಸಾರದಲ್ಲಿ ಎಲ್ಲಿಯೂ ಇಲ್ಲವು! ||೧೯||

ಓ ರಾಜನೇ, ದೇವತೆಗಳಿಂದ ನೀನು ಎಲ್ಲ ವಿಧವಾದ ಉತ್ಕೃಷ್ಟವಾದ ವಸ್ತುಗಳನ್ನೂ ತೆಗೆದುಕೊಂಡಿರುವೆ! ಆದುದರಿಂದ ಈ ಶ್ರೇಷ್ಠವಾದ ಸ್ತ್ರೀರತ್ನವನ್ನೂ ಏತಕ್ಕೆ ನೀನು ತೆಗೆದುಕೊಳ್ಳದಿರುವೆ ? ||೨೦||

ಓ ಸ್ವಾಮಿಯೇ, ನೀನು ಇಂದ್ರನ ಐರಾವತವೆಂಬ ಲಕ್ಷಣವಾದ ಪಟ್ಟದ ಆನೆಯನ್ನೂ, ಪಾರಿಜಾತವೃಕ್ಷವನ್ನೂ, ಹಾಗೆಯೇ ಏಳು ಮುಖಗಳುಳ್ಳ ಉಚ್ಚೈಶ್ರವಸ್ಸೆಂಬ ಪಟ್ಟದ ಕುದುರೆಯನ್ನೂ ಸಹ ನಿನ್ನ ಬಲದಿಂದ ತೆಗೆದುಕೊಂಡಿಲ್ಲವೆ?||೨೧||

ಓ ಪ್ರಭುವೇ, ಬ್ರಹ್ಮನ ಉತ್ತಮೋತ್ತಮವಾದ ಹಂಸಧ್ವಜದಿಂದ ಕೂಡಿದ ಆಶ್ಚರ್ಯಕರವಾದ ವಿಮಾನವನ್ನೂ ನೀನು ನಿನ್ನ ಶಕ್ತಿಯಿಂದ ತೆಗೆದುಕೊಂಡು ಬಂದು ಇರುತ್ತೀಯೆ! ||೨೨||

ಹಾಗೆಯೇ ಕುಬೇರನ ವಶದಲ್ಲಿದ್ದ ಪದ್ಮ ಎಂಬ ನಿಧಿಯನ್ನೂ ನೀನು ನಿನ್ನ ಪರಾಕ್ರಮದಿಂದ ತಂದಿರುವೆಯಲ್ಲವೇ? ಜಲಗಳಿಗೆ ಅಧಿಪತಿಯಾದ ವರುಣನ ಶುಭ್ರವಾದ ಛತ್ರಿ (ಶ್ವೇತಚ್ಛತ್ರಿ)ಯನ್ನೂ ನೀನು ನಿನ್ನ ಸಾಮರ್ಥ್ಯದಿಂದ ತೆಗೆದುಕೊಂಡು ಬಂದಿರುತ್ತೀಯಲ್ಲವೇ ? ||೨೩||

ಪಾಶಶ್ಚಾಪಿ ನಿಶುಂಭೇನ ಭ್ರಾತ್ರಾ ತವ ನೃಪೋತ್ತಮ ।
ಗೃಹೀತೋಽಸ್ತಿ ಹಠಾತ್ಕಾಮಂ ವರುಣಸ್ಯ ಜಿತಸ್ಯ ಚ ॥೨೪॥

ಅಮ್ಲಾನಪಂಕಜಾಂ ತುಭ್ಯಂ ಮಾಲಾಂ ಜಲನಿಧಿರ್ದದೌ ।
ಭಯಾತ್ತ್ರವ ಮಹಾರಾಜ ರತ್ನಾನಿ ವಿವಿಧಾನಿ ಚ ॥೨೫॥

ಮೃತ್ಯೋಃ ಶಕ್ತಿರ್ಯಮಸ್ಯಾಪಿ ದಂಡಃ ಪರಮದಾರುಣಃ ।
ತ್ವಯಾ ಜಿತ್ವಾ ಹೃತಃ ಕಾಮಂ ಕಿಮನ್ಯದ್ವರ್ಣ್ಯತೇ ನೃಪ ॥೨೬॥

ಕಾಮಧೇನುರ್ಗೃಹೀತಾಽದ್ಯ ವರ್ತತೇ ಸಾಗರೋದ್ಭವಾ ।
ಮೇನಕಾದ್ಯಾ ವಶೇ ರಾಜಂಸ್ತವ ತಿಷ್ಠಂತಿ ಚಾಪ್ಸರಾಃ ॥೨೭॥

ಏವಂ ಸರ್ವಾಣಿ ರತ್ನಾನಿ ತ್ವಯಾಽಽತ್ತಾನಿ ಬಲಾದಪಿ ।
ಕಸ್ಮಾನ್ನ ಗೃಹ್ಯತೇ ಕಾಂತಾ ರತ್ನಮೇಷಾ ವರಾಂಗನಾ ॥೨೮॥

---

ಓ ರಾಜಶ್ರೇಷ್ಠನೇ, ನಿನ್ನ ಸಹೋದರನಾದ ನಿಶುಂಭನೂ ಆ ವರುಣನನ್ನು ಗೆದ್ದು ಅವನ ಹತ್ತಿರದಲ್ಲಿದ್ದ ಪಾಶವೆಂಬ ಆಯುಧವನ್ನೂ ಬಲಾತ್ಕಾರದಿಂದ ತೆಗೆದು ಕೊಂಡು ಬಂದಿರುವನಲ್ಲವೆ ? ೨೪॥

ಓ ಮಹಾರಾಜನೇ, ನಿನ್ನ ಭಯದಿಂದ ಸಮುದ್ರರಾಜನು ಯಾವಾಗಲೂ ಬಾಡದೆ ಇರುವ ಕಮಲಗಳಿಂದ ರಚಿತವಾದ ಮಾಲಿಕೆಯನ್ನೂ ಅನೇಕವಿಧವಾದ ರತ್ನಗಳನ್ನೂ ಕೂಡ ನಿನಗೆ ಕೊಟ್ಟಿರುವನು. ॥೨೫॥

ಓ ದೊರೆಯೇ, ಎಲ್ಲರಿಗೂ ಉಂಟಾಗುವ ಜೀವನ, ಮರಣಗಳಿಗೆ ನಿಯಾಮಕ ನಾಗಿರುವ ಯಮನ ಬಹಳ ಭಯಂಕರವಾದ ದಣ್ಡವೆಂಬ ಆಯುಧವನ್ನೂ ಕೂಡ ನೀನು ಆ ಯಮನನ್ನು ಗೆದ್ದು ತರಲಿಲ್ಲವೇ? ಹೀಗೆ ಇರುವಾಗ ನಿನ್ನ ಪರಾಕ್ರಮ ಗಳಲ್ಲಿ ಇನ್ನು ಯಾವುದನ್ನು ತಾನೇ ವರ್ಣಿಸಬೇಕಾಗಿರುವುದು ? ॥೨೬॥

ಓ ಪ್ರಭುವೇ, ಕ್ಷೀರಸಮುದ್ರದಲ್ಲಿ ಹುಟ್ಟಿದ ಕಾಮಧೇನುವು ನಿನ್ನಿಂದ ಗೆದ್ದು ತರಲ್ಪಟ್ಟದ್ದಾಗಿ ಈಗಲೂ ನಿನ್ನ ಅಧೀನದಲ್ಲಿ ಇರುತ್ತದೆ. ಮತ್ತು ಈಗ ಮೇನಕಾ ಮೊದಲಾದ ಅಪ್ಸರ ಸ್ತ್ರೀಯರೂ ನಿನ್ನ ಅಧೀನದಲ್ಲಿರುತ್ತಾರೆ ! ॥೨೭॥

ಹೀಗೆಯೇ ಬೇರೆ ಬೇರೆ ಕಡೆಗಳಲ್ಲಿದ್ದ ಉತ್ತಮವಾದ ವಸ್ತುಗಳೆಲ್ಲವನ್ನೂ ನಿನ್ನ ಸಾಮರ್ಥ್ಯದಿಂದ ಜಯಿಸಿ ತಂದಿರುವೆ ! ಹೀಗಿರುವಲ್ಲಿ ಸ್ತ್ರೀಯರಲ್ಲಿ ರತ್ನವಾ

ಸರ್ವಾಣಿ ತೇ ಗೃಹಸ್ಥಾನಿ ರತ್ನಾನಿ ವಿಶದಾನ್ಯಥ ।
ಅನಯಾ ಸಂಭವಿಷ್ಯಂತಿ ರತ್ನಭೂತಾನಿ ಭೂಪತೇ ॥೨೯॥

ತ್ರಿಷು ಲೋಕೇಷು ದೈತ್ಯೇಂದ್ರ ನೇದೃಶೀ ವರ್ತತೇ ಪ್ರಿಯಾ ।
ತಸ್ಮಾತ್ತ್ವಾಮಾನಯಾಶು ತ್ವಂ ಕುರು ಭಾರ್ಯಾಂ ಮನೋಹರಾಂ ॥೩೦॥

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ತಯೋರ್ವಾಕ್ಯಂ ಮಧುರಂ ಮಧುರಾಕ್ಷರಂ ।
ಪ್ರಸನ್ನವದನಃ ಪ್ರಾಹ ಸುಗ್ರೀವಂ ಸನ್ನಿಧೌ ಸ್ಥಿತಂ ॥೩೧॥

---

ಗಿರುವ ಎಂದರೆ ಶ್ರೇಷ್ಠಳಾದ ಈ ಹೆಂಗುಸನ್ನು ಮಾತ್ರ ನೀನು ಏತಕ್ಕಾಗಿ ಇನ್ನೂ ತಂದಿರುವುದಿಲ್ಲ ? ॥೨೮॥

ಓ ಭೂಪನೇ! ಪ್ರಪಂಚದಲ್ಲಿ ಶ್ರೇಷ್ಠವಾದ ಮತ್ತು ನಿರ್ಮಲವಾದ ರತ್ನಗಳೆಲ್ಲವೂ, ಉತ್ತಮ ವಸ್ತುಗಳೆಲ್ಲವೂ ನಿನ್ನ ಮನೆಯಲ್ಲಿ ನಿನ್ನಿಂದ ಸಂಪಾದಿಸಿ ತರಲ್ಪಟ್ಟವುಗಳಾಗಿ ಇರುತ್ತವೆ. ಇವುಗಳೆಲ್ಲವೂ ಈ ಸ್ತ್ರೀಯಿಂದ ರತ್ನಗಳಾಗುತ್ತವೆ. ಎಂದರೆ ನೀನು ತಂದಿರುವ ಉತ್ತಮವಾದ ಪದಾರ್ಥಗಳಿಗಿಂತ ಅತ್ಯುತ್ತಮವಾದ ಈ ಸ್ತ್ರೀಯು ಈಗ ಸಿಕ್ಕಿರುವುದರಿಂದ ಈ ಸ್ತ್ರೀಯನ್ನು ನೀನು ಸಂಗ್ರಹ ಮಾಡಿದಲ್ಲಿ ನೀನು ಸಂಪಾದಿಸಿರುವ ಉತ್ತಮವಾದ ವಸ್ತುಗಳೆಲ್ಲಕ್ಕೂ ಹೆಚ್ಚಾದ ಕಾಂತಿಯುಂಟಾದಂತಾಗಿ ಆಗ ಅವುಗಳೂ ನಿಜವಾಗಿ ರತ್ನಗಳೆನಿಸಿಕೊಳ್ಳುವುವು ! ॥೨೯॥

ಓ ರಾಕ್ಷಸಾಧಿಪತಿಯಾದ ಶುಂಭನೇ, ಮೂರು ಲೋಕಗಳಲ್ಲಿಯೂ ಈ ರೀತಿಯಾದ ಇಷ್ಟುಮಟ್ಟಿನ ಪ್ರೀತಿಯನ್ನುಂಟುಮಾಡುತ್ತಿರುವ ಹೆಂಗುಸು ಇಲ್ಲವು! ಆದುದರಿಂದ ನೀನು ಮನೋಹರಳಾದ ಈ ಸ್ತ್ರೀಯನ್ನು ಬೇಗನೆ ಕರೆದುಕೊಂಡು ಬಂದು, ಅವಳನ್ನು ನಿನ್ನ ಹೆಂಡಿತಿಯನ್ನಾಗಿ ಮಾಡಿಕೋ. ॥೩೦॥

ವ್ಯಾಸಋಷಿಯು ಹೇಳಿದನು— ಚಂಡಮುಂಡರೆಂಬಿಬ್ಬರೂ ಹೀಗೆ ಹೇಳಿದ ಮೃದುವಾದ ಅಕ್ಷರಗಳಿಂದ ಕೂಡಿದ, ಮಧುರವಾದ ಈ ಮಾತನ್ನು ಕೇಳಿ, ಶುಂಭನು ಸಂತೋಷದಿಂದ ಕೂಡಿದ ಮುಖವುಳ್ಳವನಾಗಿ, ತನ್ನ ಹತ್ತಿರದಲ್ಲಿದ್ದ ಸುಗ್ರೀವನೆಂಬವನ ಸಂಗಡ ಹೀಗೆ ಹೇಳಿದನು. ॥೩೧॥

ಗಚ್ಛ ಸುಗ್ರೀವ ದೂತ ತ್ವಂ ಕುರು ಕಾರ್ಯಂ ವಿಚಕ್ಷಣ ।
ವಕ್ತವ್ಯಂ ಚ ತಥಾ ತತ್ರ ಯಥಾಽಭ್ಯೇತಿ ಕೃಶೋದರೀ ॥೩೨॥

ಉಪಾಯೌ ದ್ವೌ ಪ್ರಯೋಕ್ತವ್ಯೌ ಕಾಂತಾಸು ಸುವಿಚಕ್ಷಣೈಃ ।
ಸಾಮದಾನಾವಿತಿ ಪ್ರಾಹುಃ ಶೃಂಗಾರರಸಕೋವಿದಾಃ ॥೩೩॥

ಭೇದೇ ಪ್ರಯುಜ್ಯಮಾನೇಽಪಿ ರಸಾಭಾಸಸ್ತು ಜಾಯತೇ ।
ನಿಗ್ರಹೇ ರಸಭಂಗಃ ಸ್ಯಾತ್ತಸ್ಮಾತ್ತೌ ದೂಷಿತೌ ಬುಧೈಃ ॥೩೪॥

ಸಾಮದಾನಮುಖೈರ್ವಾಕ್ಯೈಃ ಶ್ಲಕ್ಷ್ಣೈರ್ನರ್ಮಯುತೈಸ್ತಥಾ ।
ಕಾ ನ ಯಾತಿ ವಶೇ ದೂತ ಕಾಮಿನೀ ಕಾಮಪೀಡಿತಾ ॥೩೫॥

---

ಎಲೈ ಬುದ್ಧಿವಂತನಾದ ಸುಗ್ರೀವನೇ, ನೀನು ದೂತನಾಗಿ ಹೋಗು. ನೀನು ಆ ಹೆಂಗಸಿನ ಸಮೀಪಕ್ಕೆ ಹೋಗಿ ಕೃಶವಾದ ನಡುವುಳ್ಳ ಆ ಹೆಂಗಸು ನೀನು ಹೇಳುವ ಮಾತನ್ನು ಕೇಳಿ, ಹೇಗಾದರೆ ಇಲ್ಲಿಗೆ ಬರುವಳೋ ಹಾಗೆ ಹೇಳಬೇಕು. ॥೩೨॥

ಲೋಕದಲ್ಲಿ ಕಾರ್ಯನಿರ್ವಾಹದಲ್ಲಿ ಚತುರರಾದವರು ಮತ್ತು ಶೃಂಗಾರ ರಸದ ತಿಳಿವಳಿಕೆಯುಳ್ಳವರು ಸ್ತ್ರೀಯರ ವಿಷಯದಲ್ಲಿ ಸಾಮ, ದಾನವೆಂಬ ಎರಡು ಉಪಾಯಗಳನ್ನು ಮಾತ್ರ ಪ್ರಯೋಗಿಸುವುದೆಂದು ಹೇಳುವರು. (ಸಾಮವೆಂದರೆ ಒಳ್ಳೆಯ ಮಾತನಾಡುವುದು. ದಾನವೆಂದರೆ ಹಣ, ಆಭರಣ ಮುಂತಾದುವನ್ನು ಕೊಡುವುದು) ಭೇದ, ದಂಡಗಳನ್ನು ಉಪಯೋಗಿಸಬಾರದು. ॥೩೩॥

ಭೇದೋಪಾಯವನ್ನು ಉಪಯೋಗಿಸಿದರೆ ಸ್ತ್ರೀಯರಿಗೆ ಅದು ಮೋಸವೆಂತ ತಿಳಿದು ನಿಜವಾದ ಪ್ರೀತಿಯು ಉಂಟಾಗದೆ ರಸಾಭಾಸವಾಗುವುದು. ಬಲವಂತವಾಗಿ ನಿಗ್ರಹಿಸಿ ಅಧೀನದಲ್ಲಿಟ್ಟುಕೊಳ್ಳುವುದಕ್ಕೆ ಪ್ರಯತ್ನಪಟ್ಟರೆ ಆಗಲೂ ಪ್ರೀತಿಯೇ ಹುಟ್ಟದೆ ರಸಭಂಗವಾಗುವುದು. ಆದುದರಿಂದ ಭೇದದಂಡೋಪಾಯಗಳನ್ನು ತಿಳಿವಳಿಕೆಯುಳ್ಳವರು ಸ್ತ್ರೀಯರ ವಿಷಯದಲ್ಲಿ ಉಪಯೋಗಿಸಬಾರದೆಂದು ಹೇಳುವರು. ॥೩೪॥

ಸಾಮ, ದಾನಗಳೆಂಬ ಉಪಾಯಗಳೇ ಪ್ರಧಾನವಾಗಿರುವ, ಮೃದುವಾಗಿಯೂ, ಶೃಂಗಾರದ ಹಾವಭಾವಗಳಿಂದ ಕೂಡಿಯೂ ಇರುವ ಮಾತುಗಳನ್ನು ದೂತನಾಗಿರುವ ನೀನುಹೇಳಿದರೆ ಕಾಮಪೀಡಿತಳಾದ ಯಾವಸ್ತ್ರೀಯುತಾನೇ ವಶಳಾಗುವುದಿಲ್ಲ ?॥೩೫॥

॥ ವ್ಯಾಸ ಉವಾಚ ॥

**ಸುಗ್ರೀವಸ್ತು ವಚಃ ಶ್ರುತ್ವಾ ಶುಂಭೋಕ್ತಂ ಸುಪ್ರಿಯಂ ಪಟು ।**
**ಜಗಾಮ ತರಸಾ ತತ್ರ ಯತ್ರಾಽಽಸ್ತೇ ಜಗದಂಬಿಕಾ ॥೩೬॥**

**ಸೋಽಪಶ್ಯತ್ಸುಮುಖೀಂ ಕಾಂತಾಂ ಸಿಂಹಸ್ಯೋಪರಿ ಸಂಸ್ಥಿತಾಂ ।**
**ಪ್ರಣಮ್ಯ ಮಧುರಂ ವಾಕ್ಯಮುವಾಚ ಜಗದಂಬಿಕಾಂ ॥೩೭॥**

॥ ದೂತ ಉವಾಚ ॥

**ವರೋರು ತ್ರಿದಶಾರಾತಿಃ ಶುಂಭಃ ಸರ್ವಾಂಗಸುಂದರಃ ।**
**ತ್ರೈಲೋಕ್ಯಾಧಿಪತಿಃ ಶೂರಃ ಸರ್ವಜಿದ್ರಾಜತೇ ನೃಪಃ ॥೩೮॥**

**ತೇನಾಹಂ ಪ್ರೇಷಿತಃ ಕಾಮಂ ತ್ವತ್ಸಕಾಶಂ ಮಹಾತ್ಮನಾ ।**
**ತ್ವದ್ರೂಪಶ್ರವಣಾಸಕ್ತಚಿತ್ತೇನಾತಿವಿದೂಯತಾ ॥೩೯॥**

---

ವ್ಯಾಸಋಷಿಯು ಹೇಳಿದನು—ಶುಂಭನು ಹೇಳಿದ ತುಂಬ ಹಿತಕರವಾದ ಕಾರ್ಯಸಾಧನೆಗೆ ಸಮರ್ಥವಾದ ಆ ಮಾತನ್ನು ಕೇಳಿ ಸುಗ್ರೀವನು ಹಾಗೆ ದೂತನಾಗಿ ಜಗನ್ಮಾತೆಯಾದ ಅಂಬಿಕಾದೇವಿಯು ಇದ್ದೆಡೆಗೆ ಬೇಗನೆ ಬಂದನು. ॥೩೬॥

ಆ ದೂತನಾದ ಸುಗ್ರೀವನು ಸುಂದರವಾದ ಮುಖವುಳ್ಳವಳಾಗಿಯೂ, ಮನೋಹರಳಾಗಿಯೂ, ಸಿಂಹದಮೇಲೆ ಮಂಡಿಸಿರುವವಳಾಗಿಯೂ ಇರುವ ಜಗನ್ಮಾತೆಯಾದ ಅಂಬಿಕಾದೇವಿಯನ್ನು ಕಂಡು ನಮಸ್ಕಾರಮಾಡಿ, ಮೃದುವಾದ ಮಾತನ್ನು ಹೀಗೆ ಹೇಳಿದನು. ॥೩೭॥

ದೂತನಾದ ಸುಗ್ರೀವನು ಹೇಳಿದನು—ಶ್ರೇಷ್ಠವಾದ ಊರುಗಳುಳ್ಳ ಓ ಸ್ತ್ರೀಯೆ, ಮೂರು ಲೋಕಗಳಿಗೂ ಅಧಿಪತಿಯಾಗಿಯೂ, ಶೂರನಾಗಿಯೂ, ಎಲ್ಲರನ್ನೂ ಜಯಿಸಿದವನಾಗಿಯೂ, ಇರುವ ರಾಜನಾದ ಶುಂಭನು ದೇವತೆಗಳಿಗೆ ಶತ್ರುವಾಗಿ ಸರ್ವಾವಯವಗಳಿಂದಲೂ ಸುಂದರನಾಗಿ ಪ್ರಕಾಶಿಸುತ್ತಿದಾನೆ. ॥೩೮॥

ಆ ಶುಂಭನು ನೀನು ಬಹಳ ಸೌಂದರ್ಯವುಳ್ಳವಳೆಂಬುದಾಗಿ ಕೇಳಿ, ನಿನ್ನಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ, ನಿನ್ನ ಯೋಚನೆಯನ್ನೇ ಯಾವಾಗಲೂ ಮಾಡುತ್ತಿರುವನು. ಮಹಾತ್ಮನಾದ ಅವನು ಕಾಮಬಾಧೆಯಿಂದ ನೊಂದವನಾಗಿ ನನ್ನನ್ನು ನಿನ್ನ ಸಮೀಪಕ್ಕೆ ದೂತನನ್ನಾಗಿ ಕಳುಹಿಸಿರುವನು. ॥೩೯॥

ವಚನಂ ತಸ್ಯ ತನ್ವಂಗಿ ಶೃಣು ಪ್ರೇಮಪುರಸ್ಸರಂ ।
ಪ್ರಣಿಪತ್ಯ ಯಥಾ ಪ್ರಾಹ ದೈತ್ಯಾನಾಮಧಿಪಸ್ತ್ವಯಿ ॥೪೦॥

ದೇವಾ ಮಯಾ ಜಿತಾಃ ಸರ್ವೇ ತ್ರೈಲೋಕ್ಯಾಧಿಪತಿಸ್ತ್ವಹಂ ।
ಯಜ್ಞಭಾಗಾನಹಂ ಕಾಂತೇ ಗೃಹ್ಣಾಮೀಹ ಸ್ಥಿತಃ ಸದಾ ॥೪೧॥

ಹೃತಸಾರಾ ಕೃತಾ ನೂನಂ ದ್ಯೌರ್ಮಯಾ ರತ್ನವರ್ಜಿತಾ ।
ಯಾನಿ ರತ್ನಾನಿ ದೇವಾನಾಂ ತಾನಿ ಚಾಹೃತವಾನಹಂ ॥೪೨॥

ಭೋಕ್ತಾಽಹಂ ಸರ್ವರತ್ನಾನಾಂ ತ್ರಿಷು ಲೋಕೇಷು ಭಾಮಿನಿ ।
ವಶಾನುಗಾಃ ಸುರಾಃ ಸರ್ವೇ ಮಮ ದೈತ್ಯಾಶ್ಚ ಮಾನವಾಃ ॥೪೩॥

---

ದೈತ್ಯರೆಲ್ಲರಿಗೂ ಅಧಿಪತಿಯಾದ ಆ ಶುಂಭನು ನಿನ್ನನ್ನು ಪ್ರೇಮದೊಡನೆ ನಮಸ್ಕರಿಸಿ ಯಾವ ಮಾತನ್ನು ಹೇಗೆ ಹೇಳಿದನೋ ಆ ಮಾತನ್ನು ನಾನು ಹೇಳುವೆನು. ಓ ಕೃಶಾಂಗಿಯೇ, ಆ ಮಾತನ್ನು ನೀನೂ ದಯವಿಟ್ಟು ಕೇಳು. ॥೪೦॥

ಓ ಕಾಂತೆಯೇ, ದೇವತೆಗಳೆಲ್ಲರನ್ನೂ ನಾನು ಗೆದ್ದಿರುವೆನು. ಮೂರು ಲೋಕಗಳಿಗೂ ಈಶ್ವರನಾಗಿರುವೆನು. ಮತ್ತು ನಾನು ಇಲ್ಲಿದ್ದುಕೊಂಡೇ ದೇವತೆಗಳಿಗೆ ಸಲ್ಲಿಸಬೇಕಾಗಿದ್ದ ಹವಿರ್ಭಾಗಗಳೆಲ್ಲವನ್ನೂ ಸ್ವೀಕರಿಸುತ್ತಿರುವೆನು. ॥೪೧॥

ಓ ರಮಣಿ, ನಾನು ದೇವಲೋಕವನ್ನು ಉತ್ತಮವಾದ ಮತ್ತು ಮುಖ್ಯವಾದ ಪದಾರ್ಥಗಳಿಲ್ಲದ್ದನ್ನಾಗಿ ಮಾಡಿರುವೆನು. ಏಕೆಂದರೆ ದೇವತೆಗಳ ವಶದಲ್ಲಿ ಯಾವ ಯಾವ ರತ್ನಗಳು ಅಮೂಲ್ಯವಸ್ತುಗಳೂ ಇದ್ದುವೋ ಅವೆಲ್ಲವನ್ನೂ ಈಗ ನಾನು ತೆಗೆದುಕೊಂಡಿರುವೆನು. ॥೪೨॥

ಓ ಭಾಮಿನಿಯೇ, ನಾನು ಮೂರು ಲೋಕಗಳಲ್ಲಿಯೂ ಇರುವ ಉತ್ತಮವಾದ ವಸ್ತುಗಳೆಲ್ಲವನ್ನೂ ಸಂಪಾದಿಸಿಕೊಂಡು ಅನುಭವಿಸುತ್ತಿರುವೆನು. ಅಲ್ಲದೆ ದೇವತೆಗಳೆಲ್ಲರೂ, ರಾಕ್ಷಸರೂ, ಮನುಷ್ಯರೂ ಕೂಡ ಎಲ್ಲರೂ ನನ್ನ ಅಧೀನದಲ್ಲಿರುತ್ತಾರೆ. ॥೪೩॥

ತ್ವದ್ಗುಣೈಃ ಕರ್ಣಮಾಗತ್ಯ ಪ್ರವಿಶ್ಯ ಹೃದಯಾಂತರಂ ।
ತ್ವದಧೀನಃ ಕೃತಃ ಕಾಮಂ ಕಿಂಕರೋಽಸ್ಮಿ ಕರೋಮಿ ಕಿಂ ॥೪೪॥

ತ್ವಮಾಜ್ಞಾಪಯ ರಂಭೋರು ತತ್ಕರೋಮಿ ವಶಾನುಗಃ ।
ದಾಸೋಽಹಂ ತವ ಚಾರ್ವಂಗಿ ರಕ್ಷ ಮಾಂ ಕಾಮಬಾಣತಃ ॥೪೫॥

ಭಜ ಮಾಂ ತ್ವಂ ಮರಾಲಾಕ್ಷಿ ತವಾಧೀನಂ ಸ್ಮರಾಕುಲಂ ।
ತ್ರೈಲೋಕ್ಯಸ್ವಾಮಿನೀ ಭೂತ್ವಾ ಭುಂಕ್ಷ್ವ ಭೋಗಾನನುತ್ತಮಾನ್ ॥೪೬॥

ತವಚಾಜ್ಞಾಕರಃ ಕಾಂತೇ ಭವಾಮಿ ಮರಣಾವಧಿ ।
ಅವಧ್ಯೋಽಸ್ಮಿ ವರಾರೋಹೇ ಸದೇವಾಸುರಮಾನುಷೈಃ ॥೪೭॥

---

ಓ ಕಾಮಿನಿಯೇ, ನಿನ್ನ ಉತ್ತಮವಾದ ಗುಣಗಳನ್ನು ನಾನು ಕೇಳಿ, ಅದರಿಂದ ಪರವಶವಾಗಿರುವ ನನ್ನ ಮನಸ್ಸು ನಿನ್ನನ್ನು ಹೊಂದದೇಕೆಂಬ ಆಶೆಯಿಂದ ಬಹಳ ಮಟ್ಟಿಗೆ ತವಕಪಡುತ್ತದೆ. ಈ ಕಾರಣದಿಂದ ನಾನು ನಿನಗೆ ಅಧೀನನೂ ಮತ್ತು ಸೇವಕನೂ ಆಗಿರುವೆನು. ಏನನ್ನು ಮಾಡಲಿ? ನಿನ್ನ ಅಪ್ಪಣೆಯನ್ನು ನೆರವೇರಿಸುವೆನು. ॥೪೪॥

ಅಲ್ಲದೆ ಬಾಳೆಯಗಿಡದಂತಿರುವ ಊರುಗಳುಳ್ಳ ಓ ರಮಣಿಯೇ, ನೀನು ನನಗೆ ಆಜ್ಞೆಯನ್ನು ಮಾಡು. ನಿನ್ನ ಅಧೀನದಲ್ಲಿರುವವನಾಗಿ ನೀನು ಮಾಡಿದ ಆಜ್ಞೆಯನ್ನು ನಡೆಸುವೆನು. ಕಾಮ ಬಾಣದಿಂದ ಉಂಟಾಗಿರುವ ಬಾಧೆಯಿಂದ ನನ್ನನ್ನು ಕಾಪಾಡು. ॥೪೫॥

ದುಂಡಗಿರುವ ಕಣ್ಣುಗಳುಳ್ಳ ಎಲೌ ಸ್ತ್ರೀಯೇ, ನೀನು ನಿನ್ನ ಅಧೀನಕ್ಕೆ ಸಿಕ್ಕಿರುವ, ಕಾಮವಿಕಾರದಿಂದ ತೊಂದರೆಗೆ ಒಳಗಾಗಿರುವ ನನ್ನನ್ನು ಹೊಂದು. ಮೂರು ಲೋಕಗಳಿಗೂ ಅಧೀಶ್ವರಿಯಾಗಿ ಸರ್ವೋತ್ತಮವಾದ ಭೋಗಗಳನ್ನು ನೀನೂ ಅನುಭವಿಸು. ॥೪೬॥

ಓ ಮನೋಹರಳಾದ ಸ್ತ್ರೀಯೇ, ನನ್ನ ಜೀವವಿರುವವರೆಗೂ ನಿನ್ನ ಅಪ್ಪಣೆಯಂತೆ ನಡೆದುಕೊಳ್ಳುತ್ತಿರುವೆನು! ಸುಖಕರಳಾದ ಸ್ತ್ರೀಯೇ, ದೇವತೆಗಳು ಮನುಷ್ಯರು ಅಸುರರು ಇವರೆಲ್ಲರೂ ಪ್ರತ್ಯೇಕವಾಗಿಯಾಗಲೀ, ಒಟ್ಟಾಗಿಯಾಗಲೀ ನನ್ನನ್ನು ಸಂಹರಿಸಲಾರರು! ॥೪೭॥

ಸದಾ ಸೌಭಾಗ್ಯಸಂಯುಕ್ತಾ ಭವಿಷ್ಯಸಿ ವರಾನನೇ ।
ಯತ್ರ ತೇ ರಮತೇ ಚಿತ್ತಂ ತತ್ರ ಕ್ರೀಡಸ್ವ ಸುಂದರಿ ॥೪೮॥

ಇತಿ ತಸ್ಯ ವಚಶ್ಚಿತ್ತೇ ವಿಮೃಶ್ಯ ಮದಮಂಥರೇ ।
ವಕ್ತವ್ಯಂ ಯದ್ಭವೇತ್ಪ್ರೇಮ್ಣಾ ತದ್ಬ್ರೂಹಿ ಮಧುರಂ ವಚಃ ॥೪೯॥

ಶುಂಭಾಯ ಚಂಚಲಾಪಾಂಗಿ ತದ್ವ್ರವೀಮ್ಯಹಮಾಶು ವೈ ।

॥ ವ್ಯಾಸ ಉವಾಚ ॥

ತದ್ದೂತವಚನಂ ಶ್ರುತ್ವಾ ಸ್ಮಿತಂ ಕೃತ್ವಾ ಸುಪೇಶಲಂ ॥೫೦॥

ತಂ ಪ್ರಾಹ ಮಧುರಾಂ ವಾಚಂ ದೇವೀ ದೇವಾರ್ಥಸಾಧಿಕಾ ।

॥ ಶ್ರೀದೇವ್ಯುವಾಚ ॥

ಜಾನಾಮ್ಯಹಂ ನಿಶುಂಭಂ ಚ ಶುಂಭಂ ಚಾತಿಬಲಂ ನೃಪಂ ॥೫೧॥

---

ಓ ಸುಮುಖಿಯೆ, ಇಂತಹ ನನ್ನನ್ನು ವರಿಸಿದಲ್ಲಿ ನಿನಗೆ ಯಾವಾಗಲೂ ಸೌಮಂಗಲ್ಯವು ಇರುವುದು! ಎಲೌ ಸುಂದರಿಯೇ, ಎಲ್ಲಿ ನಿನ್ನ ಮನಸ್ಸು ಆನಂದ ಪಡುವುದೋ ಅಲ್ಲಿ ನೀನು ವಿಹಾರವನ್ನು ಮಾಡಬಹುದು. ॥೪೮॥

ಯೌವನಮದದಿಂದ ನಿಧಾನವಾದ ಸ್ವಭಾವವುಳ್ಳವಳೇ, ಆ ಶುಂಭನು ಹೇಳಿದ ಈ ಮಾತನ್ನು ನಿನ್ನ ಮನಸ್ಸಿಗೆ ಹಿತಮಾಡಿಕೊಂಡು, ಅವನಲ್ಲಿ ಪ್ರೀತಿಯಿಂದ ಎಂತಹ ಮೃದುವಾದ ಮಾತನ್ನು ಹೇಳಬಹುದೋ ಆ ಮಾತನ್ನು ಹೇಳು. ಚಂಚಲ ವಾದ ಕಡೆಗಣ್ಣಿನ ನೋಟವುಳ್ಳ, ಓ ಸ್ತ್ರೀಯೇ, ನೀನು ಹೇಳುವ ಮಾತುಗಳನ್ನು ನಾನು ಬೇಗನೆ ಶುಂಭನ ಹತ್ತಿರಕ್ಕೆ ಹೋಗಿ ಹೇಳುವೆನು. ॥೪೯॥

ವ್ಯಾಸಋಷಿಯು ಹೇಳಿದನು. ಶುಂಭನಿಗೆ ದೂತನಾದ ಆ ಸುಗ್ರೀವನು ಹೇಳಿದ ಮೃದುವಾದ ಆ ಮಾತನ್ನು ಕೇಳಿ ಮಂದಹಾಸದಿಂದ ನಕ್ಕು, ದೇವತೆಗಳ ಕಾರ್ಯವನ್ನು ಸಾಧಿಸುವವಳಾದ ಆ ದೇವಿಯು ಅವನನ್ನು ಕುರಿತು ಮನೋಹರ ವಾದ ಮಾತನ್ನು ಹೀಗೆ ಹೇಳಿದಳು. ॥೫೦॥

ದೇವಿಯು ಹೇಳಿದಳು—ಎಲೈ ದೂತನೇ, ನಿಶುಂಭನನ್ನೂ ನಿಮ್ಮ ದೊರೆ ಯಾದ ಗಟ್ಟಿಗನಾದ ಶುಂಭನನ್ನೂ ಸಹ ಬಲ್ಲೆನು. ಅವನು ಎಲ್ಲ ದೇವತೆಗಳನ್ನೂ

ಜೇತಾರಂ ಸರ್ವದೇವಾನಾಂ ಹಂತಾರಂ ಚೈವ ವಿದ್ವಿಷಾಂ ।
ರಾಶಿಂ ಸರ್ವಗುಣಾನಾಂ ಚ ಭೋಕ್ತಾರಂ ಸರ್ವಸಂಪದಾಂ ॥೫೨॥

ದಾತಾರಂ ಚಾತಿಶೂರಂ ಚ ಸುಂದರಂ ಮನ್ಮಥಾಕೃತಿಂ ।
ದ್ವಾತ್ರಿಂಶಲ್ಲಕ್ಷಣೈರ್ಯುಕ್ತಮವಧ್ಯಂ ಸುರಮಾನುಷೈಃ ॥೫೩॥

ಜ್ಞಾತ್ವಾ ಸಮಾಗತಾಽಸ್ಮ್ಯತ್ರ ದ್ರಷ್ಟುಕಾಮಾ ಮಹಾಸುರಂ ।
ರತ್ನಂ ಕನಕಮಾಯಾತಿ ಸ್ವಶೋಭಾಧಿಕವೃದ್ಧಯೇ ॥೫೪॥

ತತ್ರಾಹಂ ಸ್ವಪತಿಂ ದ್ರಷ್ಟುಂ ದೂರಾದೇವಾಽಽಗತಾಽಸ್ಮಿ ವೈ ।
ದೃಷ್ಟಾ ಮಯಾ ಸುರಾ ಸ್ಸರ್ವೇ ಮಾನವಾ ಭುವಿ ಮಾನದಾಃ ॥೫೫॥

---

ಗೆದ್ದಿರುವನು. ಶತ್ರುಗಳನ್ನು ನಾಶಪಡಿಸಿರುವನು. ಎಲ್ಲ ಗುಣಗಳಿಗೂ ನಿಧಿಯಾಗಿರುವನು. ಎಲ್ಲ ಐಶ್ವರ್ಯವನ್ನೂ ಅನುಭವಿಸುವವನು. ॥೫೧-೫೨॥

ಅವನು ಬಹಳ ಶೂರನಾಗಿರುವನು. ಬೇಕಾದಹಾಗೆ ದಾನಮಾಡುವವನು. ಮನ್ಮಥನಂತೆ ಸುಂದರನಾಗಿರುವನು. ಮಹಾಪುರುಷನಂತೆ ಮೂವತ್ತೆರಡು ಲಕ್ಷಣಗಳಿಂದ ಕೂಡಿರುವವನು. ದೇವತೆಗಳು ಮತ್ತು ಮನುಷ್ಯರು ಇವರಲ್ಲಿ ಯಾರೂ ಅವನನ್ನು ಕೊಲ್ಲಲಾರರು! ಎಂಬ ಅಂಶವನ್ನು ನಾನೂ ತಿಳಿದುಕೊಂಡಿರುತ್ತೇನೆ. ॥೫೩॥

ಇದೆಲ್ಲವನ್ನೂ ತಿಳಿದು ಇಂತಹ ಮಹಾಸುರನನ್ನು ನಾನೇ ನೋಡಬೇಕೆಂದು ಇಲ್ಲಿಗೆ ಈಗ ಬಂದಿದ್ದೇನೆ. ರತ್ನವು ತನ್ನ ಕಾಂತಿಯನ್ನು ತುಂಬ ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ಚಿನ್ನದ ಸಂಬಂಧವನ್ನು ಎಂದರೆ ಕುಂದಣ ಚಿನ್ನದ ಕಟ್ಟಡದಲ್ಲಿ ಮೆಟ್ಟಿರುವಿಕೆಯನ್ನು ಪಡೆಯಲು ಅಪೇಕ್ಷಿಸುತ್ತದೆಯಲ್ಲವೇ ? ॥೫೪॥

ಎಲೈ ದೂತನೇ, ಈ ಸಂದರ್ಭದಲ್ಲಿ ನನಗೆ ತಕ್ಕ ಪತಿಯನ್ನು ಹುಡುಕಿ ಕಾಣುವುದಕ್ಕಾಗಿ ದೂರದಿಂದ ನಾನೇ ಬಂದಿದ್ದೇನೆ. ನಾನು ಭೂಮಿಯಲ್ಲಿ ಮಾನಮರ್ಯಾದೆಗಳುಳ್ಳ ಮನುಷ್ಯರನ್ನೂ, ದೇವತೆಗಳನ್ನೂ ಎಲ್ಲರನ್ನೂ ನೋಡಿದೆನು. ಅವರ ಸ್ಥಿತಿಗತಿಗಳನ್ನೂ ಮತ್ತು ಅವರ ಈಗಿನ ಸ್ಥಾನಮಾನಗಳನ್ನೂ ತಿಳಿದು ಅವರಲ್ಲಿ ಯಾರೂ ನನಗೆ ಅನುರೂಪರಲ್ಲವೆಂಬುದನ್ನು ಮನಗಂಡಿರುವೆನು. ॥೫೫॥

ಗಂಧರ್ವರಾಕ್ಷಸಾಶ್ಚಾನ್ಯೇ ಯೇ ಚಾತಿಪ್ರಿಯದರ್ಶನಾಃ ।
ಸರ್ವೇ ಶುಂಭಭಯಾದ್ಭೀತಾ ವೇಪಮಾನಾ ವಿಚೇತಸಃ ॥೫೬॥

ಶ್ರುತ್ವಾ ಶುಂಭಗುಣಾನತ್ರ ಪ್ರಾಪ್ತಾಸ್ಮ್ಯದ್ಯ ದಿದೃಕ್ಷಯಾ ।
ಗಚ್ಛ ದೂತ ಮಹಾಭಾಗ ಬ್ರೂಹಿ ಶುಂಭಂ ಮಹಾಬಲಂ ॥೫೭॥

ನಿರ್ಜನೇ ಶ್ಲಕ್ಷ್ಣಯಾ ವಾಚಾ ವಚನಂ ವಚನಾನ್ಮಮ ।
ತ್ವಾಂ ಜ್ಞಾತ್ವಾ ಬಲಿನಾಂ ಶ್ರೇಷ್ಠಂ ಸುಂದರಾಣಾಂ ಚ ಸುಂದರಂ ॥೫೮॥

ದಾತಾರಂ ಗುಣಿನಂ ಶೂರಂ ಸರ್ವವಿದ್ಯಾವಿಶಾರದಂ ।
ಜೇತಾರಂ ಸರ್ವದೇವಾನಾಂ ದಕ್ಷಂ ಚೋಗ್ರಂ ಕುಲೋತ್ತರಂ ॥೫೯॥

---

ನೋಡುವುದಕ್ಕೆ ಸೌಮ್ಯರಾಗಿರುವ ಗಂಧರ್ವರೂ, ರಾಕ್ಷಸರೂ ಮತ್ತು ಇನ್ನೂ ಇತರರನ್ನೂ ನೋಡಿದೆನು. ಆದರೆ ಅವರೆಲ್ಲರೂ ಧೈರ್ಯವಿಲ್ಲದ ಎದೆಯುಳ್ಳವರಾಗಿ ಶುಂಭನ ಭಯದಿಂದ ನಡುಗುತ್ತಿರುವರು. ॥೫೬॥

ನಾನು ಶುಂಭನ ಶಕ್ತಿ ಬಲ ಮುಂತಾದ ಗುಣಗಳನ್ನು ಕೇಳಿ ಅವನನ್ನು ನೋಡಲು ಇಚ್ಛೆಯಿಂದ ಇಲ್ಲಿಗೆ ಬಂದಿದೇನೆ. ಎಲೈ ಅದೃಷ್ಟಶಾಲಿಯಾದ ದೂತನೇ, ನೀನು ಹೋಗಿ ತುಂಬ ಬಲಿಷ್ಠನಾದ ಶುಂಭನನ್ನು ಕುರಿತು ನಾನು ಹೇಳುವ ಈ ಮಾತನ್ನು ಹೇಳು. ॥೫೭॥

ನೀನು ಮೃದುವಾದ ಮಾತಿನಿಂದ ಯಾರೂ ಇಲ್ಲದಿರುವ ಏಕಾಂತವಾದ ಸ್ಥಳದಲ್ಲಿ ನಿಮ್ಮ ರಾಜನಿಗೆ ನಾನು ಹೇಳುವ ಈ ಮಾತನ್ನು ನಾನು ಹೇಳಿದೆನೆಂದು ಹೇಳು. ಓ ಶುಂಭನೇ, ನೀನು ಬಲವುಳ್ಳವರೆಲ್ಲರಿಗೂ ಬಲಿಷ್ಠನಾದವನು ಮತ್ತು ಸೌಂದರ್ಯಶಾಲಿಗಳೆಲ್ಲರಿಗಿಂತಲೂ ಸುಂದರನಾದವನು ಎಂಬುದಾಗಿ ಕೇಳಿ ತಿಳಿದಿರುತ್ತೇನೆ. ॥೫೮॥

ದಾನಶೀಲನೂ, ಗುಣವಂತನೂ, ಶೂರನೂ, ಎಲ್ಲ ವಿದ್ಯೆಗಳಲ್ಲಿಯೂ ಪಂಡಿತನೂ, ಎಲ್ಲ ದೇವತೆಗಳನ್ನೂ ಗೆದ್ದಿರುವವನೂ, ಕಾರ್ಯನಿರ್ವಾಹದಲ್ಲಿ ಸಮರ್ಥನೂ, ಮತ್ತು ಶಿಸ್ತಿನ ಪಾಲನೆಯಲ್ಲಿ ಕ್ರೂರನೂ, ನಿನ್ನ ವಂಶೀಯರಲ್ಲಿ ಶ್ರೇಷ್ಠನೂ ಆಗಿರುವೆ ಎಂದು ನಿನ್ನನ್ನು ನಾನು ಕೇಳಿ ತಿಳಿದಿರುವೆನು. ॥೫೯॥

**ಭೋಕ್ತಾರಂ ಸರ್ವರತ್ನಾನಾಂ ಸ್ವಾಧೀನಂ ಸ್ವಬಲೋನ್ನತಂ ।**
**ಪತಿಕಾಮಾಽಸ್ಮ್ಯಹಂ ಸತ್ಯಂ ತವ ಯೋಗ್ಯಾ ನರಾಧಿಪ ॥೬೦॥**

**ಸ್ವೇಚ್ಛಯಾ ನಗರೇ ತೇಽತ್ರ ಸಮಾಯಾತಾ ಮಹಾಮತೇ ।**
**ಮಮಾಸ್ತಿ ಕಾರಣಂ ಕಿಂಚಿದ್ವಿವಾಹೇ ರಾಕ್ಷಸೋತ್ತಮ ॥೬೧॥**

**ಬಾಲಭಾವಾದ್ವ್ರತಂ ಕಿಂಚಿತ್ಕೃತಂ ರಾಜನ್ಮಯಾ ಪುರಾ ।**
**ಕ್ರೀಡಂತ್ಯಾ ಚ ವಯಸ್ಯಾಭಿಃ ಸಹೈಕಾಂತೇ ಯದೃಚ್ಛಯಾ ॥೬೨॥**

**ಸ್ವದೇಹಬಲದರ್ಪೇಣ ಸಖೀನಾಂ ಪುರತೋ ರಹಃ ।**
**ಮತ್ಸಮಾನಬಲಃ ಶೂರೋ ರಣೇ ಮಾಂ ಜೇಷ್ಯತಿ ಸ್ಫುಟಂ ॥೬೩॥**

---

ಎಲೈ ರಾಜನೇ, ಲೋಕದಲ್ಲಿರುವ ಉತ್ತಮವಾದ ಎಲ್ಲ ವಸ್ತುಗಳನ್ನೂ ಅನುಭವಿಸುವವನೂ, ಇತರರ ಅಧೀನಕ್ಕೆ ಒಳಪಡದಿರುವವನೂ, ತನ್ನ ಸಾಮರ್ಥ್ಯದಿಂದ ಹೆಚ್ಚಿಗೆಯನ್ನು ಪಡೆದಿರುವವನೂ ಆಗಿರುವ ನಿನ್ನನ್ನು ಕೇಳಿ ತಿಳಿದು, ಪತಿಯನ್ನು ಅಪೇಕ್ಷಿಸುತ್ತಿರುವ ನಾನು ನಿಜವಾಗಿಯೂ ನಿನಗೆ ತಕ್ಕವಳೆಂತಲೇ ತಿಳಿದಿರುತ್ತೇನೆ. ॥೬೦॥

ಎಲೈ ಮಹಾಬುದ್ಧಿಯುಳ್ಳವನೇ, ನಿನ್ನ ನಗರದಲ್ಲಿ ಈ ಉದ್ಯಾನವನಕ್ಕೆ ನಾನು ನನ್ನ ಇಚ್ಛೆಯಿಂದಲೇ ಬಂದಿರುತ್ತೇನೆ. ಎಲೈ ರಾಕ್ಷಸ ಶ್ರೇಷ್ಠನೇ ಕೇಳು. ನಾನು ಮದುವೆ ಮಾಡಿಕೊಳ್ಳಲು ಒಂದು ಕಾರಣವೂ ಇರುತ್ತದೆ. ॥೬೧॥

ಕೆಲವು ಕಾಲದ ಹಿಂದೆ ನಾನು ನನ್ನ ಸ್ನೇಹಿತೆಯರ ಜೊತೆಯಲ್ಲಿ ವಿನೋದವಾಗಿ ಆಟವಾಡುತ್ತಿದ್ದಾಗ ಹುಡುಗತನದಿಂದ ಏನೋ ಒಂದು ವ್ರತವನ್ನು ಏಕಾಂತವಾಗಿ ಮಾಡಿಕೊಂಡಿರುತ್ತೇನೆ. ॥೬೨॥

ನನ್ನ ದೇಹದ ಶಕ್ತಿಯ ಅಹಂಕಾರದಿಂದ ನನ್ನ ಸ್ನೇಹಿತೆಯರ ಮುಂದುಗಡೆಯಲ್ಲಿ ಗುಟ್ಟಾಗಿ ಮಾಡಿಕೊಂಡ ಪ್ರತಿಜ್ಞೆಯು, ನನಗೆ ಸಮಾನವಾದ ಬಲವುಳ್ಳ ಶೂರನು ಯುದ್ಧದಲ್ಲಿ ನನ್ನನ್ನು ಜಯಿಸಿದರೆ ನಾನು ಅಂಥವನ ಬಲಾಬಲಗಳನ್ನೂ ಚೆನ್ನಾಗಿ ತಿಳಿದುಕೊಂಡು ಅನಂತರದಲ್ಲಿ ಅವನನ್ನು ಪತಿಯನ್ನಾಗಿ ವರಿಸುವೆನು. ಎಂಬುದಾಗಿ ಇರುತ್ತದೆ. ॥೬೩॥

ತಂ ವರಿಷ್ಯಾಮ್ಯಹಂ ಕಾಮಂ ಜ್ಞಾತ್ವಾ ತಸ್ಯ ಬಲಾಬಲಂ ।
ಜಹಸುರ್ವಚನಂ ಶ್ರುತ್ವಾ ಸಖ್ಯೋ ವಿಸ್ಮಿತಮಾನಸಾಃ ॥೬೪॥

ಕಿಮೇತಯಾ ಕೃತಂ ಕ್ರೂರಂ ವ್ರತಮದ್ಭುತಮಾಶು ವೈ ।
ತಸ್ಮಾತ್ತ್ವಮಪಿ ರಾಜೇಂದ್ರ ಜ್ಞಾತ್ವಾ ಮೇ ಹೀದೃಶಂ ಬಲಂ ॥೬೫॥

ಜಿತ್ವಾ ಮಾಂ ಸ್ವಬಲೇನಾತ್ರ ವಾಂಛಿತಂ ಕುರು ಚಾತ್ಮನಃ ।
ತ್ವಂ ವಾ ತವಾನುಜೋ ಭ್ರಾತಾ ಸಮೇತ್ಯ ಸಮರಾಂಗಣೇ ॥೬೬॥
ಜಿತ್ವಾ ಮಾಂ ಸಮರೇಽತ್ರ ವಿವಾಹಂ ಕುರು ಸುಂದರ ॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ತ್ರಯೋವಿಂಶೋಽಧ್ಯಾಯಃ

---

ನನ್ನ ಸಖಿಯರೆಲ್ಲರೂ ಈ ಮಾತನ್ನು ಕೇಳಿ ಅಚ್ಚರಿಗೊಂಡ ಮನಸ್ಸುಳ್ಳವರಾದರು. ಮತ್ತು ಇವಳು ಇಷ್ಟುಮಟ್ಟಿನ ಆಶ್ಚರ್ಯಕರವಾದ ಮತ್ತು ಕಠಿನವಾದ ವ್ರತವನ್ನು ಆತುರಪಟ್ಟು ಇಷ್ಟು ಬೇಗನೆ ಏಕೆ ಕೈಗೊಂಡಳು? ಎಂದು ಎಲ್ಲರೂ ನಕ್ಕರು. ॥೬೪॥

ಆದುದರಿಂದ ಎಲೈ ರಾಜಶ್ರೇಷ್ಠನೇ, ನನ್ನ ಬಲವು ಇಷ್ಟುಮಟ್ಟಿನದೆಂದು ನೀನೂ ಮನಗಂಡು ನನ್ನನ್ನು ನಿನ್ನ ಸೇನೆಯೊಡನೆ ಸಾಮರ್ಥ್ಯದಿಂದ ಗೆದ್ದು, ನಿನ್ನ ಇಷ್ಟಾರ್ಥವನ್ನು ನೆರವೇರಿಸಿಕೋ. ॥೬೫॥

ಎಲೈ ಸುಂದರನೇ, ನೀನಾಗಲಿ ನಿನ್ನ ತಮ್ಮನಾಗಲೀ ಯಾರಾದರೂ ಸರಿ, ಯುದ್ಧರಂಗಕ್ಕೆ ಬಂದು ಯುದ್ಧಮಾಡಿ ನನ್ನನ್ನು ಸೋಲಿಸಿ, ನಂತರದಲ್ಲಿ ನನ್ನನ್ನು ವಿವಾಹಮಾಡಿಕೊಳ್ಳಬಹುದು! ಎಂದು ದೇವಿಯು ಹೇಳಿ ಕಳುಹಿಸಿದಳು. ॥೬೬॥

ಇಲ್ಲಿಗೆ ದೇವೀಭಾಗವತ ಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### ॥ ಚತುರ್ವಿಂಶೋಽಧ್ಯಾಯಃ ॥

### ಇಪ್ಪತ್ತುನಾಲ್ಕನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ದೇವ್ಯಾಸ್ತದ್ವಚನಂ ಶ್ರುತ್ವಾ ಸ ದೂತಃ ಪ್ರಾಹ ವಿಸ್ಮಿತಃ ।**
**ಕಿಂ ಬ್ರೂಷೇ ರುಚಿರಾಪಾಂಗಿ ಸ್ತ್ರೀಸ್ವಭಾವಾದ್ಧಿ ಸಾಹಸಾತ್ ॥೧॥**

**ಇಂದ್ರಾದ್ಯಾ ನಿರ್ಜಿತಾ ಯೇನ ದೇವಾ ದೈತ್ಯಾಸ್ತಥಾಽಪರೇ ।**
**ತಂ ಕಥಂ ಸಮರೇ ದೇವಿ ಜೇತುಮಿಚ್ಛಸಿ ಭಾಮಿನಿ ॥೨॥**

**ತ್ರೈಲೋಕ್ಯೇ ತಾದೃಶೋ ನಾಸ್ತಿ ಯಃ ಶುಂಭಂ ಸಮರೇ ಜಯೇತ್ ।**
**ಕಾ ತ್ವಂ ಕಮಲಪತ್ರಾಕ್ಷಿ ತಸ್ಯಾಗ್ರೇ ಯುಧಿ ಸಾಂಪ್ರತಂ ॥೩॥**

---

ವ್ಯಾಸಋಷಿಯು ಹೇಳಿದನು —ದೇವಿಯ ಆ ಮಾತನ್ನು ಕೇಳಿ ಆ ಸುಗ್ರೀವ ನೆಂಬ ದೂತನು ಆಶ್ಚರ್ಯವುಳ್ಳವನಾಗಿ ಹೀಗೆ ಹೇಳಿದನು—ಮನೋಹರವಾದ ಕಟಾಕ್ಷವುಳ್ಳ ಎಲೌ ಸ್ತ್ರೀಯೇ, ನೀನು ಸ್ತ್ರೀಯರ ಚಪಲ ಸ್ವಭಾವಕ್ಕೂ, ಸಾಹಸಕ್ಕೂ ಅನುರೂಪವಾಗಿ ಹೀಗೆ ಹೇಳುತ್ತೀಯೇನು ? ॥೧॥

ಎಲೌ ದೇವಿಯೇ, ಯಾವ ಶುಂಭನಿಂದ ಇಂದ್ರನೇ ಮೊದಲಾದ ದೇವತೆಗಳೂ ರಾಕ್ಷಸರೂ ಮತ್ತು ಇತರರೂ ಸಹ ಜಯಿಸಲ್ಪಟ್ಟಿರುವರೋ, ಅಷ್ಟರಮಟ್ಟಿನ ಶೂರನಾದ ಶುಂಭಾಸುರನನ್ನು ಯುದ್ಧದಲ್ಲಿ ನೀನು ಹೇಗೆ ಜಯಿಸಲು ಇಚ್ಛಿಸುತ್ತೀಯೆ ? ॥೨॥

ಕಮಲದ ರೇಕಿನಂತಿರುವ ಕಣ್ಣುಗಳುಳ್ಳವಳಾದ ಎಲೌ ದೇವಿಯೇ, ಮೂರು ಲೋಕಗಳಲ್ಲಿಯೂ ಶುಂಭನನ್ನು ಜಯಿಸುವಂಥ ಶೂರನು ಇಲ್ಲವು. ಹೀಗಿರುವಾಗ

ಅವಿಚಾರ್ಯ ನ ವಕ್ತವ್ಯಂ ವಚನಂ ಕ್ವಾಪಿ ಸುಂದರಿ ।
ಬಲಂ ಸ್ವಪರಯೋರ್ಜ್ಞಾತ್ವಾ ವಕ್ತವ್ಯಂ ಸಮಯೋಚಿತಂ ॥೪॥

ತ್ರೈಲೋಕ್ಯಾಧಿಪತಿಃ ಶುಂಭಸ್ತವ ರೂಪೇಣ ಮೋಹಿತಃ ।
ತ್ವಾಂ ಚ ಪ್ರಾರ್ಥಯತೇ ರಾಜಾ ಕುರು ತಸ್ಯೇಪ್ಸಿತಂ ಪ್ರಿಯೇ ॥೫॥

ತ್ಯಕ್ತ್ವಾ ಮೂರ್ಖಸ್ವಭಾವಂ ತ್ವಂ ಸಂಮಾನ್ಯ ವಚನಂ ಮಮ ।
ಭಜ ಶುಂಭಂ ನಿಶುಂಭಂ ವಾ ಹಿತಮೇತದ್ಬ್ರವೀಮಿ ತೇ ॥೬॥

ಶೃಂಗಾರಃ ಸರ್ವಥಾ ಸರ್ವೈಃ ಪ್ರಾಣಿಭಿಃ ಪರಯಾ ಮುದಾ ।
ಸೇವನೀಯೋ ಬುದ್ಧಿಮದ್ಭಿರ್ನವಾನಾಮುತ್ತಮೋತ್ತಮಃ ॥೭॥

---

ಈಗ ನೀನು ಯುದ್ಧದಲ್ಲಿ ಅವನ ಮುಂದುಗಡೆಯಲ್ಲಿ ನಿಲ್ಲುವುದಕ್ಕೆ ನೀನು ಎಷ್ಟ ರವಳು ! ॥೩॥

ಎಲೌ ಸುಂದರಿಯೇ, ಎಲ್ಲಿಯಾದರೂ ಯಾವ ಮಾತನಾಡಬೇಕಾದರೂ ಚನ್ನಾಗಿ ವಿಮರ್ಶೆ ಮಾಡದೆ ಮಾತನ್ನಾಡಬಾರದು. ನಿನ್ನ ಮತ್ತು ನಿನ್ನ ಎದುರಾಳಿ ಯಾಗಿರುವ ಇತರರ ಸಾಮರ್ಥ್ಯವನ್ನು ಚನ್ನಾಗಿ ತಿಳಿಯಬೇಕು. ಅನಂತರದಲ್ಲಿ ಆ ಕಾಲಕ್ಕೆ ಎಷ್ಟು ಮಾತುಗಳು ಉಚಿತವಾಗಿರುವುವೋ ಅಷ್ಟನ್ನೇ ಹೇಳಬೇಕು. ॥೪॥

ಮೂರು ಲೋಕಗಳಿಗೂ ಅಧಿಪತಿಯಾದ ಶುಂಭನು ನಿನ್ನ ಸೌಂದರ್ಯದಿಂದ ಮೋಹಗೊಂಡಿರುವನು. ಎಲೌ ಪ್ರೀತಿಪಾತ್ರಳಾದ ಸುಂದರಿಯೇ, ರಾಜನಾದ ಶುಂಭನು ನಿನ್ನನ್ನು ಪ್ರಾರ್ಥನೆ ಮಾಡುತ್ತಿರುವನು. ನೀನು ಅವನಿಗೆ ಇಷ್ಟವಾದ ದ್ದನ್ನು ನೆರವೇರಿಸು. ॥೫॥

ನೀನು ನನ್ನ ಮಾತನ್ನು ತಿರಸ್ಕರಿಸದೆ ಮರ್ಯಾದೆ ಮಾಡಿ ನಿನ್ನ ಮೂರ್ಖ ತನದ ಹಟವನ್ನು ಬಿಟ್ಟು ಶುಂಭನನ್ನಾಗಲೀ ನಿಶುಂಭನನ್ನಾಗಲೀ ಹೊಂದು. ನಿನಗೆ ಹಿತವಾದುದೆಂದು ಈ ಮಾತನ್ನು ನಾನು ಹೇಳುತ್ತಿದೇನೆ. ॥೬॥

ಶೃಂಗಾರರಸವೆಂಬುದು ನವರಸಗಳಲ್ಲಿ ಉತ್ತಮವಾದುದು. ಇದು ಬುದ್ಧಿ ವಂತರಾದ ಎಲ್ಲ ಪ್ರಾಣಿಗಳಿಂದಲೂ ಹೆಚ್ಚಾದ ಸಂತೋಷದಿಂದ ಸೇವಿಸಲು ಅರ್ಹ ವಾದುದು. ॥೭॥

ನಾಗಮಿಷ್ಯಸಿ ಚೇದ್ಬಾಲೇ ಸ ಕ್ರುದ್ಧಃ ಪೃಥಿವೀಪತಿಃ ।
ಅನ್ಯಾನಾಜ್ಞಾಕರಾನ್ಪ್ರೇಷ್ಯ ಬಲಾನ್ನೇಷ್ಯತಿ ಸಾಂಪ್ರತಂ ॥೮॥

ಕೇಶೇಷ್ವಾಕೃಷ್ಯ ತೇ ನೂನಂ ದಾನವಾ ಬಲದರ್ಪಿತಾಃ ।
ತ್ವಾಂ ನಯಿಷ್ಯಂತಿ ವಾಮೋರು ತರಸಾ ಶುಂಭಸನ್ನಿಧೌ ॥೯॥

ಸ್ವಲಜ್ಜಾಂ ರಕ್ಷ ತನ್ವಂಗಿ ಸಾಹಸಂ ಸರ್ವಥಾ ತ್ಯಜ ।
ಮಾನಿತಾ ಗಚ್ಛ ತತ್ಪಾರ್ಶ್ವೇ ಮಾನಪಾತ್ರಂ ಯತೋಽಸಿ ವೈ ॥೧೦॥

ಕ್ವ ಯುದ್ಧಂ ನಿಶಿತೈರ್ಬಾಣೈಃ ಕ್ವ ಸುಖಂ ರತಿಸಂಗಜಂ ।
ಸಾರಾಸಾರಂ ಪರಿಚ್ಛಿದ್ಯ ಕುರು ಮೇ ವಚನಂ ಪಟು ॥೧೧॥

---

ಎಲೌ ಹುಡುಗಿಯೇ, ನೀನು ನನ್ನ ಮಾತನ್ನು ಕೇಳದೆ ಶುಂಭನ ಹತ್ತಿರಕ್ಕೆ ಬರದೆ ಇರುವುದಾದರೆ, ಆಗ ನಮ್ಮ ಆ ರಾಜನು ಕೋಪಗೊಳ್ಳುವನು. ಅನಂತರ ದಲ್ಲಿ ತನ್ನ ಅಪ್ಪಣೆಯನ್ನು ನಡೆಯಿಸುವ ಇತರರನ್ನು ಕಳುಹಿಸುವನು. ಅವರು ರಾಜನ ಅಪ್ಪಣೆಯ ಮೇರೆಗೆ ಈಗಲೇ ಇಲ್ಲಿಗೆ ಬಂದು ನಿನ್ನನ್ನು ಬಲಾತ್ಕಾರದಿಂದ ಕರೆದುಕೊಂಡು ಹೋಗುವರು. ||೮||

ಎಲೌ ಸುಂದರವಾದ ಊರುಗಳುಳ್ಳವಳೇ, ಬಲದಿಂದ ಕೊಬ್ಬಿರುವ ದಾನವರು ನಿನ್ನನ್ನು ತಲೆಕೂದಲನ್ನು ಹಿಡಿದು ಎಳೆದುಕೊಂಡು ಹೋಗಿ ಬೇಗನೆ ಶುಂಭನ ಹತ್ತಿರವನ್ನು ಪಡೆಯಿಸುವರು. ಇದು ನಿಜವು. ||೯||

ಎಲೌ ಕೃಶಾಂಗಿಯೇ, ನೀನು ನಿನ್ನ ಭೂಷಣವಾಗಿರುವ ನಾಚಿಕೆಯನ್ನು ಕಾಪಾಡಿಕೋ. ಸರ್ವಪ್ರಕಾರದಿಂದಲೂ ಅಪಾಯಕರವಾದ ಪ್ರತಿಜ್ಞೆಯನ್ನು ನೆರವೇ ರಿಸಬೇಕೆಂಬ ಸಾಹಸದ ಕೆಲಸವನ್ನು ಬಿಡು! ನೀನು ಮರ್ಯಾದೆಯನ್ನು ಹೊಂದಲು ಅರ್ಹಳಾಗಿರುತ್ತೀಯೆ. ಆದುದರಿಂದ ಮರ್ಯಾದೆಯಿಂದ ಶುಂಭನ ಪಾರ್ಶ್ವವನ್ನು ಹೊಂದು. ||೧೦||

ಹರಿತವಾದ ಬಾಣಗಳಿಂದ ಯುದ್ಧಮಾಡುವುದೆಲ್ಲಿ! ಪುರುಷನೊಡನೆ ಕಾಮಸೌಖ್ಯವನ್ನು ಅನುಭವಿಸುವದು ಎಲ್ಲಿ! ನೀನು ಇವೆರಡರಲ್ಲಿ ಗಟ್ಟಿಯಾಗಿ ಉಳಿಯುವುದು ಯಾವುದು, ಜಳ್ಳಾಗಿ ನಿಷ್ಫಲವಾಗುವುದು ಯಾವುದು, ಎಂಬ ವಿಷಯದಲ್ಲಿ ಚನ್ನಾಗಿ ಬಲಾಬಲಗಳನ್ನು ಯೋಚಿಸಿ ತಿಳಿದು ಗಟ್ಟಿಯಾದ ನನ್ನ

**ಭಜ ಶುಂಭಂ ನಿಶುಂಭಂ ವಾ ಲಬ್ಧಾಽಸಿ ಪರಮಂ ಶುಭಂ ।**

**॥ ದೇವ್ಯುವಾಚ ॥**

**ಸತ್ಯಂ ದೂತ ಮಹಾಭಾಗ ಪ್ರವಕ್ತುಂ ನಿಪುಣೋ ಹ್ಯಸಿ ॥೧೨॥**

**ನಿಶುಂಭಶುಂಭೌ ಜಾನಾಮಿ ಬಲವಂತಾವಿತಿ ಧ್ರುವಂ ।**
**ಪ್ರತಿಜ್ಞಾ ಮೇ ಕೃತಾ ಬಾಲ್ಯಾದನ್ಯಥಾ ಸಾ ಕಥಂ ಭವೇತ್ ॥೧೩॥**

**ತಸ್ಮಾದ್ಬ್ರೂಹಿ ನಿಶುಂಭಂ ಚ ಶುಂಭಂ ವಾ ಬಲವತ್ತರಂ ।**
**ವಿನಾ ಯುದ್ಧಂ ನ ಮೇ ಭರ್ತಾ ಭವಿತಾ ಕೋಽಪಿ ಸೌಷ್ಠವಾತ್ ॥೧೪॥**

**ಜಿತ್ವಾ ಮಾಂ ತರಸಾ ಕಾಮಂ ಕರಂ ಗೃಹ್ಣಾತು ಸಾಂಪ್ರತಂ ।**
**ಯುದ್ಧೇಚ್ಛಯಾ ಸಮಾಯಾತಾಂ ವಿದ್ಧಿಮಾಮಬಲಾಂ ನೃಪ ॥೧೫॥**

---

ಮಾತನ್ನು ನಡೆಯಿಸು. ನೀನು ಶುಂಭನನ್ನಾಗಲೀ ನಿಶುಂಭನನ್ನಾಗಲೀ ಹೊಂದು. ಅದರಿಂದ ಉತ್ತಮವಾದ ಕಲ್ಯಾಣವನ್ನೂ ಸುಖವನ್ನೂ ಪಡೆಯುವೆ! ॥೧೧॥

ದೇವಿಯು ಹೇಳಿದಳು—ಎಲೈ ಮಹಾಭಾಗ್ಯಶಾಲಿಯಾದ ದೂತನೇ, ನೀನು ಹೇಳುವುದು ನಿಜ. ನೀನು ಚನ್ನಾಗಿ ಮಾತನಾಡುವುದರಲ್ಲಿ ಬಹಳ ಬುದ್ಧಿವಂತನಾಗಿರುತ್ತೀಯೆ. ನಿಶುಂಭ ಮತ್ತು ಶುಂಭ ಎಂಬ ಇವರಿಬ್ಬರೂ ಬಹಳ ಬಲಿಷ್ಠರೆಂತ ನಿಜವಾಗಿ ನಾನೂ ತಿಳಿದಿರುತ್ತೇನೆ. ಆದರೂ ನಾನು ನನ್ನ ಹುಡುಗತನದಿಂದಲೂ ಮಾಡಿದ ಪ್ರತಿಜ್ಞೆಯನ್ನು ಇದುವರೆಗೂ ಕಾಪಾಡಿಕೊಂಡು ಬಂದಿರುತ್ತೇನೆ. ಆ ನಿಯಮವನ್ನು ಈಗ ಹೇಗೆತಾನೇ ಬೇರೆಯಾಗಿ ನಡೆಸಲಾದೀತು? ॥೧೨-೧೩॥

ಆದುದರಿಂದ ನಿಶುಂಭನಿಗಾಗಲೀ ಹೆಚ್ಚು ಬಲಿಷ್ಠನಾದ ಶುಂಭನಿಗಾಗಲೀ ಹೀಗೆ ಹೇಳು. ಯುದ್ಧವಿಲ್ಲದೆ ನನಗೆ ಯಾವನೂ ಮೃದೂಪಾಯದಿಂದ ಪತಿಯಾಗಲಾರನು. ॥೧೪॥

ಎಲೈ ರಾಜನೇ, ನೀನು ನಿನ್ನ ಸಾಮರ್ಥ್ಯದಿಂದ ನನ್ನನ್ನು ಬೇಗನೆ ಗೆದ್ದು ಕೂಡಲೆ ನನ್ನ ಪಾಣಿಗ್ರಹಣವನ್ನು ಮಾಡು. ಅಬಲೆಯಾದರೂ ನನ್ನನ್ನು ಯುದ್ಧ ಮಾಡಲು ಇಚ್ಛೆಯಿಂದ ಬಂದಿರುವವಳನ್ನಾಗಿ ತಿಳಿದುಕೋ. ॥೧೫॥

ನೀನು ಯುದ್ಧ ಮಾಡುವುದರಲ್ಲಿ ಶಕ್ತನಾಗಿರುವೆಯಾದರೆ ಯುದ್ಧವನ್ನು ಬೇಡುತ್ತಿರುವ ನನಗೆ ಸರಿಯಾಗಿ ಯುದ್ಧವನ್ನು ಕೊಡು. ಅಥವಾ ನೀನು ನನ್ನ ಶೂಲದಿಂದ ಹೆದರುವೆಯಾದರೆ, ಬೇಗನೆ ಪಾತಾಳ ಲೋಕಕ್ಕೆ ಹೊರಟು ಹೋಗು. ॥೧೬॥

ಯುದ್ಧಂ ದೇಹಿ ಸಮರ್ಥೋಽಸಿ ವೀರಧರ್ಮಂ ಸಮಾಚರ ।
ಬಿಭೇಷಿ ಮಮ ಶೂಲಾಚ್ಚೇದ್ಗಚ್ಛ ಪಾತಾಲಮಾಚಿರಂ ॥೧೬॥

ತ್ರಿದಿವಂ ಚ ಧರಾಂ ತ್ಯಕ್ತ್ವಾ ಜೀವಿತೇಚ್ಛಾ ಯದಸ್ತಿ ತೇ ।
ಇತಿ ದೂತ ವದಾಶು ತ್ವಂ ಗತ್ವಾ ಸ್ವಪತಿಮಾದರಾತ್ ॥೧೭॥

ಸ ವಿಚಾರ್ಯ ಯಥಾಯುಕ್ತಂ ಕರಿಷ್ಯತಿ ಮಹಾಬಲಃ ।
ಸಂಸಾರೇ ದೂತಧರ್ಮೋಽಯಂ ಯತ್ಸತ್ಯಂ ಭಾಷಣಂ ಕಿಲ ॥೧೮॥

॥ ವ್ಯಾಸ ಉವಾಚ ॥

ಶತ್ರೌ ಪತ್ಯೌ ಚ ಧರ್ಮಜ್ಞ ತಥಾ ತ್ವಂ ಕುರು ಮಾಚಿರಂ ।
ಅಥ ತದ್ವಚನಂ ಶ್ರುತ್ವಾ ನೀತಿಮತ್ಫಲಸಂಯುತಂ ॥೧೯॥

---

ಬದುಕಬೇಕೆಂಬುದಾಗಿ ಇಚ್ಛೆಯು ನಿನಗೆ ಇರುವುದಾದರೆ ಸ್ವರ್ಗ ಲೋಕವನ್ನೂ ಭೂಲೋಕವನ್ನೂ ಬಿಟ್ಟು ಪಾತಾಳಲೋಕಕ್ಕೆ ಬೇಗನೆ ಹೋಗು. ಎಲೈ ದೂತನೇ, ನೀನು ನಿನ್ನ ಪ್ರಭುವಿನ ಹತ್ತಿರಕ್ಕೆ ಹೋಗಿ ವಿಶ್ವಾಸದಿಂದ ಬೇಗನೆ ಈ ಮಾತನ್ನು ಹೇಳು. ॥೧೭॥

ಎಲೈ ದೂತನ ಧರ್ಮವನ್ನು ತಿಳಿದಿರುವ ಸುಗ್ರೀವನೇ, ಈ ಸಂಸಾರದ ವ್ಯವಹಾರದಲ್ಲಿ ಶತ್ರುವಿನ ವಿಷಯದಲ್ಲಿಯಾಗಲೀ, ಯಜಮಾನನ ವಿಷಯದಲ್ಲಿಯಾಗಲೀ ನಿಜವನ್ನು ಹೇಳುವುದು ದೂತನ ಧರ್ಮವಲ್ಲವೇ? ಆದುದರಿಂದ ನೀನೂ ನಿನ್ನ ಪ್ರಭುವಿನ ಹತ್ತಿರಕ್ಕೆ ಹೋಗಿ ನಾನು ಹೇಳಿದ ಮಾತನ್ನು ಹೇಳು. ತುಂಬ ಬಲಿಷ್ಠನಾದ ಅವನು ಆ ಮಾತನ್ನು ಕೇಳಿ, ಚನ್ನಾಗಿ ವಿಮರ್ಶೆಮಾಡಿ, ಯಾವುದು ಯುಕ್ತವೋ ಅ ಕೆಲಸವನ್ನು ಮಾಡುವನು. ಬೇಗನೆ ನೀನು ಈ ದೂತಧರ್ಮಯುಕ್ತವಾದ ಕಾರ್ಯವನ್ನು ಮಾಡು. ॥೧೮॥

ವ್ಯಾಸಋಷಿಯು ಹೇಳಿದನು—ಅನಂತರದಲ್ಲಿ ಆ ದೇವಿಯು ಹೇಳಿದ ನ್ಯಾಯದಿಂದ ಕೂಡಿರುವ, ಶಕ್ತಿಯುಳ್ಳದ್ದಾದ, ಸಕಾರಣವಾದ ಮತ್ತು ಪ್ರೌಢವಾದ ಮಾತನ್ನು ಕೇಳಿ, ಆ ದೂತನು ಆಶ್ಚರ್ಯವುಳ್ಳವನಾಗಿ ಆಗ ಹೊರಟು ಹೋದನು. ॥೧೯॥

ಹೇತುಯುಕ್ತಂ ಪ್ರಗಲ್ಭಂ ಚ ವಿಸ್ಮಿತಃ ಪ್ರಯಯೌ ತದಾ ।
ಗತ್ವಾ ದೈತ್ಯಪತಿಂ ದೂತೋ ವಿಚಾರ್ಯ ಚ ಪುನಃ ಪುನಃ ॥೨೦॥

ಪ್ರಣಮ್ಯ ಪಾದಯೋಃ ಪ್ರಹ್ವಃ ಪ್ರತ್ಯುವಾಚ ನೃಪಂ ಚ ತಂ ।
ರಾಜನೀತಿಕರಂ ವಾಕ್ಯಂ ಮೃದುಪೂರ್ವಂ ಪ್ರಿಯಂ ವಚಃ ॥೨೧॥

॥ ದೂತ ಉವಾಚ ॥

ಸತ್ಯಂ ಪ್ರಿಯಂ ಚ ವಕ್ತವ್ಯಂ ತೇನ ಚಿಂತಾಪರೋ ಹ್ಯಹಂ ।
ಸತ್ಯಂ ಪ್ರಿಯಂ ಚ ರಾಜೇಂದ್ರ ವಚನಂ ದುರ್ಲಭಂ ಕಿಲ ॥೨೨॥

ಅಪ್ರಿಯಂ ವದತಾಂ ಕಾಮಂ ರಾಜಾ ಕುಪ್ಯತಿ ಸರ್ವಥಾ ।
ಸಾಕ್ಷಾತ್ಕೃತಃ ಸಮಾಯಾತಾ ಕಸ್ಯ ವಾ ಕಿಂಬಲಾಬಲಾ ॥೨೩॥

---

ಆ ದೂತನು ರಾಕ್ಷಸರಾಜನ ಹತ್ತಿರಕ್ಕೆ ಹೋಗಿ ಅನೇಕ ಸಾರಿ ಚನ್ನಾಗಿ ವಿಮರ್ಶೆ ಮಾಡಿಕೊಂಡು, ಆ ಧೊರೆಯ ಪಾದಗಳಿಗೆ ವಿನಯದಿಂದ ಬಗ್ಗಿ ನಮಸ್ಕಾರವನ್ನು ಮಾಡಿ, ಆ ಧೊರೆಯು ಸಂಗಡ ರಾಜನೀತಿಯಿಂದ ಕೂಡಿದ ಮತ್ತು ಹಿತಕರವಾದ ಮಾತನ್ನು ಮೃದುವಾಗಿ ಹೀಗೆ ಹೇಳಿದನು. ॥೨೦-೨೧॥

ದೂತನು ಹೇಳಿದನು — ಓ ರಾಜಶ್ರೇಷ್ಠನೇ, ಲೋಕದಲ್ಲಿ ಸತ್ಯವಾದ ಮತ್ತು ಕಿವಿಗೆ ಕೇಳಲು ಇಂಪಾದ ಮಾತನ್ನು ಹೇಳಬೇಕೆಂದು ನೀತಿಶಾಸ್ತ್ರವಿರುವುದು. ಯಾವುದು ಹಿತವಾದ ಮಾತಾಗಿರುವುದೋ ಅದು ಕಿವಿಗೆ ಹಿತಕರವಾಗಿರುವದಿಲ್ಲವು. ಯಾವುದು ನಿಜವಾದ ಮಾತಾಗಿರುವದೋ ಅದು ನಿಜವಾಗಿರುವುದಿಲ್ಲವು. ಸತ್ಯವಾಗಿಯೂ, ಹಿತಕರವಾಗಿಯೂ ಇರುವ ಮಾತು ದೊರೆಯುವುದು ಕಷ್ಟವಲ್ಲವೇ? ಆದುದರಿಂದ ನಾನು ಕಳವಳಪಡುತ್ತಿದೇನೆ! ॥೨೨॥

ನಿಜವಾದ ಮಾತನ್ನು ಹೇಳಿದರೆ ಅದು ಕಿವಿಗೆ ಕೇಳಲು ಇಂಪಾಗಿರದೆ ಕಠೋರವಾಗಿರುವ ಕಾರಣದಿಂದ ದೊರೆಯು ಸರ್ವಪ್ರಕಾರದಿಂದಲೂ ಖಂಡಿತವಾಗಿಯೂ ಕೋಪಗೊಳ್ಳುವನು! ಈಗ ಆ ಹೆಂಗಸು ಹೇಳಿರುವ ಮಾತುಗಳನ್ನು ಹೇಳಿದಲ್ಲಿ ನಿಜವಾಗಿಯೂ ನಿನಗೆ ಕೋಪವು ಬರುವುದು! ಆಕೆಯು ಯಾರ ಹೆಂಗುಸೋ ಗೊತ್ತಾಗುವಂತಿಲ್ಲವು. ಇಲ್ಲಿಗೆ ಏತಕ್ಕೆ ತನ್ನಷ್ಟಕ್ಕೆ ತಾನೆ ಬಂದಿರುತ್ತಾಳೆ? ಇವಳ ಶಕ್ತಿ ಬೆಂಬಲಗಳು ಎಂತಹವೋ? ಇವನ್ನು ಸರಿಯಾಗಿ ತಿಳಿಯುವುದು

ನ ಜ್ಞಾನಗೋಚರಂ ಕಿಂಚಿತ್ಕಿಂ ಬ್ರವೀಮಿ ವಿಚೇಷ್ಟಿತಂ ।
ಯುದ್ಧಕಾಮಾ ಮಯಾ ದೃಷ್ಟ್ವಾ ಗರ್ವಿತಾ ಕಟುಭಾಷಿಣೀ ॥೨೪॥

ತಯಾ ಯತ್ಕಥಿತಂ ಸಮ್ಯಕ್ ತಚ್ಛೃಣುಷ್ವ ಮಹಾಮತೇ ।
ಮಯಾ ಬಾಲ್ಯಾತ್ಪ್ರತಿಜ್ಞೇಯಂ ಕೃತಾ ಪೂರ್ವಂ ವಿನೋದತಃ ॥೨೫॥

ಸಖೀನಾಂ ಪುರತಃ ಕಾಮಂ ವಿವಾಹಂ ಪ್ರತಿ ಸರ್ವಥಾ ।
ಯೋ ಮಾಂ ಯುದ್ಧೇ ಜಯೇದದ್ಧಾ ದರ್ಪಂ ಚ ವಿಧುನೋತಿ ವೈ ॥೨೬॥

ತಂ ವರಿಷ್ಯಾಮ್ಯಹಂ ಕಾಮಂ ಪತಿಂ ಸಮಬಲಂ ಕಿಲ ।
ನ ಮೇ ಪ್ರತಿಜ್ಞಾ ಮಿಥ್ಯಾ ಸಾ ಕರ್ತವ್ಯಾ ನೃಪಸತ್ತಮ ॥೨೭॥

---

ನನಗೆ ಅಸಾಧ್ಯವು! ಇವುಗಳ ವಿಷಯದಲ್ಲಿ ಏನೊಂದೂ ನನ್ನ ತಿಳಿವಳಿಕೆಗೆ ಬರಲಿಲ್ಲವು! ಅವಳ ವ್ಯಾಪಾರದ ವಿಷಯದಲ್ಲಿ ನಾನು ಏನನ್ನು ಹೇಳಲಿ? ॥೨೩॥

ಓ ಪ್ರಭುವೇ, ಆದರೂ ಇಷ್ಟು ಮಾತ್ರ ಸಂಗತಿಯು ಗೊತ್ತಾಗುತ್ತದೆ. ಏನೆಂದರೆ ಆ ಹೆಂಗುಸು ಅಹಂಕಾರವುಳ್ಳವಳಾಗಿ, ಕಠಿನವಾದ ಮಾತುಗಳನ್ನಾಡುತ್ತಾ ಇದಾಳೆ. ಯುದ್ಧವನ್ನು ಅಪೇಕ್ಷಿಸುತ್ತಿದಾಳೆ! ಇಷ್ಟನ್ನು ನಾನು ಮನಗಂಡಿದೇನೆ. ॥೨೪॥

ಓ ಮೇಲಾದ ತಿಳಿವಳಿಕೆಯುಳ್ಳ ಪ್ರಭುವೇ, ಇನ್ನು ಆ ಸ್ತ್ರೀಯು ಏನನ್ನು ಹೇಳಿದಳೆಂಬುದನ್ನು ವಿಜ್ಞಾಪಿಸುವೆನು. ಆ ಮಾತನ್ನು ಚನ್ನಾಗಿ ಲಾಲಿಸಬೇಕು. "ನಾನು ಹುಡುಗತನದಲ್ಲಿ ವಿನೋದಕ್ಕಾಗಿ ಒಂದು ಪ್ರತಿಜ್ಞೆಯನ್ನು ಮಾಡಿರುವೆನು!" ॥೨೫॥

"ನನ್ನ ಒಡನಾಡಿಯರ ಮುಂದುಗಡೆಯಲ್ಲಿ ನನ್ನ ಮದುವೆಯ ವಿಷಯವಾಗಿ ನನ್ನ ಮನಃಪೂರ್ವಕವಾಗಿ ಹೀಗೆ ಕಟ್ಟುನಿಟ್ಟಾದ ಕಟ್ಟಳೆಯನ್ನು ಮಾಡಿಕೊಂಡಿರುವುದೇನೆಂದರೆ, ಯಾವನು ನನ್ನನ್ನು ಯುದ್ಧದಲ್ಲಿ ಜಯಿಸುವನೋ ನನ್ನ ಅಹಂಕಾರವನ್ನು ಅಡಗಿಸುವನೋ, ನನಗೆ ಸಮನಾದ ಬಲವುಳ್ಳ ಅಂಥವನನ್ನು ನಾನು ನನ್ನ ಇಷ್ಟಾನುಸಾರವಾಗಿ ಪತಿಯನ್ನಾಗಿ ವರಿಸುವೆನು, ಎಂದು ಪ್ರತಿಜ್ಞೆಮಾಡಿರುವೆನು!" ॥೨೬॥

"ಓ ರಾಜಶ್ರೇಷ್ಠನೇ, ನನ್ನ ಪ್ರತಿಜ್ಞೆಯು ವ್ಯರ್ಥವಾಗದಂತೆ ನೀನು ಇದನ್ನು ನಡೆಸಿಕೊಡಬೇಕು. ಓ ಧರ್ಮಿಷ್ಠನೇ, ಆದುದರಿಂದ ಯುದ್ಧವನ್ನು ಮಾಡು.

ತಸ್ಮಾದ್ಯುದ್ಧ್ಯಸ್ವ ಧರ್ಮಜ್ಞ ಜಿತ್ವಾ ಮಾಂ ಸ್ವವಶಂ ಕುರು ।
ತಥೇತಿ ವ್ಯಾಹೃತಂ ವಾಕ್ಯಂ ಶ್ರುತ್ವಾಽಹಂ ಸಮುಪಾಗತಃ ॥೨೮॥

ಯಥೇಚ್ಛಸಿ ಮಹಾರಾಜ ತಥಾ ಕುರು ತವ ಪ್ರಿಯಂ ।
ಸಾ ಯುದ್ಧಾರ್ಥಂ ಕೃತಮತಿಃ ಸಾಯುಧಾ ಸಿಂಹಗಾಮಿನೀ ॥೨೯॥

ನಿಶ್ಚಲಾ ವರ್ತತೇ ಭೂಪ ಯದ್ಯೋಗ್ಯಂ ತದ್ವಿಧೀಯತಾಂ ।

॥ ವ್ಯಾಸ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಸುಗ್ರೀವಸ್ಯ ನರಾಧಿಪಃ ॥೩೦॥

ಪಪ್ರಚ್ಛ ಭ್ರಾತರಂ ಶೂರಂ ಸಮೀಪಸ್ಥಂ ಮಹಾಬಲಂ ।

॥ ಶುಂಭ ಉವಾಚ ॥

ಭ್ರಾತಃ ಕಿಮತ್ರ ಕರ್ತವ್ಯಂ ಬ್ರೂಹಿ ಸತ್ಯಂ ಮಹಾಮತೇ ॥೩೧॥

---

ನನ್ನನ್ನು ಜಯಿಸಿ ನಿನ್ನ ಅಧೀನದಲ್ಲಿರಿಸಿಕೊ. ಎಂಬುದಾಗಿ ಆ ಸ್ತ್ರೀಯು ಹೇಳಿದ ಈ ಮಾತನ್ನು ಕೇಳಿ ನಾನು ನಿನ್ನ ಹತ್ತಿರಕ್ಕೆ ಬಂದೆನು. ॥೨೭-೨೮॥

ಓ ಮಹಾರಾಜನೇ, ಈ ವಿಷಯದಲ್ಲಿ ನಿನಗೆ ಇಚ್ಛೆಯಾಗುವಂತೆ ನಿನ್ನ ಹಿತವನ್ನು ಸಾಧಿಸು. ಆ ಸ್ತ್ರೀಯಾದರೋ ಯುದ್ಧಕ್ಕೋಸ್ಕರವಾಗಿ ನಿಶ್ಚಯವಾದ ಬುದ್ಧಿಯುಳ್ಳವಳಾಗಿ, ಸಿಂಹವನ್ನು ಹತ್ತಿಕೊಂಡು ಆಯುಧವನ್ನು ಹಿಡಿದುಕೊಂಡು ಸ್ಥಿರಳಾಗಿ ನಿಂತಿದ್ದಾಳೆ. ಓ ದೊರೆಯೇ, ಆದುದರಿಂದ ಈ ಸಂದರ್ಭದಲ್ಲಿ ಯಾವುದು ಯೋಗ್ಯವೋ ಅದನ್ನು ಮಾಡು. ಎಂದು ದೂತನು ಹೇಳಿದನು. ॥೨೯॥

ವ್ಯಾಸಋಷಿಯು ಹೇಳಿದನು—ದೊರೆಯಾದ ಶುಂಭನು ಹೀಗೆ ಹೇಳಿದ ಆ ಸುಗ್ರೀವನೆಂಬ ದೂತನ ಮಾತನ್ನು ಕೇಳಿ, ತನ್ನ ಹತ್ತಿರದಲ್ಲಿಯೇ ಇದ್ದ, ಬಹಳ ಬಲಿಷ್ಠನಾದ, ತನ್ನ ಸೋದರನಾದ ನಿಶುಂಭನನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು. ॥೩೦॥

ಶುಂಭನು ಹೇಳಿದನು—ಎಲೈ ತಮ್ಮನಾದ ನಿಶುಂಭನೇ, ನೀನು ಬಹಳ ಬುದ್ಧಿವಂತನು. ಒಬ್ಬ ಹೆಂಗಸು ಯುದ್ಧ ಮಾಡಲು ಅಭಿಲಾಷೆಯುಳ್ಳವಳಾಗಿ ಇರುತ್ತಾಳೆ. ಅವಳೂ ಈಗ ನಮ್ಮನ್ನು ಯುದ್ಧಕ್ಕಾಗಿ ಕರೆಯುತ್ತಿದ್ದಾಳೆ. ನಾನಾದರೂ ಯುದ್ಧಕ್ಕಾಗಿ ಹೋಗುತ್ತೇನೆ. ಅಥವಾ ನೀನಾದರೂ ಸೇನಾ ಸಮೇತನಾಗಿ

ನಾರ್ಯೇಕಾ ಯೋದ್ಧುಕಾಮಾಽಸ್ತಿ ಸಮಾಹ್ವಯತಿ ಸಾಂಪ್ರತಂ ।
ಅಹಂ ಗಚ್ಛಾಮಿ ಸಂಗ್ರಾಮೇ ತ್ವಂ ವಾ ಗಚ್ಛ ಬಲಾನ್ವಿತಃ ॥೩೨॥

ಯದ್ರೋಚತೇ ನಿಶುಂಭಾದ್ಯ ತತ್ಕರ್ತವ್ಯಂ ಮಯಾ ಕಿಲ ।

॥ ನಿಶುಂಭ ಉವಾಚ ॥

ನ ಮಯಾ ನ ತ್ವಯಾ ವೀರ ಗಂತವ್ಯಂ ರಣಮೂರ್ಧನಿ ॥೩೩॥

ಪ್ರೇಷಯಸ್ವ ಮಹಾರಾಜ ತ್ವರಿತಂ ಧೂಮ್ರಲೋಚನಂ ।
ಸ ಗತ್ವಾ ತಾಂ ರಣೇ ಜಿತ್ವಾ ಗೃಹೀತ್ವಾ ಚಾರುಲೋಚನಾಂ ॥೩೪॥

ಆಗಮಿಷ್ಯತಿ ಶುಂಭಾತ್ರ ವಿವಾಹಃ ಸಂವಿಧೀಯತಾಂ ।

॥ ವ್ಯಾಸ ಉವಾಚ ॥

ತನ್ನಿಶಮ್ಯ ವಚಸ್ತಸ್ಯ ಶುಂಭೋ ಭ್ರಾತುಃ ಕನೀಯಸಃ ॥೩೫॥
ಕೋಪಾತ್ಸಂಪ್ರೇಷಯಾಮಾಸ ಪಾರ್ಶ್ವಸ್ಥಂ ಧೂಮ್ರಲೋಚನಂ ।

---

ಯುದ್ಧಕ್ಕೆ ಹೊರಡು. ಎಲೈ ನಿಶುಂಭನೇ, ಈ ಸಂದರ್ಭದಲ್ಲಿ ನಿನಗೆ ಯಾವುದು ಸರಿ ಎಂದು ತೋರುವುದೋ ಅದನ್ನು ನಿಜವಾಗಿ ಹೇಳು. ನಾನೂ ಅದರಂತೆ ನಡೆದುಕೊಳ್ಳುವೆನು. ॥೩೧-೩೨॥

ನಿಶುಂಭನು ಹೇಳಿದನು—ಓ ವೀರನಾದ ಮಹಾರಾಜನೇ, ನೀನೂ ಯುದ್ಧಕ್ಕಾಗಿ ಹೋಗಬೇಡ. ನಾನೂ ಹೋಗುವುದಿಲ್ಲ. ಆದರೆ ಬೇಗನೆ ಧೂಮ್ರಲೋಚನನೆಂಬುವನನ್ನು ಯುದ್ಧಕ್ಕಾಗಿ ಕಳುಹಿಸು. ॥೩೩॥

ಆ ಧೂಮ್ರಲೋಚನನು ಯುದ್ಧಕ್ಕೆ ಹೋಗಿ ಸುಂದರವಾದ ಕಣ್ಣುಗಳುಳ್ಳ ಆ ಸ್ತ್ರೀಯನ್ನು ಯುದ್ಧದಲ್ಲಿ ಜಯಿಸಿ ಹಿಡಿದುಕೊಂಡು ಬರುವನು. ಓ ಶುಂಭನೇ, ನೀನು ಇಲ್ಲಿದ್ದುಕೊಂಡು ವಿವಾಹಕ್ಕೆ ಉಚಿತವಾದ ಏರ್ಪಾಡುಗಳನ್ನು ಮಾಡು. ॥೩೪॥

ವ್ಯಾಸಋಷಿಯು ಹೇಳಿದನು—ಶುಂಭನು ತಮ್ಮನಾದ ನಿಶುಂಭನ ಆ ಮಾತನ್ನು ಕೇಳಿ ತನ್ನ ಪಕ್ಕದಲ್ಲಿ ನಿಂತಿದ್ದ ಧೂಮ್ರಲೋಚನನನ್ನು ಕೋಪದಿಂದ ಯುದ್ಧಕ್ಕಾಗಿ ಕಳುಹಿಸಿದನು. ॥೩೫॥

|| ಶುಂಭ ಉವಾಚ ||

ಧೂಮ್ರಲೋಚನ ಗಚ್ಛಾಶು ಸೈನ್ಯೇನ ಮಹತಾಽಽವೃತಃ ||೩೭||
ಗೃಹೀತ್ವಾಽಽನಯ ತಾಂ ಮುಗ್ಧಾಂ ಸ್ವವೀರ್ಯಮದಮೋಹಿತಾಂ ।
ದೇವೋ ವಾ ದಾನವೋ ವಾಽಪಿ ಮನುಷ್ಯೋ ವಾ ಮಹಾಬಲಃ ||೩೮||

ತತ್ಪಾರ್ಷ್ಣಿಗ್ರಾಹತಾಂ ಪ್ರಾಪ್ತೋ ಹಂತವ್ಯಸ್ತರಸಾ ತ್ವಯಾ ।
ತತ್ಪಾರ್ಶ್ವವರ್ತಿನೀಂ ಕಾಲೀಂ ಹತ್ವಾ ಸಂಗೃಹ್ಯ ತಾಂ ಪುನಃ ||೩೯||

ಶೀಘ್ರಮತ್ರ ಸಮಾಗಚ್ಛ ಕೃತ್ವಾ ಕಾರ್ಯಮನುತ್ತಮಂ ।
ರಕ್ಷಣೀಯಾ ತ್ವಯಾ ಸಾಧ್ವೀ ಮುಂಚಂತೀ ಮೃದುಮಾರ್ಗಣಾನ್ ||೪೯||

ಯತ್ನೇನ ಮಹತಾ ವೀರ ಮೃದುದೇಹಾ ಕೃಶೋದರೀ ।
ತತ್ಸಹಾಯಾಶ್ಚ ಹಂತವ್ಯಾ ಯೇ ರಣೇ ಶಸ್ತ್ರಪಾಣಯಃ ||೪೦||

---

ಶುಂಭನು ಹೇಳಿದನು—ಎಲೈ ಧೂಮ್ರಲೋಚನನೇ, ನೀನು ದೊಡ್ಡ ದಾದ ಸೇನೆಯೊಡನೆ ಕೂಡಿದವನಾಗಿ ಬೇಗನೆ ಯುದ್ಧಕ್ಕೆ ಹೊರಡು. ಸುಂದರ ಳಾಗಿಯೂ, ತನ್ನ ಶಕ್ತಿಯ ಕೊಬ್ಬಿನಿಂದ ವಿವೇಕವಿಲ್ಲದವಳಾಗಿಯೂ ಇರುವ ಆ ಸ್ತ್ರೀಯನ್ನು ಸೋಲಿಸಿ ಇಲ್ಲಿಗೆ ಹಿಡಿದುಕೊಂಡು ಬಾ. ||೩೭||

ಅಲ್ಲದೆ ಯುದ್ಧದಲ್ಲಿ ಆ ಸ್ತ್ರೀಗೆ ಬೆಂಬಲವಾಗಿ ಬರಬಹುದಾದ ತುಂಬ ಬಲ ಶಾಲಿಯಾದ ದೇವತೆಯಾಗಲೀ, ದಾನವನಾಗಲೀ ಮನುಷ್ಯನಾಗಲೀ ಯಾವನೇ ಆದಾಗ್ಯೂ ನೀನು ಅವನನ್ನು ಬೇಗನೆ ಕೊಂದು ಬಿಡು. ||೩೮||

ಆ ಸ್ತ್ರೀಗೆ ಬೆಂಬಲವಾಗಿರುವ ಕಾಳಿಯನ್ನು ನೀನು ಕೊಂದು, ಆ ಸ್ತ್ರೀಯನ್ನು ಮಾತ್ರ ಕೈಸೆರೆ ಹಿಡಿದುಕೊಂಡು ಇಲ್ಲಿಗೆ ಬೇಗನೆ ಬಂದುಬಿಡು. ಇಷ್ಟುಮಾತ್ರ ವಾಗಿರುವ ಶ್ರೇಷ್ಠವಾದ ಈ ಕೆಲಸವನ್ನು ನೆರವೇರಿಸು. ಪತಿವ್ರತೆಯಾಗಿರುವ ಆ ಅಬಲೆಯು ಬಾಣಗಳನ್ನು ಮೃದುವಾಗಿ ಬಿಡುವಳು. ಆದುದರಿಂದ ನೀನು ಅವ ಳನ್ನು ಯುದ್ಧದಲ್ಲಿ ಘಾಸಿ ಮಾಡದೆ ರಕ್ಷಿಸಬೇಕು. ||೪೯||

ಮೃದುವಾದ ಶರೀರವುಳ್ಳವಳಾಗಿಯೂ ಕೃಶವಾದ ನಡುವುಳ್ಳವಳಾಗಿಯೂ ಇರುವ ಆ ರಮಣಿಯನ್ನು ನೀನು ಪ್ರಯತ್ನದಿಂದ ಯುದ್ಧದಲ್ಲಿ ರಕ್ಷಿಸಬೇಕು, ಕೊಲ್ಲ ಕೂಡದು. ಎಲೈ ವೀರನೇ, ಯುದ್ಧದಲ್ಲಿ ಯಾರು ಅವಳಿಗೆ ಸಹಾಯಕರಾಗಿ

ಸರ್ವಥಾ ಸಾ ನ ಹಂತವ್ಯಾ ರಕ್ಷಣೀಯಾ ಪ್ರಯತ್ನತಃ ।
ಇತ್ಯಾದಿಷ್ಟಸ್ತದಾ ರಾಜ್ಞಾ ತರಸಾ ಧೂಮ್ರಲೋಚನಃ ॥೪೧॥

ಪ್ರಣಮ್ಯ ಶುಂಭಂ ಸೈನ್ಯೇನ ವೃತಃ ಶೀಘ್ರಂ ಯಯೌ ರಣೇ ।
ಅಸಾಧೂನಾಂ ಸಹಸ್ರಾಣಾಂ ಷಷ್ಟ್ಯಾ ತೇಷಾಂ ವೃತಸ್ತಥಾ ॥೪೨॥

ಸ ದದರ್ಶ ತತೋ ದೇವೀಂ ರಮ್ಯೋಪವನಸಂಸ್ಥಿತಾಂ ।
ದೃಷ್ಟ್ವಾ ತಾಂ ಮೃಗಶಾವಾಕ್ಷೀಂ ವಿನಯೇನ ಸಮನ್ವಿತಃ ॥೪೩॥

ಉವಾಚ ವಚನಂ ಶ್ಲಕ್ಷ್ಣಂ ಹೇತುಮದ್ರಸ ಭೂಷಿತಂ ।
ಶೃಣು ದೇವಿ ಮಹಾಭಾಗೇ ಶುಂಭಸ್ತ್ವದ್ವಿರಹಾತುರಃ ॥೪೪॥

ದೂತಂ ಪ್ರೇಷಿತವಾನ್ ಪಾರ್ಶ್ವೇ ತವ ನೀತಿವಿಶಾರದಃ ।
ರಸಭಂಗಭಯೋದ್ವಿಗ್ನಃ ಸಾಮಪೂರ್ವಂ ತ್ವಯಿ ಸ್ವಯಂ ॥೪೫॥

---

ಆಯುಧಗಳನ್ನು ಧರಿಸಿಕೊಂಡು ಬರುವರೋ ಅವರೆಲ್ಲರನ್ನೂ ನೀನು ಕೊಲ್ಲಬೇಕು. ॥೪೦॥

ವ್ಯಾಸಋಷಿಯು ಹೇಳಿದನು—ಆಗ ಧೂಮ್ರಲೋಚನನು ತನ್ನ ರಾಜನಾದ ಶುಂಭನ ಈ ಆಜ್ಞೆಯನ್ನು ಶಿರಸಾವಹಿಸಿ, ಅವನಿಗೆ ನಮಸ್ಕಾರವನ್ನು ಮಾಡಿ, ಅರವತ್ತು ಸಾವಿರ ಸಂಖ್ಯೆಯುಳ್ಳ ದುಷ್ಟರಿಂದ, ತುಂಟರಿಂದ ತುಂಬಿರುವ ಸೇನೆಯನ್ನು ಜೊತೆಯಲ್ಲಿ ತೆಗೆದುಕೊಂಡು ಯುದ್ಧ ಮಾಡುವುದಕ್ಕಾಗಿ ಬೇಗನೆ ಹೊರಟನು. ॥೪೧-೪೨॥

ಆ ಧೂಮ್ರಲೋಚನನು ಅನಂತರದಲ್ಲಿ ಸುಂದರವಾದ ಉದ್ಯಾನವನದಲ್ಲಿರುವ ಆ ದೇವಿಯನ್ನು ನೋಡಿದನು. ಹುಲ್ಲೆಯ ಕಣ್ಣಿನಂತೆ ಕಣ್ಣುಳ್ಳವಳಾದ ಆ ದೇವಿಯನ್ನು ನೋಡಿ, ವಿನಯದಿಂದ ಕೂಡಿದವನಾಗಿ, ಅವಳನ್ನು ಕುರಿತು ಸರಿಯಾದ ಕಾರಣವುಳ್ಳದ್ದಾಗಿಯೂ, ಶೃಂಗಾರರಸದಿಂದ ಕೂಡಿದ್ದಾಗಿಯೂ ಇರುವ ಮಾತನ್ನು ಮೃದುವಾಗಿ ಹೇಳಿದನು. ॥೪೩॥

ಭಾಗ್ಯಶಾಲಿನಿಯಾದ ಓ ದೇವಿಯೇ, ಕೇಳು. ಶುಂಭನು ನಿನ್ನ ವಿರಹದಿಂದ ಅಸ್ವಸ್ಥವಾದ ಮನಸ್ಸುಳ್ಳವನಾಗಿರುವನು! ಅವನು ನೀತಿಯನ್ನು ಚನ್ನಾಗಿ ತಿಳಿದವನಾದುದರಿಂದ ಅನ್ಯೋನ್ಯವಾಗಿ ಪ್ರೀತಿಗೆ ಭಂಗವು ಬಂದೀತೆಂದು ಹೆದರಿ ತಾನೇ

ತೇನಾಗತ್ಯ ವಚಃ ಪ್ರೋಕ್ತಂ ವಿಪರೀತಂ ವರಾನನೇ ।
ವಚಸಾ ತೇನ ಮೇ ಭರ್ತಾ ಚಿಂತಾವಿಷ್ಟಮನಾ ನೃಪಃ ॥೪೬॥

ಬಭೂವ ರಸಮಾರ್ಗಜ್ಞೋ ಶುಂಭಃ ಕಾಮವಿಮೋಹಿತಃ ।
ದೂತೇನ ತೇನ ನ ಜ್ಞಾತಂ ಹೇತುಗರ್ಭಂ ವಚಸ್ತವ ॥೪೭॥

ಯೋ ಮಾಂ ಜಯತಿ ಸಂಗ್ರಾಮೇ ಯದುಕ್ತಂ ಕಠಿನಂ ವಚಃ ।
ನ ಜ್ಞಾತಸ್ತೇನ ಸಂಗ್ರಾಮೋ ದ್ವಿವಿಧಃ ಖಲು ಮಾನಿನಿ ॥೪೮॥

ರತಿಜೋಽಥೋತ್ಸಾಹಜಶ್ಚ ಪಾತ್ರಭೇದೇ ವಿವಕ್ಷಿತಃ ।
ರತಿಜಸ್ತ್ವಯಿ ವಾಮೋರು ಶತ್ರೋರುತ್ಸಾಹಜಃ ಸ್ಮೃತಃ ॥೪೯॥

---

ಮೊದಲು ಒಳ್ಳೆಯ ನಡತೆಯಿಂದ ವರ್ತಿಸುವ ಉದ್ದೇಶದಿಂದ ನಿನ್ನ ಸಮೀಪಕ್ಕೆ ದೂತನನ್ನು ಕಳುಹಿಸಿದನು. ||೪೪-೪೫||

ಓ ಸುಮುಖಿಯಾದ ದೇವಿಯೇ, ಆ ದೂತನು ಬಂದು ನೀನು ಹೇಳಿದ ಮಾತನ್ನು ವ್ಯತ್ಯಾಸವಾಗಿ ದೊರೆಯ ಸಂಗಡ ಹೇಳಿದನು. ದೊರೆಯಾದ ನಮ್ಮ ಪ್ರಭುವು ಆ ಮಾತನ್ನು ಕೇಳಿ ಯೋಚನೆಯಿಂದ ಕೂಡಿದ ಮನಸ್ಸುಳ್ಳವನಾದನು. ನೀನು ಶೃಂಗಾರಾದಿ ರಸಗಳನ್ನು ಅನುಭವಿಸುವುದರಲ್ಲಿ ಬಹಳ ಬುದ್ಧಿವಂತೆಯಾಗಿ ರುವೆ. ಆ ದೂತನು ಹಾಗೆ ಹೇಳಿದರೂ ನಮ್ಮ ರಾಜನಾದ ಶುಂಭನು ಕಾಮದಿಂದ ಮೋಹಿತನಾಗಿರುವನು. ||೪೬||

ನಮ್ಮ ರಾಜನು ಕಳುಹಿಸಿದ್ದ ದೂತನು ಗೂಢಾಭಿಪ್ರಾಯದಿಂದ ಕೂಡಿದ ನಿನ್ನ ಮಾತುಗಳ ತಾತ್ಪರ್ಯವನ್ನು ತಿಳಿಯಲಿಲ್ಲವು. ನೀನು ಯುದ್ಧದಲ್ಲಿ ಯಾರು ನನ್ನನ್ನು ಜಯಿಸುವರೋ ಅವನನ್ನು ನಾನು ವಿವಾಹ ಮಾಡಿಕೊಳ್ಳುವೆನೆಂದು ಕಠಿಣ ವಾದ ಮಾತನ್ನು ಹೇಳಿರುತ್ತಿ. ಅವನಿಗೆ ಇದರ ಅಭಿಪ್ರಾಯವು ತಿಳಿಯಲಿಲ್ಲವು. ಎಲೈ ಮಾನವತಿಯೇ ಯುದ್ಧವು ಲೋಕದಲ್ಲಿ ಎರಡು ವಿಧವಾಗಿರುವುದು. ||೪೮||

ರತಿಯಿಂದುಂಟಾಗುವ ಯುದ್ಧವು ಒಂದು. ಉತ್ಸಾಹದಿಂದುಂಟಾಗುವ ಯುದ್ಧವು ಒಂದು. ಇವೆರಡೂ ಬೇರೆ ಬೇರೆ ಪಾತ್ರಗಳಲ್ಲಿ ನಡೆಯುವುವು. ಎಲೌ ಸುಂದರವಾದ ಊರುಗಳುಳ್ಳ ದೇವಿಯೇ, ರತಿಯಿಂದುಂಟಾಗುವ ಯುದ್ಧವು ನಿನ್ನ ಸಂಗಡ ನಡೆಯು ತಕ್ಕದ್ದು. ಉತ್ಸಾಹದಿಂದ ಮಾಡುವ ಯುದ್ಧವು ಶತ್ರುಗಳ ಸಂಗಡ ನಡೆಯತ ಕ್ಕದ್ದು. ||೪೯||

ಸುಖದಃ ಪ್ರಥಮಃ ಕಾಂತೇ ದುಃಖದಶ್ಚಾರಿಜಃ ಸ್ಮೃತಃ ।
ಜಾನಾಮ್ಯಹಂ ವರಾರೋಹೇ ಭವತ್ಯಾ ಮಾನಸಂ ಕಿಲ ॥೫೦॥

ರತಿಸಂಗ್ರಾಮಭಾವಸ್ತೇ ಹೃದಯೇ ಪರಿವರ್ತತೇ ।
ಇತಿ ತಜ್ಞ್ಞಂ ವಿದಿತ್ವಾ ಮಾಂ ತ್ವತ್ಸಕಾಶಂ ನರಾಧಿಪಃ ॥೫೧॥

ಪ್ರೇಷಯಾಮಾಸ ಶುಂಭೋಽದ್ಯ ಬಲೇನ ಮಹತಾಽಽವೃತಂ ।
ಚತುರಾಽಸಿ ಮಹಾಭಾಗೇ ಶೃಣು ಮೇ ವಚನಂ ಮೃದು ॥೫೨॥

ಭಜ ಶುಂಭಂ ತ್ರಿಲೋಕೇಶಂ ದೇವದರ್ಪನಿಬರ್ಹಣಂ ।
ಪಟ್ಟರಾಜ್ಞೀ ಪ್ರಿಯಾ ಭೂತ್ವಾ ಭುಂಕ್ಷ್ವ ಭೋಗಾನನುತ್ತಮಾನ್ ॥೫೩॥

ಜೇಷ್ಯತಿ ತ್ವಾಂ ಮಹಾಬಾಹುಃ ಶುಂಭಃ ಕಾಮಬಲಾರ್ಥವಿತ್ ।
ವಿಚಿತ್ರಾನ್ ಕುರು ಹಾವಾಂಸ್ತ್ವಂ ಸೋಽಪಿ ಭಾವಾನ್ಕರಿಷ್ಯತಿ ॥೫೪॥

---

ಈ ಎರಡು ವಿಧವಾದ ಯುದ್ಧಗಳಲ್ಲಿ ಮೊದಲನೆಯದಾದ ರತಿಯುದ್ಧವು ಸುಖವನ್ನು ಉಂಟುಮಾಡುವುದು. ಎರಡನೆಯದು ಶತ್ರುಗಳಿಂದ ಉಂಟಾಗುವುದರಿಂದ ದುಃಖವನ್ನು ಉಂಟುಮಾಡುವುದು. ಉತ್ತಮವಾದ ಕಟಿಪಶ್ಚಾದ್ಭಾಗವುಳ್ಳ ಎಲೌ ದೇವಿಯೆ, ನಾನು ಹಿಂದೆ ಬಂದಿದ್ದ ದೂತನಂತೆ ದಡ್ಡನಲ್ಲವು. ನಿನ್ನ ಮನಸ್ಸನ್ನು ತಿಳಿಯಬಲ್ಲವನಾಗಿದ್ದೇನೆ. ॥೫೦॥

ನಿನ್ನ ಮನಸ್ಸಿನಲ್ಲಿ ರತಿಯುದ್ಧವನ್ನು ನಡೆಯಿಸುವುದರ ಅಭಿಪ್ರಾಯವು ತುಂಬಿರುತ್ತದೆ ಎಂಬುದನ್ನು ತಿಳಿದುಕೊಂಡಿರುವ ನನ್ನನ್ನು ನಮ್ಮ ರಾಜನು ನಿನ್ನ ಹತ್ತಿರಕ್ಕೆ ಈಗ ದೊಡ್ಡ ಸೇನೆಯೊಡನೆ ಕಳುಹಿಸಿರುವನು. ॥೫೧॥

ಎಲೈ ಅದೃಷ್ಟಶಾಲಿನಿಯೆ, ನೀನು ಬಹಳ ಬುದ್ಧಿವಂತೆಯಾಗಿರುವೆ. ಆದುದರಿಂದ ಮೃದುವಾಗಿರುವ ನನ್ನ ಮಾತನ್ನು ಕೇಳು—ನೀನು ಮೂರು ಲೋಕಗಳಿಗೂ ರಾಜನಾಗಿರುವ, ದೇವತೆಗಳ ಕೊಬ್ಬನ್ನು ನಾಶಮಾಡಿರುವ, ಶುಂಭನನ್ನು ಪತಿಯನ್ನಾಗಿ ವರಿಸು. ಶುಂಭನ ಪ್ರೀತಿಪಾತ್ರಳಾದ ಪಟ್ಟದ ರಾಣಿಯಾಗಿ ಉತ್ತಮೋತ್ತಮವಾದ ಭೋಗಗಳನ್ನು ಅನುಭವಿಸು. ॥೫೨-೫೩॥

ಶಕ್ತಿಯಿಂದ ಕೂಡಿದ ತೋಳುಗಳುಳ್ಳವನಾದ ಶುಂಭನು, ಕಾಮಕ್ಕೆ ಸಂಬಂಧಪಟ್ಟ ಸಾಮರ್ಥ್ಯವೂ ಮತ್ತು ದ್ರವ್ಯವೂ ಇವುಗಳೆಲ್ಲವನ್ನೂ ಪಡೆದಿರುವವನಾದ್ದರಿಂದ ನಿನ್ನನ್ನು ಜಯಿಸುವನು. ನೀನು ಅವನ ವಿಷಯದಲ್ಲಿ ಆಶ್ಚರ್ಯಕರವಾದ, ಅನೇಕ

ಭವಿಷ್ಯತಿ ಕಾಲಿಕೇಯಂ ತತ್ರೈವ ನರ್ಮಸಾಕ್ಷಿಣೀ ।
ಏವಂ ಸಂಗರಯೋಗೇನ ಪತಿರ್ಮೇ ಪರಮಾರ್ಥವಿತ್ ॥೫೫॥

ಜಿತ್ವಾ ತ್ವಾಂ ಸುಖಶಯ್ಯಾಯಾಂ ಪರಿಶ್ರಾಂತಾಂ ಕರಿಷ್ಯತಿ ।
ರಕ್ತದೇಹಾಂ ನಖಾಘಾತೈರ್ದಂತೈಶ್ಚ ಖಂಡಿತಾಧರಾಂ ॥೫೬॥

ಸ್ವೇದಕ್ಲಿನ್ನಾಂ ಪ್ರಭಗ್ನಾಂ ತ್ವಾಂ ಸಂವಿಧಾಸ್ಯತಿ ಭೂಪತಿಃ ।
ಭವಿತಾ ಮಾನಸಃ ಕಾಮೋ ರತಿಸಂಗ್ರಾಮಜಸ್ತವ ॥೫೭॥

ದರ್ಶನಾದ್ವಶ ಏವಾಽಽಸ್ತೇ ಶುಂಭಃ ಸರ್ವಾತ್ಮನಾ ಪ್ರಿಯೇ ।
ವಚನಂ ಕುರು ಮೇ ಪಥ್ಯಂ ಹಿತಕೃಚ್ಚಾಪಿ ಪೇಶಲಂ ॥೫೮॥

---

ವಿಧವಾದ ಶೃಂಗಾರಚೇಷ್ಟೆಗಳನ್ನು ಮಾಡು. ಅವನೂ ನಿನ್ನಲ್ಲಿ ಸರಿಯಾದ ಅಭಿಪ್ರಾಯಗಳನ್ನು ಸಲ್ಲಿಸುವನು. ||೫೪||

ನಿಮ್ಮಿಬ್ಬರಿಗೂ ನಡೆಯುವ ರತಿಯುದ್ಧದ ಪೂರ್ವಭಾವಿಯಾದ ಶೃಂಗಾರ ಚೇಷ್ಟೆಯನ್ನು ನೋಡುವವಳಾಗಿ ಈ ಕಾಳಿಕೆಯು ಅಲ್ಲಿಯೇ ಇರುವಳು. ನಮ್ಮ ರಾಜನು ಉತ್ತಮವಾದ ರೀತಿಯಿಂದ ಕಾರ್ಯವನ್ನು ಸಾಧಿಸಬಲ್ಲವನಾದುದರಿಂದಲೂ, ಹೀಗೆ ನಿನ್ನ ಸಂಗಡ ಯುದ್ಧವನ್ನು ಮಾಡಿ ನಿನ್ನನ್ನು ಸೋಲಿಸಬೇಕಾದುದರಿಂದಲೂ, ನಿನ್ನನ್ನು ಸುಖವಾದ ಹಾಸಿಗೆಯಲ್ಲಿ ಯುದ್ಧಮಾಡಿ ನಿನ್ನನ್ನು ಗೆದ್ದು ನಿನಗೆ ಆಯಾಸ ವುಂಟಾಗುವಂತೆ ಮಾಡುವನು. ||೫೫||

ಸುರತಯುದ್ಧದಲ್ಲಿ ನಮ್ಮ ರಾಜನು ತನ್ನ ಉಗುರಿನ ಏಟಿನಿಂದ ನಿನ್ನ ಶರೀರವು ರಕ್ತದ ಗಾಯಗಳುಳ್ಳದ್ದನ್ನಾಗಿಯೂ, ತನ್ನ ದಂತಗಳಿಂದ ನಿನ್ನ ಅಧರೋಷ್ಠವು ಖಂಡಿತವಾದುದನ್ನಾಗಿಯೂ ಮಾಡುವನು. ಮತ್ತು ನೀನು ಬೆವರಿನಿಂದ ತೊಯ್ದುಹೋಗಿ ನಿನ್ನ ಅಂಗಗಳು ಶಿಥಿಲವಾಗುವಂತೆ ರತಿಯುದ್ಧವನ್ನು ಮಾಡುವನು. ಹೀಗಾದಲ್ಲಿ ನೀನು ಯುದ್ಧದಲ್ಲಿ ನನ್ನನ್ನು ಗೆದ್ದವರನ್ನು ಮದುವೆಯಾಗುವೆನೆಂಬ ನಿನ್ನ ಮನಸ್ಸಿನ ಅಭಿಲಾಷೆಯು ರತಿಸಂಗ್ರಾಮ ರೂಪವಾಗಿ ಸುಖಕರವಾಗಿ ನೆರವೇರುವುದು. ||೫೬-೫೭||

ಎಲೈ ಪ್ರಿಯಳೇ, ಸರ್ವಪ್ರಕಾರದಿಂದಲೂ ನಿನ್ನ ದರ್ಶನ ಮಾತ್ರದಿಂದಲೇ ಶುಂಭನು ನಿನಗೆ ಅಧೀನನಾಗಿರುವನು. ನಿನಗೆ ಹಿತವನ್ನುಂಟುಮಾಡುವ ಮತ್ತು ಮೃದುವಾದ ನನ್ನ ಮಾತನ್ನು ನೀನು ಕೇಳಿ ಅದರಂತೆ ನಡೆಯಿಸು. ||೫೮||

ಭಜ ಶುಂಭಂ ಗಣಾಧ್ಯಕ್ಷಂ ಮಾನಿನೀಯಾತಿಃಮಾನಿನೀ ।
ಮಂದಭಾಗ್ಯಾಶ್ಚ ತೇ ನೂನಂ ಶಸ್ತ್ರಯುದ್ಧಪ್ರಿಯಾಶ್ಚ ಯೇ ॥೫೯॥

ನ ತದರ್ಹಾಸಿ ಕಾಂತೇ ತ್ವಂ ಸದಾ ಸುರತವಲ್ಲಭೇ ।
ಅಶೋಕಂ ಕುರು ರಾಜಾನಂ ಪಾದಘಾತವಿಕಾಸಿತಂ ॥೬೦॥
ಬಕುಲಂ ಸಿಂಧುಸೇಕೇನ ತಥಾ ಕುರವಕಂ ಕುರು ।

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ ಚತುರ್ವಿಂಶೋಽಧ್ಯಾಯಃ**

---

ನೀನು ಬಹಳ ಮಟ್ಟಿನ ಅಭಿಮಾನವನ್ನು ಹೊಂದಿರುವವಳು. ಮತ್ತು ಮರ್ಯಾದೆಗೆ ಯೋಗ್ಯಳಾಗಿರುವವಳು. ಆದ್ದರಿಂದ ನಿನಗೆ ಅನುರೂಪನಾಗಿ ಬಹಳ ಮರ್ಯಾದೆಗಳುಳ್ಳವನಾದ ರಾಕ್ಷಸಗಣಗಳೆಲ್ಲಕ್ಕೂ ಅಧಿಪತಿಯಾದ ಶುಂಭನನ್ನು ಪತಿಯನ್ನಾಗಿ ವರಿಸು. ಸುಖವನ್ನುಂಟುಮಾಡುವ ಈ ರತಿಯುದ್ಧವನ್ನು ಮಾಡದೆ ಯಾರು ಆಯುಧಗಳನ್ನು ಹಿಡಿದುಕೊಂಡು ಯುದ್ಧ ಮಾಡುವುದರಲ್ಲಿ ಆಸಕ್ತಿಯುಳ್ಳವರೋ ಅವರು ನಿಜವಾಗಿಯೂ ತುಂಬ ಕ್ಲೇಶಕ್ಕೆ ಒಳಗಾಗುವ ಕಾರಣದಿಂದ ಅದೃಷ್ಟ ಹೀನರಾಗುವರು. ॥೫೯॥

ಓ ರಮಣಿಯೇ, ನಾನು ಹೇಳಿದ ಪ್ರಕಾರ ಆಯುಧಗಳನ್ನು ಹಿಡಿದುಕೊಂಡು ಯುದ್ಧಮಾಡಲು ನೀನು ಯೋಗ್ಯಳಲ್ಲ. ಸುಂದರವಾದ ಶರೀರವನ್ನು ಹೊಂದಿರುವ ನೀನು ಯಾವಾಗಲೂ ರತಿಯಲ್ಲಿ ಪ್ರೀತಿಯುಳ್ಳವಳಾಗಿ ಇರುತ್ತಾ, ಲಕ್ಷಣಗಳಿಂದ ಕೂಡಿದ ಕಾಂತೆಯ ಪಾದಾಘಾತದಿಂದ ಅಶೋಕವೃಕ್ಷವೂ ಮದ್ಯಗಂಡೂಷದಿಂದ ಬಕುಳ ಕುರವಕ ವೃಕ್ಷಗಳೂ ಹೇಗೆ ಚಿಗುರು, ಹೂವು, ಹಣ್ಣುಗಳಿಂದ ವಿಕಾಸವನ್ನು ಹೊಂದುವುವೋ ಹಾಗೆ ನೀನೂ ನಮ್ಮ ರಾಜನನ್ನು ವಿರಹದುಃಖವಿಲ್ಲದೆ ಅಶೋಕನನ್ನಾಗಿ ಮಾಡು. ॥೬೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### ॥ ಪಂಚವಿಂಶೋಽಧ್ಯಾಯಃ ॥

### ಇಪ್ಪತ್ತೈದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ವಿರರಾಮಾಸೌ ವಚನಂ ಧೂಮ್ರಲೋಚನಃ ।
ಪ್ರತ್ಯುವಾಚ ತದಾ ಕಾಳೀ ಪ್ರಹಸ್ಯ ಲಲಿತಂ ವಚಃ ॥೧॥

ವಿದೂಷಕೋಽಸಿ ಜಾಲ್ಮತ್ವಂ ಶೈಲೂಷ ಇವ ಭಾಷಸೇ ।
ವೃಥಾ ಮನೋರಥಾಂಶ್ಚಿತ್ತೇ ಕರೋಷಿ ಮಧುರಂ ವದನ್ ॥೨॥

---

ವ್ಯಾಸಋಷಿಯು ಹೇಳಿದನು—ಈ ಧೂಮ್ರಲೋಚನನು ಹೀಗೆಂದು ಹೇಳಿ ಮುಂದೆ ದೇವಿಯು ಏನನ್ನು ಹೇಳುವಳೋ ಕೇಳೋಣವೆಂದು ಸುಮ್ಮನಾದನು. ಆಗ ಕಾಳಿಯು ನಕ್ಕು ಮೃದುವಾದ ಮಾತನ್ನು ಉತ್ತರವಾಗಿ ಹೀಗೆ ಹೇಳಿದಳು. ॥೧॥

ಎಲೈ ನೀಚನೇ, ನೀನು ವಿದೂಷಕನಂತೆ ಹಾಸ್ಯಗಾರನಾಗಿರುತ್ತೀಯೆ. ನಿನ್ನ ಮಾತನ್ನು ಕೇಳಿ ನನಗೆ ತುಂಬ ನಗುವು ಬರುತ್ತದೆ. ಅಲ್ಲದೆ ನಾಟಕಾದಿಗಳಲ್ಲಿರುವ ಆಟಗಾರನಂತೆ ನೀನು ಮಾತನಾಡುತ್ತೀಯೆ. ಮತ್ತು ನಿನ್ನ ಮನಸ್ಸಿನಲ್ಲಿ ನಿನಗೆ ಇಚ್ಛೆಬಂದಂತೆ ಅಭಿಲಾಷೆಗಳನ್ನು ಕಲ್ಪಿಸಿಕೊಂಡು ಕಿವಿಗೆ ಮಾತ್ರ ಇಂಪಾಗಿರುವಂತೆ ಮಾತನಾಡುತ್ತೀಯೆ ! ॥೨॥

ಬಲವಾನ್ ಬಲಸಂಯುಕ್ತಃ ಪ್ರೇಷಿತೋಽಸಿ ದುರಾತ್ಮನಾ ।
ಕುರು ಯುದ್ಧಂ ವೃಥಾವಾದಂ ಮುಂಚ ಮೂಢಮತೇಽಧುನಾ ॥೩॥

ಹತ್ವಾ ಶುಂಭಂ ನಿಶುಂಭಂ ಚ ತ್ವದನ್ಯಾನ್ ವಾ ಬಲಾಧಿಕಾನ್ ।
ದೇವೀ ಕ್ರುದ್ಧಾ ಶರಾಘಾತೈರ್ವ್ರಜಿಷ್ಯತಿ ನಿಜಾಲಯಂ ॥೪॥

ಕ್ವಾಸೌ ಮಂದಮತಿಃ ಶುಂಭಃ ಕ್ವ ವಾ ವಿಶ್ವವಿಮೋಹಿನೀ ।
ಅಯುಕ್ತಃ ಖಲು ಸಂಸಾರೇ ವಿವಾಹವಿಧಿರೇತಯೋಃ ॥೫॥

ಸಿಂಹೀ ಕಿಂ ತ್ವತಿಕಾಮಾರ್ತಾ ಜಂಬುಕಂ ಕುರುತೇ ಪತಿಂ ।
ಕರಿಣೀ ಗರ್ದಭಂ ವಾಽಪಿ ಗವಯಂ ಸುರಭಿಃ ಕಿಮು ॥೬॥

---

ನೀನು ಬಲಿಷ್ಠನು, ಸೇನೆಯಿಂದಲೂ ಕೂಡಿರುತ್ತೀಯೆ. ಇಂಥವನನ್ನು ದುಷ್ಟನಾದ ಆ ಶುಂಭನು ಇಲ್ಲಿಗೆ ಕಳುಹಿಸಿರುತ್ತಾನೆ. ಎಲೈ ದಡ್ಡನೇ, ಈಗ ಯುದ್ಧವನ್ನು ಮಾಡು. ಸುಮ್ಮನೆ ಸುಳ್ಳು-ಪೊಳ್ಳು ಮಾತುಗಳನ್ನು ಆಡಬೇಡ. ||೩||

ದೇವಿಯು ಕೋಪವುಳ್ಳವಳಾಗಿ ಶುಂಭನನ್ನೂ ನಿಶುಂಭನನ್ನೂ ನಿನಗಿಂತಲೂ ಹೆಚ್ಚಾದ ಬಲವುಳ್ಳ ಇತರ ರಾಕ್ಷಸರನ್ನೂ ಸಹ ಬಾಣಗಳ ಹೊಡೆತದಿಂದ ಕೊಂದು ತಾನು ತನ್ನ ಮನೆಯನ್ನು ಹೊಂದುವಳು. ||೪||

ದಡ್ಡನಾದ ಈ ಶುಂಭನೆಲ್ಲಿ! ಪ್ರಪಂಚವನ್ನೆಲ್ಲವನ್ನೂ ಮೋಹಗೊಳಿಸುವ ದೇವಿಯು ಎಲ್ಲಿ! ಸಂಸಾರದಲ್ಲಿ ಸಮನಾದವರಿಗೆ ಬಾಂಧವ್ಯವು ಚನ್ನಾಗಿರುವುದು. ಇವರಿಬ್ಬರೂ ಅದಕ್ಕೆ ವಿಪರೀತವಾಗಿರುವ ಕಾರಣದಿಂದ ಇವರಿಬ್ಬರಿಗೂ ಪರಸ್ಪರವಾಗಿ ಮದುವೆಯು ಅನುರೂಪವಾಗಿರುವುದಿಲ್ಲವು. ||೫||

ಹೆಣ್ಣು ಸಿಂಹವು ಬಹಳ ಕಾಮದಿಂದ ಕೂಡಿದ್ದರೂ ತಾನು ನರಿಯನ್ನು ಪತಿಯನ್ನಾಗಿ ಮಾಡಿಕೊಳ್ಳುವುದೇ? ಹೆಣ್ಣಾನೆಯು ಕತ್ತೆಯನ್ನು ಪತಿಯನ್ನಾಗಿ ಪಡೆಯುವುದೇ ? ಕಾಮಧೇನುವು ಗವಯವನ್ನು ಪತಿಯನ್ನಾಗಿ ಹೊಂದುವುದುಂಟೇ ? ಈ ರೀತಿಯಾಗಿ ಆ ದೇವಿಯೂ ಕೂಡ ತನಗೆ ಅನುರೂಪನಲ್ಲದಿರುವ ಶುಂಭನನ್ನು ಮದುವೆಯಾಗುವುದು ಯುಕ್ತವಾಗಿರುವುದಿಲ್ಲವು ! ||೬||

ಗಚ್ಛ ಶುಂಭಂ ನಿಶುಂಭಂ ಚ ವದ ಸತ್ಯಂ ವಚೋ ಮಮ ।
ಕುರು ಯುದ್ಧಂ ನ ಚೇದ್ಯಾಹಿ ಪಾತಾಲಂ ತರಸಾಽಧುನಾ ॥೭॥

॥ ವ್ಯಾಸ ಉವಾಚ ॥

ಕಾಲಿಕಾಯಾ ವಚಃ ಶ್ರುತ್ವಾ ಸ ದೈತ್ಯೋ ಧೂಮ್ರಲೋಚನಃ ।
ತಾಮುವಾಚ ಮಹಾಭಾಗ ಕ್ರೋಧಸಂರಕ್ತಲೋಚನಃ ॥೮॥

ದುರ್ದರ್ಶೇ ತ್ವಾಂ ನಿಹತ್ಯಾಜೌ ಸಿಂಹಂ ಚ ಮದಗರ್ವಿತಂ ।
ಗೃಹೀತ್ವೈನಾಂ ಗಮಿಷ್ಯಾಮಿ ರಾಜಾನಂ ಪ್ರತ್ಯಹಂ ಕಿಲ ॥೯॥

ರಸಭಂಗಭಯಾತ್ಕಾಲಿ ಬಿಭೇಮಿ ತ್ವಿಹ ಸಾಂಪ್ರತಂ ।
ನೋ ಚೇತ್ತ್ವಾಂ ನಿಶಿತೈರ್ಬಾಣೈರ್ಹನ್ಮ್ಯದ್ಯ ಕಲಹಪ್ರಿಯೇ ॥೧೦॥

---

ಎಲೈ ಧೂಮ್ರಲೋಚನನೇ, ನೀನು ಹೋಗು. ಶುಂಭನಿಗೂ, ನಿಶುಂಭನಿಗೂ ಸಹ ಸತ್ಯವಾದ ನನ್ನ ಈ ಮಾತನ್ನು ಹೇಳು. ಎಲೈ ಶುಂಭ ನಿಶುಂಭರೇ, ನೀವು ಯುದ್ಧವನ್ನು ಮಾಡಿ. ಇಲ್ಲದಿದ್ದರೆ ಬೇಗನೆ ಪಾತಾಳಲೋಕಕ್ಕೆ ಹೋಗಿರಿ. ಎಂಬುದಾಗಿ ನಾನು ಹೇಳಿದೆನೆಂದು ಹೇಳು. ॥೭॥

ವ್ಯಾಸಋಷಿಯು ಹೇಳಿದನು—ಎಲೈ ಅದೃಷ್ಟಶಾಲಿಯಾದ ಜನಮೇಜಯ ರಾಜನೇ, ಕೇಳು. ಕಾಳಿಕಾದೇವಿಯ ಮಾತನ್ನು ಕೇಳಿ ಆ ರಾಕ್ಷಸನಾದ ಧೂಮ್ರಲೋಚನನು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಆ ಕಾಳಿಕಾದೇವಿಯ ಸಂಗಡ ಹೀಗೆ ಮಾತನಾಡಿದನು. ॥೮॥

ನೋಡಲು ಹಿತಕರವಾಗಿಲ್ಲದ ಸ್ವರೂಪವುಳ್ಳ ಕಾಳಿಕಾದೇವಿಯೇ, ನಾನು ಯುದ್ಧದಲ್ಲಿ ನಿನ್ನನ್ನೂ, ಮದದಿಂದ ತುಂಬ ಗರ್ವವುಳ್ಳಸಿಂಹವನ್ನೂ ಕೊಂದು, ಸುಂದರಿಯಾದ ಈ ದೇವಿಯನ್ನು ಸೆರೆಹಿಡಿದುಕೊಂಡು ನಮ್ಮ ದೊರೆಯ ಸಮೀಪಕ್ಕೆ ಹೋಗುವೆನು. ಇದು ಖಂಡಿತವು! ॥೯॥

ಎಲೈ ಕಾಳಿಯೇ, ಬಲವಂತವಾಗಿ ಈ ಸ್ತ್ರೀಯನ್ನು ನಿಗ್ರಹಮಾಡಿ ಕರೆದುಕೊಂಡು ಹೋದಲ್ಲಿ ರಸಭಂಗವಾಗುವುದೆಂದು ಭಯಪಡುತ್ತಿದೇನೆ. ಇಲ್ಲದಿದ್ದರೆ, ಕಲಹದಲ್ಲಿ ಇಷ್ಟವುಳ್ಳವಳಾದ ಕಾಳಿಯೇ, ನಿನ್ನನ್ನು ಈಗಲೇ ಹರಿತವಾದ ಬಾಣಗಳಿಂದ ಕೊಂದುಬಿಡುವೆನು! ॥೧೦॥

|| ಕಾಲಿಕೋವಾಚ ||

**ಕಿಂ ವಿಕತ್ಥಸಿ ಮಂದಾತ್ಮನ್ನಾಯಂ ಧರ್ಮೋ ಧನುಷ್ಮತಾಂ ।**
**ಸ್ವಶಕ್ತ್ಯಾ ಮುಂಚ ವಿಶಿಖಾನ್ ಗಂತಾಽಸಿ ಯಮಸಂಸದಿ ॥೧೧॥**

|| ವ್ಯಾಸ ಉವಾಚ ||

**ತಚ್ಛ್ರುತ್ವಾ ವಚನಂ ದೈತ್ಯಃ ಸಂಗೃಹ್ಯ ಕಾರ್ಮುಕಂ ದೃಢಂ ।**
**ಕಾಲಿಕಾಂ ತಾಂ ಶರಾಸಾರೈರ್ವವರ್ಷಾತಿಶಿಲಾಶಿತೈಃ ॥೧೨॥**

**ದೇವಾಸ್ತು ಪ್ರೇಕ್ಷಕಾಸ್ತತ್ರ ವಿಮಾನವರಸಂಸ್ಥಿತಾಃ ।**
**ತಾಂ ಸ್ತುವಂತೋ ಜಯೇತ್ಯೂಚುರ್ದೇವೀಂ ಶಕ್ರಪುರೋಗಮಾಃ ॥೧೩॥**

**ತಯೋಃ ಪರಸ್ಪರಂ ಯುದ್ಧಂ ಪ್ರವೃತ್ತಂ ಚಾತಿದಾರುಣಂ ।**
**ಬಾಣಖಡ್ಗಗದಾಶಕ್ತಿಮುಸಲಾದಿಭಿರುತ್ಕಟಂ ॥೧೪॥**

---

ಕಾಳಿಕಾದೇವಿಯು ಹೇಳಿದಳು—ಎಲೈ ದಡ್ಡನೇ, ಸುಮ್ಮನೆ ಏತಕ್ಕೆ ಜಂಬದ ಮಾತನಾಡುತ್ತೀಯೆ ? ಹೀಗೆ ಸುಮ್ಮನೆ ವ್ಯರ್ಥವಾಗಿ ಮಾತನಾಡುವುದು ಧನುಸ್ಸನ್ನು ಧರಿಸಿರುವ ಶೂರರಿಗೆ ತಕ್ಕ ನಡವಳಿಕೆಯಲ್ಲವು. ನಿನ್ನ ಶಕ್ತಿಯಿರುವಷ್ಟುಮಟ್ಟಿಗೂ ಬಾಣಗಳನ್ನು ಬಿಡು. ಯುದ್ಧವನ್ನು ಮಾಡು. ಯಮನ ಸಭೆಯನ್ನು ಪಡೆಯುವೆ. ||೧೧||

ವ್ಯಾಸಋಷಿಯು ಹೇಳಿದನು—ರಾಕ್ಷಸನಾದ ಧೂಮ್ರಲೋಚನನು ಆ ಕಾಳಿಕಾದೇವಿಯ ಮಾತುಗಳನ್ನು ಕೇಳಿ ಬಿಲ್ಲನ್ನು ಸಿದ್ಧಪಡಿಸಿ ಬಲವಾಗಿ ಹಿಡಿದುಕೊಂಡು ಆ ಕಾಳಿಕಾದೇವಿಯ ಮೇಲೆ ಕಲ್ಲಿನಂತೆ ಗಟ್ಟಿಯಾದ ಮತ್ತು ಚೂಪಾದ ಬಾಣ ವಿಶೇಷಗಳಿಂದ ಮಳೆಗರೆದನು. ||೧೨||

ಆಗ ಇಂದ್ರನೇ ಮೊದಲಾದ ದೇವತೆಗಳಾದರೋ ಶ್ರೇಷ್ಠವಾದ ವಿಮಾನಗಳಲ್ಲಿ ಕೂತುಕೊಂಡು ಇವರ ಯುದ್ಧವನ್ನು ನೋಡುತ್ತಾ, ಆ ದೇವಿಯನ್ನು ಸ್ತೋತ್ರ ಮಾಡುತ್ತಾ, ದೇವಿಗೆ ಜಯವಾಗಲಿ ! ಎಂಬುದಾಗಿ ಜಯಕಾರವನ್ನು ಮಾಡುತ್ತಿದ್ದರು. ||೧೩||

ಆ ಧೂಮ್ರಲೋಚನನಿಗೂ, ಕಾಳಿಕಾದೇವಿಗೂ ಸಹ ಪರಸ್ಪರವಾಗಿ ಆವೇಶದಿಂದ ಕೂಡಿ ಭಯಂಕರವಾದ ಯುದ್ಧವು ಬಾಣ, ಕತ್ತಿ, ಗದಾಯುಧ, ಶಕ್ತಿ, ಮುಸಲಾಯುಧ ಇವುಗಳಿಂದ ನಡೆಯಿತು. ||೧೪||

ಕಾಲಿಕಾ ಬಾಣಪಾತ್ರೈಸ್ತು ಹತ್ವಾ ಪೂರ್ವಂ ಖರಾನಥ ।
ಬಭಂಜ ತದ್ರಥಂ ವ್ಯೂಢಂ ಜಹಾಸ ಚ ಮುಹುರ್ಮುಹುಃ ॥೧೫॥

ಸ ಚಾನ್ಯಂ ರಥಮಾರೂಢಃ ಕೋಪೇನ ಪ್ರಜ್ವಲನ್ನಿವ ।
ಬಾಣವೃಷ್ಟಿಂ ಚಕಾರೋಗ್ರಾಂ ಕಾಳಿಕೋಪರಿ ಭಾರತ ॥೧೬॥

ಸಾಪಿ ಚಿಚ್ಛೇದ ತರಸಾ ತಸ್ಯ ಬಾಣಾನಸಂಗತಾನ್ ।
ಮುಮೋಚಾನ್ಯಾನುಗ್ರವೇಗಾನ್ದಾನವೋಪರಿ ಕಾಲಿಕಾ ॥೧೭॥

ತೈರ್ಬಾಣೈರ್ನಿಹತಾಸ್ತಸ್ಯ ಪಾರ್ಷ್ಣಿಗ್ರಾಹಾಃ ಸಹಸ್ರಶಃ ।
ಬಭಂಜ ಚ ರಥಂ ವೇಗಾತ್ಸೂತಂ ಹತ್ವಾ ಖರಾನಪಿ ॥೧೮॥

---

ಕಾಳಿಕಾದೇವಿಯು ಮೊದಲು ತನ್ನ ಬಾಣಗಳಿಂದ ಆ ಧೂಮ್ರಲೋಚನನ ರಥದ ಹೇಸರಕತ್ತೆಗಳನ್ನು ಕೊಂದು, ಯುದ್ಧಕ್ಕಾಗಿ ಅಣಿಮಾಡಿ ತಂದಿದ್ದ ಅವನ ರಥವನ್ನು ಮುರಿದು, ಬಾರಿಬಾರಿಗೂ ಅವನನ್ನು ಅಪಹಾಸ್ಯ ಮಾಡಿಕೊಂಡು ನಕ್ಕಳು ॥೧೫॥

ಎಲೈ ಜನಮೇಜಯರಾಜನೇ, ಆ ಧೂಮ್ರಲೋಚನನೂ ಇನ್ನೊಂದು ರಥವನ್ನು ಹತ್ತಿಕೊಂಡು, ಕೋಪದಿಂದ ಉರಿಯುತ್ತಿರುವವನಂತೆ ಕಾಣುತ್ತಾ, ಕಾಳಿಕಾದೇವಿಯ ಮೇಲೆ ಭಯಂಕರವಾದ ಬಾಣಗಳ ಮಳೆಯನ್ನು ಸುರಿಸಿದನು. ॥೧೬॥

ಆ ಕಾಳಿಕಾದೇವಿಯೂ ಕೂಡ ಬೇಗನೆ ಅವನ ಬಾಣಗಳು ತನ್ನ ಹತ್ತಿರಕ್ಕೆ ಬರುವುದಕ್ಕೆ ಮುಂಚಿತವಾಗಿಯೇ ಅವುಗಳನ್ನು ಕತ್ತರಿಸಿದಳು. ಮತ್ತು ರಾಕ್ಷಸನ ಮೇಲೆ ಕ್ರೂರವಾಗಿಯೂ, ವೇಗವಾಗಿಯೂ ಇರುವ ಬೇರೆಬೇರೆಯಾದ ಬಾಣಗಳನ್ನು ಬಿಟ್ಟಳು. ॥೧೭॥

ಆ ಕಾಳಿಕಾದೇವಿಯು ಬಿಟ್ಟ ಬಾಣಗಳಿಂದ ಆ ಧೂಮ್ರಲೋಚನನ ಬೆಂಬಲವಾಗಿ ಬಂದಿದ್ದ ವೈಗಾವಲಿನವರು ಅನೇಕರು ಮೃತರಾದರು. ಅನಂತರದಲ್ಲಿ ಕಾಳಿಕಾದೇವಿಯು ಅವನ ಸಾರಥಿಯನ್ನು ಕೊಂದು, ರಥಕ್ಕೆ ಕಟ್ಟಿದ್ದ ಕತ್ತೆಗಳನ್ನು ಕೊಂದು, ವೇಗದಿಂದ ಅವನ ಆ ರಥವನ್ನೂ ಮುರಿದಳು. ॥೧೮॥

**ಚಿಚ್ಛೇದ ತದ್ಧನುಃ ಸದ್ಯೋ ಬಾಣೈರುರಗಸನ್ನಿಭೈಃ ।**
**ಮುದಂ ಚಕ್ರೇ ಸುರಾಣಾಂ ಸಾ ಶಂಖನಾದಂ ತಥಾಽಕರೋತ್ ॥೧೮॥**

**ವಿರಥಃ ಪರಿಘಂ ಗೃಹ್ಯ ಸರ್ವಲೋಹಮಯಂ ದೃಢಂ ।**
**ಆಜಗಾಮ ರಥೋಪಸ್ಥಂ ಕುಪಿತೋ ಧೂಮ್ರಲೋಚನಃ ॥೨೦॥**

**ವಾಚಾ ನಿರ್ಭರ್ತ್ಸಯನ್ಕಾಲೀಂ ಕರಾಲಃ ಕಾಲಸನ್ನಿಭಃ ।**
**ಅದ್ಯೈವ ತ್ವಾಂ ಹನಿಷ್ಯಾಮಿ ಕುರೂಪೇ ಪಿಂಗಲೋಚನೇ ॥೨೧॥**

**ಇತ್ಯುಕ್ತ್ವಾ ಸಹಸಾಽಽಗತ್ಯ ಪರಿಘಂ ಕ್ಷಿಪತೇ ಯದಾ ।**
**ಹುಂಕಾರೇಣೈವ ತಂ ಭಸ್ಮ ಚಕಾರ ತರಸಾಂಽಬಿಕಾ ॥೨೨॥**

**ದೃಷ್ಟ್ವಾ ಭಸ್ಮೀಕೃತಂ ದೈತ್ಯಂ ಸೈನಿಕಾ ಭಯವಿಹ್ವಲಾಃ ।**
**ಚಕ್ರುಃ ಪಲಾಯನಂ ಸದ್ಯೋ ಹಾ ತಾತೇತ್ಯಬ್ರುವನ್ಪಥಿ ॥೨೩॥**

---

ಆ ಕೂಡಲೆ ಕಾಳಿಕಾದೇವಿಯು ಹಾವಿನಂತಿರುವ ಬಾಣಗಳಿಂದ ಆ ಧೂಮ್ರ ಲೋಚನನ ಧನುಸ್ಸನ್ನು ಕತ್ತರಿಸಿ ಶಂಖವನ್ನು ಊದಿದಳು. ಅದರಿಂದ ದೇವತೆಗಳಿಗೆ ತುಂಬ ಸಂತೋಷ ಉಂಟಾಯಿತು. ||೧೯||

ರಥವಿಲ್ಲದವನಾದ ಆ ಧೂಮ್ರಲೋಚನನು ಎಲ್ಲ ಬಗೆಯ ಲೋಹಗಳಿಂದಲೂ ಮಾಡಲ್ಪಟ್ಟ ಬಲವಾದ ಪರಿಘಾಯುಧವನ್ನು ಹಿಡಿದುಕೊಂಡು ಕೋಪವುಳ್ಳವನಾಗಿ ಕಾಳಿಕಾದೇವಿಯ ರಥದ ಹತ್ತಿರಕ್ಕೆ ಬಂದನು. ||೨೦||

ಕಾಲಪುರುಷನಿಗೆ ಸಮಾನನಾಗಿಯೂ, ಭಯಂಕರನಾಗಿಯೂ ಇರುವ ಧೂಮ್ರಲೋಚನನು ದೇವಿಯನ್ನು ಕುರಿತು, ಕೆಂಗಣ್ಣಿನ ಕುರೂಪಿಯಾದ ಕಾಳಿಯೇ, ನಿನ್ನನ್ನು ಈಗಲೆ ಕೊಂದುಬಿಡುವೆನು, ಎಂಬುದಾಗಿ ಮಾತಿನಿಂದ ಹೆದರಿಸುತ್ತಾ ಕಾಳಿಯ ಸಮಾಪಕ್ಕೆ ಬಂದು ಬೇಗನೆ ಪರಿಘಾಯುಧವನ್ನು ವೇಗವಾಗಿ ಬೀಸಿ ಹೊಡೆಯುವುದರೊಳಗಾಗಿಯೇ ಅಂಬಿಕಾದೇವಿಯು ಅವನನ್ನು ತನ್ನ ಹುಂಕಾರ ಮಾತ್ರದಿಂದ ಬೇಗನೆ ಸುಟ್ಟು ಭಸ್ಮಮಾಡಿದಳು. ||೨೧-೨೨||

ಧೂಮ್ರಲೋಚನನೆಂಬ ರಾಕ್ಷಸನನ್ನು ಆ ದೇವಿಯು ಭಸ್ಮಮಾಡಿದುದನ್ನು ನೋಡಿ ಆ ಯುದ್ಧದಲ್ಲಿ ಉಳಿದಿದ್ದ ರಾಕ್ಷಸ ಸೈನಿಕರು ಹೆದರಿಕೆಯಿಂದ ಸ್ಮೃತಿಯಿಲ್ಲ

ದೇವಾಸ್ತಂ ನಿಹತಂ ದೃಷ್ಟ್ವಾ ದಾನವಂ ಧೂಮ್ರಲೋಚನಂ ।
ಮುಮುಚುಃ ಪುಷ್ಪವೃಷ್ಟಿಂ ತೇ ಮುದಿತಾ ಗಗನೇ ಸ್ಥಿತಾಃ ॥೨೪॥

ರಣಭೂಮಿಸ್ತದಾ ರಾಜನ್ ದಾರುಣಾ ಸಮಪದ್ಯತ ।
ನಿಹತೈರ್ದಾನವೈರಶ್ವೈಃ ಖರೈಶ್ಚ ವಾರಣೈಸ್ತಥಾ ॥೨೫॥

ಗೃಧ್ರಾಃ ಕಾಕಾ ವಟಾಃ ಶ್ಯೇನಾ ವರಘಾ ಜಂಬುಕಾಸ್ತಥಾ ।
ನನೃತುಶ್ಚುಕ್ರುಶುಃ ಪ್ರೇತಾನ್ ಪತಿತಾನ್ರಣಭೂಮಿಷು ॥೨೬॥

ಅಂಬಿಕಾ ತದ್ರಣಸ್ಥಾನಂ ತ್ಯಕ್ತ್ವಾ ದೂರಂ ಸ್ಥಲಾಂತರೇ ।
ಗತ್ವಾ ಚಕಾರ ಚಾಪ್ಯುಗ್ರಂ ಶಂಖನಾದಂ ಭಯಪ್ರದಂ ॥೨೭॥

---

ದವರಾಗಿ ಆ ಕ್ಷಣದಲ್ಲಿಯೆ ಅಯ್ಯೋ! ಅಪ್ಪ! ಎಂಬುದಾಗಿ ದಾರಿಯಲ್ಲೆಲ್ಲಾ ಕೂಗುತ್ತಾ ಓಡಿಹೋದರು. ॥೨೩॥

ದೇವತೆಗಳು ಆ ದಾನವನಾದ ಧೂಮ್ರಲೋಚನನು ಯುದ್ಧದಲ್ಲಿ ಹತನಾದುದನ್ನು ನೋಡಿ ಅಂತರಿಕ್ಷದಿಂದ ಸಂತೋಷದೊಡನೆ ದೇವಿಯಮೇಲೆ ಹೂವಿನ ಮಳೆಯನ್ನು ಕರೆದರು. ॥೨೪॥

ಎಲೈ ಜನಮೇಜಯರಾಜನೇ, ಅಲ್ಲಿ ಯುದ್ಧಭೂಮಿಯು, ಆಗ ಕೊಲ್ಲಲ್ಪಟ್ಟ ರಾಕ್ಷಸರು, ಕುದುರೆಗಳು, ಹೇಸರಕತ್ತೆಗಳು, ಆನೆಗಳು, ಇವುಗಳ ಶರೀರಗಳಿಂದ ಭಯಂಕರವಾಗಿ ಇತ್ತು. ॥೨೫॥

ಹದ್ದುಗಳು, ವಟಗಳು ವರಘಗಳೆಂಬ ಪಿಶಾಚವಿಶೇಷಗಳು, ಗಿಡಗಗಳು, ಕಾಗೆಗಳು, ನರಿಗಳು, ಇವೆಲ್ಲವೂ ಯುದ್ಧರಂಗದಲ್ಲಿ ಸತ್ತುಬಿದ್ದಿರುವವರನ್ನು ನೋಡಿ ಕುಣಿದಾಡುತ್ತಿದ್ದುವು. ಮತ್ತು ಕೋಲಾಹಲವನ್ನು ಮಾಡುತ್ತಿದ್ದುವು. ॥೨೬॥

ಅಂಬಿಕಾದೇವಿಯು ಆ ಪ್ರಕಾರವಾಗಿರುವ ಆ ಯುದ್ಧಭೂಮಿಯನ್ನು ಬಿಟ್ಟು ಅದಕ್ಕೆ ದೂರವಾಗಿರುವ ಬೇರೆ ಸ್ಥಳದಲ್ಲಿ ಇದ್ದುಕೊಂಡು ಕ್ರೂರವಾಗಿಯೂ, ರಾಕ್ಷಸರಿಗೆ ಭಯವನ್ನುಂಟುಮಾಡುವುದಾಗಿಯೂ ಇರುವಂತೆ ಶಂಖಧ್ವನಿಯನ್ನು ಮಾಡಿದಳು. ॥೨೭॥

ತಂ ಶ್ರುತ್ವಾ ದರಶಬ್ದಂ ತು ಶುಂಭಃ ಸದ್ಮನಿ ಸಂಸ್ಥಿತಃ ।
ದೃಷ್ಟ್ವಾಽಥ ದಾನವಾನ್ಭಗ್ನಾನಾಗತಾನ್ ರುಧಿರೋಕ್ಷಿತಾನ್ ॥೨೮॥

ಛಿನ್ನಪಾದಕರಾಕ್ಷಾಂಶ್ಚ ಮಂಚಕೋಪರಿ ತಾನಪಿ ।
ಭಗ್ನಪೃಷ್ಠಕಟಿಗ್ರೀವಾನ್ಕ್ರಂದಮಾನಾನನೇಕಶಃ ॥೨೯॥

ವೀಕ್ಷ್ಯ ಶುಂಭೋ ನಿಶುಂಭಶ್ಚ ಕ್ವ ಗತೋ ಧೂಮ್ರಲೋಚನಃ ।
ಕಥಂ ಭಗ್ನಾಃ ಸಮಾಯಾತಾ ನಾಽಽನೀತಾ ಕಿಂ ವರಾನನಾ ॥೩೦॥

ಸೈನ್ಯಂ ಕುತ್ರ ಗತಂ ಮಂದಾಃ ಕಥಯಂತು ಯಥೋಚಿತಂ ।
ಕಸ್ಯಾಯಂ ಶಂಖನಾದೋಽದ್ಯ ಶ್ರೂಯತೇ ಭಯವರ್ಧನಃ ॥೩೧॥

---

ಶುಂಭನು ತನ್ನ ಮನೆಯಲ್ಲಿ ಇರುವವನಾಗಿ ಆ ಪ್ರಕಾರವಾಗಿರುವ ಶಂಖ ಧ್ವನಿಯನ್ನು ಕೇಳಿ, ಯುದ್ಧದಲ್ಲಿ ಹಿಮ್ಮೆಟ್ಟಿದವರಾಗಿಯೂ, ಹಿಂದಕ್ಕೆ ಬಂದಿರುವವ ರಾಗಿಯೂ, ರಕ್ತವನ್ನು ಸುರಿಸುತ್ತಿರುವವರಾಗಿಯೂ, ಇರುವ ರಾಕ್ಷಸರನ್ನು ನೋಡಿ ದನು. ||೨೮||

ಕಾಲುಕತ್ತರಿಸಲ್ಪಟ್ಟವರು, ಕೈಯನ್ನು ಕಳೆದುಕೊಂಡವರು, ಕಣ್ಣು ಹೋದ ವರು, ದೋಲಿ ಮುಂತಾದ್ದರಲ್ಲಿ ಹಾಕಿಕೊಂಡು ತರಲ್ಪಟ್ಟವರು, ಬೆನ್ನು, ಕಿಬ್ಬೊಟ್ಟೆ, ಕುತ್ತಿಗೆ, ಇವುಗಳಲ್ಲಿ ತುಂಬಾ ಏಟು ಬಿದ್ದಿರುವವರು ಅನೇಕ ಬಗೆಯಾಗಿ ಕಿರುಚುತ್ತಿ ರುವವರು, ಈ ಪ್ರಕಾರವಾಗಿ ಇರುವ ಸೈನಿಕರನ್ನು ನೋಡಿದನು. ಇವರನ್ನು ನೋಡಿ ಶುಂಭನು ಮತ್ತು ನಿಶುಂಭನೂ ಸಹ ಯೋಚಿಸಿದರು. ಧೂಮ್ರಲೋಚನನು ಎಲ್ಲಿಗೆ ಹೋದನು ? ||೨೯||

ಶುಂಭ ನಿಶುಂಭರು ಇವರುಗಳನ್ನು ನೋಡಿ, ನೀವೆಲ್ಲರೂ ಯುದ್ಧಕ್ಕೆ ಹೋದವರು ಏತಕ್ಕೆ ಭಗ್ನರಾಗಿ ಹಿಂದಕ್ಕೆ ಬಂದಿರಿ ? ಆ ಸ್ತ್ರೀಯನ್ನು ಏತಕ್ಕೆ ಕರತರಲಿಲ್ಲ ? ಎಲೈ ದಡ್ಡರಾ, ಅಷ್ಟುಮಟ್ಟಿನದಾದ ಸೇನೆಯು ಎಲ್ಲಿ ಹೋಯಿತು ? ಈಗ ಭಯವನ್ನು ಹೆಚ್ಚಿಸುತ್ತಿರುವ ಶಂಖಧ್ವನಿಯನ್ನು ಯಾರು ಮಾಡುತ್ತಿರುವವರು ? ಇವೆಲ್ಲವನ್ನೂ ಈ ಕಾಲಕ್ಕೆ ಉಚಿತವಾಗಿರುವ ರೀತಿಯಿಂದ ತಿಳಿಸಿರಿ, ಎಂದು ಕೇಳಿದರು. ||೩೦-೩೧||

|| ಗಣಾ ಊಚುಃ ||

ಬಲಂ ಚ ಪಾತಿತಂ ಸರ್ವಂ ನಿಹತೋ ಧೂಮ್ರಲೋಚನಃ ।
ಕೃತಂ ಕಾಲಿಕಯಾ ಕರ್ಮ ರಣಭೂಮಾವಮಾನುಷಂ ||೩೨||

ಶಂಖನಾದೋಽಂಬಿಕಾಯಾಸ್ತು ಗಗನಂ ವ್ಯಾಪ್ಯ ರಾಜತೇ ।
ಹರ್ಷದಃ ಸುರಸಂಘಾನಾಂ ದಾನವಾನಾಂ ಚ ಶೋಕಕೃತ್ ||೩೩||

ಯದಾ ನಿಪಾತಿತಾಃ ಸರ್ವೇ ತೇನ ಕೇಸರಿಣಾ ವಿಭೋ ।
ರಥಾ ಭಗ್ನಾ ಹಯಾಶ್ಚೈವ ಬಾಣಪಾತೈರ್ವಿನಾಶಿತಾಃ ||೩೪||

ಗಗನಸ್ಥಾಃ ಸುರಾಶ್ಚಕ್ರುಃ ಪುಷ್ಪವೃಷ್ಟಿಂ ಮುದಾನ್ವಿತಾಃ ।
ದೃಷ್ಟ್ವಾ ಭಗ್ನಂ ಬಲಂ ಸರ್ವಂ ಪಾತಿತಂ ಧೂಮ್ರಲೋಚನಂ ||೩೫||

---

ಸೇನೆಯ ಗುಂಪಿನವರು ಹೇಳಿದರು—ಸೇನೆಯೆಲ್ಲವೂ ನಾಶವಾಯಿತು. ಧೂಮ್ರಲೋಚನನು ಕೊಲ್ಲಲ್ಪಟ್ಟನು. ಯುದ್ಧಭೂಮಿಯಲ್ಲಿ ಕಾಳಿಕಾದೇವಿಯಿಂದ ಮನುಷ್ಯರಿಂದ ಮಾಡಲ್ಪಡದಿರುವಷ್ಟು ಕೆಲಸವು ಮಾಡಲ್ಪಟ್ಟಿತು! ||೩೨||

ಅಂಬಿಕಾದೇವಿಯ ಶಂಖನಾದವು ಅಂತರಿಕ್ಷದಲ್ಲಿ ಹರಡಿಕೊಂಡು ಪ್ರಕಾಶಿಸುತ್ತಿದೆ. ಇದು ದೇವತೆಗಳ ಸಂತೋಷವನ್ನು ಹೆಚ್ಚಿಸುತ್ತಿರುತ್ತದೆ. ರಾಕ್ಷಸರಿಗೆ ದುಃಖವನ್ನುಂಟುಮಾಡುವುದಾಗಿರುತ್ತದೆ. ||೩೩||

ಎಲೈ ಪ್ರಭುವೇ, ಆ ಸಿಂಹದಿಂದ ಯಾವಾಗ ಎಲ್ಲರೂ ಕೆಡವಲ್ಪಟ್ಟಿವೊ, ಆಗ ಬಾಣಗಳಿಂದ ರಥಗಳು ಮುರಿಯಲ್ಪಟ್ಟವು. ಕುದುರೆಗಳೆಲ್ಲವೂ ನಾಶಮಾಡಲ್ಪಟ್ಟವು. ||೩೪||

ಸೇನೆಯೆಲ್ಲವೂ ನಾಶವನ್ನು ಹೊಂದಿ, ಧೂಮ್ರಲೋಚನನು ಹತನಾದದ್ದನ್ನು ನೋಡಿ ಅಂತರಿಕ್ಷದಲ್ಲಿರುವವರಾಗಿ ದೇವತೆಗಳೆಲ್ಲರೂ ಸಂತೋಷದಿಂದ ಕೂಡಿದವರಾಗಿ ದೇವಿಯ ಮೇಲೆ ಹೂವಿನ ಮಳೆಯನ್ನು ಕರೆದರು. ||೩೫||

ನಿಶ್ಚಯಸ್ತು ಕೃತೋಽಸ್ಮಾಭಿರ್ಜಯೋ ನೈವ ಭವೇದಿತಿ ।
ವಿಚಾರಂ ಕುರು ರಾಜೇಂದ್ರ ಮಂತ್ರಿಭಿರ್ಮಂತ್ರವಿತ್ತಮೈಃ ॥೩೬॥

ವಿಸ್ಮಯೋಽಯಂ ಮಹಾರಾಜ ಯದೇಕಾ ಜಗದಂಬಿಕಾ ।
ಭವದ್ಭಿಃ ಸಹ ಯುದ್ಧಾಯ ಸಂಸ್ಥಿತಾ ಸೈನ್ಯವರ್ಜಿತಾ ॥೩೭॥

ನಿರ್ಭಯೈಕಾಕಿನೀ ಬಾಲಾ ಸಿಂಹಾರೂಢಾ ಮದೋತ್ಕಟಾ ।
ಚಿತ್ರಮೇತನ್ಮಹಾರಾಜ ಭಾಸತೇಽದ್ಭುತಮಂಜಸಾ ॥೩೮॥

ಸಂಧಿರ್ವಾ ವಿಗ್ರಹೋ ವಾಽದ್ಯ ಸ್ಥಾನಂ ನಿರ್ಯಾಣಮೇವ ಚ ।
ಮಂತ್ರಯಿತ್ವಾ ಮಹಾರಾಜ ಕುರು ಕಾರ್ಯಂ ಯಥಾರುಚಿ ॥೩೯॥

---

ಇವೆಲ್ಲವನ್ನೂ ನೋಡಿ ನಾವುಗಳು, ನಿನಗೆ ಖಂಡಿತವಾಗಿಯೂ ಜಯವು ಆಗುವುದಿಲ್ಲವೆಂದು ನಿಶ್ಚಯಮಾಡಿದೆವು. ಓ ರಾಜಶ್ರೇಷ್ಠನೇ, ಮಂತ್ರಾಲೋಚನೆಯನ್ನು ಮಾಡುವುದರಲ್ಲಿ ಬುದ್ಧಿವಂತರಾದವರನ್ನು ಸೇರಿಸಿಕೊಂಡು ಮಂತ್ರಿಗಳೊಡನೆ ನೀನು ಆಲೋಚನೆಯನ್ನು ಮಾಡು. ॥೩೬॥

ಯಾವ ಜಗನ್ಮಾತೆಯೊಬ್ಬಳೇ ಸೇನೆಯೂ ಇಲ್ಲದಿರುವವಳಾಗಿ ನಿಮ್ಮ ಸಂಗಡ ಯುದ್ಧಕ್ಕೋಸ್ಕರ ಸಿದ್ಧಳಾಗಿ ನಿಂತಿರುವುದು ಬಹಳ ಆಶ್ಚರ್ಯಕರವಾಗಿರುತ್ತದೆ. ಎಲೈ ಮಹಾರಾಜನೇ, ಇನ್ನೂ ಹುಡುಗಿಯಾಗಿ, ಒಬ್ಬಂಟಿಗಳಾಗಿ, ಯಾವ ಭಯವೂ ಇಲ್ಲದಿರುವವಳಾಗಿ, ದೇವಿಯು ಮದದಿಂದ ತುಂಬಿದವಳಾಗಿ, ಸಿಂಹವನ್ನು ಹತ್ತಿಕೊಂಡು ಯುದ್ಧಮಾಡಲು ಸಿದ್ಧಳಾಗಿರುವುದು ಬಹಳಮಟ್ಟಿನ ಆಶ್ಚರ್ಯವನ್ನುಂಟುಮಾಡುತ್ತಿರುವುದು ! ॥೩೭-೩೮॥

ಎಲೈ ಮಹಾರಾಜನೇ, ಈಗ ನೀನು ಸಂಧಿಯನ್ನಾಗಲಿ, ಯುದ್ಧವನ್ನಾಗಲಿ ಶತ್ರುವಿನ ವಿಪತ್ಕಾಲ ನಿರೀಕ್ಷಣೆಗೋಸ್ಕರ ಉದಾಸೀನನಾಗಿ ಕೂತಿರುವಿಕೆಯನ್ನಾಗಲಿ, ಸ್ಥಳಾಂತರಕ್ಕೆ ಪ್ರಯಾಣವನ್ನಾಗಲಿ, ನಿನ್ನ ಮಂತ್ರಿಗಳೊಡನೆ ಆಲೋಚಿಸಿ ನಿನಗೆ ಇಷ್ಟಬಂದಂತೆ ಮಾಡು. ಮತ್ತು ಇತರ ಕಾರ್ಯಗಳನ್ನು ಸಹ ಬೇಗನೆ ನೆರವೇರಿಸು. ॥೩೯॥

ತತ್ಸನ್ನಿಧೌ ಬಲಂ ನಾಸ್ತಿ ತಥಾಪಿ ಶತ್ರುತಾಪನ ।
ಪಾರ್ಷ್ಣಿಗ್ರಾಹಾಃ ಸುರಾಃ ಸರ್ವೇ ಭವಿಷ್ಯಂತಿ ಕಿಲಾಽಽಪದಿ ॥೪೦॥

ಸಮಯೇ ತತ್ಸಮೀಪಸ್ಥೌ ಜ್ಞಾತೌ ಚ ಹರಿಶಂಕರೌ ।
ಲೋಕಪಾಲಾಃ ಸಮೀಪೇಽದ್ಯ ವರ್ತಂತೇ ಗಗನೇ ಸ್ಥಿತಾಃ ॥೪೧॥

ರಕ್ಷೋಗಣಾಶ್ಚ ಗಂಧರ್ವಾಃ ಕಿನ್ನರಾ ಮಾನುಷಾಸ್ತಥಾ ।
ತತ್ಸಹಾಯಾಶ್ಚ ಮಂತವ್ಯಾಃ ಸಮಯೇ ಸುರತಾಪನ ॥೪೨॥

ಅಸ್ಮಾಕಂ ಮತಿಮಾನೇನ ಜ್ಞಾಯತೇ ಸರ್ವಥೇದೃಶಂ ।
ಅಂಬಿಕಾಯಾಃ ಸಹಾಯಾಽಽಶಾ ತತ್ಕಾರ್ಯಾಶಾ ನ ಕಾಚನ ॥೪೩॥

---

ಓ ಶತ್ರುಗಳನ್ನು ನಾಶಮಾಡುವ ರಾಜನೇ, ಆ ದೇವಿಯ ಸನ್ನಿಧಿಯಲ್ಲಿ ಸೇನೆಯು ಇಲ್ಲವು. ಆದಾಗ್ಯೂ ಈ ದೇವಿಯು ಯುದ್ಧ ಮಾಡುವ ವೇಳೆಯಲ್ಲಿ ವಿಪತ್ತು ಒದಗುವಂತಾದರೆ ಅಂಥಾ ಕಾಲದಲ್ಲಿ ಆ ದೇವಿಗೆ ದೇವತೆಗಳೆಲ್ಲರೂ ರಕ್ಷಕ ರಾಗಿರುವರು. ॥೪೦॥

ಆ ದೇವಿಗೆ ಕಷ್ಟವುಂಟಾಗುವ ಕಾಲದಲ್ಲಿ ವಿಷ್ಣುವೂ, ಈಶ್ವರನೂ ಸಹ ಆ ದೇವಿಯ ಸಮೀಪದಲ್ಲಿರುತ್ತಾರೆಂತ ತಿಳಿದುಬಂದಿರುತ್ತದೆ. ಮತ್ತು ಲೋಕಪಾಲಕ ರಾದ ದೇವತೆಗಳೆಲ್ಲರೂ ಅಂತರಿಕ್ಷದಲ್ಲಿ ಈಗಲೂ ಆ ದೇವಿಯ ಸಮೀಪದಲ್ಲಿರು ವರು. ॥೪೧॥

ದೇವತೆಗಳನ್ನು ನಿಗ್ರಹ ಮಾಡತಕ್ಕ ಎಲೈ ರಾಜನೇ, ಭೂತಗಳ ಸಮೂಹವು, ಗಂಧರ್ವರೂ, ಕಿನ್ನರರೂ, ಮನುಷ್ಯರೂ ಸಹ ಆ ದೇವಿಗೆ ಆಯಾಯ ಕಾಲದಲ್ಲಿ ಸಹಾಯಕರಾಗಿರುವರು. ॥೪೨॥

ನಮ್ಮ ಬುದ್ಧಿಗೆ ತಿಳಿದಮಟ್ಟಿಗೆ ಇವೆಲ್ಲವನ್ನೂ ಇಷ್ಟರಮಟ್ಟಿಗೆ ಹೀಗೆ ತಿಳಿದಿರು ವೆವು. ಅಂಬಿಕಾದೇವಿಗೆ ಇತರರು ಸಹಾಯ ಮಾಡಬೇಕೆಂಬ ಆಶೆಯೂ ಮತ್ತು ಆ ದೇವಿಯು ಮಾಡುವ ಕೆಲಸಗಳಿಗೆ ಇತರರ ಬೆಂಬಲದ ಬರವಸೆಯೂ ಸಹ ಯಾವುದೂ ಕಂಡುಬರುವುದಿಲ್ಲವು. ॥೪೩॥

ಏಕಾ ನಾಶಯಿತುಂ ಶಕ್ತಾ ಜಗತ್ಸರ್ವಂ ಚರಾಚರಂ ।
ಕಾ ಕಥಾ ದಾನವಾನಾಂ ತು ಸರ್ವೇಷಾಮಿತಿ ನಿಶ್ಚಯಃ ॥೪೪॥

ಇತಿ ಜ್ಞಾತ್ವಾ ಮಹಾರಾಜ ಯಥಾರುಚಿ ತಥಾ ಕುರು ।
ಹಿತಂ ಸತ್ಯಂ ಮಿತಂ ವಾಕ್ಯಂ ವಕ್ತವ್ಯಮನುಯಾಯಿಭಿಃ ॥೪೫॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತೇಷಾಂ ಶುಂಭಃ ಪರಬಲಾರ್ದನಃ ।
ಕನೀಯಾಂಸಂ ಸಮಾನೀಯ ಪಪ್ರಚ್ಛ ರಹಸಿ ಸ್ಥಿತಃ ॥೪೬॥

ಭ್ರಾತಃ ಕಾಲಿಕಯಾದ್ಯೈವ ನಿಹತೋ ಧೂಮ್ರಲೋಚನಃ ।
ಬಲಂ ಚ ಶಾತಿತಂ ಸರ್ವಂ ಗಣಾ ಭಗ್ನಾಃ ಸಮಾಗತಾಃ ॥೪೭॥

---

ಸಮಸ್ತವಾದ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವನ್ನೂ, ಅಂಬಿಕಾ ದೇವಿಯೊಬ್ಬಳೇ ನಾಶಮಾಡಲು ಸಮರ್ಥಳಾಗಿರುವಳು. ಹೀಗಿರುವಲ್ಲಿ, ಎಲ್ಲಾ ರಾಕ್ಷಸರನ್ನೂ ನಿಗ್ರಹ ಮಾಡುವ ವಿಷಯದಲ್ಲಿ ವಿಚಾರವೇನಿರುವುದು ? ಏನೂ ಇಲ್ಲವು. ಎಂದು ನಾವು ಅನುಭವದಿಂದ ನಿಶ್ಚಯಿಸಿರುವೆವು. ॥೪೪॥

ಎಲೈ ಅದೃಷ್ಟಶಾಲಿಯಾದ ರಾಜನೇ, ನಿನ್ನನ್ನು ಅನುಸರಿಸಿಕೊಂಡು ಜೀವಿಸುವ ನಾವು ನಿನಗೆ ಹಿತವಾಗಿರುವ ಮತ್ತು ನಿಜವಾಗಿರುವ ಮಾತನ್ನು ಎಷ್ಟು ಹೇಳಬಹುದೋ ಅಷ್ಟನ್ನು ಮಾತ್ರ ಹೇಳಬೇಕು. ಅಷ್ಟನ್ನು ನಾವುಗಳು ಈಗ ಹೇಳಿರುತ್ತೇವೆ. ಈ ಮಾತನ್ನು ಕೇಳಿ ನಿನಗೆ ಹೇಗೆ ತೋರುವುದೋ ಹಾಗೆ ನಡೆಸಬೇಕು. ॥೪೫॥

ವ್ಯಾಸಋಷಿಯು ಹೇಳಿದನು—ಶತ್ರುಸೇನೆಯನ್ನು ನಾಶಪಡಿಸುವ ಶುಂಭನು ಅವರ ಮಾತುಗಳನ್ನು ಕೇಳಿ ಏಕಾಂತದಲ್ಲಿದ್ದುಕೊಂಡು ತನ್ನ ತಮ್ಮನನ್ನು ಕರೆಸಿ ಪ್ರಶ್ನೆ ಮಾಡಿದನು. ॥೪೬॥

ಎಲೈ ತಮ್ಮನೇ, ಕಾಳಿಕಾದೇವಿಯಿಂದ ಈಗತಾನೆ ಧೂಮ್ರಲೋಚನನು ಕೊಲ್ಲಲ್ಪಟ್ಟನು. ಸೇನೆಯು ಎಲ್ಲವೂ ನಾಶಪಡಿಸಲ್ಪಟ್ಟಿತು. ಸೇನೆಗಳ ಗುಂಪುಗಳೆಲ್ಲವೂ ಚದರಿಹೋಗಿ ಬೇರೆ ಬೇರೆಯಾಗಿ ಬಂದಿರುತ್ತದೆ. ॥೪೭॥

ಅಂಬಿಕಾ ಶಂಖನಾದಂ ವೈ ಕರೋತಿ ಮುದಗರ್ವಿತಾ ।
ಜ್ಞಾನಿನಾಂ ಚೈವ ದುರ್ಜ್ಞೇಯಾ ಗತಿಃ ಕಾಲಸ್ಯ ಸರ್ವಥಾ ॥೪೮॥

ತೃಣಂ ವಜ್ರಾಯತೇ ನೂನಂ ವಜ್ರಂ ಚೈವ ತೃಣಾಯತೇ ।
ಬಲವಾನ್ಬಲಹೀನಃ ಸ್ಯಾದ್ದೈವಸ್ಯ ಗತಿರೀದೃಶೀ ॥೪೯॥

ಪೃಚ್ಛಾಮಿ ತ್ವಾಂ ಮಹಾಭಾಗ ಕಿಂಕರ್ತವ್ಯಮಿತಃ ಪರಂ ।
ಅಭೋಗ್ಯಾ ಚಾಂಬಿಕಾ ನೂನಂ ಕಾರಣಾದತ್ರ ವಾ ಗತಾ ॥೫೦॥

ಯುಕ್ತಂ ಪಲಾಯನಂ ವೀರ ಯುದ್ಧಂ ವಾ ವದ ಸತ್ವರಂ ।
ಲಘುಂ ಜ್ಯೇಷ್ಠಂ ನಿಜಾನಾಮಿ ತ್ವಾಮಹಂ ಕಾರ್ಯಸಂಕಟೇ ॥೫೧॥

---

ಅಂಬಿಕೆಯಾದರೋ ಮದದಿಂದ ಗರ್ವವುಳ್ಳವಳಾಗಿ ಶಂಖಧ್ವನಿಯನ್ನು ಮಾಡುತ್ತಿರುವಳು. ಜ್ಞಾನಿಗಳೂ ಕೂಡ ಸರ್ವಪ್ರಕಾರದಿಂದಲೂ, ಕಾಲದ ಸ್ಥಿತಿಗತಿಗಳನ್ನೂ ತಿಳಿಯಲಾರರು. ॥೪೮॥

ಹುಲ್ಲುಕಡ್ಡಿಯೂ ವಜ್ರಾಯುಧದಂತೆ ವಿಷಮಕಾಲದಲ್ಲಿ ಪರಿಣಮಿಸುವುದು, ಅನುಕೂಲ ಕಾಲದಲ್ಲಿ ವಜ್ರಾಯುಧವು ಹುಲ್ಲುಕಡ್ಡಿಯಾಗಿರುವುದು. ಬಲವುಳ್ಳವನೂ, ಬಲವಿಲ್ಲದವನಾಗಿ ನಾಶವನ್ನು ಹೊಂದುವನು ! ದೈವಗತಿಯು ಈ ಪ್ರಕಾರವಾಗಿರುವುದು. ॥೪೯॥

ನಮಗೆ ಅಪಜಯವು ಆಗಿರುವ ಕಾರಣ ಇಲ್ಲಿಗೆ ಬಂದಿರುವ ಅಂಬಿಕೆಯು ಖಂಡಿತವಾಗಿಯೂ ನಮಗೆ ಭೋಗ್ಯಳಲ್ಲವು. ಆದ್ದರಿಂದ ಅವಳು ಹೇಳಿರುವಂತೆ ನಾವುಗಳು ಈ ಸ್ಥಳವನ್ನು ಬಿಟ್ಟು ಓಡುವುದು ಯುಕ್ತವೋ, ಅಥವಾ ಯುದ್ಧವನ್ನು ಮಾಡುವುದು ಯುಕ್ತವೋ ? ಇವೆರಡರಲ್ಲಿ ಇನ್ನು ಮುಂದೆ ಯಾವುದನ್ನು ಮಾಡತಕ್ಕದ್ದು ಎಂಬುದನ್ನು ನಿಶ್ಚಯಿಸಲು ನಿನ್ನನ್ನು ನಾನು ಕೇಳುತ್ತೇನೆ. ॥೫೦॥

ಎಲೈ ವೀರನಾದ ನಿಶುಂಭನೇ, ನಾನು ಈಗ ಕೆಲಸಮಾಡುವ ವಿಷಯದಲ್ಲಿ ಗುರು, ಲಾಘವಗಳನ್ನು ತಿಳಿಯಲಾರದೆ ಇದ್ದೇನೆ. ಈಗ ಓಡುವುದು ಯುಕ್ತವೋ, ಯುದ್ಧಮಾಡುವುದು ಯುಕ್ತವೋ, ಯಾವುದನ್ನು ಮಾಡಬೇಕು ? ಎಂಬುದನ್ನು ನಿಶ್ಚಯಿಸಿ ನೀನು ಹೇಳು. ॥೫೧॥

|| ನಿಶುಂಭ ಉವಾಚ ||

**ನ ವಾ ಪಲಾಯನಂ ಯುಕ್ತಂ ನ ದುರ್ಗಗ್ರಹಣಂ ತಥಾ ।**
**ಯುದ್ಧಮೇವ ಪರಂ ಶ್ರೇಯಃ ಸರ್ವಥೈವಾsನಯಾsನಘ ॥೫೨॥**

**ಸಸೈನ್ಯೋsಹಂ ಗಮಿಷ್ಯಾಮಿ ರಣೇ ತು ಪ್ರವರಾಶ್ರಿತಃ ।**
**ಹತ್ವಾ ತಾಮಾಗಮಿಷ್ಯಾಮಿ ತರಸಾ ತ್ವಬಲಾಮಿಮಾಂ ॥೫೩॥**

**ಅಥವಾ ಬಲವದ್ದೈವಾದನ್ಯಥಾ ಚೇದ್ಭವಿಷ್ಯತಿ ।**
**ಮೃತೇ ಮಯಿ ತ್ವಯಾ ಕಾರ್ಯಂ ವಿಮೃಶ್ಯ ಚ ಪುನಃ ಪುನಃ ॥೫೪॥**

**ಇತಿ ತಸ್ಯ ವಚಃ ಶ್ರುತ್ವಾ ಶುಂಭಃ ಪ್ರೋವಾಚ ಚಾನುಜಂ ।**
**ತಿಷ್ಠ ತ್ವಂ ಚಂಡಮುಂಡೌ ದ್ವೌ ಗಚ್ಛೇತಾಂ ಬಲಸಂಯುತೌ ॥೫೫॥**

**ಶಶಾಂ(ಶ)ಕಗ್ರಹಣಾಯಾತ್ರ ನ ಯುಕ್ತಂ ಗಜಮೋಚನಂ ।**
**ಚಂಡಮುಂಡೌ ಮಹಾವೀರೌ ತಾಂ ಹಂತುಂ ಸರ್ವಥಾ ಕ್ಷಮೌ ॥೫೬॥**

---

ನಿಶುಂಭನು ಹೇಳಿದನು—ಈಗ ನಾವುಗಳು ದುರ್ಗವನ್ನು ಆಶ್ರಯಿಸುವದಾಗಲಿ ಅಥವಾ ಓಡುವುದಾಗಲಿ ಉಚಿತವಾಗಿಲ್ಲವು. ಓ ಪುಣ್ಯವಂತನಾದ ಶುಂಭನೇ, ಈ ಸ್ತ್ರೀಯೊಡನೆ ಸರ್ವಪ್ರಕಾರದಿಂದಲೂ ಯುದ್ಧಮಾಡುವುದು ಶ್ರೇಯಸ್ಕರವಾದುದು. ನಾನು ಶೂರರಾದವರಿಂದ ಕೂಡಿದವನಾಗಿ ಸೇನಾಸಮೇತನಾಗಿ ಯುದ್ಧಕ್ಕೆ ಹೋಗುವೆನು. ಯುದ್ಧದಲ್ಲಿ ಈ ಹೆಂಗುಸನ್ನು ನನ್ನ ಶಕ್ತಿಯಿಂದ ಬೇಗನೆ ಕೊಂದು ಬರುವೆನು. ||೫೨-೫೩||

ಒಂದು ವೇಳೆ ಬಲವಾಗಿರುವ ದೈವಗತಿಯಿಂದ ಈಗ ನಾನು ಹೇಳಿದುದು ವ್ಯತ್ಯಾಸವಾದರೆ, ನಾನು ಯುದ್ಧದಲ್ಲಿ ಮೃತನಾದರೆ, ನೀನು ಕಾರ್ಯಗಳನ್ನು ಚನ್ನಾಗಿ ವಿಮರ್ಶೆಯನ್ನು ಮಾಡಿ ನಡೆಯಿಸು. ||೫೪||

ನಿಶುಂಭನು ಹೀಗೆ ಹೇಳುತ್ತಿರುವಾಗ ಶುಂಭನು ಅವನ ಮಾತುಗಳನ್ನು ಕೇಳಿ ನೀನು ಇಲ್ಲಿಯೇ ಇರು. ಚಂಡ, ಮುಂಡರಿಬ್ಬರೂ ಸೇನಾಸಮೇತರಾಗಿ ಯುದ್ಧಕ್ಕೆ ಹೋಗಲಿ. ಎಂದು ಹೇಳಿದನು. ಏಕೆಂದರೆ, ||೫೫||

ಲೋಕದಲ್ಲಿ ಸುಂದರವಾಗಿರುವ ಚಂದ್ರ(ಮೊಲ)ನನ್ನು ಹಿಡಿದು ತರುವುದಕ್ಕಾಗಿ ಬಲಿಷ್ಠವಾದ ಆನೆಯನ್ನು ಕಳುಹಿಸುವುದು ಯುಕ್ತವಲ್ಲವು. ತುಂಬ ಬಲವುಳ್ಳವ

ಇತ್ಯುಕ್ತ್ವಾ ಭ್ರಾತರಂ ಶುಂಭಂ ಸಂಭಾಷ್ಯ ಚ ಮಹಾಬಲೌ ।
ಉವಾಚ ವಚನಂ ರಾಜಾ ಚಂಡಮುಂಡೌ ಪುರಃ ಸ್ಥಿತೌ ॥೫೭॥

ಗಚ್ಛತಾಂ ಚಂಡಮುಂಡೌ ದ್ವೌ ಸ್ವಸೈನ್ಯಪರಿವಾರಿತೌ ।
ಹಂತುಂ ತಾಮಬಲಾಂ ಶೀಘ್ರಂ ನಿರ್ಲಜ್ಜಾಂ ಮದಗರ್ವಿತಾಂ ॥೫೮॥

ಗೃಹೀತ್ವಾಽಥ ನಿಹತ್ಯಾಜೌ ಕಾಲಿಕಾಂ ಪಿಂಗಲೋಚನಾಂ ।
ಆಗಮ್ಯತಾಂ ಮಹಾಭಾಗೌ ಕೃತ್ವಾ ಕಾರ್ಯಂ ಮಹತ್ತರಂ ॥೫೯॥

ಸಾ ನಾಽಽಯಾತಿ ಗೃಹೀತಾಽಪಿ ಗರ್ವಿತಾ ಚಾಂಬಿಕಾ ಯದಿ ।
ತದಾ ಬಾಣೈರ್ಮಹಾತೀಕ್ಷ್ಣೈರ್ಹಂತವ್ಯಾಽಽಹವಮಂಡಿತಾ ॥೬೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಪಂಚವಿಂಶೋಽಧ್ಯಾಯಃ

---

ರಾದ ಈ ಚಂಡಮುಂಡರಿಬ್ಬರೇ ಆ ಹೆಂಗುಸನ್ನು ನಿಗ್ರಹಮಾಡಲು ಸರ್ವಪ್ರಕಾರ ದಿಂದಲೂ ಶಕ್ತರಾಗಿರುತ್ತಾರೆ. ||೫೬||

ತನ್ನ ತಮ್ಮನಾದ ನಿಶುಂಭನಿಗೆ, ರಾಜನಾದ ಶುಂಭನು ಹೀಗೆ ಹೇಳಿ ತನ್ನ ಎದುರಿಗೆ ಹತ್ತಿರದಲ್ಲಿ ಇರುವವರಾದ ತುಂಬ ಬಲಿಷ್ಠರಾದ ಚಂಡ, ಮುಂಡರೆಂಬ ರಾಕ್ಷಸರಿಬ್ಬರನ್ನು ಕುರಿತು ಹೇಳಿದನು. ||೫೭||

ಎಲೈ ಚಂಡ, ಮುಂಡಾಸುರರೇ, ನೀವಿಬ್ಬರೂ ನಿಮ್ಮ ನಿಮ್ಮ ಸೈನ್ಯಗಳೊಡನೆ ಕೂಡಿದವರಾಗಿ ನಾಚಿಕೆಯಿಲ್ಲದಿರುವವಳಾಗಿಯೂ, ಮದದಿಂದ ಕೊಬ್ಬಿರುವವಳಾ ಗಿಯೂ ಇರುವ ಆ ಅಬಲೆಯನ್ನು ಕೊಲ್ಲುವುದಕ್ಕಾಗಿ ಬೇಗನೆ ಹೊರಡಿರಿ. ||೫೮||

ಹಳದಿಮಿಶ್ರವಾದ ಕೆಂಪುಬಣ್ಣದಿಂದ ಕೂಡಿದ ಕಣ್ಣುಗಳುಳ್ಳವಳಾದ ಆ ಕಾಳಿ ಯನ್ನು ಯುದ್ಧದಲ್ಲಿ ಕೈಸೆರೆಹಿಡಿದುಕೊಂಡು, ಅಥವಾ ಅದು ಸಾಧ್ಯವಾಗದಿದ್ದರೆ ಕೊಂದು ಬನ್ನಿರಿ. ತುಂಬ ಅದೃಷ್ಟವಂತರಾದ ನೀವು ಬಹಳ ದೊಡ್ಡದಾದ ಈ ಕಾರ್ಯವನ್ನು ಮಾಡಿಕೊಂಡು ಹಿಂತಿರುಗಿ ಬನ್ನಿರಿ. ||೫೯||

ಯುದ್ಧದಲ್ಲಿ ಕೈಸೆರೆಹಿಡಿದಾಗ್ಯೂ, ಅಹಂಕಾರದಿಂದ ಕೂಡಿ ಆ ಅಂಬಿಕೆಯು ಇಲ್ಲಿಗೆ ಬರದೆ ಇದ್ದರೆ, ಆಗ ಬಹಳ ತೀಕ್ಷ್ಣವಾದ ಬಾಣಗಳಿಂದ ಯುದ್ಧದಲ್ಲಿ ಆಸಕ್ತ ಳಾದ ಅವಳನ್ನು ಕೊಂದುಬಿಡಬೇಕು. ||೬೦||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### ॥ ಷಡ್ವಿಂಶೋಽಧ್ಯಾಯಃ ॥

### ಇಪ್ಪತ್ತಾರನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತ್ಯಾಜ್ಞಪ್ತೌ ತದಾ ವೀರೌ ಚಂಡಮುಂಡೌ ಮಹಾಬಲೌ ।**
**ಜಗ್ಮತುಸ್ತರಸೈವಾಜೌ ಸೈನ್ಯೇನ ಮಹತಾಽನ್ವಿತೌ ॥೧॥**

**ದೃಷ್ಟ್ವಾ ತತ್ರ ಸ್ಥಿತಾಂ ದೇವೀಂ ದೇವಾನಾಂ ಹಿತಕಾರಿಣೀಂ ।**
**ಊಚತುಸ್ತೌ ಮಹಾವೀರ್ಯೌ ತದಾ ಸಾಮಾನ್ವಿತಂ ವಚಃ ॥೨॥**

**ಬಾಲೇ ತ್ವಂ ಕಿಂ ನ ಜಾನಾಸಿ ಶುಂಭಂ ಸುರಬಲಾರ್ದನಂ ।**
**ನಿಶುಂಭಂ ಚ ಮಹಾವೀರ್ಯಂ ತುರಾಷಾಡ್ವಿಜಯೋದ್ಧತಂ ॥೩॥**

---

ವ್ಯಾಸಋಷಿಯು ಹೇಳಿದನು—ಶುಂಭನು ಹೀಗೆ ಅಪ್ಪಣೆಯನ್ನು ಮಾಡಿದ ಮೇಲೆ ಶೂರರಾಗಿಯೂ, ಬಹಳ ಬಲವುಳ್ಳವರಾಗಿಯೂ, ಇರುವ ಆ ಚಂಡಮುಂಡರು ದೊಡ್ಡದಾದ ಸೈನ್ಯದಿಂದ ಕೂಡಿದವರಾಗಿ ಯುದ್ಧಕ್ಕಾಗಿ ಬೇಗನೆ ಪ್ರಯಾಣಮಾಡಿದರು. ॥೧॥

ಬಹಳ ಬಲಿಷ್ಠರಾಗಿರುವ ಆ ಚಂಡಮುಂಡರಿಬ್ಬರೂ ಅಲ್ಲಿ ದೇವತೆಗಳಿಗೆ ಹಿತವನ್ನು ಉಂಟುಮಾಡುವವಳಾಗಿರುವ ದೇವಿಯನ್ನು ನೋಡಿ ಒಳ್ಳೆಯ ಮಾತುಗಳನ್ನು ಹೀಗೆ ಹೇಳಿದರು. ॥೨॥

ಎಲೈ ಹುಡುಗಿಯೇ, ದೇವತೆಗಳ ಸಾಮರ್ಥ್ಯವನ್ನು ಸೇನೆಯನ್ನು ಸಹ ನಾಶಮಾಡಿದವನಾದ ಶುಂಭನನ್ನು ನೀನು ತಿಳಿದಿಲ್ಲವೇನು ? ಮತ್ತು ಇಂದ್ರನನ್ನು ಜಯಿಸಿರುವ ಉದ್ದಾಮಪರಾಕ್ರಮಿಯಾದ ನಿಶುಂಭನು ನಿನಗೆ ಗೊತ್ತಿಲ್ಲವೇನು ?

ತ್ವಮೇಕಾಽಸಿ ವರಾರೋಹೇ ಕಾಲಿಕಾಸಿಂಹಸಂಯುತಾ ।
ಜೇತುಮಿಚ್ಛಸಿ ದುರ್ಬುದ್ಧೇ ಶುಂಭಂ ಸರ್ವಬಲಾನ್ವಿತಂ ॥೪॥

ಮತಿದಃ ಕೋಽಪಿ ತೇ ನಾಸ್ತಿ ನಾರೀ ವಾಪಿ ನರೋಽಪಿ ವಾ ।
ದೇವಾಸ್ತ್ವಾಂ ಪ್ರೇರಯಂತ್ಯೇವ ವಿನಾಶಾಯ ತವೈವ ತೇ ॥೫॥

ವಿಮೃಶ್ಯ ಕುರು ತನ್ವಂಗಿ ಕಾರ್ಯಂ ಸ್ವಪರಯೋರ್ಬಲಂ ।
ಅಷ್ಟಾದಶಭುಜತ್ವಾತ್ತ್ವಂ ಗರ್ವಂ ಚ ಕುರುಷೇ ಮೃಷಾ ॥೬॥

ಕಿಂ ಭುಜೈರ್ಬಹುಭಿರ್ವ್ಯರ್ಥೈರಾಯುಧೈಃ ಕಿಂ ಶ್ರಮಪ್ರದೈಃ ।
ಶುಂಭಸ್ಯಾಗ್ರೇ ಸುರಾಣಾಂ ವೈ ಜೇತುಃ ಸಮರಶಾಲಿನಃ ॥೭॥

---

ಸುಖಕರಳಾದ ರಮಣಿಯೇ, ನೀನು ಒಬ್ಬಂಟಿಗಳಾಗಿರುತ್ತೀಯೆ. ಸಿಂಹವು ಮತ್ತು ಕಾಳಿಯು ಇವರು ಹೊರತು ನಿನಗೆ ಸಹಾಯಕರು ಯಾರೂ ಇಲ್ಲವು. ಎಲೈ ದುರ್ಬುದ್ಧಿಯುಳ್ಳವಳೇ, ಹೀಗೆ ಇರುವಾಗ ಸಮಸ್ತವಿಧವಾದ ಸಹಾಯ ಮತ್ತು ಶಕ್ತಿ ಇವುಗಳಿಂದ ಕೂಡಿರುವ ಶುಂಭನನ್ನು ಜಯಿಸಲು ಆಶಿಸುತ್ತಿರುವೆ! ||೪||

ನಿನಗೆ ಸರಿಯಾಗಿ ಬುದ್ಧಿಯನ್ನು ಹೇಳುವವರು ಹೆಂಗಸಾಗಲಿ, ಗಂಡಸಾಗಲಿ ಯಾರೂ ಇಲ್ಲವು. ನಿನ್ನನ್ನು ಯುದ್ಧಕ್ಕಾಗಿ ಪ್ರೇರಿಸಿರುವ ಆ ದೇವತೆಗಳಾದರೋ ನಿನ್ನ ನಾಶಕ್ಕಾಗಿಯೇ ಕೆಲಸಮಾಡುತ್ತಿರುವರಾಗಿರುತ್ತಾರೆ! ||೫||

ಎಲೈ ಕೃಶಾಂಗಿಯೇ, ನೀನು ನಿನ್ನ ಮತ್ತು ಎದುರಾಳಿಗಳ ಸಾಮರ್ಥ್ಯವನ್ನು ಚನ್ನಾಗಿ ವಿಚಾರಮಾಡಿ ತಿಳಿದು ಕೆಲಸವನ್ನು ಮಾಡು. ನೀನು, ನನಗೆ ಹದಿನೆಂಟು ತೋಳುಗಳಿವೆಯೆಂದು ಸುಮ್ಮನೆ ವ್ಯರ್ಥವಾಗಿ ಅಹಂಕಾರಪಡುತ್ತಿರುವೆ! ||೬||

ಬಹಳವಾಗಿದ್ದರೂ ಕೆಲಸಕ್ಕೆ ಬಾರದಿರುವ ಈ ನಿನ್ನ ತೋಳುಗಳಿಂದ ಉಪ ಯೋಗವೇನು? ಹಾಗೆಯೇ ಆಯಾಸವನ್ನು ಹೆಚ್ಚಿಸುವ ಆಯುಧಗಳಿಂದತಾನೇ ಉಪಯೋಗವೇನು? ನಿನ್ನ ಈ ತೋಳುಗಳೂ, ನಿನ್ನ ಆಯುಧಗಳೂ ಸಹ ಯುದ್ಧ ದಲ್ಲಿ ಯಾವಾಗಲೂ ಉತ್ಸಾಹದಿಂದಿರುವ ದೇವತೆಗಳನ್ನು ಗೆದ್ದಿರುವವನಾದ ಶುಂಭನ ಎದುರಿಗೆ ನಿಷ್ಫಲಗಳಾಗುವುವು! ||೭||

**ಐರಾವತಕರಚ್ಛೇತ್ತುರ್ದಂತಿದಾರಣಕಾರಿಣಃ ।**
**ಜಯಿನಃ ಸುರಸಂಘಾನಾಂ ಕಾರ್ಯಂ ಕುರು ಮನೋಗತಂ ॥೮॥**

**ವೃಥಾ ಗರ್ವಾಯಸೇ ಕಾಂತೇ ಕುರು ಮೇ ವಚನಂ ಪ್ರಿಯಂ ।**
**ಹಿತಂ ತವ ವಿಶಾಲಾಕ್ಷಿ ಸುಖದಂ ದುಃಖನಾಶನಂ ॥೯॥**

**ದುಃಖದಾನಿ ಚ ಕಾರ್ಯಾಣಿ ತ್ಯಾಜ್ಯಾನಿ ದೂರತೋ ಬುಧೈಃ ।**
**ಸುಖದಾನಿ ಚ ಸೇವ್ಯಾನಿ ಶಾಸ್ತ್ರತತ್ತ್ವವಿಶಾರದೈಃ ॥೧೦॥**

**ಚತುರಾಽಸಿ ಪಿಕಾಲಾಪೇ ಪಶ್ಯ ಶುಂಭಬಲಂ ಮಹತ್ ।**
**ಪ್ರತ್ಯಕ್ಷಂ ಸುರಸಂಘಾನಾಂ ಮರ್ದನೇನ ಮಹೋದಯಂ ॥೧೧॥**

**ಪ್ರತ್ಯಕ್ಷಂ ಚ ಪರಿತ್ಯಜ್ಯ ವೃಥೈವಾನುಮಿತಿಃ ಕಿಲ ।**
**ಸಂದೇಹಸಹಿತೇ ಕಾರ್ಯೇ ನ ವಿಪಶ್ಚಿತ್ಪ್ರವರ್ತತೇ ॥೧೨॥**

---

ಐರಾವತವೆಂಬ ಆನೆಯ ಸೊಂಡಲನ್ನು ಕತ್ತರಿಸಿ ಅದರ ಕೊಂಬನ್ನು ಮುರಿದು, ಘಾಸಿಮಾಡಿರುವವನಾದ, ದೇವಸಮೂಹವನ್ನೂ ಜಯಿಸಿರುವ, ಶುಂಭಾಸುರನ ಮನೋಭಿಲಾಷೆಯನ್ನು ನೀನು ಪೂರ್ಣಮಾಡು. ॥೮॥

ಮನೋಹರಳೇ, ನೀನು ಸುಮ್ಮನೆ ಗರ್ವಪಡಬೇಡ. ನಿನಗೆ ಹಿತವಾದ ನನ್ನ ಮಾತನ್ನು ನಡೆಯಿಸು. ನಾನು ಹೇಳುವ ಮಾತುಗಳು ನಿನಗೆ ಸುಖವನ್ನುಂಟು ಮಾಡಿ, ದುಃಖವನ್ನು ನಾಶಮಾಡಿ ಹಿತವನ್ನುಂಟುಮಾಡತಕ್ಕದ್ದಾಗಿರುವುವು. ॥೯॥

ಶಾಸ್ತ್ರಗಳ ನಿಜವಾದ ಅರ್ಥವನ್ನು ತಿಳಿದಿರುವ ಬುದ್ಧಿವಂತರು ದುಃಖವನ್ನುಂಟುಮಾಡುವ ಕೆಲಸಗಳನ್ನು ದೂರದಲ್ಲಿ ಬಿಟ್ಟು, ಸುಖವನ್ನುಂಟುಮಾಡುವ ಕೆಲಸಗಳನ್ನು ಮಾತ್ರ ಸೇವಿಸುವರು. ॥೧೦॥

ಕೋಗಿಲೆಯ ಧ್ವನಿಯಂತಿರುವ ಮಾತುಗಳನ್ನು ಆಡುತ್ತಿರುವ ಎಲೌ ಬಾಲೆಯೇ, ನೀನು ನಿಪುಣಳಾಗಿರುತ್ತೀಯೆ! ದೇವತೆಗಳನ್ನೂ, ಸಹ ಗೆದ್ದು ಜಯಶೀಲವಾಗಿರುವ, ನಿನ್ನ ಎದುರಿಗೆ ಬಂದು ನಿಂತಿರುವ, ಶುಂಭನ ಸೇನೆಯನ್ನು ನೋಡು! ॥೧೧॥

ಬುದ್ಧಿವಂತನಾದವನು ಸಂದೇಹದಿಂದ ಕೂಡಿರುವ ಕೆಲಸದಲ್ಲಿ ಯಾವಾಗಲೂ ಪ್ರವರ್ತಿಸುವುದಿಲ್ಲವು. ಲೋಕದಲ್ಲಿ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಿರುವುದನ್ನು

**ಶತ್ರುಃ ಸುರಾಣಾಂ ಪರಮಃ ಶುಂಭಃ ಸಮರದುರ್ಜಯಃ ।**
**ತಸ್ಮಾತ್ತ್ವಾಂ ಪ್ರೇರಯಂತ್ಯತ್ರ ದೇವಾ ದೈತ್ಯೇಶಪೀಡಿತಾಃ ॥೧೩॥**

**ತಸ್ಮಾತ್ತದ್ವಚನೈಃ ಸ್ನಿಗ್ಧೈರ್ವಂಚಿತಾsಸಿ ಶುಚಿಸ್ಮಿತೇ ।**
**ದುಃಖಾಯ ತವ ದೇವಾನಾಂ ಶಿಕ್ಷಾ ಸ್ವಾರ್ಥಸ್ಯ ಸಾಧಿಕಾ ॥೧೪॥**

**ಕಾರ್ಯಮಿತ್ರಂ ಪರಿಕ್ಷಿಪ್ಯ ಧರ್ಮಮಿತ್ರಂ ಸಮಾಶ್ರಯೇತ್ ।**
**ದೇವಾಃ ಸ್ವಾರ್ಥಪರಾಃ ಕಾಮಂ ತ್ವಾಮಹಂ ಸತ್ಯಮುಬ್ರುವಂ ॥೧೫॥**

---

ಬಿಟ್ಟು ಅನುಮಾನಪ್ರಮಾಣದಿಂದ ಊಹಿಸಿದುದನ್ನು ನಂಬುವುದು ವ್ಯರ್ಥವೇ ಅಲ್ಲವೇ ? ॥೧೨॥

ಯುದ್ಧದಲ್ಲಿ ಜಯಿಸಲು ಅಸಾಧ್ಯನಾಗಿರುವ ಶುಂಭನು ದೇವತೆಗಳಿಗೆ ದೊಡ್ಡ ಶತ್ರುವಾಗಿರುವನು. ಆದುದರಿಂದ ಈ ರಾಕ್ಷಸರಾಜನಿಂದ ಪೀಡಿಸಲ್ಪಟ್ಟವರಾದ ದೇವತೆಗಳು ನಿನ್ನನ್ನು ಯದ್ಧಮಾಡಲು ಪ್ರೇರಿಸುತ್ತಿರುವರು ! ॥೧೩॥

ಪರಿಶುದ್ಧವಾದ ಮಂದಹಾಸವುಳ್ಳ ಎಲೌ ದೇವಿಯೇ, ಆದುದರಿಂದ ದೇವತೆಗಳ ಮೃದುವಾದ ಮಾತುಗಳಿಂದ ಮೋಸಗೊಳಿಸಲ್ಪಟ್ಟಿರುವೆ. ದೇವತೆಗಳ ಸ್ವಾರ್ಥಸಾಧನೆಗಾಗಿರುವ ಈ ಕಾರ್ಯವು ನಿನಗೆ ದುಃಖವನ್ನುಂಟುಮಾಡುವುದಾಗಿಯೂ, ಮತ್ತು ನಿನಗೆ ಶಿಕ್ಷೆಯಾಗಿಯೂ ಪರಿಣಮಿಸುವುದು. ॥೧೪॥

ಲೋಕದಲ್ಲಿ ಜನರು ಕಾರ್ಯವಿಶೇಷಕ್ಕಾಗಿಯೂ ಮತ್ತು ಧರ್ಮದ ನಿಮಿತ್ತದಿಂದಲೂ ಸಹ ಸ್ನೇಹಿತರಾಗುವರು. ಅವರಿಬ್ಬರಲ್ಲಿ ಒಬ್ಬನಿಗೆ ಕಾರ್ಯಮಿತ್ರನೆಂತಲೂ, ಇನ್ನೊಬ್ಬನಿಗೆ ಧರ್ಮಮಿತ್ರನೆಂತಲೂ, ವ್ಯವಹಾರವಿದೆ. ಹೀಗೆ ಇರುವಾಗ ಕಾರ್ಯಮಿತ್ರನು ತನ್ನ ಕೆಲಸವಾದ ಬಳಿಕ ಮಿತ್ರನಾಗಿರುವುದಿಲ್ಲ, ಉದಾಸೀನನಾಗುವನು. ಧರ್ಮದಿಂದ ಮಿತ್ರನಾದವನಾದರೋ ಅವನು ಯಾವಾಗಲೂ, ಒಂದೇ ವಿಧವಾಗಿರುವನು. ದೇವತೆಗಳಾದರೋ ಕೇವಲ ಸ್ವಾರ್ಥಪರರಾಗಿದಾರೆ. ಆದುದರಿಂದ ಸ್ವಕಾರ್ಯಕ್ಕಾಗಿ ಮಿತ್ರಭಾವದಿಂದ ಈಗ ನಿನ್ನನ್ನು ಆಶ್ರಯಿಸುತ್ತಿರುವ ಈ ದೇವತೆಗಳನ್ನು ಬಿಡುವುದು ನಿನಗೆ ಉತ್ತಮವಾದ ಕಾರ್ಯವಾಗಿ ಇರುವುದು. ನಾನು ಈ ವಿಷಯದಲ್ಲಿ ನಿನಗೆ ನಿಜವಾದ ಮಾತನ್ನು ಹೇಳಿರುವೆನು. ॥೧೫॥

ಭಜ ಶುಂಭಂ ಸುರೇಶಾನಂ ಜೇತಾರಂ ಭುವನೇಶ್ವರಂ ।
ಚತುರಂ ಸುಂದರಂ ಶೂರಂ ಕಾಮಶಾಸ್ತ್ರವಿಶಾರದಂ ॥೧೬॥

ಐಶ್ವರ್ಯಂ ಸರ್ವಲೋಕಾನಾಂ ಪ್ರಾಪ್ಸ್ಯಸೇ ಶುಂಭಶಾಸನಾತ್ ।
ನಿಶ್ಚಯಂ ಪರಮಂ ಕೃತ್ವಾ ಭರ್ತಾರಂ ಭಜ ಶೋಭನಂ ॥೧೭॥

॥ ವ್ಯಾಸ ಉವಾಚ ॥

ಇತಿ ತಸ್ಯ ವಚಃ ಶ್ರುತ್ವಾ ಚಂಡಸ್ಯ ಜಗದಂಬಿಕಾ ।
ಮೇಘಗಂಭೀರನಿನದಂ ಜಗರ್ಜ ಪುನರಬ್ರವೀತ್ ॥೧೮॥

ಗಚ್ಛ ಜಾಲ್ಮ ವೃಥಾ ಕಿಂ ತ್ವಂ ಭಾಷಸೇ ವಂಚಕಂ ವಚಃ ।
ತ್ಯಕ್ತ್ವಾ ಹರಿಹರಾದೀಂಶ್ಚ ಶುಂಭಂ ಕಸ್ಮಾದ್ಭಜೇ ಪತಿಂ ॥೧೯॥

---

ದೇವತೆಗಳನ್ನು ಗೆದ್ದು ಅವರಿಗೆ ಅಧಿಪತಿಯಾಗಿಯೂ, ಲೋಕಕ್ಕೆಲ್ಲಕ್ಕೂ ಒಡೆಯನಾಗಿಯೂ, ನಿಪುಣನೂ, ಸುಂದರನೂ, ಶೂರನೂ ಮತ್ತು ಕಾಮಶಾಸ್ತ್ರದ ನಡೆವಳಿಕೆಯಲ್ಲಿ ಬುದ್ಧಿವಂತನೂ ಆಗಿರುವ ಶುಂಭನನ್ನು ನೀನು ಹೊಂದು. ||೧೬||

ಓ ದೇವಿಯೇ, ಶುಂಭನ ಅಪ್ಪಣೆಯ ಮೇರೆ ಎಲ್ಲ ಲೋಕಗಳ ಐಶ್ವರ್ಯವನ್ನೂ ನೀನು ಹೊಂದುವೆ! ನೀನು ನಿನ್ನ ಮನಸ್ಸಿನಲ್ಲಿ ನಿಶ್ಚಯವನ್ನು ಮಾಡಿಕೊಂಡು ಉತ್ತಮನಾಗಿರುವ ಶುಂಭನನ್ನು ಗಂಡನನ್ನಾಗಿ ವರಿಸು. ||೧೭||

ವ್ಯಾಸಋಷಿಯು ಹೇಳಿದನು—ಚಂಡನೆಂಬ ರಾಕ್ಷಸನು ಹೀಗೆ ಹೇಳಿದ ಮೇಲೆ ಅವನ ಮಾತನ್ನು ಜಗನ್ಮಾತೆಯು ಕೇಳಿ, ಮೇಘಧ್ವನಿಯಂತೆ ಗಂಭೀರವಾದ ರೀತಿಯಿಂದ ಗರ್ಜಿಸಿದಳು. ಮತ್ತು ಅವನಿಗೆ ಉತ್ತರವನ್ನು ಹೇಳಿದಳು. ||೧೮||

ಎಲೈ ನೀಚನೇ, ದೂರಹೋಗು! ಸುಮ್ಮನೆ ಸುಳ್ಳು ಮಾತನ್ನು ಏಕೆ ನೀನು ಹೇಳುತ್ತಿರುವೆ? ನೀನು ಹೇಳುವ ಮಾತುಗಳೆಲ್ಲವೂ ಮೋಸಗಾರಿಕೆಯ ಮಾತುಗಳು! ವಿಷ್ಣು, ಶಿವ, ಇವರೇ ಮೊದಲಾದ ದೇವತೆಗಳನ್ನು ಬಿಟ್ಟು ಶುಂಭನನ್ನು ನಾನು ಪತಿಯನ್ನಾಗಿ ಏತಕ್ಕೆ ಹೊಂದಲಿ? ||೧೯||

ನ ಮೇ ಕಶ್ಚಿತ್ಪತಿಃ ಕಾರ್ಯೋ ನ ಕಾರ್ಯಂ ಪತಿನಾ ಸಹ ।
ಸ್ವಾಮಿನೀ ಸರ್ವಭೂತಾನಾಮಹಮೇವ ನಿಶಾಮಯ ॥೨೦॥

ಶುಂಭಾ ಮೇ ಬಹವೋ ದೃಷ್ಟಾ ನಿಶುಂಭಾಶ್ಚ ಸಹಸ್ರಶಃ ।
ಘಾತಿತಾಶ್ಚ ಮಯಾ ಪೂರ್ವಂ ಶತಶೋ ದೈತ್ಯದಾನವಾಃ ॥೨೧॥

ಮಮಾಗ್ರೇ ದೇವವೃಂದಾನಿ ವಿನಷ್ಟಾನಿ ಯುಗೇ ಯುಗೇ ।
ನಾಶಂ ಯಾಸ್ಯಂತಿ ದೈತ್ಯಾನಾಂ ಯೂಥಾನಿ ಪುನರದ್ಯ ವೈ ॥೨೨॥

ಕಾಲ ಏವಾಽಽಗತೋಽಸ್ತ್ಯತ್ರ ದೈತ್ಯಸಂಹಾರಕಾರಕಃ ।
ವೃಥಾ ತ್ವಂ ಕುರುಷೇಯತ್ನಂ ರಕ್ಷಣಾಯಾತ್ಮಸಂತತೇಃ ॥೨೩॥

ಕುರು ಯುದ್ಧಂ ವೀರಧರ್ಮರಕ್ಷಾಯೈ ತ್ವಂ ಮಹಾಮತೇ ।
ಮರಣಂ ಭಾವಿ ದುಸ್ತ್ಯಾಜ್ಯಂ ಯಶೋ ರಕ್ಷ್ಯಂ ಮಹಾತ್ಮಭಿಃ ॥೨೪॥

---

ನನಗೆ ಪತಿಯು ಯಾರೂ ಆಗಬೇಕಾದುದಿಲ್ಲವು. ನನಗೆ ಪತಿಯಿಂದ ಯಾವ ಪ್ರಯೋಜನವೂ ಆಗಬೇಕಾದುದಿಲ್ಲವು. ಎಲೈ ಚಂಡಾಸುರನೇ ಕೇಳು, ನಾನೇ ಸರ್ವ ಪ್ರಾಣಿಗಳಿಗೂ ಸ್ವಾಮಿನಿಯಾಗಿರುವೆನು! ಎಲ್ಲ ಪ್ರಾಣಿಗಳಿಗೂ ಪತಿಯಾಗ ಬಲ್ಲವನು ಯಾರೂ ಇಲ್ಲವೇ ಇಲ್ಲವು! ॥೨೦॥

ನಾನು ಬಹಳ ಜನ ಶುಂಭರನ್ನು ನೋಡಿದ್ದೇನೆ. ನಿಶುಂಭರನ್ನೂ ಸಹ ಸಾವಿರಗಟ್ಟಲೆಯಾಗಿ ನಾನು ನೋಡಿರುತ್ತೇನೆ! ಪೂರ್ವಕಾಲದಲ್ಲಿ ನಾನು ದೈತ್ಯ ರನ್ನೂ ಸಹ ಅನೇಕ ಸಲ ನಿಗ್ರಹಮಾಡಿರುತ್ತೇನೆ. ॥೨೧॥

ಪ್ರತಿ ಯುಗದಲ್ಲಿಯೂ ನನ್ನ ಎದುರಿಗೇ ದೇವತೆಗಳ ಗುಂಪುಗಳು ನಾಶವನ್ನು ಹೊಂದಿರುವುವು! ಈಗಲಾದರೋ ರಾಕ್ಷಸರ ಅನೇಕ ಗುಂಪುಗಳೂ ಕೂಡ ನಾಶವನ್ನು ಹೊಂದುವುವು! ॥೨೨॥

ಈಗಾಗಲೇ ರಾಕ್ಷಸರನ್ನು ಸಂಹಾರಮಾಡುವ ಕಾಲವು ತಾನಾಗಿಯೇ ಒದಗಿ ರುವುದು! ನೀನು ಸುಮ್ಮನೆ ನಿನ್ನ (ಸಂತತಿಯ) ವಂಶದವರನ್ನು ರಕ್ಷಿಸಿಕೊಳ್ಳುವುದ ಕ್ಕಾಗಿ ವ್ಯರ್ಥವಾಗಿ ಪ್ರಯತ್ನವನ್ನು ಮಾಡುತ್ತಿದೀಯೆ! ॥೨೩॥

ಎಲೈ ತುಂಬ ಬುದ್ಧಿವಂತನೇ, ನೀನು ಆ ವೀರನೆಂಬ ಹೆಸರನ್ನೂ ಧರ್ಮ ವನ್ನೂ ಉಳಿಸಿಕೊಳ್ಳುವುದಕ್ಕಾಗಿ ಯುದ್ಧವನ್ನು ಮಾಡು. ಮಹಾತ್ಮರಾದವರು

ಕಿಂ ತೇ ಕಾರ್ಯಂ ನಿಶುಂಭೇನ ಶುಂಭೇನ ಚ ದುರಾತ್ಮನಾ ।
ವೀರಧರ್ಮಂ ಪರಂ ಪ್ರಾಪ್ಯ ಗಚ್ಛ ಸ್ವರ್ಗಂ ಸುರಾಲಯಂ ॥೨೫॥

ಶುಂಭೋ ನಿಶುಂಭಶ್ಚೈವಾನ್ಯೇ ಯೇ ಚಾತ್ರ ತವ ಬಾಂಧವಾಃ ।
ಸರ್ವೇ ತವಾನುಗಾಃ ಪಶ್ಚಾದಾಗಮಿಷ್ಯಂತಿ ಸಾಂಪ್ರತಂ ॥೨೬॥

ಕ್ರಮಶಃ ಸರ್ವದೈತ್ಯಾನಾಂ ಕರಿಷ್ಯಾಮ್ಯದ್ಯ ಸಂಕ್ಷಯಂ ।
ವಿಷಾದಂ ತ್ಯಜ ಮಂದಾತ್ಮನ್ ಕುರು ಯುದ್ಧಂ ವಿಶಾಂ ಪತೇ ॥೨೭॥

ತ್ವಾಮಹಂ ನಿಹನಿಷ್ಯಾಮಿ ಭ್ರಾತರಂ ತವ ಸಾಂಪ್ರತಂ ।
ತತಃ ಶುಂಭಂ ನಿಶುಂಭಂ ಚ ರಕ್ತಬೀಜಂ ಮದೋತ್ಕಟಂ ॥೨೮॥

---

ಮುಂದೆ ಉಂಟಾಗುವ ಮರಣವು ತಮಗೆ ತಪ್ಪಲಾರದೆಂದು ತಿಳಿದು ತಮ್ಮ ತಮ್ಮ ಕೀರ್ತಿಯನ್ನಾದರೂ ಕಾಪಾಡಿಕೊಳ್ಳುವರು. ॥೨೪॥

ನಿನಗೆ ನಿಶುಂಭನಿಂದಾಗಲಿ, ದುಷ್ಟನಾದ ಶುಂಭನಿಂದಲಾಗಲಿ ಆಗಬೇಕಾದ ಕೆಲಸವೇನಿರುತ್ತದೆ? ಶೂರಧರ್ಮವನ್ನು ಮುಖ್ಯವಾಗಿ ನೀನು ಅವಲಂಬಿಸಿ ಯುದ್ಧದಲ್ಲಿ ಮಡಿದರೆ ದೇವತೆಗಳಿಗೆ ಮನೆಯಾಗಿರುವ ಸ್ವರ್ಗವನ್ನು ನೀನೂ ಹೊಂದುವೆ! ॥೨೫॥

ಶುಂಭನೂ, ನಿಶುಂಭನೂ ಮತ್ತು ಇತರರು ಯಾರು ನಿನ್ನ ನಂಟರು ಇರುವರೋ ಅವರೆಲ್ಲರೂ ಈಗಲೇ ನಿನ್ನನ್ನು ಹಿಂಬಾಲಿಸಿಕೊಂಡು ಬರುವರು. ॥೨೬॥

ಈಗ ಎಲ್ಲ ರಾಕ್ಷಸರೂ ಕ್ರಮವಾಗಿ ನಶಿಸಿಹೋಗುವಂತೆ ಮಾಡುತ್ತೇನೆ. ಎಲೈ ರಾಜನಾದ ಚಂಡಾಸುರನೇ, ನೀನು ದಡ್ಡನಾಗಿ ಚಿಂತೆಯನ್ನು ಹೊಂದಬೇಡ. ಕರ್ಣಕಠೋರವಾದ ಈ ಮಾತನ್ನು ಕೇಳಿ ವ್ಯಸನ ಪಡಬೇಡ, ಯುದ್ಧವನ್ನು ಮಾಡು. ॥೨೭॥

ಈಗ ನಿನ್ನನ್ನು ಕೊಲ್ಲುವೆನು. ನಿನ್ನ ಸಹೋದರರನ್ನೂ ನಾಶಮಾಡುವೆನು. ಅನಂತರದಲ್ಲಿ ಕೊಬ್ಬಿನಿಂದ ತುಂಬಿರುವ ರಕ್ತಬೀಜನನ್ನೂ ಶುಂಭ-ನಿಶುಂಭರನ್ನೂ ಸಹ ಯುದ್ಧದಲ್ಲಿ ಕೊಂದುಹಾಕುವೆನು. ॥೨೮॥

ಅನ್ಯಾಂಶ್ಚ ದಾನವಾನ್ಸರ್ವಾನ್ ಹತ್ವಾಽಹಂ ಸಮರಾಂಗಣೇ ।
ಗಮಿಷ್ಯಾಮಿ ಯಥಾಸ್ಥಾನಂ ತಿಷ್ಠ ವಾ ಗಚ್ಛ ವಾ ದ್ರುತಂ ॥೨೯॥

ಗೃಹಾಣಾಸ್ತ್ರಂ ವೃಥಾಪುಷ್ಟ ಕುರು ಯುದ್ಧಂ ಮಯಾಽಧುನಾ ।
ಕಿಂ ಜಲ್ಪಸಿ ಮೃಷಾವಾಕ್ಯಂ ಸರ್ವಥಾ ಕಾತರಪ್ರಿಯಂ ॥೩೦॥

॥ ವ್ಯಾಸ ಉವಾಚ ॥

ತಯೇತ್ಥಂ ಪ್ರೇರಿತೌ ದೈತ್ಯೌ ಚಂಡಮುಂಡೌ ಕ್ರುಧಾನ್ವಿತೌ ।
ಜ್ಯಾಶಬ್ದಂ ತರಸಾ ಘೋರಂ ಚಕ್ರತುರ್ಬಲದರ್ಪಿತೌ ॥೩೧॥

ಸಾಪಿ ಶಂಖಸ್ವನಂ ಚಕ್ರೇ ಪೂರಯಂತೀ ದಿಶೋ ದಶ ।
ಸಿಂಹೋಽಪಿ ಕುಪಿತಸ್ತಾವನ್ನಾದಂ ಸಮಕರೋದ್ಬಲೀ ॥೩೨॥

---

ನಾನು ಈಗ ಯುದ್ಧರಂಗದಲ್ಲಿ ಇತರರಾಗಿರುವ ಎಲ್ಲಾ ರಾಕ್ಷಸರನ್ನೂ ಕೊಂದು ನನ್ನ ವಾಸಸ್ಥಾನಕ್ಕೆ ಹೋಗುವೆನು. ನೀನು ಬೇಗ ಯುದ್ಧಕ್ಕೆ ನಿಲ್ಲು. ಇಲ್ಲದಿದ್ದರೆ ಪಾತಾಳಕ್ಕೆ ಹೋಗು. ॥೨೯॥

ಸುಮ್ಮನೆ ದೇಹವನ್ನು ಬೆಳಸಿಕೊಂಡಿರುವವನೇ, ಅಸ್ತ್ರವನ್ನು ಕೈಗೆ ತೆಗೆದುಕೋ. ಈಗ ನನ್ನೊಡನೆ ಯುದ್ಧವನ್ನು ಮಾಡು. ಹೇಗೂ ಹೆದರುವವರಿಗೆ ಹಿತಕರವಾದ ಇಂತಹ ಸುಳ್ಳುಮಾತನ್ನು ಸುಮ್ಮನೆ ಹೇಳಬೇಡ. ॥೩೦॥

ವ್ಯಾಸಋಷಿಯು ಹೇಳಿದನು—ಆ ದೇವಿಯಿಂದ ಈ ಪ್ರಕಾರವಾಗಿ ಪ್ರೇರಿಸಲ್ಪಟ್ಟವರಾದ ಚಂಡಮುಂಡರೆಂಬ ರಾಕ್ಷಸರಿಬ್ಬರೂ ಕೋಪದಿಂದ ಕೂಡಿದವರಾಗಿ ತಮ್ಮ ಸಾಮರ್ಥ್ಯದ ಕೊಬ್ಬಿನಿಂದ ಉಬ್ಬಿದವರಾಗಿ ಧನುಸ್ಸಿನ ಟಂಕಾರ ಧ್ವನಿಯನ್ನು ಬೇಗನೆ ಘೋರವಾಗಿರುವಂತೆ ಮಾಡಿದರು. ॥೩೧॥

ಆಗ ದೇವಿಯೂ ಕೂಡ ಹತ್ತು ದಿಕ್ಕುಗಳು ಮುಚ್ಚಿಹೋಗುವಹಾಗೆ ಶಂಖನ್ನು ಊದಿದಳು. ದೇವಿಯ ವಾಹನವಾದ ಬಲಿಷ್ಠವಾದ ಸಿಹ್ಮವೂ ಕೂಡ ಕೋಪವುಳ್ಳದ್ದಾಗಿ ಬಲವಾಗಿ ಗರ್ಜಿಸಿತು. ॥೩೨॥

ತೇನ ನಾದೇನ ಶಕ್ರಾದ್ಯಾ ಜಹರ್ಷುರಮರಾಸ್ತದಾ ।
ಮುನಯೋ ಯಕ್ಷಗಂಧರ್ವಾಃ ಸಿದ್ಧಾಃ ಸಾಧ್ಯಾಶ್ಚ ಕಿನ್ನರಾಃ ॥೩೩॥

ಯುದ್ಧಂ ಪರಸ್ಪರಂ ತತ್ರ ಜಾತಂ ಕಾತರಭೀತಿದಂ ।
ಚಂಡಿಕಾಚಂಡಯೋಸ್ತೀವ್ರಂ ಬಾಣಖಡ್ಗಗದಾದಿಭಿಃ ॥೩೪॥

ಚಂಡಮುಕ್ತಾಞ್ಛರಾನ್ದೇವೀ ಚಿಚ್ಛೇದ ನಿಶಿತೈಃ ಶರೈಃ ।
ಮುಮೋಚ ಪುನರುಗ್ರಾ ಸಾ ಚಂಡಿಕಾ ಪನ್ನಗಾನಿವ ॥೩೫॥

ಗಗನಂ ಛಾದಿತಂ ತತ್ರ ಸಂಗ್ರಾಮೇ ವಿಶಿಖೈಸ್ತದಾ ।
ಶಲಭೈರಿವ ಮೇಘಾಂತೇ ಕರ್ಷಕಾಣಾಂ ಭಯಪ್ರದೈಃ ॥೩೬॥

---

ಇಂದ್ರನೇ ಮೊದಲಾದ ದೇವತೆಗಳು ಆಗ ಆ ಧ್ವನಿಯಿಂದ ಜಯಾಶೆಯನ್ನು ಹೊಂದಿದರು. ಮುನಿಗಳೂ, ಯಕ್ಷರೂ, ಗಂಧರ್ವರೂ, ಸಿದ್ಧರೂ, ಕಿನ್ನರರೂ ಇವರೆಲ್ಲರೂ ಸಹ ಆ ದೇವಿಯ ಯುದ್ಧೋತ್ಸಾಹವನ್ನು ಸೂಚಿಸುತ್ತಿರುವ ಶಂಖ ಧ್ವನಿಯನ್ನು ಕೇಳಿ ಸಂತೋಷವನ್ನು ಹೊಂದಿದರು. ||೩೩||

ಚಂಡಿಕಾದೇವಿಗೂ, ಚಂಡಾಸುರನಿಗೂ ಸಹ ಬಾಣ, ಕತ್ತಿ, ಗದೆ ಇವೇ ಮೊದಲಾದ ಆಯುಧಗಳಿಂದ ಹೆದರುವವರಿಗೆ ಹೆದರಿಕೆಯನ್ನುಂಟುಮಾಡುವ ಯುದ್ಧವು ಪರಸ್ಪರವಾಗಿ ಬೇಗನೆ ಪ್ರಾರಂಭವಾಯಿತು. ||೩೪||

ಚಂಡಾಸುರನಿಂದ ಬಿಡಲ್ಪಟ್ಟ ಬಾಣಗಳನ್ನು ದೇವಿಯು ಹರಿತವಾದ ಬಾಣ ಗಳಿಂದ ಕತ್ತರಿಸಿದಳು. ಮತ್ತು ಆ ಭಯಂಕರಳಾದ ಚಂಡಿಕಾದೇವಿಯು ಹಾವಿನಂತೆ ಕ್ರೂರವಾಗಿರುವ ಬಾಣಗಳನ್ನು ಬಿಟ್ಟಳು. ||೩೫||

ಮಳೆಗಾಲವು ಕಳೆದ ಮೇಲೆ ಸುಗ್ಗಿಯಕಾಲದಲ್ಲಿ ಅಂತರಿಕ್ಷದಲ್ಲಿ ಮಿಡತೆಹುಳು ಗಳು ಪೈರನ್ನು ಆವರಿಸಿಕೊಂಡು ವ್ಯವಸಾಯಗಾರರಿಗೆ ಭಯವನ್ನುಂಟುಮಾಡುವ ಹಾಗೆ, ಆಗ ಯುದ್ಧದಲ್ಲಿ ದೇವಿಯು ತನ್ನ ಬಾಣಗಳಿಂದ ಅಂತರಿಕ್ಷವನ್ನು ಮುಚ್ಚಿ ರಾಕ್ಷಸರಿಗೆ ಭಯವನ್ನುಂಟುಮಾಡಿದಳು. ||೩೬||

ಮುಂಡೋಽಪಿ ಸೈನಿಕೈಃ ಸಾರ್ಧಂ ಪಪಾತ ತರಸಾ ರಣೇ ।
ಮುಮೋಚ ಬಾಣವೃಷ್ಟಿಂ ವೈ ಕ್ರುದ್ಧಃ ಪರಮದಾರುಣಃ ॥೩೭॥

ಬಾಣಜಾಲಂ ಮಹದ್ದೃಷ್ಟ್ವಾ ಕ್ರುದ್ಧಾ ತತ್ರಾಂಬಿಕಾ ಭೃಶಂ ।
ಕೋಪೇನ ವದನಂ ತಸ್ಯಾ ಬಭೂವ ಘನಸನ್ನಿಭಂ ॥೩೮॥

ಕದಲೀಪುಷ್ಪನೇತ್ರಂ ಚ ಭ್ರುಕುಟೀಕುಟಿಲಂ ತದಾ ।
ನಿಷ್ಕ್ರಾಂತಾ ಚ ತದಾ ಕಾಲೀ ಲಲಾಟಫಲಕಾದ್ದ್ರುತಂ ॥೩೯॥

ವ್ಯಾಘ್ರಚರ್ಮಾಂಬರಾ ಕ್ರೂರಾ ಗಜಚರ್ಮೋತ್ತರೀಯಕಾ ।
ಮುಂಡಮಾಲಾಧರಾ ಘೋರಾ ಶುಷ್ಕವಾಪೀಸಮೋದರಾ ॥೪೦॥

---

ಮುಂಡನೂ ಕೂಡ ತನ್ನ ಸೇನೆಯವರೊಡನೆ ಬೇಗನೆ ಯುದ್ಧಕ್ಕೆ ಉದ್ಯುಕ್ತನಾದನು. ಬಹಳ ಕ್ರೂರನಾಗಿ ಅವನು ಕೋಪದಿಂದ ಬಾಣಗಳನ್ನು ಮಳೆಯು ಸುರಿಯುವಂತೆ ಸುರಿಸಿದನು. ||೩೭||

ಆ ರಣರಂಗದಲ್ಲಿ ಅಂಬಿಕಾದೇವಿಯು ದೊಡ್ಡದಾಗಿರುವ ಬಾಣಗಳ ಸಮೂಹವನ್ನು ನೋಡಿ ಕೋಪಗೊಂಡು ಯುದ್ಧವನ್ನು ಮಾಡಲು ಉಪಕ್ರಮಿಸಿದಳು. ಆ ಅಂಬಿಕಾದೇವಿಯ ಮುಖವು ಕೋಪದಿಂದ ಮೋಡದಂತೆ ಕಪ್ಪಾಗಿ ಕಾಣುತ್ತಿತ್ತು. ||೩೮||

ಆಗ ಕೋಪದಿಂದ ಅಂಬಿಕಾದೇವಿಯ ಮುಖವು ಬಾಳೆಯ ಹೂವಿನಂತೆ ಕಪ್ಪಾದ ಕಣ್ಣುಳ್ಳದ್ದಾಗಿ ಹುಬ್ಬುಗಂಟಿನಿಂದ ಭಯಂಕರವಾಗಿ ಕಾಣುತ್ತಿತ್ತು. ಮತ್ತು ಹೀಗೆ ಇರುವಾಗ ಆ ಅಂಬಿಕಾದೇವಿಯ ಹಲಗೆಯಂತೆ ಅಗಲವಾಗಿ ದೊಡ್ಡದಾಗಿರುವ ಹುಬ್ಬಿನ ಹಣೆಯಿಂದ ಕಾಳಿಯು ಹುಟ್ಟಿದಳು. ಆ ಕಾಳಿಯು ಹುಲಿಯ ಚರ್ಮವನ್ನು ಉಟ್ಟಿರುವವಳಾಗಿಯೂ, ಭಯಂಕರಳಾಗಿಯೂ, ಆನೆಯ ಚರ್ಮವನ್ನು ಹೊದ್ದಿರುವವಳಾಗಿಯೂ, (ಮುಂಡ) ತಲೆಬುರುಡೆಯ ಸರವನ್ನು ಹಾಕಿಕೊಂಡಿರುವವಳಾಗಿಯೂ, ಒಣಗಿಹೋಗಿರುವ ಭಾವಿಗೆ ಸಮನಾದ ಹೊಟ್ಟೆಯುಳ್ಳವಳಾಗಿಯೂ ಇದ್ದಳು ! ||೩೯-೪೦||

ಖಡ್ಗಪಾಶಧರಾऽತೀವ ಭೀಷಣಾ ಭಯದಾಯಿನೀ ।
ಖಟ್ವಾಂಗಧಾರಿಣೀ ರೌದ್ರಾ ಕಾಲರಾತ್ರಿರಿವಾಪರಾ ॥೪೧॥

ವಿಸ್ತೀರ್ಣವದನಾ ಜಿಹ್ವಾಂ ಚಾಲಯಂತೀ ಮುಹುರ್ಮುಹುಃ ।
ವಿಸ್ತಾರಜಘನಾ ವೇಗಾಜ್ಜಘಾನಾಸುರಸೈನಿಕಾನ್ ॥೪೨॥

ಕರೇ ಕೃತ್ವಾ ಮಹಾವೀರಾಂಸ್ತರಸಾ ಸಾ ರುಷಾನ್ವಿತಾ ।
ಮುಖೇ ಚಿಕ್ಷೇಪ ದೈತೇಯಾನ್ಪಿಪೇಷ ದಶನೈಃ ಶನೈಃ ॥೪೩॥

ಗಜಾನ್ ಘಂಟಾನ್ವಿತಾನ್ ಹಸ್ತೇ ಗೃಹೀತ್ವಾ ನಿದಧೌ ಮುಖೇ ।
ಸಾರೋಹಾನ್ ಭಕ್ಷಯಿತ್ವಾಜೌ ಸಾಟ್ಟಹಾಸಂ ಚಕಾರ ಹ ॥೪೪॥

ತಥೈವ ತುರಗಾನುಷ್ಟ್ರಾಂಸ್ತಥಾ ಸಾರಥಿಭಿಃ ಸಹ ।
ನಿಕ್ಷಿಪ್ಯ ವಕ್ತ್ರೇ ದಶನೈಶ್ಚರ್ವಯಂತ್ಯತಿಭೈರವಮ್ ॥೪೫॥

---

ಕತ್ತಿ ಮತ್ತು ಹಗ್ಗ ಇವುಗಳನ್ನು ಧರಿಸಿದವಳಾಗಿ, ನೋಡುವವರಿಗೆ ಬಹಳ ಭಯವನ್ನುಂಟುಮಾಡುವವಳಾಗಿ ಖಟ್ವಾಂಗವೆಂಬ ಆಯುಧವನ್ನು ಧರಿಸಿಕೊಂಡಿದ್ದ ಆ ಕಾಳಿಕಾದೇವಿಯು ಬೇರೆಯಾಗಿರುವ ಕಾಳರಾತ್ರಿಯೋ ಎಂಬ ಹಾಗೆ ರೌದ್ರ ವಾಗಿದ್ದಳು. ॥೪೧॥

ದೊಡ್ಡದಾಗಿರುವ ಬಾಯನ್ನು ಬಿಟ್ಟುಕೊಂಡು ನಾಲಗೆಯನ್ನು ಆಗಾಗ್ಯೆ ಅಲ್ಲಾಡಿಸುವವಳಾಗಿ ದೊಡ್ಡದಾಗಿರುವ ಕಟಿ ಪುರೋಭಾಗವುಳ್ಳ ಆ ಕಾಳಿಯು ರಾಕ್ಷಸ ಸೇನೆಯವರನ್ನು ಕೊಲ್ಲುತ್ತಾ ಬಂದಳು. ॥೪೨॥

ಬಹಳ ಶೂರರಾದ ರಾಕ್ಷಸರನ್ನು ಆ ಕಾಳಿಯು ಕೋಪವುಳ್ಳವಳಾಗಿ ತನ್ನ ಕೈಯ್ಯಿನಿಂದ ಹಿಡಿದುಕೊಂಡು ವೇಗವಾಗಿ ತನ್ನಬಾಯಿಗೆ ಹಾಕಿಕೊಂಡು ತನ್ನ ಹಲ್ಲುಗಳಿಂದ ಮೆಲ್ಲಗೆ ಪುಡಿಮಾಡುತ್ತಿದ್ದಳು. ॥೪೩॥

ಆ ಕಾಳಿಯು ಘಂಟೆಯನ್ನು ಕಟ್ಟಿರುವ ಆನೆಗಳನ್ನೂ, ಅವುಗಳ ಮಾವಟಿಗ ರನ್ನೂ ಸಹ ಕೈಯಿನಲ್ಲಿ ಹಿಡಿದುಕೊಂಡು ತನ್ನ ಬಾಯಿಯಲ್ಲಿ ಹಾಕಿಕೊಂಡು ತಿನ್ನುತ್ತಾ ಯುದ್ಧರಂಗದಲ್ಲಿ ಅಟ್ಟಹಾಸವನ್ನು ಮಾಡುತ್ತಿದ್ದಳು. ॥೪೪॥

ಆನೆಗಳನ್ನೂ, ರಾಕ್ಷಸರನ್ನೂ ನಾಶಮಾಡಿದಂತೆ ಸಾರಥಿಗಳೊಡನೆ ಇರುವ ಕುದುರೆಗಳು ಒಂಟೆಗಳು ಇವುಗಳನ್ನೂ ಬಾಯಿಯಲ್ಲಿ ಹಾಕಿಕೊಂಡು ಅವುಗಳನ್ನು ಇತರರಿಗೆ ಭಯವಾಗುವಂತೆ ಹಲ್ಲುಗಳಿಂದ ಅಗಿದು ತಿನ್ನುತ್ತಿದ್ದಳು. ॥೪೫॥

ಹನ್ಯಮಾನಂ ಬಲಂ ಪ್ರೇಕ್ಷ್ಯ ಚಂಡಮುಂಡೌ ಮಹಾಸುರೌ ।
ಛಾದಯಾಮಾಸತುರ್ದೇವೀಂ ಬಾಣಾಃಸಾರೈರನಂತರೈಃ ॥೪೬॥

ಚಂಡಶ್ಚಂಡಕರಚ್ಛಾಯಂ ಚಕ್ರಂ ಚಕ್ರಧರಾಯುಧಂ ।
ಚಿಕ್ಷೇಪ ತರಸಾ ದೇವೀಂ ನನಾದ ಚ ಮುಹುರ್ಮುಹುಃ ॥೪೭॥

ನದಂತಂ ವೀಕ್ಷ್ಯ ತಂ ಕಾಲೀ ರಥಾಂಗಂ ಚ ರವಿಪ್ರಭಂ ।
ಬಾಣೇನೈಕೇನ ಚಿಚ್ಛೇದ ಸುಪ್ರಭಂ ತತ್ಸುದರ್ಶನಂ ॥೪೮॥

ತಂ ಜಘಾನ ಶರೈಸ್ತೀಕ್ಷ್ಣೈಶ್ಚಂಡಂ ಚಂಡೀ ಶಿಲಾಶಿತೈಃ ।
ಮೂರ್ಛಿತೋಽಸೌ ಪಪಾತೋರ್ವ್ಯಾಂ ದೇವೀಬಾಣಾರ್ದಿತೋ ಭೃಶಂ॥೪೯॥

ಪತಿತಂ ಭ್ರಾತರಂ ವೀಕ್ಷ್ಯ ಮುಂಡೋ ದುಃಖಾರ್ದಿತಸ್ತದಾ ।
ಚಕಾರ ಶರವೃಷ್ಟಿಂ ಚ ಕಾಲಿಕೋಪರಿ ಕೋಪತಃ ॥೫೦॥

---

ಚಂಡಮುಂಡಾಸುರರು ಇಬ್ಬರೂ ಕಾಳಿಯಿಂದ ನಾಶಹೊಂದುತ್ತಿರುವ ಸೇನೆಯನ್ನು ನೋಡಿ ಸ್ವಲ್ಪವೂ ಅವಕಾಶವೇ ಇಲ್ಲದಿರುವ ರೀತಿಯಿಂದ ದೇವಿಯನ್ನು ಬಾಣಗಳ ಧಾರೆಗಳಿಂದ ಕೂಡಿದ ಮಳೆಯಿಂದ ಮುಚ್ಚಿದರು. ॥೪೬॥

ಚಂಡನು ಸೂರ್ಯನಂತೆಯೂ, ವಿಷ್ಣುವಿನ ಚಕ್ರಾಯುಧದಂತೆಯೂ, ಹೊಳೆಯುತ್ತಿರುವ ಚಕ್ರಾಯುಧವನ್ನು ತೆಗೆದುಕೊಂಡು ಬೇಗನೆ ದೇವಿಯಮೇಲೆ ಪ್ರಯೋಗಿಸಿದನು. ಮತ್ತು ಬಾರಿ ಬಾರಿಗೂ, ಸಿಂಹನಾದವನ್ನು ಮಾಡಿದನು. ॥೪೭॥

ಕಾಳಿಯು, ಸಿಂಹನಾದವನ್ನು ಮಾಡುತ್ತಿರುವ ಅವನನ್ನೂ ಸೂರ್ಯನಂತೆ ಹೊಳೆಯುತ್ತಿರುವ ಚಕ್ರಾಯುಧವನ್ನು ಸಹ ನೋಡಿ ಸುದರ್ಶನವೆಂಬ ಚಕ್ರದಂತೆ ಹೊಳೆಯುತ್ತಿರುವ ಆ ಚಕ್ರಾಯುಧವನ್ನು ಒಂದು ಬಾಣದಿಂದ ಕತ್ತರಿಸಿದಳು. ॥೪೮॥

ಚಂಡಿಕಾದೇವಿಯು ಮೊನೆಚಾಗಿರುವ ಬಾಣಗಳಿಂದ ಕ್ರೂರವಾಗಿ ಅವನನ್ನು ಹೊಡೆದಳು. ದೇವಿಯ ಬಾಣಗಳಿಂದ ಬಹಳಮಟ್ಟಿಗೆ ಸಂಕಟಪಟ್ಟವನಾಗಿ ಈ ಚಂಡನು ಮೂರ್ಛೆಯನ್ನು ಹೊಂದಿ ಭೂಮಿಯಲ್ಲಿ ಬಿದ್ದನು. ॥೪೯॥

ಆಗ ಮುಂಡಾಸುರನು ತನ್ನ ಅಣ್ಣನು ಬಿದ್ದಿರುವುದನ್ನು ನೋಡಿ ದುಃಖದಿಂದ ಸಂಕಟಪಟ್ಟವನಾಗಿ ಕೋಪದಿಂದ ಕಾಳಿಕಾದೇವಿಯ ಮೇಲೆ ಕ್ರೂರವಾದ ಬಾಣಗಳನ್ನು ಮಳೆಯು ಬೀಳುವಂತೆ ಸುರಿಸಿದನು. ॥೫೦॥

ಚಂಡಿಕಾ ಮುಂಡನಿರ್ಮುಕ್ತಾಂ ಶರವೃಷ್ಟಿಂ ಸುದಾರುಣಾಂ ।
ಈಷಿಕಾಸ್ತ್ರೈರ್ಬಲಾನ್ಮುಕ್ತೈಶ್ಚಕಾರ ತಿಲಶಃ ಕ್ಷಣಾತ್ ॥೫೧॥

ಅರ್ಧಚಂದ್ರೇಣ ಬಾಣೇನ ತಾಡಯಾಮಾಸ ತಂ ಪುನಃ ।
ಪತಿತೋಽಸೌ ಮಹಾವೀರ್ಯೋ ಮೇದಿನ್ಯಾಂ ಮದವರ್ಜಿತಃ ॥೫೨॥

ಹಾಹಾಕಾರೋ ಮಹಾನಾಸೀದ್ದಾನವಾನಾಂ ಬಲೇ ತದಾ ।
ಜಹರ್ಷುರಮರಾಃ ಸರ್ವೇ ಗಗನಸ್ಥಾ ಗತವ್ಯಥಾಃ ॥೫೩॥

ವಿಹಾಯ ಮೂರ್ಛಾಂ ಚಂಡಸ್ತು ಸಂಗೃಹ್ಯ ಮಹತೀಂ ಗದಾಂ ।
ತರಸಾ ತಾಡಯಾಮಾಸ ಕಾಲಿಕಾಂ ದಕ್ಷಿಣೇ ಭುಜೇ ॥ ॥೫೪॥

ವಂಚಯಿತ್ವಾ ಗದಾಘಾತಂ ತಂ ಬಬಂಧ ಮಹಾಸುರಂ ।
ತರಸಾ ಬಾಣಪಾಶೇನ ಮಂತ್ರಮುಕ್ತೇನ ಕಾಲಿಕಾ ॥೫೫॥

---

ಚಂಡಿಕಾದೇವಿಯು ಮುಂಡಾಸುರನು ಬಿಟ್ಟಿರುವ ಬಹಳ ಕ್ರೂರವಾದ ಬಾಣಗಳ ಮಳೆಯನ್ನು ತಾನು ತನ್ನ ಶಕ್ತಿಯಿಂದ ಬಿಡಲ್ಪಟ್ಟ, ಮಂತ್ರಿಸಿದ ಸಲಾಕಿಗಳಿಂದ ಕೂಡಿದ, ಈಷಿಕಾಸ್ತ್ರದಿಂದ ಒಂದು ಕ್ಷಣದಲ್ಲಿ ಎಳ್ಳಿನ ಪ್ರಮಾಣದಿಂದ ಚೂರು ಚೂರು ಮಾಡಿದಳು. ||೫೧||

ಅರ್ಧಚಂದ್ರಾಕಾರವಾದ ಬಾಣದಿಂದ ಕಾಳಿಯು ಅವನನ್ನು ತಿರುಗಿಯೂ ಹೊಡೆದಳು. ಮಹಾಬಲಿಷ್ಠನಾದ ಈ ಮುಂಡಾಸುರನು ಕೊಬ್ಬಿಲ್ಲದವನಾಗಿ ಭೂಮಿಯಲ್ಲಿ ಬಿದ್ದನು. ||೫೨||

ಚಂಡಮುಂಡರಿಬ್ಬರೂ ಹೀಗೆ ಯುದ್ಧರಂಗದಲ್ಲಿ ಬಿದ್ದಿರುವುದನ್ನು ನೋಡಿ ದಾನವರ ಸೇನೆಯಲ್ಲಿ ಆಗ ಬಹಳಮಟ್ಟಿಗೆ ಹಾ! ಹಾ! ಕಾರವುಂಟಾಯಿತು. ಅಂತರಿಕ್ಷದಲ್ಲಿರುವವರಾದ ದೇವತೆಗಳೆಲ್ಲರೂ ಕಳೆದುಹೋದ ದುಃಖವುಳ್ಳವರಾಗಿ ಸಂತೋಷವನ್ನು ಹೊಂದಿದರು. ||೫೩||

ಚಂಡನು ಮೂರ್ಛೆಯನ್ನು ತಿಳಿದು ಎದ್ದು ದೊಡ್ಡದಾದ ಗದೆಯನ್ನು ಹಿಡಿದುಕೊಂಡು ಕಾಳಿಕಾದೇವಿಯನ್ನು ಬಲದ ಭುಜದ ಮೇಲೆ ವೇಗವಾಗಿ ಆ ಗದಾಯುಧದಿಂದ ಹೊಡೆದನು. ||೫೪||

ಆಗ ಕಾಳಿಕಾದೇವಿಯು ಆ ರಾಕ್ಷಸನು ಹೊಡೆದ ಗದಾಯುಧದ ಏಟನ್ನು ತಪ್ಪಿಸಿಕೊಂಡು ಆ ರಾಕ್ಷಸನನ್ನು ಮಂತ್ರದಿಂದ ಕೂಡಿರುವ ಬಾಣಗಳೆಂಬ ಹಗ್ಗದಿಂದ ಬೇಗನೆ ಕಟ್ಟಿಹಾಕಿದಳು. ||೫೫||

ಉತ್ಥಿತಸ್ತು ತದಾ ಮುಂಡೋ ಬದ್ಧಂ ದೃಷ್ಟ್ವಾನುಜಂ ಬಲಾತ್ ।
ಆಜಗಾಮ ಸುಸನ್ನದ್ಧಃ ಶಕ್ತಿಂ ಕೃತ್ವಾ ಕರೇ ದೃಢಾಂ ॥೫೬॥

ಆಗಚ್ಛಂತಂ ತದಾ ಕಾಲೀ ದಾನವಂ ವೀಕ್ಷ್ಯ ಸತ್ವರಂ ।
ಬಬಂಧ ತರಸಾ ತಂ ತು ದ್ವಿತೀಯಂ ಭ್ರಾತರಂ ಭೃಶಂ ॥೫೭॥

ಗೃಹೀತ್ವಾ ತೌ ಮಹಾವೀರ್ಯೌ ಚಂಡಮುಂಡೌ ಶಶಾವಿವ ।
ಕುರ್ವಂತೀ ವಿಪುಲಂ ಹಾಸಮಾಜಗಾಮಾಂಬಿಕಾಂ ಪ್ರತಿ ॥೫೮॥

ಆಗತ್ಯ ತಾಮುಥೋವಾಚ ಗೃಹಾಣೇಮೌ ಪಶೂ ಪ್ರಿಯೇ ।
ರಣಯಜ್ಞಾರ್ಥಮಾನೀತೌ ದಾನವೌ ರಣದುರ್ಜಯೌ ॥೫೯॥

---

ಆಗ ಮುಂಡಾಸುರನು ತಾನೂ ಮೂರ್ಛೆಯನ್ನು ತಿಳಿದು ತನ್ನ ತಮ್ಮನು ಶತ್ರುವಿನ ಮಂತ್ರಿಸಿದ ಶಕ್ತಿಯಿಂದ ಕಟ್ಟಿಹಾಕಲ್ಪಟ್ಟಿರುವುದನ್ನು ನೋಡಿ ತಾನು ಬಲವಾಗಿರುವ ಶಕ್ತಿಯೆಂಬ ಆಯುಧವನ್ನು ಕೈಯಿನಲ್ಲಿ ಹಿಡಿದುಕೊಂಡು ಯುದ್ಧಕ್ಕೆ ಸಿದ್ಧನಾಗಿ ಬಂದನು. ॥೫೬॥

ಆಗ ಕಾಳಿಯು ಶಕ್ತ್ಯಾಯುಧವನ್ನು ಹಿಡಿದುಕೊಂಡು ಯುದ್ಧಕ್ಕಾಗಿ ಬರುತ್ತಿರುವ ಆ ಮುಂಡಾಸುರನನ್ನು ನೋಡಿ, ಆ ಅಣ್ಣತಮ್ಮಂದಿರ ಪೈಕಿ ಎರಡನೆಯವನಾದ ಅವನನ್ನೂ ಬೇಗನೆ ಬಾಣಪಾಶಗಳಿಂದ ಮೊದಲಿನವನನ್ನು ಕಟ್ಟಿದಂತೆ ಕಟ್ಟಿಹಾಕಿದಳು. ॥೫೭॥

ಕಾಳಿಯು ಬಹಳ ಬಲಿಷ್ಠರಾದ ಆ ಚಂಡ-ಮುಂಡಾಸುರರಿಬ್ಬರನ್ನೂ ಮೊಲಗಳನ್ನು ಹಿಡಿದುಕೊಂಡು ಬರುವಹಾಗೆ ಹಿಡಿದುಕೊಂಡು ಬಹಳ ಜೋರಾಗಿ ನಗುತ್ತಾ ಅಂಬಿಕಾದೇವಿಯ ಹತ್ತಿರಕ್ಕೆ ಬಂದಳು. ॥೫೮॥

ಓ ಪ್ರೀತಿಪಾತ್ರಳಾದ ಅಂಬಿಕಾದೇವಿಯೇ, ನಾನು ಯುದ್ಧದಲ್ಲಿ ಯಾರಿಂದಲೂ ಜಯಿಸಲು ಅಸಾಧ್ಯರಾಗಿರುವ ಚಂಡ-ಮುಂಡಾಸುರರೆಂಬ ಈ ಇಬ್ಬರು ರಾಕ್ಷಸರನ್ನು ಹಿಡಿದುಕೊಂಡು ಬಂದಿದೇನೆ. ಈ ಎರಡು ಪಶುಗಳನ್ನು ಯುದ್ಧವೆಂಬ ಯಜ್ಞದಲ್ಲಿ ಪಶುಗಳನ್ನಾಗಿ ನೀನು ಸ್ವೀಕರಿಸು. ಎಂದು ಕಾಳಿಕಾದೇವಿಯು ಹೇಳಿದಳು. ॥೫೯॥

ತಾವಾನೀತೌ ತದಾ ವೀಕ್ಷ್ಯ ಚಂಡಿಕಾ ತೌ ವೃಕಾವಿವ ।
ಅಂಬಿಕಾ ಕಾಲಿಕಾಂ ಪ್ರಾಹ ಮಾಧುರೀಸಂಯುತಂ ವಚಃ ॥೬೦॥

ವಧಂ ಮಾ ಕುರು ಮಾ ಮುಂಚ ಚತುರಾಽಸಿ ರಣಪ್ರಿಯೇ ।
ದೇವಾನಾಂ ಕಾರ್ಯಸಂಸಿದ್ಧಿಃ ಕರ್ತವ್ಯಾ ತರಸಾ ತ್ವಯಾ ॥೬೧॥

॥ ವ್ಯಾಸ ಉವಾಚ ॥

ಇತಿ ತಸ್ಯಾ ವಚಃ ಶ್ರುತ್ವಾ ಕಾಳಿಕಾ ಪ್ರಾಹ ತಾಂ ಪುನಃ ।
ಯುದ್ಧಯಜ್ಞೇಽತಿವಿಖ್ಯಾತೇ ಖಡ್ಗಯೂಪೇ ಪ್ರತಿಷ್ಠಿತೇ ॥೬೨॥

---

ಚಂಡಿಕಾದೇವಿಯು ತೋಳಗಳಂತಿರುವ ಅವರಿಬ್ಬರನ್ನೂ ಹಿಡಿದುಕೊಂಡು ಬಂದಿರುವುದನ್ನು ನೋಡಿ ಆ ಕಾಳಿಯನ್ನು ಕುರಿತು ಮಾಧುರ್ಯದಿಂದ ಕೂಡಿರುವ ಮಾತನ್ನು ಹೇಳಿದಳು. ||೬೦||

ಯುದ್ಧದಲ್ಲಿ ಪ್ರೀತಿಯುಳ್ಳ ಚತುರಳಾದ ಕಾಳಿಕಾದೇವಿಯೇ, ನೀನು ಇವರಿಬ್ಬರನ್ನೂ ಕೊಲ್ಲಬೇಡ, ಬಿಡಬೇಡ. ಇವರನ್ನು ಹೀಗೆಯೇ ಇಟ್ಟಿದ್ದರೆ ದೇವತೆಗಳ ಕಾರ್ಯವು ಬೇಗನೆ ಸಿದ್ಧವಾಗುತ್ತದೆ. ಆದ್ದರಿಂದ ದೇವತೆಗಳ ಕಾರ್ಯವನ್ನು ನೀನು ಮಾಡು. ಎಲೌ ಕಾಳಿಕಾದೇವಿಯೇ, ನೀನು ಬುದ್ಧಿವಂತಳಾಗಿರುತ್ತೀಯೆ. ನೀನು ನನ್ನ ಮಾತನ್ನು ಕೇಳಿ ಅದರಂತೆ ನಡೆಯಿಸು. ಯುದ್ಧವನ್ನು ಯಜ್ಞವೆಂತಲೂ ಅದರಲ್ಲಿ ಇವರು ಪಶುಗಳೆಂತಲೂ ಸಹ ಭಾವಿಸಿ ಇವರನ್ನು ಕೊಂದರೆ ಯಜ್ಞದಲ್ಲಿ ನಡೆಯುವ ಹಿಂಸೆಯು ಹಿಂಸೆಯಲ್ಲವೆಂದು ವೇದವಾಕ್ಯವಿರುವುದರಿಂದ ಹಿಂಸಾದೋಷವು ಬರುವುದಿಲ್ಲ. ಇವರನ್ನು ಬಿಟ್ಟರೆ ದೇವತೆಗಳಿಗೆ ಹಿಂಸೆಯಾಗುವುದರಿಂದ ಇವರನ್ನು ಬಿಟ್ಟಂತೆಯೂ ಆಗುವುದಿಲ್ಲ. ಆದ್ದರಿಂದ ದೇವತೆಗಳ ಕಾರ್ಯವು ಹೀಗೆ ನಡೆಸತಕ್ಕದ್ದು ಎಂದು ಭಾವವು. ||೬೧||

ವ್ಯಾಸಋಷಿಯು ಹೇಳಿದನು—ಮುಂದೆ ಉಂಟಾಗುವ ಮಹಾದೈತ್ಯರ ವಧೆಗಾಗಿ ದೇವಿಯ ಪ್ರೀತ್ಯರ್ಥವಾಗಿ ಪಶುಬಲಿಯು ಅತ್ಯವಶ್ಯಕವೆಂದು ದೇವತೋದ್ದೇಶ್ಯಕವಾದ ವಧೆಯು ಹಿಂಸಾಜನಕವಲ್ಲವೆಂಬ ದೇವಿಯ ಮಾತನ್ನು ಕೇಳಿ, ಕಾಳಿಕಾದೇವಿಯು ಅಂಬಿಕಾದೇವಿಯ ಸಂಗಡ ಬಹಳ ಪ್ರಸಿದ್ಧವಾದ ಯುದ್ಧವೆಂಬ ಯಜ್ಞದಲ್ಲಿ ಕತ್ತಿಯೆಂಬ ಯೂಪಸ್ತಂಭವು ನಿಲ್ಲಿಸಲ್ಪಟ್ಟಿರುವಾಗ ಪಶುವಿನ ಬಲಿಯನ್ನು ಸಮರ್ಪಿಸುತ್ತೇನೆ. ಹೀಗೆ ಮಾಡಿದಲ್ಲಿ ದೇವತೋದ್ದೇಶ್ಯಕವಾದ ಪಶುಹಿಂಸೆಯು

ಆಲಂಭಂ ಚ ಕರಿಷ್ಯಾಮಿ ಯಥಾ ಹಿಂಸಾ ನ ಜಾಯತೇ ।
ಇತ್ಯುಕ್ತ್ವಾ ಸಾ ತದಾ ಕಾಳೀ ಖಡ್ಗೇನ ಶಿರಸೀ ತಯೋಃ ।
ಚಕರ್ತ ತರಸಾ ಕಾಳೀ ಪಪೌ ಚ ರುಧಿರಂ ಮುದಾ ॥೬೩॥

ಏವಂ ದೈತ್ಯೌ ಹತೌ ದೃಷ್ಟ್ವಾ ಮುದಿತೋವಾಚ ಚಾಂಬಿಕಾ ॥೬೪॥

ಕೃತಂ ಕಾರ್ಯಂ ಸುರಾಣಾಂ ತೇ ದದಾಮ್ಯದ್ಯ ವರಂ ಶುಭಂ ।
ಚಂಡಮುಂಡೌ ಹತೌ ಯಸ್ಮಾತ್ತಸ್ಮಾತ್ತೇ ನಾಮ ಕಾಲಿಕೇ ॥೬೫॥
ಚಾಮುಂಡೇತಿ ಸುವಿಖ್ಯಾತಂ ಭವಿಷ್ಯತಿ ಧರಾತಲೇ ॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಷಡ್ವಿಂಶೋಽಧ್ಯಾಯಃ

---

ಪಾಪಜನಕವಲ್ಲವು ಎಂದು ಹೇಳಿದಳು. ಆಗ ಕಾಳಿಕಾದೇವಿಯು ಹೀಗೆ ಹೇಳಿ ಕತ್ತಿಯಿಂದ ಅವರಿಬ್ಬರ ತಲೆಗಳನ್ನು ಕತ್ತರಿಸಿಬಿಟ್ಟಳು. ಸಂತೋಷದಿಂದ ಅವರ ರಕ್ತವನ್ನು ಕುಡಿದಳು. ||೬೩||

ಹೀಗೆ ರಾಕ್ಷಸರಿಬ್ಬರೂ ಹತವಾದುದನ್ನು ನೋಡಿ ಸಂತೋಷವುಳ್ಳವಳಾಗಿ ಅಂಬಿಕಾದೇವಿಯು, ನೀನು ದೇವತೆಗಳ ಕಾರ್ಯವನ್ನು ಮಾಡಿದುದರಿಂದ ನಿನಗೆ ಶುಭಕರವಾದ ವರವನ್ನು ಈಗ ಕೊಡುವೆನು. ||೬೪||

ಎಲೌ ಕಾಳಿಕಾದೇವಿಯೇ, ನೀನು ಯಾವ ಕಾರಣದಿಂದ ಚಂಡಮುಂಡಾಸುರ ರಿಬ್ಬರನ್ನೂ ವಧೆಮಾಡಿರುವೆಯೋ ಆ ಕಾರಣದಿಂದ ನಿನಗೆ ಭೂಮಿಯಲ್ಲಿ ಚಾಮುಂಡಾ ಎಂಬ ಹೆಸರು ಪ್ರಸಿದ್ಧವಾಗುವುದು.

ಅಂಬಿಕಾಶಬ್ದದಿಂದ ಕೌಶಿಕೀ ಎಂಬ ತಾಯಿಯು, ಎಂದು ಅರ್ಥಮಾಡಿ ಕೊಂಡರೆ ಆಗ ಅಂಬಿಕಾ ಲಲಾಟದಿಂದ ಉತ್ಪನ್ನಳಾದ ಕಾಳಿಯು ಚಂಡಮುಂಡರಿಬ್ಬ ರನ್ನೂ ವಧೆಮಾಡಿದ್ದರಿಂದ ಅವಳಿಗೆ ಚಾಮುಂಡಾ ಎಂಬ ನಾಮಕರಣವನ್ನು ಅಂಬಿ ಕೆಯು ಮಾಡಿದಳೆಂದು ಅರ್ಥವೂ ಸಿದ್ಧವಾಗುವುದು.

ಅಂಬಿಕಾ ಶಬ್ದಕ್ಕೆ ಕೌಶಿಕೀ ಎಂದು ಅರ್ಥಮಾಡಿದರೆ, ಆಗ ಕೌಶಿಕೀಲಲಾಟದಿಂದ ಉತ್ಪನ್ನಳಾದ ಕಾಳಿಯ ದೆಸೆಯಿಂದ ಚಂಡಮುಂಡರ ವಧೆಯು ನಡೆದ ಕಾರಣ ಕೌಶಿಕಿಯು ಕಾಳಿಗೆ ಚಾಮುಂಡಾ ಎಂಬುದಾಗಿ ನಾಮಕರಣವನ್ನು ಮಾಡಿದಳೆಂದು ಅರ್ಥವಾಗುವುದು.

ಮಾರ್ಕಂಡೇಯಪುರಾಣದಲ್ಲಿಯೂ ಈ ಎರಡು ಪಕ್ಷಗಳೂ ಹೇಳಲ್ಪಟ್ಟಿರುತ್ತವೆ.

ಪ್ರಾಚೀನರು ಎರಡನೆಯ ಪಕ್ಷವನ್ನು ಸಪ್ತಶತೀವ್ಯಾಖ್ಯಾನದಲ್ಲಿ ಸಮರ್ಥನೆ ಮಾಡಿರುತ್ತಾರೆ. ಆದರೆ ಅಂಬಿಕಾ ಶಬ್ದಕ್ಕೆ ಕೌಶಿಕೆಯ ತಾಯಿಯು ಎಂಬ ಅರ್ಥವನ್ನು ಕೊಡುವ ಶಬ್ದ ಶಕ್ತಿಯನ್ನು ಅಂಗೀಕರಿಸಿರುವ ಕಾರಣ ಮೊದಲು ಎರಡು ಪುರಾಣಗಳಲ್ಲಿಯೂ ಈ ಅರ್ಥವನ್ನು ಅಂಗೀಕರಿಸಿ ಹೇಳಿರುವುದರಿಂದ ಇಲ್ಲಿಯೂ ಮೇಲಿನ ಮೊದಲನೆಯ ಪಕ್ಷವು ಸಮ್ಮತವಾದದ್ದೆಂದು ನನ್ನ ಅಭಿಪ್ರಾಯವೆಂದು ವ್ಯಾಖ್ಯಾನಕಾರರು ವ್ಯಾಖ್ಯಾನದಲ್ಲಿ ನಿರ್ಣಯ ಮಾಡಿರುವರು. ||೬೫||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪಂಚಮಸ್ಕಂಧೇ

### ॥ ಸಪ್ತವಿಂಶೋಽಧ್ಯಾಯಃ ॥

### ಇಪ್ಪತ್ತೇಳನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಹತೌ ತೌ ದಾನವೌ ದೃಷ್ಟ್ವಾ ಹತಶೇಷಾಶ್ಚ ಸೈನಿಕಾಃ ।**
**ಪಲಾಯನಂ ತತಃ ಕೃತ್ವಾ ಜಗ್ಮುಃಸರ್ವೇ ನೃಪಂ ಪ್ರತಿ ॥೧॥**

**ಭಿನ್ನಾಂಗಾ ವಿಶಿಖೈಃ ಕೇಚಿತ್ಕೇಚಿಚ್ಛಿನ್ನಕರಾಸ್ತಥಾ ।**
**ರುಧಿರಸ್ರಾವದೇಹಾಶ್ಚ ರುದಂತೋಽಭಿಯಯುಃ ಪುರೇ ॥೨॥**

---

ವ್ಯಾಸಋಷಿಯು ಹೇಳಿದನು—ರಾಕ್ಷಸರಲ್ಲಿ ಯುದ್ಧದಲ್ಲಿ ಕೊಲ್ಲಲ್ಪಡದೇ ಉಳಿದಿದ್ದ ಸೈನಿಕರೂ ಸಹ ಆ ಯುದ್ಧರಂಗದಲ್ಲಿ ಚಂಡಮುಂಡರೆಂಬ ಇಬ್ಬರು ರಾಕ್ಷಸರೂ ಸಂಹರಿಸಲ್ಪಟ್ಟಿದನ್ನು ನೋಡಿ ಎಲ್ಲರೂ ಯುದ್ಧರಂಗವನ್ನು ಬಿಟ್ಟು ಓಡಿದರು. ಅನಂತರದಲ್ಲಿ ಅವರೆಲ್ಲರೂ ತಮ್ಮ ರಾಜನಾದ ಶುಂಭಾಸುರನ ಹತ್ತಿರಕ್ಕೆ ಹೋದರು. ॥೧॥

ಬಾಣಗಳಿಂದ ಕತ್ತರಿಸಿಹೋದ ಅವಯವಗಳುಳ್ಳವರು ಕೆಲವರು, ಹಾಗೆಯೇ ಮತ್ತೆ ಕೆಲವರು ಕತ್ತರಿಸಲ್ಪಟ್ಟ ಕೈಗಳುಳ್ಳವರು, ರಕ್ತ ಸುರಿಯುತ್ತಿರುವ ಶರೀರವುಳ್ಳವರು ಕೆಲವರು ಹೀಗೆಯೇ ಇತರ ಜನಗಳೂ ಸೇರಿಕೊಂಡು ಯುದ್ಧಕ್ಕೆ ಹೋದವರಲ್ಲಿ ಸತ್ತವರ ಹೊರತು ಉಳಿದವರೆಲ್ಲರೂ ಮೈಕೈಯಲ್ಲೆಲ್ಲ ರಕ್ತವನ್ನು ಸುರಿಸಿಕೊಂಡು ಅಳುತ್ತಾ ಅವರ ಪಟ್ಟಣಕ್ಕೆ ಬಂದರು. ॥೨॥

ಗತ್ವಾ ದೈತ್ಯಪತಿಂ ಸರ್ವೇ ಚಕ್ರುರ್ಬುಂಬಾರವಂ ಮುಹುಃ ।
ರಕ್ಷ ರಕ್ಷ ಮಹಾರಾಜ ಭಕ್ಷಯತ್ಯದ್ಯ ಕಾಲಿಕಾ ॥೩॥

ತಯಾ ಹತೌ ಮಹಾವೀರೌ ಚಂಡಮುಂಡೌ ಸುರಾರ್ದನೌ ।
ಭಕ್ಷಿತಾಃ ಸೈನಿಕಾಃ ಸರ್ವೇ ವಯಂ ಭಗ್ನಾ ಭಯಾತುರಾಃ ॥೪॥

ಭೀತಿದಂ ಚ ರಣಸ್ಥಾನಂ ಕೃತಂ ಕಾಲಿಕಯಾ ಪ್ರಭೋ ।
ಪಾತಿತೈ ರ್ಗಜವೀರಾಶ್ವೈರ್ದಾಸೇರಕಪದಾತಿಭಿಃ ॥೫॥

ಶೋಣಿತೌಘವಹಾ ಕುಲ್ಯಾ ಕೃತಾ ಮಾಂಸಾತಿಕರ್ದಮಾ ।
ಕೇಶಶೈವಲಿನೀ ಭಗ್ನರಥಚಕ್ರವಿರಾಜಿತಾ ॥೬॥

---

ಆ ರಾಕ್ಷಸರೆಲ್ಲರೂ ತಮ್ಮ ದೊರೆಯ ಸಮಿಾಪಕ್ಕೆ ಬಂದು ಎಲ್ಲರೂ ಬಾಯಿನ ಮೇಲೆ ಕೈಯಿಟ್ಟುಕೊಂಡು ಮುಖವಾದ್ಯವನ್ನು ಮಾಡಿದರು. ಅನಂತರದಲ್ಲಿ ದೊರೆಯನ್ನು ಕುರಿತು ಹೀಗೆ ಹೇಳಿದರು. ಓ ಮಹಾರಾಜನೇ, ನಮ್ಮನ್ನು ರಕ್ಷಿಸು, ರಕ್ಷಿಸು. ಇಲ್ಲದಿದ್ದರೆ ಈಗ ಕಾಲಿಕಾದೇವಿಯು ನಮ್ಮನ್ನು ಭಕ್ಷಿಸಿ ಬಿಡುವಳು. ||೩||

ಬಹಳ ಶಕ್ತಿವಂತರಾದ ಮತ್ತು ದೇವತೆಗಳನ್ನು ನಾಶಮಾಡುವವರಾದ ಚಂಡಮುಂಡಾಸುರರು ಇಬ್ಬರೂ ಆ ದೇವಿಯಿಂದ ನಾಶವನ್ನು ಹೊಂದಿದರು ! ಸೇನೆಯವರೆಲ್ಲರೂ ಆ ಕಾಳಿಕಾದೇವಿಯಿಂದ ಭಕ್ಷಿಸಲ್ಪಟ್ಟರು. ನಾವು ಹೆದರಿಕೆಯಿಂದ ಯುದ್ಧವನ್ನು ಬಿಟ್ಟು ಓಡಿಬಂದಿದ್ದೇವೆ. ||೪||

ಓ ಸ್ವಾಮಿಯೇ, ಸತ್ತುಬಿದ್ದಿರುವ ಆನೆ, ಸೇನೆಯವರು, ಕುದುರೆಗಳು, ಒಂಟಿಗಳು, ಮತ್ತು ಕಾಲಾಳುಗಳು ಇವರಿಂದ ಯುದ್ಧರಂಗವು ಭಯವನ್ನುಂಟುಮಾಡುವುದಾಗಿ ಮಾಡಲ್ಪಟ್ಟಿದೆ. ||೫||

ರಕ್ತದ ಪ್ರವಾಹವುಳ್ಳದ್ದಾಗಿಯೂ, ಮಾಂಸದ ಹೆಚ್ಚಾದ ಕೆಸರುಳ್ಳದ್ದಾಗಿಯೂ, ತಲೆಯ ಕೂದಲೆಂಬ ಪಾಚಿಯಿಂದ ಕೂಡಿಕೊಂಡು, ಮುರಿದಿರುವ ರಥಗಳ ಸಮೂಹದಿಂದ ಪ್ರಕಾಶಮಾನವಾಗಿ, ಕತ್ತರಿಸಲ್ಪಟ್ಟ ತೋಳುಗಳೇ ಮುಂತಾದ ಅಂಗಗಳೆಂಬ ಮಿಾನುಗಳುಳ್ಳದ್ದಾಗಿ, ಕತ್ತರಿಸಿರುವ ತಲೆಯ ಬುರುಡೆಯೆಂಬ ಸೋರೆಯ ಬುರುಡೆಯುಳ್ಳದ್ದಾಗಿ, ಇರುವ ಹೊಳೆಯು ಭಯಪಡುವವರಿಗೆ ಹೆದರಿಕೆಯನ್ನುಂಟುಮಾಡು

ಛಿನ್ನಬಾಹ್ವಾದಿಮುತ್ಸಾಢ್ಯಾ ಶೀರ್ಷತುಂಬೀಫಲಾನ್ವಿತಾ ।
ಭಯದಾ ಕಾತರಾಣಾಂ ವೈ ಸುರಾಣಾಂ ಮೋದವರ್ಧಿನೀ ॥೭॥

ಕುಲಂ ರಕ್ಷ ಮಹಾರಾಜ ಪಾತಾಲಂ ಗಚ್ಛ ಸತ್ವರಂ ।
ಕ್ರುದ್ಧಾ ದೇವೀ ಕ್ಷಯಂ ಸದ್ಯಃ ಕರಿಷ್ಯತಿ ನ ಸಂಶಯಃ ॥೮॥

ಸಿಂಹೋಽಪಿ ಭಕ್ಷಯತ್ಯಾಜೌ ದಾನವಾನ್ದನುಜೇಶ್ವರ ।
ತಥೈವ ಕಾಲಿಕಾ ದೇವೀ ಹಂತಿ ಬಾಣೈರನೇಕಧಾ ॥೯॥

ತಸ್ಮಾತ್ತ್ವಮಪಿ ರಾಜೇಂದ್ರ ಮರಣಾಯ ಮೃಷಾ ಮತಿಂ ।
ಕರೋಷಿ ಸಹಿತೋ ಭ್ರಾತ್ರಾ ಶುಂಭೇನ ಕುಪಿತಾಶಯಃ ॥೧೦॥

ಕಿಂ ಕರಿಷ್ಯತಿ ನಾರ್ಯೇಷಾ ಕ್ರೂರಾ ಕುಲವಿನಾಶಿನೀ ।
ಯಸ್ಯಾ ಹೇತೋರ್ಮಹಾರಾಜ ಹಂತುಮಿಚ್ಛಸಿ ಬಾಂಧವಾನ್॥೧೧॥

---

ವುದಾಗಿಯೂ, ದೇವತೆಗಳಿಗೆ ಸಂತೋಷವನ್ನುಂಟುಮಾಡುವುದಾಗಿಯೂ ಇರುವ ಹಾಗೆ ಕಾಳಿಕಾದೇವಿಯಿಂದ ಮಾಡಲ್ಪಟ್ಟಿರುತ್ತದೆ! ॥೬-೭॥

ಓ ಮಹಾರಾಜನೇ, ನಿನ್ನ ವಂಶವನ್ನು ಕಾಪಾಡಿಕೋ. ಬೇಗನೆ ಪಾತಾಳ ಲೋಕಕ್ಕೆ ಹೋಗು. ಇಲ್ಲದಿದ್ದರೆ ದೇವಿಯು ಕೋಪವುಳ್ಳವಳಾಗಿ ಈಗಲೇ ನಮ್ಮೆಲ್ಲ ರನ್ನೂ ನಾಶಪಡಿಸುವುದರಲ್ಲಿ ಸಂಶಯವಿಲ್ಲವು. ॥೮॥

ಓ ರಾಕ್ಷಸರಾಜನೇ, ಸಿಂಹವೂ ಕೂಡ ಯುದ್ಧದಲ್ಲಿ ರಾಕ್ಷಸರನ್ನು ತಿಂದು ಬಿಡುತ್ತದೆ. ಹಾಗೆಯೇ ಕಾಳಿಕಾದೇವಿಯೂ ಕೂಡ ಬಾಣಗಳಿಂದ ಅನೇಕ ವಿಧವಾಗಿ ದಾನವರನ್ನು ಕೊಲ್ಲುತ್ತಾಳೆ. ॥೯॥

ಓ ರಾಜಶ್ರೇಷ್ಠನೇ, ಆದುದರಿಂದ ನೀನೂ ಕೂಡ ನಿನ್ನ ತಮ್ಮನಾದ ಶುಂಭ ನೊಡಗೊಂಡು ಕೋಪವುಳ್ಳವನಾಗಿ ಯುದ್ಧಮಾಡಲು ನಿಶ್ಚಯಿಸಿದರೆ, ವ್ಯರ್ಥವಾಗಿ ಸಾಯಲು ನಿಶ್ಚಯವನ್ನು ಮಾಡಿದಹಾಗಾಗುತ್ತದೆ. ॥೧೦॥

ಈ ಸ್ತ್ರೀ ವಿಷಯದಲ್ಲಿ ನೀನು ವಿವಾಹದ ಅಭಿಪ್ರಾಯವನ್ನು ಇರಿಸಿಕೊಂಡಿರು ತ್ತೀಯೆ. ಈ ಹೆಂಗುಸು ನಿನಗೆ ಸಿಕ್ಕಿದ್ದರಿಂದ ಏನು ತಾನೇ ಸುಖವು ಉಂಟಾಗು ವುದು. ಈ ಹೆಂಗುಸಾದರೋ ಕ್ರೂರಳೂ ಮತ್ತು ಕುಲವನ್ನು ನಾಶಮಾಡುವವಳೂ

ದೈವಾಧೀನೌ ಮಹಾರಾಜ ಲೋಕೇ ಜಯಪರಾಜಯೌ ।
ಅಲ್ಪಾರ್ಥಾಯ ಮಹದ್ದುಃಖಂ ಬುದ್ಧಿಮಾನ್ನ ಪ್ರಕಲ್ಪಯೇತ್ ॥೧೨॥

ಚಿತ್ರಂ ಪಶ್ಯ ವಿಧೇಃ ಕರ್ಮ ಯದಧೀನಂ ಜಗತ್ಪ್ರಭೋ ।
ನಿಹತಾಃ ರಾಕ್ಷಸಾಃ ಸರ್ವೇ ಸ್ತ್ರಿಯಾ ಪಶ್ಯೈಕಯಾಽನಯಾ ॥೧೩॥

ಜೇತಾ ತ್ವಂ ಲೋಕಪಾಲಾನಾಂ ಸೈನ್ಯಯುಕ್ತೋ ಹಿ ಸಾಂಪ್ರತಂ ।
ಏಕಾ ಪ್ರಾರ್ಥಯತೇ ಬಾಲಾ ಯುದ್ಧಾಯೇತಿ ಸುಸಂಭ್ರಮಃ ॥೧೪॥

ಪುರಾ ತ್ವಯಾ ತಪಸ್ತಪ್ತಂ ಪುಷ್ಕರೇ ದೇವತಾಯನೇ ।
ವರದಾನಾಯ ಸಂಪ್ರಾಪ್ತೋ ಬ್ರಹ್ಮಾ ಲೋಕಪಿತಾಮಹಃ ॥೧೫॥

---

ಆಗಿರುತ್ತಾಳೆ! ಆದುದರಿಂದ ಈ ಹೆಂಗುಸಿಗಾಗಿ ನೀನು ನೆಂಟರಿಷ್ಟರೆಲ್ಲರನ್ನೂ ಕೊಲ್ಲಿಸುವುದಕ್ಕೆ ಆಸೆಪಡುವಂತಾಗುತ್ತದೆ! ॥೧೧॥

ಓ ಮಹಾರಾಜನೇ, ಲೋಕದಲ್ಲಿ ಯುದ್ಧದಲ್ಲಿ ಜಯವೂ ಅಪಜಯವೂ ಸಹ ಅದೃಷ್ಟಾಯತ್ತವಾದುದು. ಆದರೆ ಬುದ್ಧಿವಂತನು ಸ್ವಲ್ಪ ಪ್ರಯೋಜನಕ್ಕಾಗಿ ಹೆಚ್ಚು ಕಷ್ಟವನ್ನೂ ದುಃಖವನ್ನೂ ತರುವ ಕೆಲಸವನ್ನು ಮಾಡಬಾರದು. ॥೧೨॥

ಓ ಸ್ವಾಮಿಯೇ, ದೈವಗತಿಯ ಈ ಆಶ್ಚರ್ಯಕರವಾದ ಕೆಲಸವನ್ನು ನೋಡು! ಈ ಪ್ರಪಂಚವೆಲ್ಲವೂ ದೈವಗತಿಗೆ ಅಧೀನವಾಗಿರುತ್ತದೆ! ಆದುದರಿಂದಲೇ ಅಸಹಾಯಳಾಗಿ ಒಬ್ಬಂಟಿಗಳಾಗಿ ಇರುವ ಒಬ್ಬ ಹೆಂಗುಸಿನಿಂದ ರಾಕ್ಷಸರೆಲ್ಲರೂ ನಾಶವನ್ನು ಹೊಂದುತ್ತಿರುವರು! ॥೧೩॥

ನೀನು ಪೂರ್ವದಲ್ಲಿ ಸಕಲ ಲೋಕಪಾಲಕರನ್ನೂ ಜಯಿಸಿರುತ್ತೀಯೆ. ನೀನೂ ಸೇನಾಸಮೇತನಾಗಿಯೇ ಜಯಿಸಿದೆ. ಈಗಲಾದರೋ ಒಬ್ಬಂಟಿಗಳಾದ ಒಂದು ಹುಡುಗಿಯು ಯುದ್ಧಕ್ಕಾಗಿ ನಿನ್ನನ್ನು ಬೇಡುತ್ತಿರುವಳು! ಇದು ಆಶ್ಚರ್ಯಕರವಾಗಿರುವದು. ॥೧೪॥

ನೀನು ಪೂರ್ವದಲ್ಲಿ ಪುಷ್ಕರಕ್ಷೇತ್ರದಲ್ಲಿಯೂ ದೇವರ ದೇವಾಲಯಗಳಲ್ಲಿಯೂ ಸಹ ತಪಸ್ಸನ್ನು ಮಾಡಿದೆ. ಎಲ್ಲ ಲೋಕಗಳಿಗೂ ತಾತನಾಗಿರುವ ಬ್ರಹ್ಮನು ಆಗ ವರವನ್ನು ಕೊಡುವುದಕ್ಕಾಗಿ ಬಂದನು. ॥೧೫॥

ಧಾತ್ರೋಕ್ತಸ್ತ್ವಂ ಮಹಾರಾಜ ವರಂ ವರಯ ಸುವ್ರತ ।
ತದಾ ತ್ವಯಾಽಮರತ್ವಂ ಚ ಪ್ರಾರ್ಥಿತಂ ಬ್ರಹ್ಮಣಃ ಕಿಲ ॥೧೬॥

ದೇವದೈತ್ಯಮನುಷ್ಯೇಭ್ಯೋ ನ ಭವೇನ್ಮರಣಂ ಮಮ ।
ಸರ್ಪಕಿನ್ನರಯಕ್ಷೇಭ್ಯಃ ಪುಲ್ಲಿಂಗವಾಚಕಾದಪಿ ॥೧೭॥

ತಸ್ಮಾತ್ತ್ವಾಂ ಹಂತುಕಾಮೈಷಾ ಪ್ರಾಪ್ತಾ ಯೋಷಿದ್ವರಾಪ್ರಭೋ ।
ಯುದ್ಧಂ ಮಾ ಕುರು ರಾಜೇಂದ್ರ ವಿಚಾರ್ಯೈವಂ ಧಿಯಾಽಧುನಾ ॥೧೮॥

ದೇವೀ ಹ್ಯೇಷಾ ಮಹಾಮಾಯಾ ಪ್ರಕೃತಿಃ ಪರಮಾ ಮತಾ ।
ಕಲ್ಪಾಂತಕಾಲೇ ರಾಜೇಂದ್ರ ಸರ್ವಸಂಹಾರಕಾರಿಣೀ ॥೧೯॥

---

ಓ ಮಹಾರಾಜನೇ, ಬ್ರಹ್ಮನು ನಿನ್ನನ್ನು ಕುರಿತು, ಎಲೈ ವ್ರತವನ್ನು ಸರಿಯಾಗಿ ಆಚರಿಸಿದ ಶುಂಭಾಸುರನೇ, ನೀನು ವರವನ್ನು ಕೇಳು, ಎಂದು ಹೇಳಿದನು. ಆಗ ನೀನು ದೇವತ್ವವು ಎಂದರೆ ಮರಣವಿಲ್ಲದಿರುವಿಕೆಯು ಉಂಟಾಗಬೇಕೆಂದು ಬ್ರಹ್ಮನ ದೆಸೆಯಿಂದ ವರವನ್ನು ಕೇಳಿದೆ. ಅದು ಆಗದೆಂದು ಅವನು ಹೇಳಲು,॥೧೬॥

ನೀನು ಅಮರತ್ವವು ದೊರೆಯದಿರುವುದಾದರೆ, ದೇವತೆಗಳು, ರಾಕ್ಷಸರು, ಮನುಷ್ಯರು, ಸರ್ಪಗಳು, ಕಿನ್ನರರು, ಯಕ್ಷರು, ಇವರುಗಳಲ್ಲಿ ಪುರುಷರಾದವರು ಯಾರಿದ್ದಾಗ್ಯೂ ಅವರಿಂದ ನನಗೆ ಮರಣವಾಗಕೂಡದೆಂದು ವರವನ್ನು ಕೇಳಿದೆ. ॥೧೭॥

ನೀನು ಪುರುಷರು ಯಾರಿಂದಲೂ ಮರಣವು ಆಗಕೂಡದೆಂದು ವರವನ್ನು ಕೇಳಿದ ಕಾರಣ, ಓ ರಾಜನೆ! ಈ ಶ್ರೇಷ್ಠಳಾದ ಹೆಂಗುಸು ನಿನ್ನನ್ನು ಯುದ್ಧದಲ್ಲಿ ಕೊಲ್ಲುವುದಕ್ಕಾಗಿ ಬಂದಿರುತ್ತಾಳೆ. ಓ ರಾಜಾಧಿರಾಜನೇ, ಇವೆಲ್ಲವನ್ನೂ ನಿನ್ನ ಬುದ್ಧಿಯಿಂದ ಚನ್ನಾಗಿ ಈಗ ಯೋಚನೆಯನ್ನು ಮಾಡು. ಗಟ್ಟಿಗಳೂ ಆಗಿರುವ ಈ ಹೆಂಗಸಿನೊಡನೆ ಈಗಲೂ ಯುದ್ಧವನ್ನು ಮಾಡಬೇಡ. ॥೧೮॥

ಓ ರಾಜಶ್ರೇಷ್ಠನೇ, ಈ ಸ್ತ್ರೀಯು ಸಾಮಾನ್ಯಳಾದ ಸ್ತ್ರೀಯಲ್ಲವು. ಪ್ರಪಂಚಕ್ಕೆಲ್ಲಕ್ಕೂ ಶ್ರೇಷ್ಠಳೆಂದು ತಿಳಿಯಲ್ಪಟ್ಟಿರುವ ಮಹಾಮಾಯೆಯು. ಪ್ರಪಂಚಕ್ಕೆ ಪ್ರಕೃತಿಯಾದವಳು (ಮೂಲಕಾರಣವಾದವಳು) ಈ ದೇವಿಯು ಪ್ರಳಯಕಾಲದಲ್ಲಿ ಎಲ್ಲವನ್ನೂ ನಾಶಮಾಡುವವಳು. ॥೧೯॥

**ಉತ್ಪಾದಯಿತ್ರೀ ಲೋಕಾನಾಂ ದೇವಾನಾಮೀಶ್ವರೀ ಶುಭಾ ।**
**ತ್ರಿಗುಣಾ ತಾಮಸೀ ದೇವೀ ಸರ್ವಶಕ್ತಿಸಮನ್ವಿತಾ ॥೨೦॥**

**ಅಜಯ್ಯಾ ಚಾಕ್ಷಯಾ ನಿತ್ಯಾ ಸರ್ವಜ್ಞಾ ಚ ಸದೋದಿತಾ ।**
**ವೇದಮಾತಾ ಚ ಗಾಯತ್ರೀ ಸಂಧ್ಯಾ ಸರ್ವಸುರಾಲಯಾ ॥೨೧॥**

**ನಿರ್ಗುಣಾ ಸಗುಣಾ ಸಿದ್ಧಾ ಸರ್ವಸಿದ್ಧಿಪ್ರದಾಽವ್ಯಯಾ ।**
**ಆನಂದಾನಂದದಾ ಗೌರೀ ದೇವಾನಾಮಭಯಪ್ರದಾ ॥೨೨॥**

**ಏವಂ ಜ್ಞಾತ್ವಾ ಮಹಾರಾಜ ವೈರಭಾವಂ ತ್ಯಜಾಽನಯಾ ।**
**ಶರಣಂ ವ್ರಜ ರಾಜೇಂದ್ರ ದೇವೀ ತ್ವಾಂ ಪಾಲಯಿಷ್ಯತಿ ॥೨೩॥**

---

ಲೋಕಗಳೆಲ್ಲವನ್ನೂ ಹೊಸದಾಗಿ ಸೃಷ್ಟಿಮಾಡಬಲ್ಲಳು. ಮತ್ತು ದೇವತೆಗಳೆಲ್ಲರಿಗೂ ಈ ಸ್ತ್ರೀಯು ಎಲ್ಲ ಶಕ್ತಿಗಳಿಂದ ಕೂಡಿಕೊಂಡಿರುವ ಅಧಿಪತಿಯು. ಇವಳು ದೇವತೆಗಳೆಲ್ಲರಿಗೂ ಮಂಗಳಕರಳು. ಸತ್ವರಜಸ್ತಮಸ್ಸೆಂಬ ತ್ರಿಗುಣಸ್ವರೂಪಳು. ತಮೋಗುಣಪ್ರಧಾನವಾದ ಸಂಹಾರಶಕ್ತಿರೂಪಳಾದ ದೇವಿಯೂ ಆಗಿದಾಳೆ! ॥೨೦॥

ಈ ದೇವಿಯನ್ನು ಇತರರು ಯಾರೂ ಜಯಿಸಲಾರರು. ಇವಳು ನಾಶರಹಿತಳಾದವಳು. ಮತ್ತು ಮೂರು ಕಾಲದಲ್ಲೂ ಇರತಕ್ಕವಳು. ಎಲ್ಲವನ್ನೂ ತಿಳಿದಿರುವವಳು. ಮತ್ತು ಯಾವಾಗಲೂ ಅಭಿವೃದ್ಧಿಯನ್ನು ಹೊಂದುತ್ತಿರುವವಳು. ಈ ದೇವಿಯು ವೇದಮಾತೆಯೆಂತಲೂ ಗಾಯತ್ರಿಯೆಂತಲೂ ಕರೆಯಲ್ಪಡುವವಳು. ಸಂಧ್ಯಾ ಎಂಬ ಹೆಸರಿನಿಂದ ಉಪಾಸ್ಯಳಾಗಿ ಇರುವ ದೇವತೆಯು ಇವಳೇ ಆಗಿರುವಳಲ್ಲದೆ ದೇವತೆಗಳಿಗೆಲ್ಲರಿಗೂ ಆಶ್ರಯವನ್ನು ಕೊಟ್ಟಿರುವವಳು! ॥೨೧॥

ವಾಸ್ತವವಾಗಿ ಗುಣಸಂಬಂಧವಿಲ್ಲದಿರುವ ಪರಬ್ರಹ್ಮಸ್ವರೂಪಿಣಿಯು ಮತ್ತು ವ್ಯಾವಹಾರಿಕ ರೂಪದಲ್ಲಿ ಗುಣಗಳಿಂದ ಕೂಡಿರುವ ಸರ್ವೋಪಾಸ್ಯಳೂ ಸಹ ಈ ದೇವಿಯೇ ಆಗಿರುತ್ತಾಳೆ. ಈ ದೇವಿಯೇ ಸಿದ್ಧಳು, ಸರ್ವವಿಧವಾದ ಸಿದ್ಧಿಯನ್ನು ಕೊಡುವವಳು ಮತ್ತು ನಾಶರಹಿತಳಾಗಿರುವವಳು, ಆನಂದಸ್ವರೂಪಳು, ಇತರರೆಲ್ಲರಿಗೂ ಆನಂದವನ್ನುಂಟುಮಾಡುವವಳು. ಗೌರೀ ಎಂಬ ಹೆಸರಿನಿಂದ ಲೋಕದಲ್ಲಿ ಪೂಜ್ಯಳೂ ಆದ ಈ ದೇವಿಯೇ ದೇವತೆಗಳಿಗೆ ಅಭಯವನ್ನು ಕೊಟ್ಟಿರುವವಳು! ॥೨೨॥

ಈ ಸ್ತ್ರೀಯ ನಿಜಸ್ಥಿತಿಯನ್ನು ನೀನು ಹೀಗೆ ತಿಳಿದುಕೊಂಡು ನೀನು ಇವಳೊಡನೆ ದ್ವೇಷಬುದ್ಧಿಯನ್ನು ಬಿಡು. ಓ ಮಹಾರಾಜನೇ, ರಾಜಶ್ರೇಷ್ಠನೇ, ಈ ದೇವಿಯನ್ನು ಶರಣುಹೊಂದು. ಈ ದೇವಿಯು ನಿನ್ನನ್ನು ರಕ್ಷಿಸುವಳು! ॥೨೩॥

ಆಜ್ಞಾಕರೋ ಭವೈತಸ್ಯಾಃ ಸಂಜೀವಯ ನಿಜಂ ಕುಲಂ ।
ಹತಶೇಷಾಶ್ಚ ಯೇ ದೈತ್ಯಾಸ್ತೇ ಭವಂತು ಚಿರಾಯುಷಃ ॥೨೪॥

॥ ವ್ಯಾಸ ಉವಾಚ ॥

ಇತಿ ತೇಷಾಂ ವಚಃ ಶ್ರುತ್ವಾ ಶುಂಭಃ ಸುರಬಲಾರ್ದನಃ ।
ಉವಾಚ ವಚನಂ ತಥ್ಯಂ ವೀರವರ್ಯಗುಣಾನ್ವಿತಂ ॥೨೫॥

॥ ಶುಂಭ ಉವಾಚ ॥

ಮೌನಂ ಕುರ್ವಂತು ಭೋ ಮಂದಾ ಯೂಯಂ ಭಗ್ನಾ ರಣಾಜಿರಾತ್ ।
ಶೀಘ್ರಂ ಗಚ್ಛತ ಪಾತಾಲಂ ಜೀವಿತಾಶಾ ಬಲೀಯಸೀ ॥೨೬॥

ದೈವಾಧೀನಂ ಜಗತ್ಸರ್ವಂ ಕಾ ಚಿಂತಾತ್ರ ಜಯೇ ಮಮ ।
ದೇವಾಸ್ತಥೈವ ಬ್ರಹ್ಮಾದ್ಯಾ ದೈವಾಧೀನಾ ವಯಂ ಯಥಾ ॥೨೭॥

---

ಓ ಪ್ರಭುವೇ, ನೀನು ಈ ದೇವಿಯ ಆಜ್ಞೆಯನ್ನು ನಡೆಸುವವನಾಗಿರು. ನಿನ್ನ ವಂಶವೆಲ್ಲವನ್ನೂ ರಕ್ಷಿಸಿಕೋ. ಈಗ ಯುದ್ಧದಲ್ಲಿ ನಾಶವನ್ನು ಹೊಂದದೆ ಉಳಿದಿರುವ ರಾಕ್ಷಸರು ದೀರ್ಘ ಆಯುಷ್ಯವಂತರಾಗಿ ಬದುಕಲಿ ! ॥೨೪॥

ವ್ಯಾಸಋಷಿಯು ಹೇಳಿದನು—ಶತ್ರುಗಳ ಸೇನೆಯನ್ನೂ ಸಾಮರ್ಥ್ಯವನ್ನೂ ಸಹ ನಾಶಮಾಡುವವನಾದ ಶುಂಭನು ಹೀಗೆಂದು ಹೇಳಿದ ಆ ಸೈನಿಕರ ಮಾತನ್ನು ಕೇಳಿ ಶೂರರಲ್ಲಿ ಶ್ರೇಷ್ಠರಾದವರ ಗುಣಗಳಿಗೆ ಅನುಸಾರವಾದ ನಿಜವಾದ ಮಾತನ್ನು ಅವರ ಸಂಗಡ ಹೇಳಿದನು. ॥೨೫॥

ಶುಂಭನು ಹೇಳಿದನು—ಎಲೈ ದಡ್ಡರಾ, ನೀವು ಸುಮ್ಮನಿರಿ. ನೀವು ಯುದ್ಧರಂಗದಿಂದ ಹೆದರಿ ಬಂದವರಾಗಿದ್ದೀರಿ. ಯಾರಿಗಾದರೂ ಬದುಕಿರಬೇಕೆಂದು ಪ್ರಾಣದಮೇಲಿನ ಆಸೆಯು ದೊಡ್ಡದಾಗಿರುತ್ತದೆ. ಆದ್ದರಿಂದ ಬೇಗನೆ ಪಾತಾಳ ಲೋಕಕ್ಕೆ ಹೋಗಿರಿ. ॥೨೬॥

ಲೋಕವೆಲ್ಲವೂ ದೈವದ ಅಧೀನದಲ್ಲಿರುವುದು. ಜನ್ಮಾಂತರದ ಕರ್ಮವೇ ದೈವ ವಾಗಿ ಇರುವುದು. ಆದ್ದರಿಂದ ಈಗ ನನಗೆ ಜಯದ ವಿಷಯದಲ್ಲಿ ಯೋಚನೆಯು ಏನೂ ಇಲ್ಲವು. ನಾವು ಹೇಗೆ ದೈವಕ್ಕೆ ಅಧೀನರಾಗಿರುವೆವೋ ಹಾಗೆಯೇ ಬ್ರಹ್ಮನೇ ಮೊದಲಾದ ದೇವತೆಗಳೂ ಸಹ ಆ ದೈವಕ್ಕೇ ಅಧೀನರಾಗಿರುವರು. ॥೨೭॥

ಬ್ರಹ್ಮಾ ವಿಷ್ಣುಶ್ಚ ರುದ್ರೋಽಯಂ ಯಮೋಽಗ್ನಿರ್ವರುಣಸ್ತಥಾ ।
ಸೂರ್ಯಶ್ಚಂದ್ರಸ್ತಥಾ ಶಕ್ರಃ ಸರ್ವೇ ದೈವವಶಾಃ ಕಿಲ ॥೨೮॥

ಕಾ ಚಿಂತಾ ತರ್ಹಿ ಮೇ ಮಂದಾ ಯದ್ಭಾವಿ ತದ್ಭವಿಷ್ಯತಿ ।
ಉದ್ಯಮಸ್ತಾದೃಶೋ ಭೂಯಾದ್ಯಾದೃಶೀ ಭವಿತವ್ಯತಾ ॥೨೯॥

ಸರ್ವಥೈವಂ ವಿಚಾರ್ಯೈವ ನ ಶೋಚಂತಿ ಬುಧಾಃ ಕ್ವಚಿತ್ ।
ಸ್ವಧರ್ಮಂ ನ ತ್ಯಜಂತೀಹ ಜ್ಞಾನಿನೋ ಮರಣಾದ್ಭಯಾತ್ ॥೩೦॥

ಸುಖಂ ದುಃಖಂ ತಥೈವಾಽಽಯುರ್ಜೀವಿತಂ ಮರಣಂ ನೃಣಾಂ ।
ಕಾಲೇ ಭವತಿ ಸಂಪ್ರಾಪ್ತೇ ಸರ್ವಥಾ ದೈವನಿರ್ಮಿತಂ ॥೩೧॥

---

ಬ್ರಹ್ಮನೂ, ವಿಷ್ಣುವೂ, ರುದ್ರನೂ, ಯಮನೂ, ಅಗ್ನಿಯೂ, ವರುಣನೂ, ಸೂರ್ಯನೂ, ಚಂದ್ರನೂ, ಇಂದ್ರನೂ ಹೀಗೆಯೇ ದೇವತೆಗಳೆಲ್ಲರೂ ದೈವಕ್ಕೆ ಅಧೀನರಾಗಿರುತ್ತಾರಲ್ಲವೇ ? ॥೨೮॥

ಎಲೈ ದಡ್ಡರಾ, ಹೀಗಿರುವಾಗ ನನ್ನ ವಿಷಯದಲ್ಲಿ ಯೋಚನೆಯು ಏತಕ್ಕೆ ? ಯಾವುದು ಆಗಬೇಕೋ ಅದು ಖಂಡಿತವಾಗಿಯೂ ಆಗಿಯೇ ತೀರುತ್ತದೆ. ಮುಂದೆ ಆಗಬೇಕಾಗಿರುವುದು ಯಾವ ಪ್ರಕಾರವಾಗಿರುವುದೋ ಅದಕ್ಕನುಸಾರವಾದ ಪ್ರಯತ್ನವು ಪೂರ್ವಭಾವಿಯಾಗಿ ನಡೆಯುವುದು. ॥೨೯॥

ವಿದ್ವಾಂಸರಾದವರು ಎಲ್ಲ ಪ್ರಕಾರಗಳಿಂದಲೂ ಹೀಗೆ ಚನ್ನಾಗಿ ವಿಚಾರ ಮಾಡಿಯೇ ಏತರಲ್ಲಿಯೂ ವ್ಯಸನವನ್ನು ಹೊಂದುವುದಿಲ್ಲವು. ಜ್ಞಾನಿಗಳಾದವರು ಮರಣದ ಭಯದಿಂದ ತಮ್ಮ ಧರ್ಮಗಳನ್ನು ಅವು ಎಂತಹವಾಗಿದ್ದರೂ ಬಿಡುವುದಿಲ್ಲ. ॥೩೦॥

ಮನುಷ್ಯರಿಗೆ ದೈವಗತಿಯಿಂದ ಯಾವುದು ನಿಶ್ಚಯಿಸಲ್ಪಟ್ಟಿರುವದೋ ಅದು ಆಯಾಯ ಕಾಲವು ಬಂದಾಗ ಸುಖವೋ, ದುಃಖವೋ, ಆಯುಷ್ಯವೋ, ಬದುಕುವಿಕೆಯೋ, ಮರಣವೋ, ಇವುಗಳು ತಪ್ಪದೆ ಸಂಭವಿಸುವುವು. ॥೩೧॥

ಬ್ರಹ್ಮಾ ಪತತಿ ಕಾಲೇ ಸ್ವೇ ವಿಷ್ಣುಶ್ಚ ಪಾರ್ವತೀಪತಿಃ ।
ನಾಶಂ ಗಚ್ಛಂತ್ಯಾಯುಷೋಽನ್ತೇ ಸರ್ವೇ ದೇವಾಃ ಸವಾಸವಾಃ ॥೩೨॥

ತಥಾಽಹಮಪಿ ಕಾಲಸ್ಯ ವಶಗಃ ಸರ್ವಥಾಽಧುನಾ ।
ನಾಶಂ ಜಯಂ ವಾ ಗಂತಾಽಸ್ಮಿ ಸ್ವಧರ್ಮಪರಿಪಾಲನಾತ್ ॥೩೩॥

ಆಹೂತೋಽಸ್ಮ್ಯನಯಾ ಕಾಮಂ ಯುದ್ಧಾಯಾಽಬಲಯಾ ಕಿಲ ।
ಕಥಂ ಪಲಾಯನಪರೋ ಜೀವೇಯಂ ಶರದಾಂ ಶತಂ ॥೩೪॥

ಕರಿಷ್ಯಾಮ್ಯದ್ಯ ಸಂಗ್ರಾಮಂ ಯದ್ಭಾವಿ ತದ್ಭವತ್ವಿಹ ।
ಜಯೋ ವಾ ಮರಣಂ ವಾಪಿ ಸ್ವೀಕರೋಮಿ ಯಥಾ ತಥಾ ॥೩೫॥

---

ಬ್ರಹ್ಮನು ತನ್ನ ಆಯುಃ ಕಾಲವು ಮುಗಿದ ಒಡನೆಯೇ ಬೀಳುವನು. ವಿಷ್ಣುವೂ ಪಾರ್ವತೀಪತಿಯಾದ ಶಿವನೂ ಕೂಡ ತಮ್ಮ ಅಧಿಕಾರಜೀವನಗಳ ಕಾಲವು ಮುಗಿದೊಡನೆಯೇ ನಿವೃತ್ತರಾಗುವರು. ಇಂದ್ರನೂ ಸೇರಿ ಎಲ್ಲ ದೇವತೆಗಳೂ ತಮ್ಮ ತಮ್ಮ ಆಯಸ್ಸು ಮುಗಿದ ನಂತರ ನಾಶವನ್ನು ಹೊಂದುವರು. ॥೩೨॥

ಇಂದ್ರಾದಿಗಳು ಕಾಲಕ್ಕೆ ಅಧೀನರಾಗಿರುವ ಹಾಗೆಯೇ ಈಗ ನಾನೂ ಕಾಲಕ್ಕೆ ಸರ್ವಪ್ರಕಾರದಿಂದಲೂ ಅಧೀನನಾಗಿರುತ್ತೇನೆ. ನನ್ನ ಧರ್ಮವನ್ನು ಪರಿಪಾಲನೆ ಮಾಡುವುದರಿಂದ ನಾಶವನ್ನೋ ಅಥವಾ ಜಯವನ್ನೋ ಹೊಂದುವೆನು. ॥೩೩॥

ರಾಜ್ಯವನ್ನು ಪಾಲನೆಮಾಡುವವನು ಯುದ್ಧಕ್ಕೆ ಹಿಂತೆಗೆಯುವುದು ಧರ್ಮವಲ್ಲವು. ಹೀಗಿರುವಾಗ ಈ ಹೆಂಗುಸು ಅಬಲೆಯಾದರೂ ಯುದ್ಧಕ್ಕಾಗಿ ನನ್ನನ್ನು ಕರೆಯುತ್ತಿರುವಾಗ ನಾನು ಹೆದರಿಕೊಂಡು ಓಡುವವನಾಗಿ ನೂರುವರ್ಷಗಳವರಿಗೂ ಹೇಗೆತಾನೇ ಬದುಕಲಿ ! ॥೩೪॥

ಈಗ ಯುದ್ಧವನ್ನು ಮಾಡುವೆನು. ಯಾವುದು ಆಗಬೇಕಾಗಿರುವುದೋ ಅದು ಅಲ್ಲಿ ಆಗಿಯೇ ಆಗುವುದು. ಜಯವೋ ಮರಣವೋ ಅದು ಖಂಡಿತವಾಗಿ ತಪ್ಪದೆ ಸಂಭವಿಸುವುದು. ಹೇಗೆ ಅದು ಬರುವದೋ ಹಾಗೆ ಅದನ್ನು ಅಂಗೀಕರಿಸುವೆನು. ॥೩೫॥

ದೈವಂ ನಿಥ್ಯೇತಿ ವಿದ್ವಾಂಸೋ ವದಂತ್ಯುದ್ಯಮವಾದಿನಃ ।
ಯುಕ್ತಿಯುಕ್ತಂ ವಚಸ್ತೇಷಾಂ ಯೇ ಜಾನಂತ್ಯಭಿಭಾಷಿತಂ ॥೩೬॥

ಉದ್ಯಮೇನ ವಿನಾ ಕಾಮಂ ನ ಸಿಧ್ಯಂತಿ ಮನೋರಥಾಃ ।
ಕಾತರಾ ಏವ ಜಲ್ಪಂತಿ ಯದ್ಭಾವ್ಯಂ ತದ್ಭವಿಷ್ಯತಿ ॥೩೭॥

ಅದೃಷ್ಟಂ ಬಲವನ್ಮೂಢಾಃ ಪ್ರವದಂತಿ ನ ಪಂಡಿತಾಃ ।
ಪ್ರಮಾಣಂ ತಸ್ಯ ಸತ್ತ್ವೇ ಕಿಮದೃಶ್ಯಂ ದೃಶ್ಯತೇ ಕಥಂ ॥೩೮॥

ಅದೃಷ್ಟಂ ಕ್ವಾಪಿ ದೃಷ್ಟಂ ಸ್ಯಾದೇಷಾ ಮೂರ್ಖಬಿಭೀಷಿಕಾ ।
ಅವಿಲಂಬಂ ವಿನ್ಯೈವೈಷಾ ದುಃಖೇ ಚಿತ್ತಸ್ಯ ಧಾರಣಾ ॥೩೯॥

---

ಪ್ರಯತ್ನವನ್ನು ಮುಖ್ಯವೆನ್ನುವ ಶಾಸ್ತ್ರಜ್ಞರಾದ ಬುದ್ಧಿವಂತರು ದೈವಗತಿಯ ಪ್ರಾಮುಖ್ಯವನ್ನು ಸುಳ್ಳು ಎಂಬುದಾಗಿ ಹೇಳುವರು. ದೈವಗತಿಯೇ ಮುಖ್ಯವೆಂದು ಹೇಳುವ ಪಕ್ಷದಲ್ಲಿ ದೈವಗತಿಯಿಂದ ಆಗುವದು ಅಪರಿಹಾರ್ಯವೆಂದು ತಿಳಿದು ಯುದ್ಧಮಾಡುವುದು ನನ್ನ ಮತವು. ಪ್ರಯತ್ನವೇ ಮುಖ್ಯವೆಂದು ಹೇಳುವ ಶಾಸ್ತ್ರಗಳನ್ನು ವಿಚಾರಮಾಡಿ ಯುಕ್ತಿಗಳಿಂದ ತಿಳಿದುಕೊಂಡಿರುವವರ ಮತವನ್ನು ಅನುಸರಿಸಿದರೂ ಯುದ್ಧವು ಆಗಲೂ ಮಾಡಲೇಬೇಕೆಂದು ನಿಶ್ಚಯವಾಗಿರುತ್ತದೆ. ॥೩೬॥

ಲೋಕದಲ್ಲಿ ಜನಗಳ ಇಷ್ಟಾನುಸಾರವಾದ ಉದ್ದೇಶಗಳು ಅವರವರ ಪ್ರಯತ್ನವಿಲ್ಲದೇ ಯಾವಾಗಲೂ ಸಿದ್ಧವಾಗುವುದಿಲ್ಲವು. ಬುದ್ಧಿಯಿಲ್ಲದ ಹೇಡಿಗಳು ಮಾತ್ರ ಯಾವುದು ಆಗಬೇಕಾಗಿರುವುದೋ ಅದೇ ಆಗುವುದು ಎಂದು ಹೇಳುತ್ತಾರೆ. ॥೩೭॥

ದಡ್ಡರಾದ ಸೋಮಾರಿಗಳು ಅದೃಷ್ಟವನ್ನೇ ಪ್ರಬಲವೇದು ಹೇಳುವರು. ಪಂಡಿತರಾದರೋ ಹಾಗೆ ಹೇಳುವದಿಲ್ಲವು. ಅದೃಷ್ಟವೆಂಬುವುದು ಇರುವದೋ ಇಲ್ಲವೋ ಎಂಬ ವಿಚಾರದಲ್ಲಿ, ಅದೃಷ್ಟವುಂಟು ಎಂಬುದಾಗಿ ಹೇಳಿದರೆ ಆ ಮಾತಿಗೆ ಪ್ರತ್ಯಕ್ಷ ಪ್ರಮಾಣವು ಸಾಧಕವಾಗಿಲ್ಲ. ಹೇಳುವಾಗಲೇ ಅದೃಷ್ಟ ಎಂದರೆ ಕಣ್ಣಿಗೆ ಕಾಣಿಸದೇ ಇರುವುದು ಹೇಗೆ ತಾನೇ ಪ್ರತ್ಯಕ್ಷವೆಂದರೆ ಕಣ್ಣಿಗೆ ಕಾಣುವುದಾದೀತು ? ॥೩೮॥

ಅದೃಷ್ಟವಾಗಿರುವುದನ್ನು ಕಾಲದೇಶವಿಶೇಷಗಳಲ್ಲಿ ದೃಷ್ಟವೆಂದು ಹೇಳುವುದು ದಡ್ಡತನದ ಬೆದರಿಕೆಯಾಗಿರುತ್ತದೆ. ಹೀಗೆ ಹೇಳುವುದಕ್ಕೆ ಆಧಾರವೇ ಇಲ್ಲದಿರುವ

**ಚಕ್ರೀಸಮೀಪೇ ಸಂವಿಷ್ಟಾ ಸಂಸ್ಥಿತಾ ಪಿಷ್ಟಕಾರಿಣೀ ।**
**ಉದ್ಯಮೇನ ವಿನಾ ಪಿಷ್ಟಂ ನ ಭವತ್ಯೇವ ಸರ್ವಥಾ ॥೪೦॥**

**ಉದ್ಯಮೇ ಚ ಕೃತೇ ಕಾರ್ಯಂ ಸಿದ್ಧಿಂ ಯಾತ್ಯೇವ ಸರ್ವಥಾ ।**
**ಕದಾಚಿತ್ತಸ್ಯ ನ್ಯೂನತ್ವೇ ಕಾರ್ಯಂ ನೈವ ಭವೇದಪಿ ॥೪೧॥**

**ದೇಶಂ ಕಾಲಂ ಚ ವಿಜ್ಞಾಯ ಸ್ವಬಲಂ ಶತ್ರುಜಂ ಬಲಂ ।**
**ಕೃತಂ ಕಾರ್ಯಂ ಭವತ್ಯೇವ ಬೃಹಸ್ಪತಿವಚೋ ಯಥಾ ॥೪೨॥**

---

ಕಾರಣ ಮನಸ್ಸಿನಲ್ಲಿ ಉಂಟಾಗಿರುವ ಈ ಮೂಢನಂಬಿಕೆಯನ್ನು ಸ್ಥಿರವಾಗಿ ನಿಲ್ಲಿಸುವುದು ಕೇವಲ ಹೇಡಿತನದ ಸೋಮಾರಿತನದ ದುಃಖಕರವಾಗಿರುತ್ತದೆ!

ಬೀಸುವಕಲ್ಲಿನ ಹತ್ತಿರದಲ್ಲಿ ಹಿಟ್ಟನ್ನು ಬೀಸುವವಳು ಸುಮ್ಮನೆ ಕೂತುಕೊಂಡಿದ್ದ ಮಾತ್ರಕ್ಕೇ, ಅವಳ ಯಾವ ವಿಧವಾದ ಪ್ರಯತ್ನವೂ ಇಲ್ಲದೆ, ಅದೃಷ್ಟವನ್ನು ನಂಬಿದ್ದರೆ, ಯಾವಾಗಲೂ ಹಿಟ್ಟು ತಾನಾಗಿಯೇ ಉಂಟಾಗಲಾರದು! ॥೪೦॥

ಪ್ರಯತ್ನವನ್ನು ಮಾಡಿದರೂ ಕಾರ್ಯವು ಸಿದ್ಧಿಸದೇ ಇರುವುದೂ ಲೋಕದಲ್ಲಿ ಉಂಟು. ಆದ್ದರಿಂದ ದೈವಗತಿಯು ದೊಡ್ಡದು ಎಂದು ಹೇಳಬಹುದು. ಆದರೆ ಸರಿಯಾದ ವಿಚಾರದಿಂದ ಪ್ರಯತ್ನವನ್ನು ಮಾಡಿದರೆ ಕಾರ್ಯಸಿದ್ಧಿಯು ಖಂಡಿತವಾಗಿ ಉಂಟಾಗುವುದು. ಪ್ರಯತ್ನದಲ್ಲಿ ಹೆಚ್ಚುಕಡಿಮೆಗಳಾದರೆ ಕಾರ್ಯಸಿದ್ಧಿಯು ಉಂಟಾಗಲಾರದು. ಕಾರ್ಯಾನುರೂಪವಾದ ಪ್ರಯತ್ನಗಳು ಇದ್ದರೆ ಕಾರ್ಯಸಿದ್ಧಿಯು ನಿಯತವು. ಆದುದರಿಂದ ದೈವಗತಿಯ ಪ್ರಾಮುಖ್ಯವನ್ನು ಒಪ್ಪಬೇಕಾದುದಿಲ್ಲವು. ॥೪೧॥

ದೈವಗತಿಯು ಪ್ರಯತ್ನಕ್ಕಿಂತಲೂ ದೊಡ್ಡದು ಎಂಬ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವಿಲ್ಲದಿದ್ದರೆ ಶಾಸ್ತ್ರ ಪ್ರಮಾಣವು ವೇದೋಕ್ತವಾಗಿ ಇದ್ದೇ ಇದೆಯೆಂದು ವೇದಪ್ರಮಾಣವಾದಿಗಳು ಹೇಳುವರು. ಅವರಿಗೆ ಬೃಹಸ್ಪತ್ಯಾಚಾರ್ಯರು ಹೇಳಿರುವ ಪ್ರತ್ಯಕ್ಷ ಒಂದನ್ನೇ ಪ್ರಮಾಣವೆಂದು ಒಪ್ಪಿಕೊಂಡಿರುವ ಪುರುಷಕಾರವಾದಿಗಳು ಪರೋಕ್ಷವಾದ ಶಾಸ್ತ್ರಪ್ರಮಾಣವನ್ನು ಅಂಗೀಕರಿಸುವುದಿಲ್ಲವು. ಈ ಬೃಹಸ್ಪತ್ಯಾಚಾರ್ಯರು ದೇಶಕಾಲಗಳನ್ನು ತನ್ನ ಮತ್ತು ಶತ್ರು ಇವರುಗಳ ಬಲಾಬಲಗಳನ್ನು ಚನ್ನಾಗಿ ವಿಚಾರ ಮಾಡಿ ಮಾಡಿದ ಕೆಲಸವು ಸರಿಯಾಗಿ ಫಲವನ್ನು ಕೊಡುವುದು ಎಂದು ಹೇಳಿರುವರು. ಈ ಬೃಹಸ್ಪತ್ಯಾಚಾರ್ಯರು ಹೇಳಿರುವ ಪ್ರಕಾರ ಇವರ ಶಾಸ್ತ್ರ

|| ವ್ಯಾಸ ಉವಾಚ ||

**ಇತಿ ನಿಶ್ಚಿತ್ಯ ದೈತ್ಯೇಂದ್ರೋ ರಕ್ತಬೀಜಂ ಮಹಾಸುರಂ ।**
**ಪ್ರೇಷಯಾಮಾಸ ಸಂಗ್ರಾಮೇ ಸೈನ್ಯೇನ ಮಹತಾಽವೃತಂ ॥೪೩॥**

|| ಶುಂಭ ಉವಾಚ ||

**ರಕ್ತಬೀಜ ಮಹಾಬಾಹೋ ಗಚ್ಛ ತ್ವಂ ಸಮರಾಂಗಣೇ ।**
**ಕುರು ಯುದ್ಧಂ ಮಹಾಭಾಗ ಯಥಾ ತೇ ಬಲಮಾಹಿತಂ ॥೪೪॥**

|| ರಕ್ತಬೀಜ ಉವಾಚ ||

**ಮಹಾರಾಜ ನ ತೇ ಕಾರ್ಯಾ ಚಿಂತಾ ಸ್ವಲ್ಪತರಾಽಪಿ ವಾ ।**
**ಅಹಮೇನಾಂ ಹನಿಷ್ಯಾಮಿ ಕರಿಷ್ಯಾಮಿ ವಶೇ ತವ ॥೪೫॥**

---

ವನ್ನು ನಂಬಿಕೊಂಡಿರುವ ಪೌರುಷವಾದಿಗಳು ಪ್ರತ್ಯಕ್ಷವೊಂದನ್ನೇ ಪ್ರಮಾಣವನ್ನಾಗಿ ತಿಳಿದುಕೊಂಡು ಅದರಂತೆ ನಡೆಯುವವರಾದುದರಿಂದ ಈಗ ನಾವೂ ಯುದ್ಧಕ್ಕೆ ಸಿದ್ಧರಾಗಿ ಯುದ್ಧವನ್ನೇ ಮಾಡುವುದು ಉಚಿತವೆಂದು ಭಾವವು. ||೪೨||

ವ್ಯಾಸಋಷಿಯು ಹೇಳಿದನು—ರಾಕ್ಷಸರಿಗೆ ಅಧಿಪತಿಯಾದ ಶುಂಭನು ಹೀಗೆ ನಿಶ್ಚಯ ಮಾಡಿಕೊಂಡು ತಮ್ಮಲ್ಲಿ ಬಲಿಷ್ಠನಾಗಿರುವ ರಕ್ತಬೀಜನೆಂಬ ರಾಕ್ಷಸ ಪ್ರಮುಖನನ್ನು ದೊಡ್ಡದಾದ ಸೇನೆಯೊಡನೆ ಯುದ್ಧಕ್ಕಾಗಿ ಕಳುಹಿಸಿದನು. ||೪೩||

ಮಹಿಷಾಸುರನು ಹಿಂದೆ ಹುಟ್ಟಿದಾಗ ಚಿತಾಮಧ್ಯದಿಂದ ಹುಟ್ಟಿದ ರಂಭಾಸುರನೇ ಈಗ ರಕ್ತಬೀಜನೆಂಬ ಹೆಸರಿನಿಂದ ಇರುವನು. ಇವನನ್ನು ಕುರಿತು— ಎಲೈ ಮಹಾಬಾಹುವೇ, ಅದೃಷ್ಟಶಾಲಿಯೇ, ನಿನಗೆ ಬೇಕಾದಷ್ಟು ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಹೋಗು. ಯುದ್ಧರಂಗದಲ್ಲಿ ನಿನ್ನ ಶಕ್ತಿಯಿರುವ ಮಟ್ಟಿಗೂ ಯುದ್ಧವನ್ನು ಮಾಡು ! ಎಂದು ಶುಂಭನು ಹೇಳಿದನು. ||೪೪||

ರಕ್ತಬೀಜಾಸುರನು ಹೇಳಿದನು—ಎಲೈ ಮಹಾರಾಜನೇ, ನೀನು ಕೊಂಚ ಮಟ್ಟಿಗಾದರೂ ಯೋಚನೆಯನ್ನು ಮಾಡಬೇಡ. ನಾನು ಈ ಕಾಳಿಯನ್ನು ನಿಗ್ರಹ ಮಾಡಿ ದೇವಿಯನ್ನು ನಿನ್ನ ಅಧೀನಕ್ಕೆ ತಂದು ಒಪ್ಪಿಸುವೆನು. ||೪೫||

ಪಶ್ಯ ಮೇ ಯುದ್ಧಚಾತುರ್ಯಂ ಕ್ವೇಯಂ ಬಾಲಾ ಸುರಪ್ರಿಯಾ ।
ದಾಸೀಂ ತೇಽಹಂ ಕರಿಷ್ಯಾಮಿ ಜಿತ್ವೇಮಾಂ ಸಮರೇ ಬಲಾತ್ ॥೪೬॥

॥ ವ್ಯಾಸ ಉವಾಚ ॥

ಇತ್ಯಾಭಾಷ್ಯ ಕುರುಶ್ರೇಷ್ಠ ರಕ್ತಬೀಜೋ ಮಹಾಸುರಃ ।
ಜಗಾಮ ರಥಮಾರುಹ್ಯ ಸ್ವಸೈನ್ಯ ಪರಿವಾರಿತಃ ॥೪೭॥

ಹಸ್ತ್ಯಶ್ವರಥಪಾದಾತಿವೃಂದೈಶ್ಚ ಪರಿವೇಷ್ಟಿತಃ ।
ನಿರ್ಜಗಾಮ ರಥಾರೂಢೋ ದೇವೀಂ ಶೈಲೋಪರಿ ಸ್ಥಿತಾಂ ॥೪೮॥

ತಮಾಗತಂ ಸಮಾಲೋಕ್ಯ ದೇವೀ ಶಂಖಮವಾದಯತ್ ।
ಭಯದಂ ಸರ್ವದೈತ್ಯಾನಾಂ ದೇವಾನಾಂ ಮೋದವರ್ಧನಂ ॥೪೯॥

---

ನನ್ನ ಯುದ್ಧದ ಕುಶಲತೆಯನ್ನು ನೋಡು. ದೇವತೆಗಳ ಪ್ರೀತಿಗೆ ಪಾತ್ರಳಾಗಿರುವ ಈ ಹುಡುಗಿಯು ನನಗೆ ಎಷ್ಟುಮಾತ್ರದವಳು ? ಇವಳನ್ನು ಯುದ್ಧದಲ್ಲಿ ಬಲವಂತದಿಂದ ಗೆದ್ದು ನಿನಗೆ ದಾಸಿಯಾಗಿರುವಂತೆ ಮಾಡುವೆನು. ||೪೬||

ವ್ಯಾಸಋಷಿಯು ಹೇಳಿದನು--ಎಲೈ ಕುರುರಾಜಶ್ರೇಷ್ಠನಾದ ಜನಮೇಜಯ ರಾಯನೇ, ಕೇಳು. ರಕ್ತಬೀಜನೆಂಬ ದೊಡ್ಡ ರಾಕ್ಷಸನೂ ಹೀಗೆಂದು ಬರವಸೆಯ ಮಾತನ್ನು ಹೇಳಿ ರಥವನ್ನು ಹತ್ತಿಕೊಂಡು ತನ್ನ ಸೇನೆಯಿಂದ ಕೂಡಿದವನಾಗಿ ಯುದ್ಧಕ್ಕೆ ಪ್ರಯಾಣ ಮಾಡಿದನು. ||೪೭||

ರಕ್ತಬೀಜಾಸುರನು ಆನೆ, ಕುದುರೆ, ರಥ, ಕಾಲಾಳುಗಳು ಎಂಬ ನಾಲ್ಕು ವಿಧವಾದ ಸೇನೆಗಳ ಗುಂಪಿನಿಂದ ಸುತ್ತುವರಿಯಲ್ಪಟ್ಟವನಾಗಿ, ತಾನೂ ರಥವನ್ನು ಹತ್ತಿಕೊಂಡು ಆ ಹಿಮಾಲಯ ಪರ್ವತದ ಮೇಲೆ ಇರುವ ದೇವಿಯ ಸಂಗಡ ಯುದ್ಧಕ್ಕಾಗಿ ಹೊರಟುಹೋದನು. ||೪೮||

ದೇವಿಯು ಅವನು ಬಂದುದನ್ನು ನೋಡಿ, ಎಲ್ಲ ರಾಕ್ಷಸರಿಗೂ ಭಯವನ್ನೂ ದೇವತೆಗಳಿಗೆ ಸಂತೋಷವನ್ನೂ ಉಂಟುಮಾಡುವ ಶಂಖವನ್ನು ಊದಿದಳು !||೪೯||

ಶ್ರುತ್ವಾ ಶಂಖಸ್ವನಂ ಚೋಗ್ರಂ ರಕ್ತಬೀಜೋಽತಿವೇಗವಾನ್ ।
ಗತ್ವಾ ಸಮೀಪೇ ಚಾಮುಂಡಾಂ ಬಭಾಷೇ ವಚನಂ ಮೃದು ॥೫೦॥

॥ ರಕ್ತಬೀಜ ಉವಾಚ ॥

ಬಾಲೇ ಕಿಂ ಮಾಂ ಭೀಷಯಸಿ ಮತ್ವಾ ತ್ವಂ ಕಾತರಂ ಕಿಲ ।
ಶಂಖನಾದೇನ ತನ್ವಂಗಿ ವೇತ್ಸಿ ಕಿಂ ಧೂಮ್ರಲೋಚನಂ ॥೫೧॥

ರಕ್ತಬೀಜೋಽಸ್ಮಿ ನಾಮ್ನಾಽಹಂ ತ್ವತ್ಸಕಾಶಮಿಹಾಗತಃ ।
ಯುದ್ಧೇಚ್ಛಾ ಚೇತ್ಪಿಕಾಲಾಪೇ ಸಜ್ಜಾ ಭವ ಭಯಂ ನ ಮೇ ॥೫೨॥

ಪಶ್ಯಾದ್ಯ ಮೇ ಬಲಂ ಕಾಂತೇ ದೃಷ್ಟಾ ಯೇ ಕಾತರಾಸ್ತ್ವಯಾ ।
ನಾಹಂ ಪಂಕ್ತಿಗತಸ್ತೇಷಾಂ ಕುರು ಯುದ್ಧಂ ಯಥೇಚ್ಛಸಿ ॥೫೩॥

---

ಬಹಳ ವೇಗವಂತನಾಗಿರುವ ರಕ್ತಬೀಜಾಸುರನು ಭಯಂಕರವಾದ ಆ ಶಂಖ ಧ್ವನಿಯನ್ನು ಕೇಳಿ ಚಾಮುಂಡಿಕಾದೇವಿಯ ಸಮೀಪಕ್ಕೆ ಬಂದು ಮೃದುವಾದ ಮಾತುಗಳನ್ನು ಹೀಗೆ ಹೇಳಿದನು. ॥೫೦॥

ರಕ್ತಬೀಜಾಸುರನು ಹೇಳಿದನು— ಓ ಬಾಲೆಯೇ, ನೀನು ನನ್ನನ್ನು ಭಯಪಡುವವನೆಂದು ತಿಳಿದು ಶಂಖಧ್ವನಿಯಿಂದ ಹೆದರಿಸುವೆಯೇನು? ಎಲೌ ಕೃಶಾಂಗಿಯೇ, ನನ್ನನ್ನು ಧೂಮ್ರಲೋಚನನೆಂದು ತಿಳಿದಿರುವೆಯಾ? ನಾನು ಧೂಮ್ರ ಲೋಚನನಂತೆ ಹೆದರುವ ಸ್ವಭಾವದವನಲ್ಲವು. ॥೫೧॥

ನಾನು ರಕ್ತಬೀಜನೆಂಬ ಹೆಸರಿನಿಂದ ಪ್ರಸಿದ್ಧನಾದವನು. ಈಗ ಯುದ್ಧಕ್ಕಾಗಿ ನಿನ್ನ ಸಮೀಪಕ್ಕೆ ಬಂದಿರುವೆನು. ಕೋಗಿಲೆಯಂತೆ ಇಂಪಾಗಿ ಮಾತುಗಳನ್ನಾಡುವ ಎಲೌ ಸ್ತ್ರೀಯೇ, ನಿನಗೆ ಯುದ್ಧಮಾಡಬೇಕು ಎಂದು ಅಭಿಲಾಷೆಯಿದ್ದರೆ ಯುದ್ಧಕ್ಕೆ ಸಿದ್ಧಳಾಗು. ನನಗೆ ಕೊಂಚವೂ ಭಯವಿಲ್ಲವು. ॥೫೨॥

ಎಲೌ ಮನೋಹರಳಾದ ಸ್ತ್ರೀಯೇ, ಈಗ ನನ್ನ ಬಲವನ್ನು ನೋಡು! ಹೆದರತಕ್ಕವರಾದ ಅನೇಕರನ್ನು ನೀನು ಹಿಂದೆ ನೋಡಿ ಇರಬಹುದು. ನಾನು ಅವರ ಗುಂಪಿಗೆ ಸೇರುವವನಲ್ಲವು. ನಿನ್ನ ಇಚ್ಛಾನುಸಾರವಾಗಿ ಯುದ್ಧವನ್ನು ಮಾಡು. ॥೫೩॥

**ವೃದ್ಧಾಶ್ಚ ಸೇವಿತಾಃ ಪೂರ್ವಂ ನೀತಿಶಾಸ್ತ್ರಂ ಶ್ರುತಂ ತ್ವಯಾ ।**
**ಪಠಿತಂ ಚಾರ್ಥವಿಜ್ಞಾನಂ ವಿದ್ವದ್ಗೋಷ್ಠೀ ಕೃತಾಽಥವಾ ॥೫೪॥**

**ಸಾಹಿತ್ಯತಂತ್ರವಿಜ್ಞಾನಂ ಚೇದಸ್ತಿ ತವ ಸುಂದರಿ ।**
**ಶೃಣು ಮೇ ವಚನಂ ಪಥ್ಯಂ ತಥ್ಯಂ ಪ್ರಮಿತಿಬೃಂಹಿತಂ ॥೫೫॥**

**ರಸಾನಾಂ ಚ ನವಾನಾಂ ವೈ ದ್ವಾವೇವ ಮುಖ್ಯತಾಂ ಗತೌ ।**
**ಶೃಂಗಾರಕಃ ಶಾಂತರಸೋ ವಿದ್ವಜ್ಜನಸಭಾಸು ಚ ॥೫೬॥**

**ತಯೋಃ ಶೃಂಗಾರ ಏವಾದೌ ನೃಪಭಾವೇ ಪ್ರತಿಷ್ಠಿತಃ ।**
**ವಿಷ್ಣುರ್ಲಕ್ಷ್ಮ್ಯಾ ಸಹಾಽಽಸ್ತೇ ವೈ ಸಾವಿತ್ರ್ಯಾ ಚತುರಾನನಃ ॥೫೭॥**

**ಶಚ್ಯೇಂದ್ರಃ ಶೈಲಸುತಯಾ ಶಂಕರಃ ಸಹ ಶೇರತೇ ।**
**ವಲ್ಲ್ಯಾ ವೃಕ್ಷೋ ಮೃಗೋ ಮೃಗ್ಯಾ ಕಪೋತ್ಯಾ ಚ ಕಪೋತಕಃ ॥೫೮॥**

---

ನೀನು ಪೂರ್ವದಲ್ಲಿ ವೃದ್ಧರಾದವರನ್ನು ಸೇವಿಸಿರುತ್ತೀಯೇನು ? ನೀತಿ ಶಾಸ್ತ್ರಗಳನ್ನು ಕೇಳಿರುವೆಯಾ ? ಅರ್ಥಶಾಸ್ತ್ರದ ವ್ಯಾಸಂಗದಿಂದ ತಿಳಿವಳಿಕೆಯು ಚನ್ನಾಗಿರುತ್ತದೆಯೇ ? ವಿದ್ವಾಂಸರನ್ನು ಸೇರಿಸಿ ಸಭೆಯನ್ನಾದರೂ ಮಾಡಿರುತ್ತೀಯಾ ? ||೫೪||

ಎಲೌ ಸುಂದರಿಯೇ, ನಿನಗೆ ಸಾಹಿತ್ಯ ಶಾಸ್ತ್ರದ ಜ್ಞಾನವು ಇದ್ದಲ್ಲಿ ನಾನು ಹೇಳುವ ನಿನಗೆ ಹಿತಕರವಾದ ಪ್ರಮಾಣಯುಕ್ತವಾದ, ನಿಜವಾದ ಮಾತುಗಳನ್ನು ಕೇಳು. ||೫೫||

ಒಂಬತ್ತು ರಸಗಳ ಪೈಕಿ ಶೃಂಗಾರರಸ ಮತ್ತು ಶಾಂತರಸವೆಂಬ ಇವೆರಡು ರಸಗಳು ಮಾತ್ರ ಹೆಚ್ಚು ಮುಖ್ಯವಾಗಿರುವುವು ಎಂದು ವಿದ್ವಾಂಸರ ಸಭೆಗಳಲ್ಲಿಯೂ ಸಹ ಸಿದ್ಧಾಂತವಾಗಿದೆ. ||೫೬||

ಶೃಂಗಾರ ಶಾಂತ ಇವೆರಡು ರಸಗಳಲ್ಲಿಯೂ, ಶೃಂಗಾರರಸವೇ ರಾಜನಂತೆ ಶ್ರೇಷ್ಠವಾಗಿರುವುದು. ದೇವತೆಗಳಲ್ಲಿ ವಿಷ್ಣುವು ಲಕ್ಷ್ಮಿಯೊಡನೆಯೂ, ಸಾವಿತ್ರಿಯು ಬ್ರಹ್ಮನೊಡನೆಯೂ, ಪ್ರೇಮದಿಂದ ಇರುವರು. ||೫೭||

ಇಂದ್ರನು ಶಚೀದೇವಿಯೊಡನೆಯೂ, ಶಿವನು ಪಾರ್ವತಿಯ ಸಂಗಡಲೂ ಪ್ರೀತಿಯಿಂದ ಇರುವರು. ಸ್ಥಾವರ ಪ್ರಾಣಿಯಾದ ಮರವೂ ಬಳ್ಳಿಯಿಂದ ಕೂಡಿರುವುದು. ಜಂಗಮ ಮೃಗಗಳಾದ ಹುಲ್ಲೆಯು ಹೆಣ್ಣು ಹುಲ್ಲೆಯೊಡನೆಯೂ, ಕಪೋತವು ಕಪೋತಿಯೊಡನೆಯೂ ಅನುರಾಗದಿಂದ ವರ್ತಿಸುತ್ತಾ ಇರುವುದು. ||೫೮||

ಏವಂ ಸರ್ವೇ ಪ್ರಾಣಭೃತಃ ಸಂಯೋಗರಸಿಕಾ ಭೃಶಂ ।
ಅಪ್ರಾಪ್ತಭೋಗವಿಭವಾ ಯೇ ಚಾನ್ಯೇ ಕಾತರಾ ನರಾಃ ॥೫೯॥

ಭವಂತಿ ಯತಯಸ್ತೇ ವೈ ಮೂಢಾ ದೈವೇನ ವಂಚಿತಾಃ ।
ಅಸಂಸಾರರಸಜ್ಞಾಸ್ತೇ ವಂಚಿತಾ ವಂಚನಾಪರೈಃ ॥೬೦॥

ಮಧುರಾಲಾಪನಿಪುಣೈ ರತಾಃ ಶಾಂತಿರಸೇ ಹಿ ತೇ ।
ಕ್ವ ಜ್ಞಾನಂ ಕ್ವ ಚ ವೈರಾಗ್ಯಂ ವರ್ತಮಾನೇ ಮನೋಭವೇ ॥೬೧॥

ಲೋಭೇ ಕ್ರೋಧೇ ಚ ದುರ್ಧರ್ಷೇ ಮೋಹೇ ಮತಿವಿನಾಶಕೇ ।
ತಸ್ಮಾತ್ತ್ವಮಪಿ ಕಲ್ಯಾಣಿ ಕುರು ಕಾಂತಂ ಮನೋಹರಂ ॥೬೨॥

---

ಹೀಗೆ ಸ್ಥಾವರ ಜಂಗಮ ರೂಪವಾದ ಪ್ರಾಣಿಗಳೆಲ್ಲರೂ ಸ್ತ್ರೀಪುರುಷರ ಪರಸ್ಪರ ಸಂಯೋಗ ಸೌಖ್ಯವನ್ನು ಅನುಭವಿಸುವುದರಲ್ಲಿ ಬಹಳ ಆಸಕ್ತಿಯುಳ್ಳವರಾಗಿರುವರು. ॥೫೯॥

ಭೋಗದ ಅತಿಶಯವನ್ನು ಅನುಭವಿಸದೆ ಇರುವ, ಭೀತರಾದ, ಯಾವ ಮಾನವರೇ ಮುಂತಾದ ಜನರಿರುವರೋ ಅವರು ದೈವಗತಿಯಿಂದ ಮೋಸಮಾಡಲ್ಪಟ್ಟವರಾಗಿ, ದಡ್ಡರಾಗಿ, ಯತಿಗಳು ಆಗುವರು. ಅವರು ಸಂಸಾರದ ಸೌಖ್ಯವನ್ನು ತಿಳಿಯದವರಾಗಿ ಮೋಸಗಾರರಿಂದ ಮೋಸಪಡಿಸಲ್ಪಟ್ಟವರಾಗಿ ಇರುವರು. ಇವರೆಲ್ಲರೂ ಶಾನ್ತರಸವನ್ನು ಅವಲಂಬಿಸಿಕೊಂಡು ಇರುವವರು. ॥೬೦॥

ಶಾಂತರಸವನ್ನು ಆಶ್ರಯಿಸಿರುವ ಯತಿಗಳು ಮಧುರವಾದ ಮಾತುಗಳನ್ನು ಹೇಳುವದರಲ್ಲಿ ನಿಪುಣರಾದವರಿಂದ ಹೇಳಲ್ಪಟ್ಟ ಆಯಾಯ ಮಾತುಗಳನ್ನು ಕೇಳಿ ಶಾಂತರಸವನ್ನು ತಾರಕವೆಂದು ನಂಬಿಕೊಂಡು ಇರುವರು. ಕಾಮವಿಕಾರವು ಬಲವಾಗಿರುವಾಗ ಜ್ಞಾನವು ಎಲ್ಲಿಂದ ಬಂದೀತು ? ವೈರಾಗ್ಯವು ಹೇಗೆತಾನೇ ಉಂಟಾದೀತು ? ಬುದ್ಧಿಯನ್ನು ಕೆಡಿಸುವುದರಲ್ಲಿ ಶಕ್ತವಾದ ಲೋಭವೂ, ಅಸಾಧ್ಯವಾದ ಕೋಪವೂ ಸಹ ಇರುವಾಗ ಜ್ಞಾನ-ವೈರಾಗ್ಯಗಳು ಎಲ್ಲಿ ಉಂಟಾಗುವುವು ? ॥೬೧॥

ಎಲೌ ಮಂಗಳಕರಳೇ, ನಾನು ಹೇಳುವ ರೀತಿಯಲ್ಲಿ ಶೃಂಗಾರ ರಸವು ಬಹಳ ಸುಖಕರವಾಗಿ, ಶಾಂತರಸವು ಜ್ಞಾನ-ವೈರಾಗ್ಯಗಳಿಲ್ಲದುದರಿಂದ ಹೊಂದಲಸಾಧ್ಯವಾಗಿರುವ ಕಾರಣ ನೀನೂ ಕೂಡ ಮನೋಹರನಾದ ಮತ್ತು ಸುಂದರನಾದ

॥ ವ್ಯಾಸ ಉವಾಚ ॥

**ಶುಂಭಂ ಸುರಾಣಾಂ ಜೇತಾರಂ ನಿಶುಂಭಂ ವಾ ಮಹಾಬಲಂ ।**
**ಇತ್ಯುಕ್ತ್ವಾ ರಕ್ತಬೀಜೋಽಸೌ ವಿರರಾಮ ಪುರಃಸ್ಥಿತಃ ॥೬೩॥**
**ಶ್ರುತ್ವಾ ಜಹಾಸ ಚಾಮುಂಡಾ ಕಾಲಿಕಾ ಚಾಂಬಿಕಾ ತಥಾ ॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ ಸಪ್ತವಿಂಶೋಽಧ್ಯಾಯಃ**

---

ದೇವತೆಗಳನ್ನೆಲ್ಲರನ್ನೂ ಜಯಿಸಿದವನಾದ ಶುಂಭನನ್ನಾಗಲೀ, ನಿಶುಂಭನನ್ನಾಗಲೀ ಪತಿಯನ್ನಾಗಿ ವರಿಸಿ ಶೃಂಗಾರ ಸೌಖ್ಯವನ್ನು ಬಹಳಮಟ್ಟಿಗೆ ಅನುಭವಿಸು. ॥೬೨॥

ವ್ಯಾಸಋಷಿಯು ಹೇಳಿದನು—ಈ ರಕ್ತಬೀಜಾಸುರನು ಹೀಗೆ ಹೇಳಿ ಅವಳ ಉತ್ತರವನ್ನು ನಿರೀಕ್ಷಿಸುತ್ತಾ ದೇವಿಯ ಮುಂದುಗಡೆಯಲ್ಲಿ ಸುಮ್ಮನೆ ನಿಂತುಕೊಂಡನು. ಅವನ ಮಾತನ್ನು ಕೇಳಿ ಅಂಬಿಕಾದೇವಿಯೂ, ಈ ಅಂಬಿಕಾದೇವಿಯ ಕೋಶದಿಂದ ಹುಟ್ಟಿದ ಕಾಳಿಕಾದೇವಿಯೂ, ಈ ಅಂಬಿಕಾದೇವಿಯ ಲಲಾಟದಿಂದ ಹುಟ್ಟಿದ ಚಾಮುಂಡಿಕಾದೇವಿಯೂ ಸಹ ಈ ಮೂರು ಜನರೂ ಹಾಸ್ಯಮಾಡಿ ನಕ್ಕರು. ॥೬೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### ॥ ಅಷ್ಟಾವಿಂಶೋಽಧ್ಯಾಯಃ ॥

### ಇಪ್ಪತ್ತೆಂಟನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಕೃತ್ವಾ ಹಾಸ್ಯಂ ತತೋ ದೇವೀ ತಮುವಾಚ ವಿಶಾಂಪತೇ ।**
**ಮೇಘಗಂಭೀರಯಾ ವಾಚಾ ಯುಕ್ತಿಯುಕ್ತಮಿದಂ ವಚಃ ॥೧॥**

**ಪೂರ್ವಮೇವ ಮಯಾ ಪ್ರೋಕ್ತಂ ಮಂದಾತ್ಮನ್ ಕಿಂ ವಿಕತ್ಥಸೇ ।**
**ದೂತಸ್ಯಾಗ್ರೇ ಯಥಾಯೋಗ್ಯಂ ವಚನಂ ಹಿತಸಂಯುತಂ ॥೨॥**

**ಸದೃಶೋ ಮಮ ರೂಪೇಣ ಬಲೇನ ವಿಭವೇನ ಚ ।**
**ತ್ರಿಲೋಕ್ಯಾಂ ಯದಿ ಕೋಽಪಿ ಸ್ಯಾತ್ತಂ ಪತಿಂ ಪ್ರವೃಣೋಮ್ಯಹಂ ॥೩॥**

---

ವ್ಯಾಸಋಷಿಯು ಹೇಳಿದನು—ಎಲೈ ಜನಮೇಜಯರಾಯನೇ, ಕೇಳು. ದೇವಿಯು ಅವನ ಮಾತನ್ನು ಕೇಳಿ ಅಪಹಾಸ್ಯವನ್ನು ಮಾಡಿ, ಮೇಘದಂತೆ ಗಂಭೀರವಾದ ಧ್ವನಿಯಿಂದ ಯುಕ್ತಿಯಿಂದ ಕೂಡಿರುವ ಮಾತನ್ನು ಹೇಳಿದಳು. ॥೧॥

ಎಲೈ ದಡ್ಡನೇ, ಏಕೆ ಸುಮ್ಮನೆ ಕೆಲಸಕ್ಕೆ ಬಾರದ ಮಾತುಗಳನ್ನಾಡುತ್ತೀಯೆ. ಮೊದಲೇ ನಾನು ದೂತನೇ ಮೊದಲಾಗಿರುವರ ಮೂಲಕವಾಗಿ ನಿಮ್ಮ ಪ್ರಭುವಿಗೆ ಯೋಗ್ಯವಾಗಿಯೂ, ಹಿತವನ್ನುಂಟುಮಾಡುವುದಾಗಿಯೂ ಇರುವ ಮಾತನ್ನು ಹೇಳಿರುತ್ತೇನೆ. ॥೨॥

ಸೌಂದರ್ಯದಿಂದಲೂ, ದೇಹಸಾಮರ್ಥ್ಯದಿಂದಲೂ, ಮಹಿಮೆಯಿಂದಲೂ ಸಹ ನನಗೆ ಸಮಾನನಾಗಿರುವವನು ಮೂರು ಲೋಕಗಳಲ್ಲಿ ಯಾರಾದರೂ ಇದ್ದರೆ ಅಂಥವನನ್ನು ಪತಿಯನ್ನಾಗಿ ವರಿಸುವೆನು. ॥೩॥

**ಬ್ರೂಹಿ ಶುಂಭಂ ನಿಶುಂಭಂ ಚ ಪ್ರತಿಜ್ಞಾ ಮೇ ಪುರಾಕೃತಾ ।**
**ತಸ್ಮಾದ್ಯುದ್ಧ್ಯಸ್ವ ಜಿತ್ವಾ ಮಾಂ ವಿವಾಹಂ ವಿಧಿವತ್ಕುರು ॥೪॥**

**ತ್ವಂ ವೈ ತದಾಽಜ್ಞಯಾ ಪ್ರಾಪ್ತಸ್ತಸ್ಯ ಕಾರ್ಯಾರ್ಥಸಿದ್ಧಯೇ ।**
**ಸಂಗ್ರಾಮಂ ಕುರು ಪಾತಾಲಂ ಗಚ್ಛ ವಾ ಪತಿನಾ ಸಹ ॥೫॥**

॥ ವ್ಯಾಸ ಉವಾಚ ॥

**ತಚ್ಛ್ರುತ್ವಾ ವಚನಂ ದೇವ್ಯಾಃ ಸ ದೈತ್ಯೋಽಮರ್ಷಪೂರಿತಃ ।**
**ಮುಮೋಚ ತರಸಾ ಬಾಣಾನ್ ಸಿಂಹಸ್ಯೋಪರಿ ದಾರುಣಾನ್ ॥೬॥**

**ಅಂಬಿಕಾ ತಾಞ್ಛರಾನ್ವೀಕ್ಷ್ಯ ಗಗನೇ ಪನ್ನಗೋಪಮಾನ್ ।**
**ಚಿಚ್ಛೇದ ಸಾಯಕೈಸ್ತೀಕ್ಷ್ಣೈರ್ಲಘುಹಸ್ತತಯಾ ಕ್ಷಣಾತ್ ॥೭॥**

---

ಎಲೈ ರಕ್ತಬೀಜನೇ, ನಾನು ಮೊದಲೇ ಪ್ರತಿಜ್ಞೆಯನ್ನು ಹೀಗೆ ಮಾಡಿದ್ದೇನೆಂದು ಶುಂಭನಿಗೂ ಮತ್ತು ನಿಶುಂಭನಿಗೂ ಹೇಳು. ನನ್ನ ಪ್ರತಿಜ್ಞೆಯು ಸಾರ್ಥಕವಾಗಬೇಕಾಗಿರುವುದರಿಂದ ನನ್ನನ್ನು ಯುದ್ಧದಲ್ಲಿ ಗೆದ್ದು ಶಾಸ್ತ್ರೋಕ್ತ ರೀತಿಯಿಂದ ವಿವಾಹವನ್ನು ಮಾಡಿಕೋ. ॥೪॥

ನೀನು ಅವನ ಆಜ್ಞೆಯಿಂದ ಆ ನಿನ್ನ ಪ್ರಭುವಿನ ಕಾರ್ಯವನ್ನು ಸಾಧಿಸುವುದಕ್ಕಾಗಿ ಇಲ್ಲಿಗೆ ಬಂದಿರುತ್ತೀಯೆ. ಯುದ್ಧವನ್ನಾದರೂ ಮಾಡು. ಇಲ್ಲದಿದ್ದರೆ ನಿಮ್ಮ ಪ್ರಭುವಿನೊಡನೆ ಪಾತಾಳ ಲೋಕಕ್ಕಾದರೂ ಹೋಗು, ಎಂದು ದೇವಿಯು ಹೇಳಿದಳು. ॥೫॥

ವ್ಯಾಸಋಷಿಯು ಹೇಳಿದನು—ಆ ರಕ್ತಬೀಜಾಸುರನು ದೇವಿಯ ಆ ಮಾತುಗಳನ್ನು ಕೇಳಿ ಬಹಳ ಸಿಟ್ಟಿನಿಂದ ಕೂಡಿದವನಾಗಿ ದೇವಿಯ ವಾಹನವಾದ ಸಿಂಹದ ಮೇಲೆ ಕ್ರೂರವಾದ ಬಾಣಗಳನ್ನು ಬೇಗನೆ ಬಿಟ್ಟನು. ॥೬॥

ಅಂಬಿಕಾದೇವಿಯು ಆಕಾಶದಲ್ಲಿ ಹಾವುಗಳಂತೆ ಬರುತ್ತಾ ಇರುವ ಆ ಬಾಣಗಳನ್ನು ನೋಡಿ ಚುರುಕಾದ ತನ್ನ ಕೈಚಳಕದಿಂದ ಬಾಣಗಳನ್ನು ಬೇಗನೆ ಬಿಡಬಲ್ಲವಳಾದಕಾರಣ ಒಂದು ಕ್ಷಣಮಾತ್ರದಲ್ಲಿ ವೇಗವಾಗಿರುವ ಬಾಣಗಳಿಂದ ಅವುಗಳನ್ನು ಕತ್ತರಿಸಿಹಾಕಿದಳು. ॥೭॥

**ಅನ್ಯೈರ್ಜಘಾನ ವಿಶಿಖೈ ರಕ್ತಬೀಜಂ ಮಹಾಸುರಂ ।**
**ಅಂಬಿಕಾ ಚಾಪನಿರ್ಮುಕ್ತೈಃ ಕರ್ಣಾಕೃಷ್ಟೈಃ ಶಿಲಾಶಿತೈಃ ॥೮॥**

**ದೇವೀಬಾಣಹತಃ ಪಾಪೋ ಮೂರ್ಛಾಮಾಪ ರಥೋಪರಿ ।**
**ಪತಿತೇ ರಕ್ತಬೀಜೇ ತು ಹಾಹಾಕಾರೋ ಮಹಾನಭೂತ್ ॥೯॥**

**ಸೈನಿಕಾಶ್ಚುಕ್ರುಶುಃ ಸರ್ವೇ ಹತಾಃ ಸ್ಮ ಇತಿ ಚಾಬ್ರುವನ್ ।**
**ತತೋ ಬುಂಬಾರವಂ ಶ್ರುತ್ವಾ ಶುಂಭಃ ಪರಮದಾರುಣಂ ॥೧೦॥**

**ಉದ್ಯೋಗಂ ಸರ್ವಸೈನ್ಯಾನಾಂ ದೈತ್ಯಾನಾಮಾದಿದೇಶ ಹ ।**

॥ ಶುಂಭ ಉವಾಚ ॥

**ನಿರ್ಯಾಂತು ದಾನವಾಃ ಸರ್ವೇ ಕಾಂಬೋಜಾಃ ಸ್ವಬಲೈರ್ವೃತಾಃ ॥೧೧॥**
**ಅನ್ಯೇಽಪ್ಯತಿಬಲಾಃ ಶೂರಾಃ ಕಾಲಕೇಯಾ ವಿಶೇಷತಃ ।**

---

ಅಂಬಿಕಾದೇವಿಯು ತನ್ನ ಧನುಸ್ಸಿನಿಂದ ಕಿವಿಯವರೆಗೂ ಎಳೆದು ಬಿಡಲ್ಪಟ್ಟ ಹರಿತವಾದ ಬೇರೆಬೇರೆ ಬಾಣಗಳಿಂದ ರಕ್ತಬೀಜಾಸುರನೆಂಬ ದೊಡ್ಡರಾಕ್ಷಸನನ್ನು ಹೊಡೆದಳು. ॥೮॥

ಪಾಪಿಷ್ಠನಾದ ರಕ್ತಬೀಜಾಸುರನು ದೇವಿಯ ಬಾಣಗಳಿಂದ ಹೊಡೆಯಲ್ಪಟ್ಟವನಾಗಿ ತನ್ನ ರಥದಲ್ಲಿ ಮೂರ್ಛೆಯನ್ನು ಹೊಂದಿದನು. ಅವನ ಶರೀರದಿಂದ ರಕ್ತವು ಭೂಮಿಗೆ ಬೀಳದೆ ಅವನು ಜ್ಞಾನತಪ್ಪಿ ಬಿದ್ದಿರಲು ಆ ರಾಕ್ಷಸ ಸೇನೆಯಲ್ಲಿ ಬಹಳವಾಗಿ ಹಾಹಾಕಾರ ಉಂಟಾಯಿತು. ॥೯॥

ಸೇನೆಯವರೆಲ್ಲರೂ ಕಿರಿಚಿಕೊಂಡರು. ನಾವೆಲ್ಲರೂ ಹೊಡೆಯಲ್ಪಟ್ಟೆವು ಎಂದು ಕೂಗಿಕೊಂಡರು. ಅನಂತರದಲ್ಲಿ ಬಹಳ ಕ್ರೂರನಾದ ಶುಂಭನು ಸೇನೆಯವರ ಮುಖವಾದ್ಯಧ್ವನಿಯನ್ನು ಕೇಳಿ ತನ್ನ ಎಲ್ಲ ಸೇನೆಗಳಿಗೂ ರಾಕ್ಷಸರಿಗೂ, ಈಗ ನೀವೇ ಯುದ್ಧಕಾರ್ಯವನ್ನು ಮಾಡಬೇಕಾಗಿ ಬಂದಿರುತ್ತದೆ, ಎಂದು ಅಪ್ಪಣೆಮಾಡಿದನು.॥೧೦॥

ಶುಂಭನು ಹೇಳಿದನು—ಈಗ ದಾನವರೆಲ್ಲರೂ, ಕಾಂಭೋಜ ದೇಶದವರೂ ಸಹ ತಮ್ಮ ತಮ್ಮ ಸೇನೆಯೊಡನೆ ಯುದ್ಧಕ್ಕೆ ಹೊರಡಲಿ. ಇನ್ನೂ ಸೇನೆಯಲ್ಲಿ ಇರುವ ಬಹಳ ಶಕ್ತಿವಂತರೂ ಶೂರರೂ ಆಗಿರುವ ಕಾಲಕೇಯರೂ ಸಹ ಯುದ್ಧಕ್ಕೆ ಹೊರಡಲಿ ಎಂದು ಅಪ್ಪಣೆ ಮಾಡಿದನು. ॥೧೧॥

|| ವ್ಯಾಸ ಉವಾಚ ||

ಇತ್ಯಾಜ್ಞಪ್ತಂ ಬಲಂ ಸರ್ವಂ ಶುಂಭೇನ ಚ ಚತುರ್ವಿಧಂ ||೧೨||

ನಿರ್ಜಗಾಮ ಮುದಾವಿಷ್ಟಂ ದೇವೀ ಸಮರಮಂಡಲೇ ।
ತಮಾಗತಂ ಸಮಾಲೋಕ್ಯ ಚಂಡಿಕಾ ದಾನವಂ ಬಲಂ ||೧೩||

ಘಂಟಾನಾದಂ ಚಕಾರಾಶು ಭೀಷಣಂ ಭಯದಂ ಮುಹುಃ ।
ಜ್ಯಾಸ್ವನಂ ಶಂಖನಾದಂ ಚ ಚಕಾರ ಜಗದಂಬಿಕಾ ||೧೪||

ತೇನ ನಾದೇನ ಸಾ ಜಾತಾ ಕಾಲೀ ವಿಸ್ತಾರಿತಾನನಾ ।
ಶ್ರುತ್ವಾ ತನ್ನಿನದಂ ಘೋರಂ ಸಿಂಹೋ ದೇವ್ಯಾಶ್ಚ ವಾಹನಂ ||೧೫||

ಜಗರ್ಜ ಸೋಽಪಿ ಬಲವಾನ್ ಜನಯುನ್ಸ್ಮಯಮದ್ಭುತಂ ।
ತನ್ನಿನಾದಮುಪಶ್ರುತ್ಯ ದಾನವಾಃ ಕ್ರೋಧಮೂರ್ಛಿತಾಃ ||೧೬||
ಸರ್ವೇ ಚಿಕ್ಷಿಪುರಸ್ತ್ರಾಣಿ ದೇವೀಂ ಪ್ರತಿ ಮಹಾಬಲಾಃ ।

---

ವ್ಯಾಸಋಷಿಯು ಹೇಳಿದನು—ಶುಂಭನು ಹೀಗೆ ತನ್ನ ಸೇನೆಯೆಲ್ಲಕ್ಕೂ ಆಜ್ಞೆಯನ್ನು ಮಾಡಿದನು. ಅನಂತರದಲ್ಲಿ ಆನೆ, ಕುದುರೆ, ತೇರು, ಕಾಲಾಳು ಎಂದು ನಾಲ್ಕು ವಿಧವಾಗಿರುವ ಸೇನೆಯೆಲ್ಲವೂ ಕೊಬ್ಬಿನಿಂದ ಕೂಡಿದ್ದಾಗಿ ದೇವಿಯ ಸಂಗಡ ಯುದ್ಧಕ್ಕಾಗಿ ಹೊರಟಿತು. ಯುದ್ಧರಂಗದಲ್ಲಿ ದೇವಿಯಾದ ಚಂಡಿಯು ಯುದ್ಧಕ್ಕಾಗಿ ಬಂದಿರುವ ರಾಕ್ಷಸರ ಸೇನೆಯನ್ನು ನೋಡಿ ಶತ್ರುಗಳಿಗೆ ಭಯ ವನ್ನುಂಟುಮಾಡುವ, ಭಯಂಕರವಾದ ಘಂಟೆಯ ಧ್ವನಿಯನ್ನು ಬೇಗಬೇಗನೆ ಆಗಾಗ್ಯೆ ಮಾಡುತ್ತಿದ್ದಳು. ಜಗನ್ಮಾತೆಯಾದ ಅಂಬಿಕಾದೇವಿಯು ತನ್ನ ಧನುಸ್ಸಿನ ಮೌರ್ವಿಯ ಧ್ವನಿಯನ್ನೂ ಶಂಖಧ್ವನಿಯನ್ನೂ ಸಹ ಮಾಡಿದಳು. ||೧೨-೧೩-೧೪||

ಆ ಧ್ವನಿಯನ್ನು ಕೇಳಿ ಕಾಲಿಕಾದೇವಿಯು ತನ್ನ ಬಾಯನ್ನು ದೊಡ್ಡದಾಗಿ ರುವಂತೆ ಮಾಡಿಕೊಂಡಳು. ದೇವಿಯ ವಾಹನವಾದ ಸಿಂಹವು ಭಯಂಕರವಾದ ಆ ಧ್ವನಿಯನ್ನು ಕೇಳಿ ತಾನೂ ರಾಕ್ಷಸರಿಗೆ ಆಶ್ಚರ್ಯವೂ ತುಂಬ ಭಯವೂ ಉಂಟಾಗು ವಂತೆ ಗಟ್ಟಿಯಾಗಿ ಗರ್ಜಿಸಿತು. ||೧೫||

ಬಹಳ ಬಲವುಳ್ಳವರಾದ ರಾಕ್ಷಸರು ಎಲ್ಲರೂ ಆ ಶಂಖಧ್ವನಿ, ಧನುಸ್ಸಿನ ಟಂಕಾರಧ್ವನಿ, ಸಿಂಹದಘರ್ಜನೆಯಧ್ವನಿ, ಇವುಗಳನ್ನು ಕೇಳಿ ಬಹಳ ಕೋಪವುಳ್ಳ

ತಸ್ಮಿನ್ನೇವಾಽಽಯತೇ ಯುದ್ಧೇ ದಾರುಣೇ ಲೋಮಹರ್ಷಣೇ ।
ಬ್ರಹ್ಮಾದೀನಾಂ ಚ ದೇವಾನಾಂ ಶಕ್ತಯಶ್ಚಂಡಿಕಾಂ ಯಯುಃ ॥೧೭॥

ಯಸ್ಯ ದೇವಸ್ಯ ಯದ್ರೂಪಂ ಯಥಾ ಭೂಷಣವಾಹನಂ ।
ತಾದೃಗ್ರೂಪಾಸ್ತದಾ ದೇವ್ಯಃ ಪ್ರಯಯುಃ ಸಮರಾಂಗಣೇ ॥೧೮॥

ಬ್ರಹ್ಮಾಣೀ ವರಟಾರೂಢಾ ಸಾಕ್ಷಸೂತ್ರಕಮಂಡಲುಃ ।
ಆಗತಾ ಬ್ರಹ್ಮಣಃ ಶಕ್ತಿಃ ಬ್ರಹ್ಮಾಣೀತಿ ಪ್ರತಿಶ್ರುತಾ ॥೧೯॥

ವೈಷ್ಣವೀ ಗರುಡಾರೂಢಾ ಶಂಖಚಕ್ರಗದಾಧರಾ।
ಪದ್ಮಹಸ್ತಾ ಸಮಾಯಾತಾ ಪೀತಾಂಬರವಿಭೂಷಿತಾ ॥೨೦॥

---

ವರಾಗಿ ಮೈಮೇಲೆ ಎಚ್ಚರವಿಲ್ಲದವರಾಗಿ ದೇವಿಯನ್ನು ಕುರಿತು ತಮ್ಮ ಆಯುಧ ಗಳನ್ನು ತೆಗೆದುಕೊಂಡು ಹೊಡೆದರು. ॥೧೬॥

ದೊಡ್ಡದಾಗಿರುವ, ಭಯಂಕರವಾದ, ರೋಮಾಂಚಕರವಾದ ಆ ಯುದ್ಧದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳ ಶಕ್ತಿಗಳೆಲ್ಲರೂ ಚಂಡಿಕಾದೇವಿಯ ಸಹಾಯಕ್ಕಾಗಿ ಬಂದರು. ॥೧೭॥

ಯಾವ ದೇವತೆಗಳು ಯಾವ ಆಕಾರವುಳ್ಳವರಾಗಿ, ಎಂತಹ ಆಭರಣವನ್ನು ಧರಿಸಿಕೊಂಡು, ಯಾವ ವಾಹನವನ್ನು ಹೊಂದಿರುವರೋ, ಅದೇ ರೂಪವೂ, ಆಭರ ಣವೂ, ವಾಹನವೂ ಉಳ್ಳವರಾಗಿ ಆ ಶಕ್ತಿ ದೇವಿಯರು ಯುದ್ಧರಂಗದಲ್ಲಿ ದೇವಿಯ ಸಹಾಯಕ್ಕಾಗಿ ಬಂದರು. ಹೇಗೆಂದರೆ– ॥೧೮॥

ಹೆಣ್ಣು ಹಂಸವನ್ನು ವಾಹನವನ್ನಾಗಿ ಮಾಡಿಕೊಂಡು ಜಪಸರ, ಕಮಂಡಲು ಇವುಗಳನ್ನು ಹಿಡಿದುಕೊಂಡು ಬ್ರಹ್ಮಾಣೀ ಎಂದು ಹೆಸರನ್ನು ಹೊಂದಿರುವ ಬ್ರಹ್ಮನ ಶಕ್ತಿಯು ಯುದ್ಧರಂಗಕ್ಕೆ ಸಹಾಯಮಾಡಲು ಬಂದಳು. ॥೧೯॥

ಶಂಖ, ಚಕ್ರ, ಗದಾ, ಪದ್ಮ. ಇವುಗಳನ್ನು ಹಿಡಿದುಕೊಂಡು ಪೀತಾಂಬರ ದಿಂದ ಅಲಂಕೃತಳಾಗಿ ಗರುಡವಾಹನಳಾಗಿರುವ ವೈಷ್ಣವಿಯು ಆಗ ಯುದ್ಧಕ್ಕೆ ಬಂದಳು. ॥೨೦॥

ಶಾಂಕರೀ ತು ವೃಷಾರೂಢಾ ತ್ರಿಶೂಲವರಧಾರಿಣೀ ।
ಅರ್ಧಚಂದ್ರಧರಾದೇವೀ ತಥಾಽಹಿವಲಯಾ ಶಿವಾ ॥೨೧॥

ಕೌಮಾರೀ ಶಿಖಿಸಂರೂಢಾ ಶಕ್ತಿಹಸ್ತಾ ವರಾನನಾ ।
ಯುದ್ಧಕಾಮಾ ಸಮಾಯಾತಾ ಕಾರ್ತಿಕೇಯಸ್ವರೂಪಿಣೀ ॥೨೨॥

ಇಂದ್ರಾಣೀ ಸುಪ್ರುವದನಾ ಸುಶ್ವೇತಗಜವಾಹನಾ।
ವಜ್ರಹಸ್ತಾ ತಿ ಭೂಷಾಢ್ಯಾ ಸಂಗ್ರಾಮಾಭಿಮುಖೀ ಯಯೌ ॥೨೩॥

ವಾರಾಹೀ ಸೂಕರಾಕಾರಾ ಪ್ರೌಢಪ್ರೇತಾಸನಾ ಮತಾ ॥೨೪॥

ನಾರಸಿಂಹೀ ನೃಸಿಂಹಸ್ಯ ಬಿಭ್ರತೀ ಸದೃಶಂ ವಪುಃ ।
ಯಾಮ್ಯಾ ಚ ಮಹಿಷಾರೂಢಾ ದಂಡಹಸ್ತಾ ಭಯಪ್ರದಾ ॥೨೫॥

---

ಶಂಕರನ ಸಂಬಂಧಿಯಾದ ಶಕ್ತಿಯು, ಶಂಕರೀ, ಶಿವಾ, ಎಂಬ ಹೆಸರುಳ್ಳವಳಾಗಿ ವೃಷಭವನ್ನು ವಾಹನವನ್ನಾಗಿ ಮಾಡಿಕೊಂಡು ತ್ರಿಶೂಲಾಯುಧವನ್ನು ಧರಿಸಿ, ಅರ್ಧಚಂದ್ರನನ್ನು ಆಭರಣವನ್ನಾಗಿ ಮಾಡಿಕೊಂಡು, ಸರ್ಪವನ್ನು ಕಡಗವನ್ನಾಗಿ ಧರಿಸಿಕೊಂಡು ಯುದ್ಧಕ್ಕಾಗಿ ಬಂದಳು. ॥೨೧॥

ಕುಮಾರಸ್ವಾಮಿಯ ಸಂಬಂಧವಾದ ಶಕ್ತಿದೇವತೆಯು, ಮಯೂರವನ್ನು ವಾಹನವನ್ನಾಗಿ ಮಾಡಿಕೊಂಡು ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ಶ್ರೇಷ್ಠವಾದ ಮುಖವುಳ್ಳವಳಾಗಿ ಷಣ್ಮುಖಸ್ವಾಮಿಯ ಸ್ವರೂಪವನ್ನು ಧರಿಸಿ ಯುದ್ಧ ಮಾಡಲು ಇಚ್ಛೆಯಿಂದ ಬಂದಳು. ॥೨೨॥

ಇಂದ್ರ ಸಂಬಂಧಿಯಾದ ಶಕ್ತಿದೇವತೆಯು ಚನ್ನಾಗಿರುವ ಮುಖವುಳ್ಳವಳಾಗಿ ಬೆಳ್ಳಗಿರುವ ಆನೆಯನ್ನು ವಾಹನವನ್ನಾಗಿ ಮಾಡಿಕೊಂಡು, ವಜ್ರಾಯುಧವನ್ನು ಧರಿಸಿ ಯುದ್ಧ ಮಾಡಲುದ್ಯುಕ್ತಳಾಗಿ ಬಂದಳು. ॥೨೩॥

ವರಾಹಸ್ವಾಮಿಯ ಸಂಬಂಧಿಯಾದ ಶಕ್ತಿದೇವತೆಯು ಹಂದಿಯ ಮುಖವನ್ನು ಹೊಂದಿ, ಶವದ ಆಸನದಲ್ಲಿ ಪ್ರಕಾಶಿಸುತ್ತಾ ಯುದ್ಧಕ್ಕಾಗಿ ಬಂದಳು. ನರಸಿಂಹಸ್ವಾಮಿಯ ಸಂಬಂಧಿಯಾದ ಶಕ್ತಿಯು ನರಸಿಂಹದೇವರ ಆಕಾರಕ್ಕೆ ಸಮವಾದ ಶರೀರವನ್ನು ಧರಿಸಿ ಯುದ್ಧಕ್ಕಾಗಿ ಬಂದಳು. ॥೨೪॥

ಯಮನ ಸಂಬಂಧಿಯಾದ ಶಕ್ತಿದೇವತೆಯು ಕೋಣವನ್ನು ಹತ್ತಿಕೊಂಡು ದಂಡಾಯುಧವನ್ನು ಹಿಡಿದು, ಇತರರಿಗೆ ಭಯವನ್ನುಂಟುಮಾಡುವಳಾಗಿ, ಯಮನ

ಸಮಾಯಾತಾಽಥ ಸಂಗ್ರಾಮೇ ಯಮರೂಪಾ ಶುಚಿಸ್ಮಿತಾ ।
ತಥೈವ ವಾರುಣೀ ಶಕ್ತಿಃ ಕೌಬೇರೀ ಚ ಮದೋತ್ಕಟಾ ।
ಏವಂವಿಧಾಸ್ತಥಾಽಕಾರಾ ಯಯುಃ ಸ್ವಸ್ವಬಲೈರ್ವೃತಾಃ ॥೨೬॥

ಆಗತಾಸ್ತಾಃ ಸಮಾಲೋಕ್ಯ ದೇವೀ ಮುದಮವಾಪ ಚ ।
ಸ್ವಸ್ಥಾ ಮುಮುದಿರೇ ದೇವಾ ದೈತ್ಯಾಶ್ಚ ಭಯಮಾಯಯುಃ ॥೨೭॥

ತಾಭಿಃ ಪರಿವೃತಸ್ತತ್ರ ಶಂಕರೋ ಲೋಕಶಂಕರಃ ।
ಸಮಾಗಮ್ಯ ಚ ಸಂಗ್ರಾಮೇ ಚಂಡಿಕಾಮಿತ್ಯುವಾಚ ಹ ॥೨೮॥

---

ಆಕಾರದಿಂದ ಪ್ರಕಾಶಿಸುತ್ತಾ ಶುದ್ಧವಾದ ಮಂದಹಾಸದಿಂದ ಕೂಡಿ ಯುದ್ಧಕ್ಕೆ ಬಂದಳು ||೨೫||

ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ನಾರಸಿಂಹೀ, ಯಾಮ್ಯಾ, ಇಂದ್ರಾಣೀ ಎಂಬ ಶಕ್ತಿದೇವತೆಗಳು ಯುದ್ಧಕ್ಕಾಗಿ ಬಂದಂತೆ ವರುಣ ಸಂಬಂಧಿಯಾದ ಶಕ್ತಿಯೂ, ಹೆಚ್ಚಾದ ಮದದಿಂದ ಕೂಡಿದ ಕುಬೇರ ಸಂಬಂಧಿಯಾದ ಶಕ್ತಿಯೂ ಸಹ ಯುದ್ಧಕ್ಕಾಗಿ ಬಂದರು. ಈ ಪ್ರಕಾರವಾಗಿರುವ, ಆಯಾಯ ದೇವವಿಶೇಷರ ಆಕಾರಗಳಿಗೆ ಸಮಾನವಾದ ಆಕಾರವನ್ನು ಹೊಂದಿರುವ ತಮ್ಮ ತಮ್ಮ ಸೇನೆಗಳೊಡನೆ ಕೂಡಿಕೊಂಡಿರುವ ಶಕ್ತಿದೇವಿಯರೆಲ್ಲರೂ ತನ್ನ ಸಹಾಯ ಕ್ಕಾಗಿ ಬಂದಿರುವುದನ್ನು ನೋಡಿ ದೇವಿಯೂ ಸಂತೋಷವನ್ನು ಹೊಂದಿದಳು. ಇದರಿಂದ ದೇವತೆಗಳೆಲ್ಲರೂ ಸಮಾಧಾನವನ್ನು ಪಡೆದ ಮನಸ್ಸುಳ್ಳವರಾಗಿ ಸಂತೋಷವನ್ನು ಹೊಂದಿದರು. ಆದರೆ ರಾಕ್ಷಸರೆಲ್ಲರೂ ಭಯವನ್ನೇ ಪಡೆದರು. ||೨೬-೨೭||

ಈ ಶಕ್ತಿದೇವತೆಗಳಿಂದ ಕೂಡಿಕೊಂಡಿರುವ, ಲೋಕಕ್ಕೆಲ್ಲಕ್ಕೂ ಕ್ಷೇಮವ ನ್ನುಂಟುಮಾಡುವ, ಶ್ರೀಶಂಕರನು ಆಗ ಯುದ್ಧರಂಗಕ್ಕೆ ಬಂದು, ಚಂಡಿಕಾದೇವಿಯ ಸಂಗಡ ಹೀಗೆ ಹೇಳಿದನು.—||೨೮||

ಹನ್ಯಂತಾಮಸುರಾಃ ಶೀಘ್ರಂ ದೇವಾನಾಂ ಕಾರ್ಯಸಿದ್ಧಯೇ ।
ನಿಶುಂಭಂ ಚೈವ ಶುಂಭಂ ಚ ಯೇ ಚಾನ್ಯೇ ದಾನವಾಃ ಸ್ಥಿತಾಃ ॥೨೯॥

ಹತ್ವಾ ದೈತ್ಯಬಲಂ ಸರ್ವಂ ಕೃತ್ವಾ ಚ ನಿರ್ಭಯಂ ಜಗತ್ ।
ಸ್ವಾನಿ ಸ್ವಾನಿ ಚ ಧಿಷ್ಣ್ಯಾನಿ ಸಮಾಗಚ್ಛಂತು ಶಕ್ತಯಃ ॥೩೦॥

ದೇವಾ ಯಜ್ಞಭುಜಃ ಸಂತು ಬ್ರಾಹ್ಮಣಾ ಯಜನೇ ರತಾಃ ।
ಪ್ರಾಣಿನಃ ಸಂತು ಸಂತುಷ್ಟಾಃ ಸರ್ವೇ ಸ್ಥಾವರಜಂಗಮಾಃ ॥೩೧॥

ಶಮಂ ಯಾಂತು ತಥೋತ್ಪಾತಾ ಈತಯಶ್ಚ ತಥಾ ಪುನಃ ।
ಘನಾಃ ಕಾಲೇ ಪ್ರವರ್ಷಂತು ಕೃಷಿರ್ಬಹುಫಲಾ ತಥಾ ॥೩೨॥

---

ಓ ದೇವಿಯರೇ, ದೇವತೆಗಳ ಕಾರ್ಯವು ಸಿದ್ಧಿಸುವದಕ್ಕಾಗಿ ರಾಕ್ಷಸರನ್ನೆಲ್ಲರನ್ನೂ ಬೇಗನೆ ನಾಶ ಮಾಡಿರಿ. ನಿಶುಂಭನನ್ನೂ, ಶುಂಭನನ್ನೂ ಇನ್ನೂ ಇತರರು ಯಾರು ಯಾರು ರಾಕ್ಷಸನಾಯಕರಿರುವರೋ ಅವರನ್ನೂ, ಮತ್ತು ಸಮಸ್ತವಾದ ಆ ರಾಕ್ಷಸರ ಸೇನೆಯೆಲ್ಲವನ್ನೂ ಸಹ ನಿರ್ಮೂಲ ಮಾಡಿರಿ. ಜಗತ್ತೆಲ್ಲವೂ ಭಯವಿಲ್ಲದ್ದಾಗಿರಲಿ. ಇಷ್ಟು ಕೆಲಸವೆಲ್ಲವೂ ಆದ ಅನಂತರದಲ್ಲಿ ಆಯಾಯ ಶಕ್ತಿ ದೇವತೆಗಳು ಅವರವರ ಸ್ಥಾನಕ್ಕೆ ಹಿಂತಿರುಗಿ ಹೋಗಲಿ. ॥೨೯-೩೦॥

ಮೊದಲಿನಂತೆಯೇ ಇನ್ನು ಮುಂದೆಯೂ ದೇವತೆಗಳು ಯಜ್ಞದ ಹವಿರ್ಭಾಗಗಳನ್ನು ಹೊಂದಲಿ. ಬ್ರಾಹ್ಮಣರು ಯಜ್ಞಯಾಗಾದಿ ಧರ್ಮಗಳನ್ನು ಮಾಡಲಿ. ಸ್ಥಿರವಾದ ಮತ್ತು ಚರವಾದ ಎಲ್ಲ ಪ್ರಾಣಿಗಳೂ ಸಂತೋಷವನ್ನು ಪಡೆಯಲಿ. ॥೩೧॥

ಈಗ ತೋರಿರುವ ಉತ್ಪಾತಗಳೆಲ್ಲವೂ ನಾಶವನ್ನು ಹೊಂದಲಿ, ಹಾಗೆಯೇ ಈತಿಬಾಧೆಗಳೆಲ್ಲವೂ ನಾಶವಾಗಲಿ. ಮೇಘಗಳು ಆಯಾಯ ಕಾಲಗಳಲ್ಲಿ ಮಳೆಯನ್ನು ಹುಯ್ಯಲಿ. ಬೆಳೆಯು ಭೂಮಿಯಲ್ಲಿ ಬಹಳ ಮಟ್ಟಿಗೆ ಹೆಚ್ಚಾಗಿ ಬೆಳೆಯಲಿ. ಎಂದು ಶ್ರೀ ಶಿವನು ಚಂಡಿಕಾದೇವಿಯೊಡನೆ ಹೇಳಿದನು.

ಸಂಪೂರ್ಣವಾದ ಮತ್ತು ಉಗ್ರವಾದ ತೇಜಸ್ಸಿನಿಂದ ಬೆಳಗುತ್ತಿರುವ ಕೌಶಕೀ ದೇವಿಯ ಹತ್ತಿರಕ್ಕೆ ಇತರ ಶಕ್ತಿದೇವತೆಗಳು ತಾವಾಗಿ ಸ್ವತಂತ್ರಿಸಿ ಹೋಗಲಶಕ್ಯವಾಗಿದ್ದುದರಿಂದಲೂ, ಶ್ರೀ ಶಿವನು ತಾನೂ ಕೂಡ ಲೋಕ ಕ್ಷೇಮಕ್ಕಾಗಿಯೂ ದೇವಕಾರ್ಯಕ್ಕಾಗಿಯೂ ಅವತರಿಸಿ ಕೆಲಸ ಮಾಡುತ್ತಿರುವ ತನ್ನ ಶಕ್ತಿ ದೇವಿಯಾದ

|| ವ್ಯಾಸ ಉವಾಚ ||

**ಏವಂ ಬ್ರುವತಿ ದೇವೇಶೇ ಶಂಕರೇ ಲೋಕಶಂಕರೇ ||೩೩||**

**ಚಂಡಿಕಾಯಾಃ ಶರೀರಾತ್ತು ನಿರ್ಗತಾ ಶಕ್ತಿರದ್ಭುತಾ ।**
**ಭೀಷಣಾತಿಪ್ರಚಂಡಾ ಚ ಶಿವಾ ಶತನಿನಾದಿನೀ ||೩೪||**

**ಘೋರರೂಪಾಥ ಪಂಚಾಸ್ಯಮಿತ್ಯುವಾಚ ಸ್ಮಿತಾನನಾ ।**
**ದೇವದೇವ ವ್ರಜಾಶು ತ್ವಂ ದೈತ್ಯಾನಾಮಧಿಪಂ ಪ್ರತಿ ||೩೫||**

**ದೂತತ್ವಂ ಕುರು ಕಾಮಾರೇ ಬ್ರೂಹಿ ಶುಂಭಂ ಸ್ಮರಾಕುಲಂ ।**
**ನಿಶುಂಭಂ ಚ ಮದೋತ್ಸಿಕ್ತಂ ವಚನಾನ್ಮಮ ಶಂಕರ ||೩೬||**

---

ಪಾರ್ವತಿಯೊಡನೆ ಸಹಕರಿಸಲು ಬಂದು ಆ ಶಕ್ತಿಗಳನ್ನು ತೋರಿಸಿ ದೇವಿಯು ಸ್ವೀಕರಿಸುವಂತೆ ಮಾಡಿ ತಾನು ಹೀಗೆ ಹೇಳಿದನು, ಎಂದು ಭಾವವು. ||೩೨||

ವ್ಯಾಸಋಷಿಯು ಹೇಳಿದನು—ಲೋಕಗಳೆಲ್ಲಕ್ಕೂ ಕ್ಷೇಮವನ್ನುಂಟುಮಾಡುವವನಾದ ಶ್ರೀ ಶಿವನು ಹೀಗೆ ಹೇಳುತ್ತಿರಲು ಚಂಡಿಕಾದೇವಿಗೆ ಶಿವನ ಅಭಿಪ್ರಾಯವನ್ನು ತಿಳಿದು ಸಂತೋಷ ಉಂಟಾಯಿತು. ಆಗ ಚಂಡಿಕಾದೇವಿಯು ಕಾರ್ಯವಿಶೇಷವಶಳಾಗಿ ಕೋಪೋದ್ರಿಕ್ತಳಾಗಿ ಶಿವನಿಗೆ ಯಾವ ಮಾತನ್ನೂ ಹೇಳಲಿಲ್ಲ. ಆದರೆ ಚಂಡಿಕಾದೇವಿಯು ಶರೀರದಿಂದ ಆಶ್ಚರ್ಯಕರವಾದ, ಭಯಂಕರವಾದ ಆಕಾರವುಳ್ಳ, ಬಹಳ ಬಲದಿಂದ ಕೂಡಿದ, ಅನೇಕ ನರಿಗಳ ಕೂಗಿನಂತೆ ಧ್ವನಿಮಾಡುವ, ಒಂದು ಶಕ್ತಿದೇವತೆಯು ಆವಿರ್ಭವಿಸಿ, ಐದು ಮುಖಗಳಿಂದ ಹೊಳೆಯುತ್ತಿರುವ ಶ್ರೀಶಿವನನ್ನು ಕುರಿತು ನಗುವಿನಿಂದ ಕೂಡಿದ ಮುಖವುಳ್ಳವಳಾಗಿ ಹೀಗೆ ಹೇಳಿದಳು. ||೩೩-೩೪||

ದೇವತೆಗಳಿಗೂ ದೇವನಾಗಿರುವ ಓ ಸ್ವಾಮಿಯೇ, ಕಾಮನಿಗೆ ಶತ್ರುವಾದವನೇ, ನೀನು ಬೇಗನೆ ರಾಕ್ಷಸರಿಗೆ ಅಧಿಪತಿಯಾದ, ಕಾಮಪೀಡಿತನಾಗಿರುವ ಶುಂಭನಿಗೂ, ಮತ್ತು ಕೊಬ್ಬಿನಿಂದ ಗರ್ವಿತನಾಗಿರುವ ನಿಶುಂಭನಿಗೂ ಸಹ ಈ ಮಾತನ್ನು ಹೇಳಿ, ದೂತನ ಕಾರ್ಯವನ್ನು ನೆರವೇರಿಸು, ಎಂದು ಕೋರಿದಳು. ||೩೫-೩೬||

ಮುಕ್ತ್ವಾ ತ್ರಿವಿಷ್ಟಪಂ ಯಾತ ಯೂಯಂ ಪಾತಾಲಮಾಶು ವೈ ॥
ದೇವಾಃ ಸ್ವರ್ಗೇ ಸುಖಂ ಯಾಂತು ತುರಾಷಾಟ್ ಸ್ವಾಸನಂ ಶುಭಂ ।
ಪ್ರಾಪ್ನೋತು ತ್ರಿದಿವಂ ಸ್ಥಾನಂ ಯಜ್ಞಭಾಗಾಂಶ್ಚ ದೇವತಾಃ ॥೩೭॥

ಜೀವಿತೇಚ್ಛಾ ಚ ಯುಷ್ಮಾಕಂ ಯದಿ ಸ್ಯಾತ್ತು ಮಹತ್ತರಾ ।
ತರ್ಹಿ ಗಚ್ಛತ ಪಾತಾಲಂ ತರಸಾ ಯತ್ರ ದಾನವಾಃ ॥೩೮॥

ಅಥವಾ ಬಲಮಾಸ್ಥಾಯ ಯುದ್ಧೇಚ್ಛಾ ಮರಣಾಯ ಚೇತ್ ।
ತದಾಽಽಗಚ್ಛಂತು ತೃಪ್ಯಂತು ಮಚ್ಛಿವಾಃ ಪಿಶಿತೇನ ವಃ ॥೩೯॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯಾಃ ಶೂಲಪಾಣಿಸ್ತ್ವರಾನ್ವಿತಃ ।
ಗತ್ವಾಽಽಹ ದೈತ್ಯರಾಜಾನಂ ಶುಂಭಂ ಸದಸಿ ಸಂಸ್ಥಿತಂ ॥೪೦॥

---

ಎಲೈ ಶುಂಭನಿಶುಂಭರಿರಾ, ನೀವುಗಳು ಸ್ವರ್ಗವನ್ನು ಬಿಟ್ಟು ಬೇಗನೆ ಪಾತಾಳ ಲೋಕಕ್ಕೆ ಹೋಗಿರಿ. ದೇವತೆಗಳು ಸ್ವರ್ಗದಲ್ಲಿ ಸುಖವನ್ನು ಹೊಂದಲಿ. ಇಂದ್ರನು ಮಂಗಳಕರವಾದ ತನ್ನ ಅಧಿಕಾರಸ್ಥಾನವನ್ನು ಹೊಂದಲಿ. ||೩೭||

ದೇವತೆಗಳು ಯಜ್ಞಭಾಗಗಳನ್ನು ಪಡೆಯಲಿ ಮತ್ತು ಅವರ ವಾಸಸ್ಥಾನವಾದ ಸ್ವರ್ಗವನ್ನು ಸೇರಲಿ. ನಿಮಗೆ ಬದುಕಬೇಕೆಂಬ ಇಚ್ಛೆಯು ಪ್ರಬಲವಾಗಿ ಇದ್ದರೆ ದಾನವರೆಲ್ಲರೊಡಗೂಡಿ ಎಲ್ಲಿ ಯಾವಾಗಲೂ ವಾಸವಾಗಿರುವರೋ ಆ ಪಾತಾಳ ಲೋಕಕ್ಕೆ ಬೇಗನೆ ಹೋಗಿರಿ. ||೩೮||

ಹಾಗಿಲ್ಲದಿದ್ದರೆ ನಿಮ್ಮ ನಿಮ್ಮ ಸಾಮರ್ಥ್ಯವನ್ನು ಅವಲಂಬಿಸಿಕೊಂಡು, ಮರಣವನ್ನು ಉಂಟುಮಾಡುವುದಾಗಿರುವ ಯುದ್ಧವನ್ನೇ ಮಾಡಬೇಕೆಂಬ ಇಚ್ಛೆಯಿದ್ದಲ್ಲಿ ಆಗ ಯುದ್ಧಕ್ಕೆ ಬನ್ನಿರಿ. ನನ್ನ ಜೊತೆಯಲ್ಲಿ ಅವತರಿಸಿ ನನ್ನಂತೆ ಆರ್ಭಟಿಸುತ್ತಿರುವ ಶಕ್ತಿಗಳು ನಿಮ್ಮ ಮಾಂಸದಿಂದ ತೃಪ್ತಿಯನ್ನು ಹೊಂದಲಿ. ಎಂದು ದಾನವರಿಗೆ ಕಡೆಯ ಎಚ್ಚರಿಕೆಯನ್ನು ಕೊಟ್ಟು ಬರಬೇಕೆಂದು ಕೋರಿದಳು. ||೩೯||

ವ್ಯಾಸಋಷಿಯು ಹೇಳಿದನು—ಆ ಚಂಡಿಕಾದೇವಿಯ ಮಾತನ್ನು ಕೇಳಿ ತ್ರಿಶೂಲವನ್ನು ಧರಿಸಿರುವ ಶ್ರೀಶಿವನು ಜಾಗ್ರತೆಯಿಂದ ಹೋಗಿ, ಸಭೆಯಲ್ಲಿ ಕೂತುಕೊಂಡಿದ್ದ ದೈತ್ಯರಾಜನಾದ ಶುಂಭನನ್ನು ಕುರಿತು ಹೀಗೆ ಹೇಳಿದನು. ||೪೦||

॥ ಶಿವ ಉವಾಚ ॥

ರಾಜನ್ದೂತೋಽಹಮಂಬಾಯಾಸ್ತ್ರಿಪುರಾಂತಕರೋ ಹರಃ ॥೪೧॥

ತ್ವತ್ಸಕಾಶಮಿಹಾಽಽಯಾತೋ ಹಿತಂ ಕರ್ತುಂ ತವಾಖಿಲಂ ।
ತ್ಯಕ್ತ್ವಾ ಸ್ವರ್ಗಂ ತಥಾ ಭೂಮಿಂ ಯೂಯಂ ಗಚ್ಛತ ಸತ್ವರಂ ॥೪೨॥

ಪಾತಾಲಂ ಯತ್ರ ಪ್ರಹ್ಲಾದೋ ಬಲಿಶ್ಚ ಬಲಿನಾಂ ವರಃ ।
ಅಥವಾ ಮರಣೇಚ್ಛಾ ಚೇತ್ತರ್ಹ್ಯಾಽಽಗಚ್ಛತ ಸತ್ವರಂ ॥೪೩॥

ಸಂಗ್ರಾಮೇ ವೋ ಹನಿಷ್ಯಾಮಿ ಸರ್ವಾನೇವಾಹಮಾಶು ವೈ ।
ಇತ್ಯುವಾಚ ಮಹಾರಾಜ್ಞೀ ಯುಷ್ಮತ್ಕಲ್ಯಾಣಹೇತವೇ ॥೪೪॥

॥ ವ್ಯಾಸ ಉವಾಚ ॥

ಇತಿ ದೈತ್ಯವರಾನ್ದೇವೀವಾಕ್ಯಮಮೃತಸನ್ನಿಭಂ ।
ಹಿತಕೃಚ್ಛ್ರಾವಯಿತ್ವಾ ಸ ಪ್ರತ್ಯಾಯಾತಶ್ಚ ಶೂಲಭೃತ್ ॥೪೫॥

---

ಶಿವನು ಹೇಳಿದನು—ಎಲೈ ರಾಜನೇ, ನಾನು ತ್ರಿಪುರಗಳನ್ನು ನಾಶಮಾಡಿದವನಾದ ಹರನು. ಅಂಬಿಕಾದೇವಿಯ ದೂತನಾಗಿ ನಿನಗೆ ಸರ್ವವಿಧದಲ್ಲಿಯೂ ಹಿತವನ್ನು ಮಾಡುವುದಕ್ಕಾಗಿ ನಿನ್ನ ಸಮೀಪಕ್ಕೆ ಬಂದಿರುತ್ತೇನೆ. ॥೪೧॥

ನೀವು ಸ್ವರ್ಗವನ್ನೂ ಭೂಮಿಯನ್ನೂ ಸಹ ಬಿಟ್ಟು ಬೇಗನೆ, ಶಕ್ತಿಯುಳ್ಳವರೆಲ್ಲರಿಗೂ ಶ್ರೇಷ್ಠರಾದ ಬಲಿಯೂ, ಪ್ರಹ್ಲಾದನೂ ಸಹ ಎಲ್ಲಿ ವಾಸಮಾಡಿಕೊಂಡಿರುವರೋ, ಆ ಪಾತಾಳ ಲೋಕಕ್ಕೆ ನಡೆಯಿರಿ. ॥೪೨॥

ಹೀಗೆ ನನ್ನ ಮಾತಿನಂತೆ ಪಾತಾಳ ಲೋಕಕ್ಕೆ ಹೋಗಲು ಇಚ್ಛೆಯಿಲ್ಲದೆ, ಜಾಗ್ರತೆಯಾಗಿ ಸಾಯಬೇಕೆಂಬ ಇಚ್ಛೆಯೇ ಇದ್ದರೆ, ಯುದ್ಧಕ್ಕಾಗಿ ಬನ್ನಿರಿ. ನಾನು ಬೇಗನೆ ನಿಮ್ಮೆಲ್ಲರನ್ನೂ ಯುದ್ಧದಲ್ಲಿ ನಾಶಮಾಡುವೆನು. ಎಂಬುದಾಗಿ ಮಹಾರಾಣಿಯಾದ ಅಂಬಿಕಾದೇವಿಯು ನಿಮ್ಮ ಕ್ಷೇಮಕ್ಕಾಗಿಯೇ ಹೀಗೆ ಹೇಳಿರುವಳು.॥೪೩-೪೪॥

ವ್ಯಾಸಋಷಿಯು ಹೇಳಿದನು—ತ್ರಿಶೂಲಾಯುಧವನ್ನು ಧರಿಸಿರುವ ಶ್ರೀ ಶಿವನು ರಾಕ್ಷಸರಿಗೆ ಹಿತವನ್ನುಂಟುಮಾಡುವ ಅಮೃತಕ್ಕೆ ಸಮಾನವಾದ, ದೇವಿಯ ಈ ಬುದ್ಧಿವಾದದ ಮಾತನ್ನು ಆ ಶ್ರೇಷ್ಠರಾದ ರಾಕ್ಷಸರಿಗೆ ತಿಳಿಯಪಡಿಸಿ, ತಾನು ಹಿಂತಿರುಗಿ ಬಂದನು. ॥೪೫॥

ಯಯಾಽಸೌ ಪ್ರೇರಿತಃ ಶಂಭುರ್ದೂತತ್ವೇ ದಾನವಾನ್ಪ್ರತಿ ।
ಶಿವದೂತೀತಿ ವಿಖ್ಯಾತಾ ಜಾತಾ ತ್ರಿಭುವನೇಽಖಿಲೇ ॥೪೬॥

ತೇಽಪಿ ಶ್ರುತ್ವಾ ವಚೋ ದೇವ್ಯಾಃ ಶಂಕರೋಕ್ತಂ ತು ದುಷ್ಕರಂ ।
ಯುದ್ಧಾಯ ನಿರ್ಯಯುಃ ಶೀಘ್ರಂ ದಂಶಿತಾಃ ಶಸ್ತ್ರಪಾಣಯಃ ॥೪೭॥

ತರಸಾ ರಣಮಾಗತ್ಯ ಚಂಡಿಕಾಂ ಪ್ರತಿ ದಾನವಾಃ ।
ನಿರ್ಜಘ್ನುಶ್ಚ ಶರೈಸ್ತೀಕ್ಷ್ಣೈಃ ಕರ್ಣಾಕೃಷ್ಟೈಃ ಶಿಲಾಶಿತೈಃ ॥೪೮॥

ಕಾಲಿಕಾ ಶೂಲಪಾತೈಸ್ತಾನ್ ಗದಾಶಕ್ತಿವಿದಾರಿತಾನ್ ।
ಕುರ್ವಂತೀ ವ್ಯಚರತ್ತತ್ರ ಭಕ್ಷಯಂತೀ ಚ ದಾನವಾನ್ ॥೪೯॥

ಕಮಂಡಲುಜಲಾಕ್ಷೇಪಗತಪ್ರಾಣಾನ್ಮಹಾಬಲಾನ್ ।
ಬ್ರಹ್ಮಾಣೀ ಚಾಕರೋತ್ತತ್ರ ದಾನವಾನ್ ಸಮರಾಂಗಣೇ ॥೫೦॥

---

ಯಾವ ದೇವಿಯಿಂದ ಪ್ರೇರಿತನಾಗಿ ಶಿವನು ದಾನವರಿಗೆ ದೇವಿಯ ಸಂದೇಶವನ್ನು ತಿಳಿಸಲು ದೂತನಾಗಿ ಹೋದನೋ, ಆ ಕಾರಣದಿಂದ ಮೂರು ಲೋಕದಲ್ಲಿಯೂ ಈ ದೇವಿಗೆ ಶಿವದೂತೀ ಎಂಬುದಾಗಿ ಹೆಸರಾಯಿತು. ||೪೬||

ಆ ರಾಕ್ಷಸರೂ ಕೂಡ ಶಂಕರನು ಹೇಳಿದ ದೇವಿಯ ವಾಕ್ಯವನ್ನು ಕೇಳಿ, ಮರ್ಯಾದೆ ಮೀರುವ ಆ ಮಾತಿನಂತೆ ಪಾತಾಳಲೋಕಕ್ಕೆ ಹೋಗುವುದು ದುಃಖ ಕಷ್ಟಗಳನ್ನುಂಟುಮಾಡುವುದಾಗಿರುವುದೆಂದು ತಿಳಿದು, ಹಾಗೆ ಮಾಡಲು ಒಪ್ಪದೆ ಆಯುಧಗಳನ್ನು ಹಿಡಿದುಕೊಂಡು ಬೇಗನೆ ಯುದ್ಧಕ್ಕಾಗಿ ಹೊರಟರು. ||೪೭||

ಕಾಳಗಕ್ಕಾಗಿ ಹೊರಟ ರಾಕ್ಷಸರು ಬೇಗನೆ ಯುದ್ಧರಂಗಕ್ಕೆ ಬಂದು ಚಂಡಿಕಾ ದೇವಿಯನ್ನು ಕಲ್ಲಿನಂತೆ ಕಠಿನವಾಗಿರುವ ಬಾಣಗಳನ್ನು ಕಿವಿಯ ವರೆಗೂ ಎಳೆದು ಬಿಟ್ಟು ಹೊಡೆದರು. ||೪೮||

ಕಾಲಿಕಾದೇವಿಯು ಗದಾಯುಧ, ಶೂಲ ಇವುಗಳಿಂದ ಆ ರಾಕ್ಷಸರನ್ನು ಸೀಳಿದಳು, ಮತ್ತು ಅನೇಕರಾದ ರಾಕ್ಷಸರನ್ನು ತಿನ್ನುತ್ತಾ ಯುದ್ಧರಂಗದಲ್ಲಿ ತಿರುಗುತ್ತಿದ್ದಳು. ||೪೯||

ಬ್ರಹ್ಮಾಣೀ ಎಂಬ ದೇವತೆಯು ಆ ಯುದ್ಧರಂಗದಲ್ಲಿ ಬಹಳ ಬಲಿಷ್ಠರಾದ ರಾಕ್ಷಸರನ್ನು ತನ್ನ ಕಮಂಡಲುವಿನ ನೀರನ್ನು ಎರಚಿ ಅದರಿಂದ ಅವರ ಪ್ರಾಣಗಳು ಹೋಗುವಂತೆ ಮಾಡುತ್ತಿದ್ದಳು. ||೫೦||

ಮಾಹೇಶ್ವರೀ ವೃಷಾರೂಢಾ ತ್ರಿಶೂಲೇನಾತಿರಂಹಸಾ ।
ಜಘಾನ ದಾನವಾನ್ಸಂಖ್ಯೇ ಪಾತಯಾಮಾಸ ಭೂತಲೇ ॥೫೧॥

ವೈಷ್ಣವೀ ಚಕ್ರಪಾತೇನ ಗದಾಪಾತೇನ ದಾನವಾನ್ ।
ಗತಪ್ರಾಣಾಂಶ್ಚಕಾರಾಶು ಚೋತ್ತಮಾಂಗವಿವರ್ಜಿತಾನ್ ॥೫೨॥

ಐಂದ್ರೀ ವಜ್ರಪ್ರಹಾರೇಣ ಪಾತಯಾಮಾಸ ಭೂತಲೇ ।
ಐರಾವತಕರಾಘಾತಪೀಡಿತಾನ್ ದೈತ್ಯಪುಂಗವಾನ್ ॥೫೩॥

ವಾರಾಹೀ ತುಂಡಘಾತೇನ ದಂಷ್ಟ್ರಾಗ್ರಪಾತನೇನ ಚ ।
ಜಘಾನ ಕ್ರೋಧಸಂಯುಕ್ತಾ ಶತಶೋ ದೈತ್ಯದಾನವಾನ್ ॥೫೪॥

ನಾರಸಿಂಹೀ ನಖೈಸ್ತೀವ್ರೈರ್ದಾರಿತಾನ್ ದೈತ್ಯಪುಂಗವಾನ್ ।
ಭಕ್ಷಯಂತೀ ಚಚಾರಾಜೌ ನನಾದ ಚ ಮುಹುರ್ಮುಹುಃ ॥೫೫॥

---

ಮಹೇಶ್ವರನ ಸಂಬಂಧವಾದ ಶಕ್ತಿಯು ಗೂಳಿಯನ್ನು ವಾಹನವನ್ನಾಗಿ ಮಾಡಿಕೊಂಡು ಬಹಳ ವೇಗವಾದ ತ್ರಿಶೂಲಾಯುಧದಿಂದ ರಾಕ್ಷಸರನ್ನು ಕೊಂದು ಯುದ್ಧಭೂಮಿಯಲ್ಲಿ ಕೆಡವಿದಳು. ॥೫೧॥

ವೈಷ್ಣವೀದೇವಿಯು ತನ್ನ ಚಕ್ರಾಯುಧದಿಂದಲೂ, ಗದಾಯುಧದಿಂದಲೂ ಸಹ ರಾಕ್ಷಸರನ್ನು ತಲೆಯಿಲ್ಲದವರನ್ನು ಮಾಡಿ ಬೇಗನೆ ಅವರ ಪ್ರಾಣಗಳನ್ನು ನಾಶ ಮಾಡಿದಳು. ॥೫೨॥

(ಐಂದ್ರಿಯು) ಇಂದ್ರನ ಸಂಬಂಧವಾದ ಶಕ್ತಿದೇವಿಯು ಐರಾವತದ ಸೊಂಡಲಿನ ಏಟನಿಂದ ಸಂಕಟವುಳ್ಳ ರಾಕ್ಷಸರನ್ನು ವಜ್ರಾಯುಧದ ಏಟನಿಂದ ಭೂಮಿಗೆ ಬೀಳುವಂತೆ ಮಾಡಿದಳು. ॥೫೩॥

ವಾರಾಹೀದೇವಿಯು ಕೋಪದಿಂದ ಕೂಡಿದವಳಾಗಿ, ತನ್ನ ಮುಖದ ಮತ್ತು ಕೋರೆದಾಡೆಯ ಏಟನಿಂದ ದೈತ್ಯರನ್ನೂ ಮತ್ತು ದಾನವರನ್ನೂ ಅನೇಕರನ್ನು ಕೊಂದಳು. ॥೫೪॥

ನರಸಿಂಹಮೂರ್ತಿಗೆ ಸಂಬಂಧಿಸಿದ ನಾರಸಿಂಹೀ ಎಂಬ ದೇವಿಯು ತನ್ನ ಹರಿತವಾದ ಉಗುರುಗಳಿಂದ ಶ್ರೇಷ್ಠರಾದ ರಾಕ್ಷಸರನ್ನು ಸೀಳಿ ಅವರನ್ನು ಭಕ್ಷಿಸುತ್ತಾ

**ಶಿವದೂತೀ ಸಾಟ್ಟಹಾಸ್ಯೈಃ ಪಾತಯಾಮಾಸ ಭೂತಲೇ ।**
**ತಾಂಶ್ಚ ಖಾದಾsಥ ಚಾಮುಂಡಾ ಕಾಲಿಕಾ ಚ ತ್ವರಾನ್ವಿತಾ ॥೫೬॥**

**ಶಿಖಿಸಂಸ್ಥಾ ಚ ಕೌಮಾರೀ ಕರ್ಣಾಕೃಷ್ಟೈಃ ಶಿಲಾಶಿತೈಃ ।**
**ನಿಜಘಾನ ರಣೇ ಶತ್ರೂನ್ ದೇವಾನಾಂ ಚ ಹಿತಾಯ ವೈ ॥೫೭॥**

**ವಾರುಣೀ ಪಾಶಸಂಬದ್ಧಾನ್ದೈತ್ಯಾನ್ಸಮರಮಸ್ತಕೇ ।**
**ಪಾತಯಾಮಾಸ ತತ್ಪೃಷ್ಠೇ ಮೂರ್ಚ್ಛಿತಾನ್ ಗತಚೇತನಾನ್ ॥೫೮॥**

**ಏವಂ ಮಾತೃಗಣೇನಾಜಾವತಿವೀರ್ಯಪರಾಕ್ರಮಂ ।**
**ಮರ್ದಿತಂ ದಾನವಂ ಸೈನ್ಯಂ ಪಲಾಯನಪರಂ ಹ್ಯಭೂತ್ ॥೫೯॥**

---

ಯುದ್ಧರಂಗದಲ್ಲಿ ಓಡಾಡುತ್ತಿದ್ದಳು. ಮತ್ತು ಆಗಾಗ್ಗೆ ಅಟ್ಟಹಾಸವನ್ನೂ ಮಾಡುತ್ತಿದ್ದಳು. ॥೫೫॥

ಶಿವದೂತೀ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರುವ ಚಂಡಿಕಾದೇವಿಯು, ತನ್ನ ಅಟ್ಟಹಾಸ ಧ್ವನಿಯಿಂದಲೇ ರಾಕ್ಷಸರನ್ನು ಭೂಮಿಯಲ್ಲಿ ಬೀಳುವಂತೆ ಮಾಡಿದಳು. ಆ ಮೇಲೆ ಬಿದ್ದ ರಾಕ್ಷಸರೆಲ್ಲರನ್ನೂ ಬೇಗಬೇಗನೆ ಚಾಮುಂಡಿಕಾದೇವಿಯೂ, ಕಾಳಿಕಾದೇವಿಯೂ ಸಹ ಭಕ್ಷಿಸುತ್ತಿದ್ದರು. ॥೫೬॥

ಕೌಮಾರೀದೇವಿಯು ಮಯೂರಾರೂಢಳಾಗಿ ಬಂದು ಯುದ್ಧದಲ್ಲಿ ಕಿವಿಯವರೆಗೂ ಎಳೆದು ಬಿಟ್ಟ ಶಿಲಾಶಿತವಾದ ಬಾಣಗಳಿಂದ ದೇವತೆಗಳ ಹಿತಕ್ಕಾಗಿ ಅವರ ಶತ್ರುಗಳನ್ನು ಕೊಂದುಹಾಕಿದಳು. ॥೫೭॥

ವರುಣದಿಕ್ಪಾಲನಿಗೆ ಸಂಬಂಧಪಟ್ಟ ವಾರುಣೀದೇವಿಯು ತನ್ನ ಪಾಶಾಯುಧದ ಕಟ್ಟಿನಿಂದ ಯುದ್ಧರಂಗದಲ್ಲಿ ರಾಕ್ಷಸರನ್ನು ಮೂರ್ಛೆಗೊಳಿಸಿ, ಪ್ರಾಣಹೋಗಿ ಭೂಮಿಯಲ್ಲಿ ಬೀಳುವಂತೆ ಮಾಡಿದಳು. ॥೫೮॥

ಹೀಗೆ ಬ್ರಾಹ್ಮಿಯೇ ಮೊದಲಾದ ಸಪ್ತ ಮಾತೃಗಳಾದ ದೇವಿಯರು ಯುದ್ಧದಲ್ಲಿ ಹೆಚ್ಚಾದ ಪರಾಕ್ರಮವೂ ಶಕ್ತಿಯೂ ಉಳ್ಳದ್ದಾದ ದಾನವರ ಸೇನೆಯನ್ನು ನಾಶಮಾಡುತ್ತಿರಲು, ಉಳಿದ ಸೇನೆಯು ಏಟನ್ನು ತಿಂದು ನೊಂದು ಓಡುವುದರಲ್ಲಿ ಆಸಕ್ತಿಯುಳ್ಳದ್ದಾಯಿತು. ॥೫೯॥

**ಬುಂಬಾರವಸ್ತು ಸುಮಹಾನಭೂತ್ತತ್ರ ಬಲಾರ್ಣವೇ ।**
**ಪುಷ್ಪವೃಷ್ಟಿಂ ತದಾ ದೇವಾಶ್ಚಕ್ರುರ್ದೇವ್ಯಾ ಗಣೋಪರಿ ॥೬೦॥**

**ತಚ್ಛ್ರುತ್ವಾ ನಿನದಂ ಘೋರಂ ಜಯಶಬ್ದಂ ಚ ದಾನವಾಃ ।**
**ರಕ್ತಬೀಜಶ್ಚುಕೋಪಾಶು ದೃಷ್ಟ್ವಾ ದೈತ್ಯಾನ್ಪಲಾಯಿತಾನ್ ॥೬೧॥**

**ಗರ್ಜಮಾನಾಂಸ್ತಥಾ ದೇವಾನ್ವೀಕ್ಷ್ಯ ದೈತ್ಯೋ ಮಹಾಬಲಃ ।**
**ರಕ್ತಬೀಜಸ್ತು ತೇಜಸ್ವೀ ರಣಮಧ್ಯಾಯಯೌ ತದಾ ॥೬೨॥**

**ಸಾಯುಧೋ ರಥಸಂವಿಷ್ಟಃ ಕುರ್ವಜ್ಜ್ಯಾಶಬ್ದಮುದ್ಧುತಂ ।**
**ಆಜಗಾಮ ತದಾ ದೇವೀಂ ಕ್ರೋಧರಕ್ತೇಕ್ಷಣೋದ್ಯತಃ ॥೬೩॥**

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ಅಷ್ಟಾವಿಂಶೋಽಧ್ಯಾಯಃ**

---

ಆ ರಣಭೂಮಿಯಲ್ಲಿ ಸಮುದ್ರದಂತಿರುವ ರಾಕ್ಷಸರ ಸೇನೆಯಲ್ಲಿ ಮುಖವಾದ್ಯ ಶಬ್ದವು ಬಹಳವಾಗಿ ಉಂಟಾಯಿತು. ಆಗ ದೇವತೆಗಳು ಬ್ರಾಹ್ಮಿಯೇ ಮೊದಲಾದ ದೇವಿಯರ ಗುಂಪಿನ ಮೇಲೆ ಹೂವಿನ ಮಳೆಯನ್ನು ಕರೆದರು. ॥೬೦॥

ರಕ್ತಬೀಜನೆಂಬ ರಾಕ್ಷಸನಾಯಕನು ಹೀಗೆ ಓಡುತ್ತಿರುವ ರಾಕ್ಷಸರ ಭಯಂಕರ ವಾದ ಶಬ್ದವನ್ನೂ, ದೇವತೆಗಳು ಮಾಡುತ್ತಿರುವ ಜಯಕಾರ ಧ್ವನಿಯನ್ನೂ ಸಹ ಕೇಳಿ ಕೋಪಗೊಂಡನು. ॥೬೧॥

ಬಹಳ ಬಲವುಳ್ಳವನಾದ ಪರಾಕ್ರಮಶಾಲಿಯಾದ ರಕ್ತಬೀಜಾಸುರನು ದೇವತೆಗಳು ಆಗ ಗರ್ಜಿಸುತ್ತಿರುವುದನ್ನು ನೋಡಿ ಯುದ್ಧಕ್ಕಾಗಿ ಬಂದನು. ॥೬೨॥

ರಕ್ತಬೀಜಾಸುರನು ಆಗ ಆಯುಧವನ್ನು ಹಿಡಿದುಕೊಂಡು ರಥದಲ್ಲಿ ಕುಳಿತು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ಪ್ರಯತ್ನಶೀಲನಾಗಿ ಧನುಸ್ಸಿನ ಧ್ವನಿಯನ್ನು ಇತರರಿಗೆ ಆಶ್ಚರ್ಯವಾಗುವಂತೆ ಮಾಡುತ್ತಾ ದೇವಿಯನ್ನು ಎದುರಿಸಿ ಯುದ್ಧ ಮಾಡುವುದಕ್ಕೋಸ್ಕರ ಬಂದನು. ॥೬೩॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಏಕೋನತ್ರಿಂಶೋಽಧ್ಯಾಯಃ ||

### ಇಪ್ಪತ್ತೊಂಬತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ವರದಾನಮಿದಂ ತಸ್ಯ ದಾನವಸ್ಯ ಶಿವಾರ್ಪಿತಂ ।**
**ಅತ್ಯದ್ಭುತತರಂ ರಾಜನ್ ಶೃಣು ತತ್ಪ್ರಬ್ರವೀಮ್ಯಹಂ ॥೧॥**

**ತಸ್ಯ ದೇಹಾದ್ರಕ್ತಬಿಂದುರ್ಯದಾ ಪತತಿ ಭೂತಲೇ ।**
**ಸಮುತ್ಪತಂತಿ ದೈತೇಯಾಸ್ತದ್ರೂಪಾಸ್ತತ್ಪರಾಕ್ರಮಾಃ ॥೨॥**

**ಅಸಂಖ್ಯಾತಾ ಮಹಾವೀರ್ಯಾ ದಾನವಾ ರಕ್ತಸಂಭವಾಃ ।**
**ಪ್ರಭವಂತ್ವಿತಿ ರುದ್ರೇಣ ದತ್ತೋಽಸ್ತ್ಯತ್ಯದ್ಭುತೋ ವರಃ ॥೩॥**

---

ವ್ಯಾಸಋಷಿಯು ಹೇಳಿದನು--ಎಲೈ ರಾಜನೇ, ಕೇಳು. ಆ ರಕ್ತಬೀಜನೆಂಬ ಅಸುರನಿಗೆ ಶಿವನು ಕೊಟ್ಟಿರುವ ಬಹಳ ಆಶ್ಚರ್ಯಕರವಾದ ವರವನ್ನು ನಾನು ಹೇಳುವೆನು. ||೧||

ಮೊದಲು ರಂಭಾಸುರನೆಂಬುವನು ಶಿವನನ್ನು ಆರಾಧಿಸಿ ವರವನ್ನು ಪಡೆದಿದ್ದನು. ಅವನೇ ಈಗ ರಕ್ತಬೀಜನೆಂಬ ಹೆಸರಿನಿಂದ ಹುಟ್ಟಿ ಪುನಃ ಶಿವನನ್ನು ತಪಸ್ಸಿನಿಂದ ಸಂತೋಷಪಡಿಸಿ ಯಾರೂ ಪಡೆಯದಿರುವ ಅತ್ಯಾಶ್ಚರ್ಯಕರವಾದ ವರವನ್ನು ಶಿವನಿಂದ ಪಡೆದನು. ಇವನ ಶರೀರದಿಂದ ರಕ್ತಬಿಂದುವು ಯಾವಾಗ ಭೂಮಿಯಲ್ಲಿ ಬೀಳುವುದೋ ಆ ಕ್ಷಣದಲ್ಲಿಯೇ ಆಕಾರದಲ್ಲೂ ಪರಾಕ್ರಮದಲ್ಲೂ ಇವನಂತೆಯೇ ಇರುವ ರಾಕ್ಷಸರು ಹುಟ್ಟುವರು ! ||೨||

ಎಲೈ ರಕ್ತಬೀಜಾಸುರನೇ, ನಿನ್ನ ರಕ್ತಬಿಂದುವಿನಿಂದ ಹುಟ್ಟಿದ ರಾಕ್ಷಸರು ಅಸಂಖ್ಯಾತರಾಗಿಯೂ, ಹೆಚ್ಚಾದ ಶಕ್ತಿಯುಳ್ಳವರಾಗಿಯೂ ಇರಲಿ! ಎಂಬುದಾಗಿ

**ಸ ತೇನ ವರದಾನೇನ ದರ್ಪಿತಃ ಕ್ರೋಧಸಂಯುತಃ ।**
**ಅಭ್ಯಗಾತ್ತರಸಾ ಸಂಖ್ಯೇ ಹಂತುಂ ದೇವೀಂ ಸಕಾಲಿಕಾಂ ॥೪॥**

**ಸ ದೃಷ್ಟ್ವಾ ವೈಷ್ಣವೀಂ ಶಕ್ತಿಂ ಗರುಡೋಪರಿ ಸಂಸ್ಥಿತಾಂ ।**
**ಶಕ್ತ್ಯಾ ಜಘಾನ ದೈತ್ಯೇಂದ್ರಸ್ತಾಂ ವೈ ಕಮಲಲೋಚನಾಂ ॥೫॥**

**ಗದಯಾ ವಾರಯಾಮಾಸ ಶಕ್ತಿಃ ಸಾ ಶಕ್ತಿಸಂಯುತಾ ।**
**ಅತಾಡಯಚ್ಚ ಚಕ್ರೇಣ ರಕ್ತಬೀಜಂ ಮಹಾಸುರಂ ॥೬॥**

**ರಥಾಂಗಾಹತದೇಹಾತ್ತು ಬಹು ಸುಸ್ರಾವ ಶೋಣಿತಂ ।**
**ವಜ್ರಾಹತಗಿರೇಃ ಶೃಂಗಾನ್ನಿರ್ಝರಾ ಇವ ಗೈರಿಕಾಃ ॥೭॥**

**ಯತ್ರ ಯತ್ರ ಯದಾ ಭೂಮೌ ಪತಂತಿ ರಕ್ತಬಿಂದವಃ ।**
**ಸಮುತ್ತಸ್ಥುಸ್ತದಾಕಾರಾಃ ಪುರುಷಾಶ್ಚ ಸಹಸ್ರಶಃ ॥೮॥**

---

ಬಹಳ ಆಶ್ಚರ್ಯಕರವಾದ ವರವು ರುದ್ರನಿಂದ ಈ ರಾಕ್ಷಸನಿಗೆ ಕೊಡಲ್ಪಟ್ಟಿರುತ್ತದೆ! ॥೩॥

ಆ ರಕ್ತಬೀಜಾಸುರನು ಶಿವನು ಕೊಟ್ಟಿರುವ ಆ ವರದಿಂದ ಅಹಂಕಾರಪಡುತ್ತಾ ಕೋಪವುಳ್ಳವನಾಗಿ ದೇವಿಯನ್ನೂ ಕಾಳಿಕಾದೇವಿಯನ್ನೂ ಸಹ ಹೊಡೆದು ಕೊಲ್ಲಲು ಬೇಗನೆ ಬಂದನು. ॥೪॥

ಆ ರಾಕ್ಷಸನು ಗರುಡವಾಹನದ ಮೇಲೆ ಕೂತುಕೊಂಡಿರುವ ಕಮಲದಂತಿರುವ ಕಣ್ಣುಳ್ಳ ವೈಷ್ಣವೀಶಕ್ತಿಯನ್ನು ನೋಡಿ ತನ್ನ ಶಕ್ತ್ಯಾಯುಧದಿಂದ ಹೊಡೆದನು. ॥೫॥

ಸಾಮರ್ಥ್ಯದಿಂದ ಕೂಡಿರುವ ಆ ವೈಷ್ಣವೀಶಕ್ತಿಯು ಆ ರಾಕ್ಷಸನ ಶಕ್ತ್ಯಾಯುಧದ ಏಟನ್ನು ತನ್ನ ಗದೆಯಿಂದ ತಪ್ಪಿಸಿಕೊಂಡು, ತನ್ನ ಚಕ್ರಾಯುಧದಿಂದ ದೊಡ್ಡ ರಕ್ಕಸನಾದ ಆ ರಕ್ತಬೀಜನನ್ನು ಹೊಡೆದಳು. ॥೬॥

ಇಂದ್ರನ ವಜ್ರಾಯುಧದಿಂದ ಏಟುಬಿದ್ದ ಬೆಟ್ಟದ ಶಿಖರದಿಂದ ಗೈರಿಕಾದಿ ಧಾತುಗಳುಳ್ಳ ಪ್ರವಾಹಗಳು ಹರಿಯುವಹಾಗೆ, ಚಕ್ರಾಯುಧದ ಪೆಟ್ಟಿನಿಂದ ಗಾಯಗೊಂಡ ಅವನ ಶರೀರದಿಂದ ಬಹಳ ರಕ್ತವು ಸುರಿಯುತ್ತಲಿತ್ತು. ॥೭॥

ಭೂಮಿಯಮೇಲೆ ಆ ರಕ್ತಬೀಜಾಸುರನ ರಕ್ತದ ಹನಿಗಳು ಎಲ್ಲೆಲ್ಲಿ ಬಿದ್ದುವೋ ಅಲ್ಲೆಲ್ಲ ಆ ಕ್ಷಣದಲ್ಲಿಯೇ ಅವನಂತಹ ಆಕಾರವೂ ಪರಾಕ್ರಮವೂ ಉಳ್ಳ ರಾಕ್ಷಸರು ಸಾವಿರಗಟ್ಟಲೆಯಾಗಿ ಉದ್ಭವಿಸಿದರು! ॥೮॥

ಐಂದ್ರೀ ತಮಸುರಂ ಘೋರಂ ವಜ್ರೇಣಾಭಿಜಘಾನ ಚ ।
ರಕ್ತಬೀಜಂ ಕ್ರುಧಾವಿಷ್ಟಾ ನಿಃಸಸಾರ ಚ ಶೋಣಿತಂ ॥೯॥

ತತಸ್ತತ್ಕ್ಷತಜಾಜ್ಜಾತಾ ರಕ್ತಬೀಜಾ ಹ್ಯನೇಕಶಃ ।
ತದ್ವೀರ್ಯಾಶ್ಚ ತದಾಕಾರಾಃ ಸಾಯುಧಾ ಯುದ್ಧದುರ್ಮದಾಃ ॥೧೦॥

ಬ್ರಹ್ಮಾಣೀ ಬ್ರಹ್ಮದಂಡೇನ ಕುಪಿತಾ ಹ್ಯಹನದ್ಭೃಶಂ।
ಮಾಹೇಶ್ವರೀ ತ್ರಿಶೂಲೇನ ದಾರಯಾಮಾಸ ದಾನವಂ ॥೧೧॥

ನಾರಸಿಂಹೀ ನಖಾಘಾತೈಸ್ತಂ ವಿವ್ಯಾಧ ಮಹಾಸುರಂ ।
ಅಹನತ್ತುಂಡಘಾತೇನ ಕ್ರುದ್ಧಾ ತಂ ರಾಕ್ಷಸಾಧಮಂ ॥೧೨॥

---

ಹಾಗೆಯೇ ಇಂದ್ರನ ಶಕ್ತಿಯಾದ ಇಂದ್ರಾಣೀ ದೇವಿಯೂ ಕ್ರೂರನಾದ ಆ ರಕ್ತಬೀಜಾಸುರನನ್ನು ವಜ್ರಾಯುಧದಿಂದ ಹೊಡೆದಳು. ಕೋಪದಿಂದ ಕೂಡಿ ಕೊಂಡಿರುವ ಆ ದೇವಿಯು ಆವೇಶದಿಂದ ಹೊಡೆದ ಏಟಿನಿಂದ ಉಂಟಾದ ಗಾಯ ದಿಂದಲೂ ರಕ್ತವು ಸುರಿಯಿತು. ||೯||

ಅನಂತರದಲ್ಲಿ ಅವನ ರಕ್ತದಿಂದ ಅವನಷ್ಟು ಶಕ್ತಿಯುಳ್ಳ, ಅವನಂತೆ ಆಕಾರ ವುಳ್ಳ, ಆಯುಧಗಳನ್ನು ಹಿಡಿದುಕೊಂಡು ಯುದ್ಧ ಮಾಡುವುದರಲ್ಲಿ ತುಂಬ ಶಕ್ತಿ ಯುಳ್ಳವರಾಗಿ ಇರುವ ಅನೇಕ ರಕ್ತಬೀಜಾಸುರರು ಹುಟ್ಟಿದರು. ||೧೦||

ಬ್ರಹ್ಮನ ಶಕ್ತಿಯಾದ ಬ್ರಹ್ಮಾಣೀ ದೇವಿಯೂ ಕೋಪವುಳ್ಳವಳಾಗಿ ಆ ರಕ್ಕಸನನ್ನು ಬ್ರಹ್ಮದಂಡಾಯುಧದಿಂದ ತುಂಬ ಬಲವಾಗಿ ಹೊಡೆದಳು. ಮಹೇಶ್ವ ರನ ಶಕ್ತಿಯಾದ ಮಾಹೇಶ್ವರೀದೇವಿಯೂ ತನ್ನ ತ್ರಿಶೂಲಾಯುಧದಿಂದ ಆ ರಾಕ್ಷಸ ನನ್ನು ತಿವಿದಳು. ||೧೧||

ನರಸಿಂಹ ಶಕ್ತಿಯಾದ ನಾರಸಿಂಹೀ ಎಂಬ ದೇವಿಯೂ ಕೋಪಗೊಂಡು ನೀಚನಾದ ಆ ದೊಡ್ಡ ರಾಕ್ಷಸನನ್ನು ಆ ತನ್ನ ಉಗುರಿನ ಏಟಿನಿಂದಲೂ, ತನ್ನ ಮುಸುಡಿಯ ಏಟಿನಿಂದಲೂ ಶೀಳಿ ಹೊಡೆದಳು. ||೧೨||

ಕೌಮಾರೀ ಚ ತಥಾ ಶಕ್ತ್ಯಾ ವಕ್ಷಸ್ಯೇನಮತಾಡಯತ್ ।
ಸೋಽಪಿ ಕ್ರುದ್ಧಃ ಶರಾಸಾರೈರ್ಬಿಭೇದ ನಿಶಿತೈಶ್ಚ ತಾಃ ॥೧೩॥

ಗದಾಶಕ್ತಿಪ್ರಹಾರೈಸ್ತು ಮಾತೃಃ ಸರ್ವಾಃ ಪೃಥಕ್ಪೃಥಕ್ ।
ಶಕ್ತಯಸ್ತಂ ಶರಾಘಾತೈರ್ವಿವಿಧುಸ್ತತ್ರ ಕೋಪಿತಾಃ ॥೧೪॥

ತಸ್ಯ ಶಸ್ತ್ರಾಣಿ ಚಿಚ್ಛೇದ ಚಂಡಿಕಾ ಸ್ವಶರೈಃ ಶಿತೈಃ ।
ಜಘಾನಾನ್ಯೈಶ್ಚ ವಿಶಿಖೈಸ್ತಂ ದೇವೀ ಕುಪಿತಾ ಭೃಶಂ ॥೧೫॥

ತಸ್ಯ ದೇಹಾಚ್ಚ ಸುಸ್ರಾವ ರುಧಿರಂ ಬಹುಧಾ ತು ಯತ್ ।
ತಸ್ಮಾತ್ತತ್ಸದೃಶಾಃ ಶೂರಾಃ ಪ್ರಾದುರಾಸನ್ಸಹಸ್ರಶಃ ॥೧೬॥

ರಕ್ತಬೀಜೈರ್ಜಗದ್ವ್ಯಾಪ್ತಂ ರುಧಿರೌಘಸಮುದ್ಭವೈಃ ।
ಸನ್ನದ್ಧೈಃ ಸಾಯುಧೈಃ ಕಾಮಂ ಕುರ್ವದ್ಭಿರ್ಯುದ್ಧಮದ್ಭುತಂ ॥೧೭॥

---

ಅದರಂತೆಯೇ ಕೌಮಾರೀದೇವಿಯೂ ತನ್ನ ಶಕ್ತ್ಯಾಯುಧದಿಂದ ಈ ರಾಕ್ಷಸನ ಎದೆಗೆ ಹೊಡೆದಳು. ಅವನೂ ಕೂಡ ಕೋಪಗೊಂಡವನಾಗಿ ಹರಿತವಾದ ಬಾಣಧಾರೆಗಳಿಂದ ಈ ದೇವಿಯರೆಲ್ಲರನ್ನೂ ಭೇದಿಸಿ ಗಾಯಗೊಳಿಸಿದನು. ||೧೩||

ಆ ರಕ್ತಬೀಜಾಸುರನು ಗದಾಯುಧ, ಶಕ್ತ್ಯಾಯುಧ ಇವೇ ಮೊದಲಾದ ಆಯುಧಗಳಿಂದ ಆ ಲೋಕಮಾತೃಗಳೆಲ್ಲರನ್ನೂ ಬೇರೆ ಬೇರೆಯಾಗಿ ಹೊಡೆದನು. ಅದರಿಂದ ಕೆರಳಿದ ಆ ಶಕ್ತಿದೇವತೆಗಳೆಲ್ಲರೂ ಅವನನ್ನು ತಮ್ಮ ತಮ್ಮ ಬಾಣಗಳ ಏಟಿನಿಂದ ಅವನ ಶರೀರವು ಕೊರೆಯುವಂತೆ ಹೊಡೆದರು. ||೧೪||

ಆಗ ಚಂಡಿಕಾದೇವಿಯು ತನ್ನ ಹರಿತವಾದ ಬಾಣಗಳಿಂದ ಅವನ ಆಯುಧಗಳನ್ನು ಕತ್ತರಿಸಿದಳು. ಮತ್ತು ಬಹಳ ಕೋಪವುಳ್ಳವಳಾಗಿ ಇತರ ಬಾಣಗಳಿಂದಲೂ ಅವನನ್ನು ಹೊಡೆದಳು. ||೧೫||

ಹೀಗೆ ಅವನ ದೇಹದಿಂದ ತುಂಬ ರಕ್ತವು ಸುರಿಯಿತು. ಆ ರಕ್ತದಿಂದ ಅವನಿಗೆ ಸಮಾನವಾದ ಆಕಾರವೂ ಬಲವೂ ಉಳ್ಳ ಶೂರರಾದ ರಾಕ್ಷಸರು ಸಾವಿರ ಗಟ್ಟಲೆಯಾಗಿ ಹುಟ್ಟಿದರು. ||೧೬||

ಆಯುಧಗಳನ್ನು ಹಿಡಿದು ಸಿದ್ಧರಾಗಿ ಆಶ್ಚರ್ಯಕರವಾಗಿರುವಂತೆ ಯುದ್ಧವನ್ನು ಮಾಡುತ್ತಿರುವ ರಕ್ತಬೀಜಾಸುರನ ರಕ್ತದಿಂದ ಹುಟ್ಟಿದ ಇತರ ರಾಕ್ಷಸರಿಂದಲೇ ಈ ಲೋಕವೆಲ್ಲವೂ ತುಂಬಿ ಹೋಯಿತು. ||೧೭||

ಪ್ರಹರಂತಶ್ಚ ತಾನ್ದೃಷ್ಟ್ವಾ ರಕ್ತಬೀಜಾನನೇಕಶಃ ।
ಭಯಭೀತಾಃ ಸುರಾಸ್ತ್ರೇಸುರ್ವಿಷಣ್ಣಾಃ ಶೋಕಕರ್ಶಿತಾಃ ॥೧೮॥

ಕಥಮದ್ಯ ಕ್ಷಯಂ ದೈತ್ಯಾ ಗಮಿಷ್ಯಂತಿ ಸಹಸ್ರಶಃ ।
ಮಹಾಕಾಯಾ ಮಹಾವೀರ್ಯಾ ದಾನವಾ ರಕ್ತಸಂಭವಾಃ ॥೧೯॥

ಏಕೈವ ಚಂಡಿಕಾsತ್ರಾಸ್ತಿ ತಥಾ ಕಾಲೀ ಚ ಮಾತರಃ ।
ಏತಾಭಿರ್ದಾನವಾಃ ಸರ್ವೇ ಜೇತವ್ಯಾ ಕಷ್ಟಮೇವ ತತ್ ॥೨೦॥

ನಿಶುಂಭೋ ವಾsಥ ಶುಂಭೋ ವಾ ಸಹಸಾ ಬಲಸಂವೃತಃ ।
ಆಗಮಿಷ್ಯತಿ ಸಂಗ್ರಾಮೇ ತತೋsನರ್ಥೋ ಮಹಾನ್ಭವೇತ್ ॥೨೧॥

॥ ವ್ಯಾಸ ಉವಾಚ ॥

ಏವಂ ದೇವಾ ಭಯೋದ್ವಿಗ್ನಾಶ್ಚಿಂತಾಮಾಪುರ್ಮಹತ್ತರಂ ।
ಯದಾ ತದಾಂಬಿಕಾ ಪ್ರಾಹ ಕಾಲೀಂ ಕಮಲಲೋಚನಾಂ ॥೨೨॥

---

ಅನೇಕರಾದ ರಕ್ತಬೀಜರು ಹಲವು ರೀತಿಯಿಂದ ಹೊಡೆಯುತ್ತಿರುವುದನ್ನು ದೇವತೆಗಳು ನೋಡಿ ಭಯದಿಂದ ತತ್ತರಿಸಿದರು ಮತ್ತು ವ್ಯಸನದಿಂದ ಸೊರಗಿ ಹೋದರು. ॥೧೮॥

ರಕ್ತದಿಂದ ಹುಟ್ಟಿದ ದೊಡ್ಡ ಶರೀರವುಳ್ಳ, ಬಹಳ ಶಕ್ತಿವಂತರಾದ ಸಾವಿರ ಗಟ್ಟಲೆ ಇರುವ ಈ ರಾಕ್ಷಸರು ಹೇಗೆತಾನೇ ನಾಶವನ್ನು ಹೊಂದುವರು? ಎಂದು ದೇವತೆಗಳು ಯೋಚಿಸ ತೊಡಗಿದರು. ॥೧೯॥

ಅಲ್ಲದೆ ಚಂಡಿಕಾದೇವಿಯು ಒಬ್ಬಳೇ ಇರುವಳು. ಹಾಗೆಯೇ ಕಾಳಿಕಾ ದೇವಿಯೂ ಮಾತೃಗಳೂ ಸಹ ಒಬ್ಬೊಬ್ಬರೇ ಇರುವರು. ಈ ರಾಕ್ಷಸರು ಇಷ್ಟು ಜನಗಳನ್ನೂ ಇವರು ಜಯಿಸುವುದೆಂಬುದು ಕಷ್ಟವಾಗಿರುತ್ತದೆ. ॥೨೦॥

ಇಷ್ಟರ ಜೊತೆಗೆ ನಿಶುಂಭನಾಗಲಿ ಶುಂಭನಾಗಲಿ ಬೇಗನೆ ಸೇನಾಸಮೇತನಾಗಿ ಯುದ್ಧಮಾಡಲು ಬಂದರೆ ಆಗ ತುಂಬ ಬಲವಾದ ಕೇಡು ಉಂಟಾಗುವುದು. ॥೨೧॥

ವ್ಯಾಸಋಷಿಯು ಹೇಳಿದನು—ಹೀಗೆ ದೇವತೆಗಳು ಭಯದಿಂದ ಗಾಬರಿಯುಳ್ಳವರಾಗಿ ಬಹಳವಾದ ಆತಂಕದ ಯೋಚನೆಯನ್ನು ಹೊಂದಿದರು. ಆಗ ಕಮಲದ

**ಚಾಮುಂಡೇ ಕುರು ವಿಸ್ತೀರ್ಣಂ ವದನಂ ತ್ವರಿತಾ ಭೃಶಂ ।**
**ಮಚ್ಛಸ್ತ್ರಪಾತಸಂಭೂತಂ ರುಧಿರಂ ಪಿಬ ಸತ್ವರಾ ॥೨೩॥**

**ಭಕ್ಷಯಂತೀ ಚರ ರಣೇ ದಾನವಾನದ್ಯ ಕಾಮತಃ ।**
**ಹನಿಷ್ಯಾಮಿ ಶರೈಸ್ತೀಕ್ಷ್ಣೈರ್ಗದಾಸಿ ಮುಸಲೈಸ್ತಥಾ ॥೨೪॥**

**ತಥಾ ಕುರು ವಿಶಾಲಾಕ್ಷಿ ಪಾನಂ ತದ್ರುಧಿರಸ್ಯ ಚ ।**
**ಬಿಂದುಮಾತ್ರಂ ಯಥಾ ಭೂಮ್ಯಾಂ ನ ಪತೇದಪಿ ಸಾಂಪ್ರತಂ ॥೨೫॥**

**ಭಕ್ಷ್ಯಮಾಣಾಸ್ತದಾ ದೈತ್ಯಾ ನ ಚೋತ್ಪತ್ಸ್ಯಂತಿ ಚಾಪರೇ ।**
**ಏವಮೇಷಾಂ ಕ್ಷಯೋ ನೂನಂ ಭವಿಷ್ಯತಿ ನ ಚಾನ್ಯಥಾ ॥೨೬॥**

---

ಹಾಗೆ ಇರುವ ಕಣ್ಣುಗಳುಳ್ಳ ಕಾಳಿಕಾದೇವಿಯನ್ನು ಕುರಿತು ಅಂಬಿಕಾದೇವಿಯು ಹೇಳಿದಳು. ॥೨೨॥

ಓ ಚಾಮುಂಡಿಕಾ ದೇವಿಯೇ, ನೀನು ಜಾಗ್ರತೆಯಾಗಿ ನಿನ್ನ ಬಾಯನ್ನು ಬಹಳಮಟ್ಟಿಗೆ ದೊಡ್ಡದಾಗಿರುವಂತೆ ವಿಸ್ತರಿಸು. ಮತ್ತು ನನ್ನ ಆಯುಧಗಳ ಏಟು ಗಳಿಂದ ಉಂಟಾದ ಗಾಯಗಳಿಂದ ಸುರಿದ ರಕ್ತವೆಲ್ಲವನ್ನೂ ನೀನು ಬೇಗನೆ ಕುಡಿದು ಬಿಡು. ॥೨೩॥

ಈಗ ನೀನು ನಿನ್ನ ಇಚ್ಛಾನುಸಾರವಾಗಿ ಯುದ್ಧದಲ್ಲಿ ರಾಕ್ಷಸರನ್ನು ತಿನ್ನುತ್ತಾ ಓಡಾಡುತ್ತಿರು. ನಾನು ಹರಿತವಾಗಿರುವ ಬಾಣಗಳು, ಗದಾಯುಧ, ಕತ್ತಿ, ಮುಸಲಾಯುಧ ಇವುಗಳಿಂದ ರಾಕ್ಷಸರನ್ನು ಹೊಡೆದು ಕೊಲ್ಲುವೆನು. ॥೨೪॥

ಎಲೈ ವಿಸ್ತಾರವಾದ ಕಣ್ಣುಗಳುಳ್ಳ ಚಾಮುಂಡಿಕಾದೇವಿಯೇ, ನೀನು ಈಗ ನನ್ನ ಆಯುಧಗಳ ಏಟನ್ನು ಪಡೆದ ರಕ್ತಬೀಜನ ದೇಹದಿಂದ ಹೊರಕ್ಕೆ ಹೊರಟ ರಕ್ತದ ಒಂದು ಹನಿಯೂ ಭೂಮಿಯಲ್ಲಿ ಬೀಳದಂತೆ ಆ ರಕ್ತವೆಲ್ಲವನ್ನೂ ಪಾನ ಮಾಡುತ್ತಿರು. ॥೨೫॥

ಹೀಗೆ ಈಗ ಹುಟ್ಟಿಕೊಂಡಿರುವ ರಾಕ್ಷಸರನ್ನು ತಿಂದುಹಾಕಿದರೆ, ಇನ್ನು ರಕ್ತ ಬೀಜಾಸುರನ ರಕ್ತವು ಭೂಮಿಗೆ ಬೀಳದೆ ಇದ್ದರೆ, ಅವನಂತಹ ಇತರ ರಾಕ್ಷಸರು ಬೇರೆಬೇರೆಯಾಗಿ ಹುಟ್ಟಲಾರರು ! ಹೀಗಾದರೆ ಈ ರಕ್ತಬೀಜಾಸುರರ ನಾಶವುಂಟಾಗು ವುದೇ ಹೊರತು ಬೇರೆ ರೀತಿಯಿಂದ ಇವರ ನಾಶವುಂಟಾಗುವುದಿಲ್ಲವು. ॥೨೬॥

ಘಾತಯಿಷ್ಯಾಮ್ಯಹಂ ದೈತ್ಯಂ ತ್ವಂ ಭಕ್ಷಯ ಚ ಸತ್ವರಾ ।
ಪಿಬಂತೀ ಕ್ಷತಜಂ ಸರ್ವಂ ಯತವಮಾನಾರಿಸಂಕ್ಷಯೇ ॥೨೭॥

ಇತ್ಥಂ ದೈತ್ಯಕ್ಷಯಂ ಕೃತ್ವಾ ದತ್ವಾ ರಾಜ್ಯಂ ಸುರಾಲಯಂ ।
ಇಂದ್ರಾಯ ಸುಸ್ಥಿರಂ ಸರ್ವಂ ಗಮಿಷ್ಯಾಮೋ ಯಥಾಸುಖಂ ॥೨೮॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾಂಬಿಕೆಯಾ ದೇವೀ ಚಾಮುಂಡಾ ಚಂಡವಿಕ್ರಮಾ ।
ಪಪೌ ಚ ಕ್ಷತಜಂ ಸರ್ವಂ ರಕ್ತಬೀಜಶರೀರಜಂ ॥೨೯॥

ಅಂಬಿಕಾ ತಂ ಜಘಾನಾಶು ಖಡ್ಗೇನ ಮುಸಲೇನ ಚ ।
ಚಖಾದ ದೇಹಶಕಲಾಂಶ್ಚಾಮುಂಡಾ ತಾನ್ ಕೃಶೋದರೀ ॥೩೦॥

---

ನಾನು ರಕ್ತಬೀಜಾಸುರನನ್ನು ಹೊಡೆದು ಕೊಲ್ಲುವೆನು. ನೀನು ಬೇಗನೆ ಅವನನ್ನೂ ತಿಂದುಬಿಡು. ಹೀಗೆ ನೀನು ಆ ರಕ್ತಬೀಜನ ರಕ್ತವೆಲ್ಲವನ್ನೂ ಪಾನ ಮಾಡುತ್ತಾ ಶತ್ರುವಿನ ನಾಶವು ಎಲ್ಲಾ ವಿಧದಲ್ಲಿಯೂ ಸಂಪೂರ್ಣವಾಗಿ ಉಂಟಾಗುವಹಾಗೆ ಪ್ರಯತ್ನಪಡು. ॥೨೭॥

ಈ ಪ್ರಕಾರವಾಗಿ ರಾಕ್ಷಸರೆಲ್ಲರನ್ನೂ ನಾಶಮಾಡಿ, ಇಂದ್ರನಿಗೆ ಸ್ವರ್ಗವನ್ನು ಕೊಟ್ಟು ಅವನ ರಾಜ್ಯವು ಸ್ಥಿರವಾಗುವಂತೆ ಮಾಡಿ ನಾವೂ ಸುಖವಾಗಿ ನಮ್ಮ ಸ್ಥಾನಗಳಿಗೆ ಹೊರಟುಹೋಗೋಣ. ಎಂದು ಹೇಳಿದಳು. ॥೨೮॥

ವ್ಯಾಸಋಷಿಯು ಹೇಳಿದನು—ಕ್ರೂರವಾದ ಪರಾಕ್ರಮವುಳ್ಳ ಚಾಮುಂಡಾ ದೇವಿಯನ್ನು ಕುರಿತು ಅಂಬಿಕಾದೇವಿಯು ಹೀಗೆ ಹೇಳಲು, ಆಕೆಯು ರಕ್ತಬೀಜನ ಶರೀರದಿಂದ ಹೊರಕ್ಕೆ ಬಂದ ರಕ್ತವೆಲ್ಲವನ್ನೂ ಕುಡಿಯುತ್ತಾ ಬಂದಳು. ॥೨೯॥

ಅಂಬಿಕಾದೇವಿಯು ಬೇಗ ಬೇಗನೆ ಆ ರಕ್ತಬೀಜಾಸುರನನ್ನು ಕತ್ತಿಯಿಂದಲೂ ಮುಸಲಾಯುಧದಿಂದಲೂ ಸಹ ಹೊಡೆದಳು. ಕೃಶವಾದ ನಡುವುಳ್ಳ ಆ ಚಾಮುಂಡಾ ದೇವಿಯು ಆಯುಧಗಳ ಏಟಿನಿಂದ ಚೂರುಚೂರಾಗಿ ಬಿದ್ದ ರಕ್ತಬೀಜಾಸುರನ ದೇಹದ ತುಂಡುಗಳನ್ನೂ ತಿನ್ನುತ್ತಾ ಬಂದಳು. ॥೩೦॥

**ಸೋಽಪಿ ಕ್ರುದ್ಧೋ ಗದಾಘಾತೈಶ್ಚಾಮುಂಡಾಂ ಸಮಘಾತಯತ್ ।**
**ತಥಾಪಿ ಸಾ ಪಪಾವಾಶು ಕ್ಷತಜಂ ತಮಭಕ್ಷಯತ್ ॥೩೧॥**

**ಯೇಽನ್ಯೇ ರುಧಿರಜಾಃ ಕ್ರೂರಾ ರಕ್ತಬೀಜಾ ಮಹಾಬಲಾಃ ।**
**ತೇಽಪಿ ನಿಷ್ಪಾತಿತಾಃ ಸರ್ವೇ ಭಕ್ಷಿತಾ ಗತಶೋಣಿತಾಃ ॥೩೨॥**

**ಕೃತ್ರಿಮಾ ಭಕ್ಷಿತಾಃ ಸರ್ವೇ ಯಸ್ತು ಸ್ವಾಭಾವಿಕೋಽಸುರಃ ।**
**ಸೋಽಪಿ ಪ್ರಪಾತಿತೋ ಹತ್ವಾ ಖಡ್ಗೇನಾತಿವಿಖಂಡಿತಃ ॥೩೩॥**

**ರಕ್ತಬೀಜೇ ಹತೇ ರೌದ್ರೇ ಯೇ ಚಾನ್ಯೇ ದಾನವಾ ರಣೇ ।**
**ಪಲಾಯನಂ ತತಃ ಕೃತ್ವಾ ಗತಾಸ್ತೇ ಭಯಕಂಪಿತಾಃ ॥೩೪॥**

**ಹಾಹೇತಿ ವಿಬ್ರುವಂತಸ್ತೇ ಶುಂಭಂ ಪ್ರೋಚುಃ ಸುವಿಹ್ವಲಾಃ ।**
**ರುಧಿರಾ ರಕ್ತದೇಹಾಶ್ಚ ವಿಗತಾಸ್ತ್ರಾ ವಿಚೇತಸಃ ॥೩೫॥**

---

ರಕ್ತಬೀಜಾಸುರನೂ ಕೂಡ ಕೋಪವುಳ್ಳವನಾಗಿ ಗದಾಯುಧದಿಂದ ಚಾಮುಂಡಾದೇವಿಯನ್ನು ಹೊಡೆದನು. ಆದಾಗ್ಯೂ ಆ ಚಾಮುಂಡಾದೇವಿಯು ಆ ರಕ್ಕಸನ ರಕ್ತವನ್ನು ಕುಡಿದು ಅವನನ್ನು ತಿಂದಳು. ||೩೧||

ಯಾರು ಇತರರಾಗಿ ನಿಜವಾದ ರಕ್ತಬೀಜಾಸುರನ ರಕ್ತದ ಹನಿಗಳಿಂದ ಹುಟ್ಟಿದ್ದರೋ ಮಹಾಬಲಿಷ್ಠರಾದ ಕ್ರೂರರಾದ ಆ ಇತರ ರಾಕ್ಷಸರೆಲ್ಲರನ್ನೂ, ರಕ್ತವಿಲ್ಲದವರನ್ನಾಗಿ ಮಾಡಿ ತಿಂದು ಭೂಮಿಯಲ್ಲಿ ಕೆಡವಲಾಯಿತು. ||೩೨||

ಹೀಗೆ ಆ ರಕ್ತಬೀಜಾಸುರನ ರಕ್ತದಿಂದ ಹುಟ್ಟಿದ ರಾಕ್ಷಸರೆಲ್ಲರನ್ನೂ ತಿನ್ನಲಾಯಿತು. ಆ ಮೇಲೆ ದೇವಿಯು ನಿಜವಾದ ರಕ್ತಬೀಜಾಸುರನನ್ನೂ ಕತ್ತಿಯಿಂದ ಹೊಡೆದು ಚೂರು ಚೂರಾಗಿ ಕತ್ತರಿಸಿ ಕೆಡವಿದಳು ! ||೩೩||

ಭಯಂಕರನಾದ ರಕ್ತಬೀಜಾಸುರನು ಯುದ್ಧದಲ್ಲಿ ನಾಶವಾಗಲು ಅನಂತರದಲ್ಲಿ ಉಳಿದಿದ್ದ ಇತರ ರಾಕ್ಷಸರು ಭಯದಿಂದ ನಡುಗುತ್ತಾ ಓಡಿಹೋದರು. ||೩೪||

ಆ ರಾಕ್ಷಸರು ಹಾ ಹಾ ಎಂಬುದಾಗಿ ಆರ್ತನಾದವನ್ನು ಮಾಡುತ್ತಾ, ತಮ್ಮ ತಮ್ಮ ಆಯುಧಗಳನ್ನು ಬಿಟ್ಟು ಧೈರ್ಯವಿಲ್ಲದ ಮನಸ್ಸೂ ರಕ್ತದಿಂದ ನೆನೆದ ದೇಹವೂ ಉಳ್ಳವರಾಗಿ ಹಿಂತಿರುಗಿ ಹೋಗಿ ಶುಂಭನನ್ನು ಕುರಿತು ಹೇಳಿದರು. ||೩೫||

ರಾಜನ್ನಂಬಿಕಯಾ ರಕ್ತಬೀಜೋಽಸೌ ವಿನಿಪಾತಿತಃ ।
ಚಾಮುಂಡಾ ತಸ್ಯ ದೇಹಾತ್ತು ಪಪೌ ಸರ್ವಂ ಚ ಶೋಣಿತಂ ॥೩೬॥

ಯೇ ಚಾನ್ಯೇ ದಾನವಾಃ ಶೂರಾ ವಾಹನೇನಾಽತಿರಂಹಸಾ ।
ಸಿಂಹೇನ ನಿಹತಾಃ ಸರ್ವೇ ಕಾಲ್ಯಾ ಚ ಭಕ್ಷಿತಾಃ ಪರೇ ॥೩೭॥

ವಯಂ ತ್ವಾಂ ಕಥಿತುಂ ರಾಜನ್ನಾಗತಾ ಯುದ್ಧಚೇಷ್ಟಿತಂ ।
ಚರಿತಂ ಚ ತಥಾ ದೇವ್ಯಾಃ ಸಂಗ್ರಾಮೇ ಪರಮಾದ್ಭುತಂ ॥೩೮॥

ಅಜೇಯೇಯಂ ಮಹಾರಾಜ ಸರ್ವಥಾ ದೈತ್ಯದಾನವೈಃ ।
ಗಂಧರ್ವಾಸುರಯಕ್ಷೈಶ್ಚ ಪನ್ನಗೋರಗರಾಕ್ಷಸೈಃ ॥೩೯॥

ಅನ್ಯಾಸ್ತತ್ರಾಗತಾ ದೇವ್ಯ ಇಂದ್ರಾಣೀಪ್ರಮುಖಾ ಭೃಶಂ ।
ಯುಧ್ಯಮಾನಾ ಮಹಾರಾಜ ವಾಹನೈರಾಯುಧೈರ್ಯುತಾಃ ॥೪೦॥

---

ಓ ರಾಜನೇ, ಅಂಬಿಕಾದೇವಿಯಿಂದ ಈ ರಕ್ತಬೀಜಾಸುರನು ನಾಶವನ್ನು ಹೊಂದಿದನು. ಚಾಮುಂಡಾದೇವಿಯು ಅವನ ಶರೀರದಿಂದ ಹೊರಟ ರಕ್ತವೆಲ್ಲವನ್ನೂ ಪಾನಮಾಡಿದಳು. ||೩೬||

ಇತರ ರಾಕ್ಷಸರೆಲ್ಲರನ್ನು ಆ ದೇವಿಯ ವಾಹನವಾದ ಸಿಂಹವು ಕೊಂದಿತು. ಎಲ್ಲರನ್ನೂ ಕಾಳಿಯು ತಿಂದುಬಿಟ್ಟಳು ! ||೩೭||

ಓ ರಾಜನೇ, ನಾವು ಯುದ್ಧದ ವಿಷಯವನ್ನೂ, ದೇವಿಯ ತುಂಬ ಆಶ್ಚರ್ಯ ಕರವಾದ ನಡೆವಳಿಕೆಯ ವಿವರವನ್ನೂ ಸಹ ನಿನಗೆ ತಿಳಿಸುವುದಕ್ಕಾಗಿ ಬಂದಿರು ತ್ತೇವೆ. ||೩೮||

ಓ ಮಹಾರಾಜನೇ, ಈ ದೇವಿಯು ದೈತ್ಯರು, ದಾನವರು, ಗಂಧರ್ವರು, ಅಸುರರು, ಯಕ್ಷರು, ಸರ್ಪಗಳು, ಹಾವುಗಳು ರಾಕ್ಷಸರು ಇವರಲ್ಲಿ ಯಾರಿಂದಲೂ ಯಾವರೀತಿಯಿಂದಲೂ ಜಯಿಸಲು ಅಸಾಧ್ಯಳಾಗಿರುವಳು. ||೩೯||

ಓ ರಾಜನೇ, ಇಂದ್ರಾಣಿಯೇ ಮೊದಲಾದ ಇತರ ದೇವಿಯರು ತಮ್ಮ ತಮ್ಮ ವಾಹನಗಳು, ಆಯುಧಗಳು ಇವುಗಳಿಂದ ಕೂಡಿ ಯುದ್ಧ ಮಾಡುವುದಕ್ಕಾಗಿ ಬಂದಿ ದ್ದರು. ||೪೦||

ತಾಭಿಃ ಸರ್ವಂ ಹತಂ ಸೈನ್ಯಂ ದಾನವಾನಾಂ ವರಾಯುಧೈಃ ।
ರಕ್ತಬೀಜೋಽಪಿ ರಾಜೇಂದ್ರ ತರಸಾ ವಿನಿಪಾತಿತಃ ॥೪೧॥

ಏಕಾಽಪಿ ದುಸ್ಸಹಾ ದೇವೀ ಕಿಂ ಪುನಸ್ತಾಭಿರನ್ವಿತಾ ।
ಸಿಂಹೋಽಪಿ ಹಂತಿ ಸಂಗ್ರಾಮೇ ರಾಕ್ಷಸಾನಮಿತಪ್ರಭಃ ॥೪೨॥

ಅತೋ ವಿಚಾರ್ಯ ಸಚಿವೈರ್ಯದ್ಯುಕ್ತಂ ತದ್ವಿಧೀಯತಾಂ ।
ನ ವೈರಮನಯಾ ಯುಕ್ತಂ ಸಂಧಿರೇವ ಸುಖಪ್ರದಃ ॥೪೩॥

ಆಶ್ಚರ್ಯಮೇತದಖಿಲಂ ಯನ್ನಾರೀ ಹಂತಿ ರಾಕ್ಷಸಾನ್ ।
ರಕ್ತಬೀಜೋಽಪಿ ನಿಹತಃ ಪೀತಂ ತಸ್ಯಾಪಿ ಶೋಣಿತಂ ॥೪೪॥

---

ಅವರು ಎಲ್ಲರೂ ತಮ್ಮ ತಮ್ಮ ಉತ್ತಮವಾದ ಆಯುಧಗಳಿಂದ ಸೈನ್ಯವೆಲ್ಲವನ್ನೂ ನಾಶಮಾಡಿದರು. ಓ ರಾಜಶ್ರೇಷ್ಠನೇ, ರಕ್ತಬೀಜಾಸುರನನ್ನೂ ಕೂಡ ದೇವಿಯು ಉತ್ತಮವಾದ ಆಯುಧಗಳಿಂದ ಬೇಗನೆ ಸಂಹರಿಸಿದಳು. ||೪೧||

ಈ ದೇವಿಯು ಒಬ್ಬಳೇ ಆಗಿದ್ದಾಗ್ಯೂ ಅವಳು ಯುದ್ಧ ಮಾಡುವುದರಲ್ಲಿ ಇತರರಿಂದ ತಡೆಯಲು ಅಸಾಧ್ಯಳಾಗಿರುತ್ತಾಳೆ! ಹೀಗೆ ಇರುವಲ್ಲಿ ಬ್ರಾಹ್ಮೀ ಮೊದಲಾದ ಇತರ ಶಕ್ತಿಗಳಿಂದ ಕೂಡಿರುವಾಗ ಹೇಳತಕ್ಕದ್ದೇನು? ಅಷ್ಟೇ ಅಲ್ಲದೆ ಅಪಾರವಾದ ತೇಜಸ್ಸುಳ್ಳ ಸಿಂಹವೂ ಕೂಡ ಯುದ್ಧದಲ್ಲಿ ರಾಕ್ಷಸರನ್ನು ಕೊಲ್ಲುತ್ತಿರುವುದು. ||೪೨||

ಈ ಕಾರಣದಿಂದ ಈ ವಿಷಯದಲ್ಲಿ ಮಂತ್ರಿಗಳೊಡನೆ ವಿಚಾರಮಾಡಿ ಯಾವುದು ಯುಕ್ತವಾಗಿದೆ ಎಂದು ತಿಳಿದು ಬರುವುದೋ ಅದನ್ನು ಮಾಡತಕ್ಕದ್ದು ಉತ್ತಮವು. ಈ ಸ್ತ್ರೀಯ ಸಂಗಡ ವೈರವು ಯುಕ್ತವಾಗಿರುವುದಿಲ್ಲ. ಸಂಧಿಯೇ ಸುಖಕರವಾಗಿರುವಂತೆ ಕಾಣುತ್ತದೆ. ||೪೩||

ಸ್ತ್ರೀಯು ರಾಕ್ಷಸರನ್ನು ಕೊಲ್ಲುತ್ತಾಳೆ ಎಂಬುದೂ, ರಕ್ತಬೀಜಾಸುರನು ನಾಶಮಾಡಲ್ಪಟ್ಟನು, ಅವನ ರಕ್ತವೆಲ್ಲವೂ ಪಾನ ಮಾಡಲ್ಪಟ್ಟಿತು ಎಂಬುದೂ, ಇವೆಲ್ಲವೂ ಬಹಳ ಆಶ್ಚರ್ಯಕರವಾಗಿರುತ್ತವೆ! ||೪೪||

ಅನ್ಯೇ ನಿಪಾತಿತಾ ದೈತ್ಯಾಃ ಸಂಗ್ರಾಮೇಽಂಬಿಕೆಯಾ ನೃಪ ।
ಚಾಮುಂಡಯಾ ಚ ಮಾಂಸಂ ವೈ ಭಕ್ಷಿತಂ ಸಕಲಂ ರಣೇ ॥೪೫॥

ವರಂ ಪಾತಾಲಗಮನಂ ತಸ್ಯಾಃ ಸೇವಾಽಥವಾ ವರಾ ।
ನ ತು ಯುದ್ಧಂ ಮಹಾರಾಜ ಕಾರ್ಯಮಂಬಿಕೆಯಾ ಸಹ ॥೪೬॥

ನ ನಾರೀ ಪ್ರಾಕೃತಾ ಹ್ಯೇಷಾ ದೇವಕಾರ್ಯಾರ್ಥಸಾಧಿನೀ ।
ಮಾಯೇಯಂ ಪ್ರಬಲಾ ದೇವೀ ಕ್ಷಪಯಂತೀಯಮುತ್ಥಿತಾ ॥೪೭॥

॥ ವ್ಯಾಸ ಉವಾಚ ॥

ಇತಿ ತೇಷಾಂ ವಚಸ್ತಥ್ಯಂ ಶ್ರುತ್ವಾ ಕಾಲವಿಮೋಹಿತಃ ।
ಮುಮೂರ್ಷುಃ ಪ್ರತ್ಯುವಾಚೇದಂ ಶುಂಭಃ ಪ್ರಸ್ಫುರಿತಾಧರಃ ॥೪೮॥

---

ಓ ರಾಜನೇ, ಯುದ್ಧರಂಗದಲ್ಲಿ ಅಂಬಿಕಾದೇವಿಯಿಂದ ಇತರ ರಾಕ್ಷಸರೂ ಕೂಡ ನಾಶಮಾಡಲ್ಪಟ್ಟರು. ಮತ್ತು ಯುದ್ಧದಲ್ಲಿ ಚಾಮುಂಡಾದೇವಿಯಿಂದ ಮಾಂಸವೆಲ್ಲವೂ ತಿನ್ನಲ್ಪಟ್ಟಿತು. ॥೪೫॥

ಆದುದರಿಂದ ನಾವೆಲ್ಲರೂ ಪಾತಾಳ ಲೋಕಕ್ಕೆ ಹೋಗುವುದೋ, ಅಥವಾ ಆ ಅಂಬಿಕಾದೇವಿಯ ಆಶ್ರಯದಲ್ಲಿ ಸೇವೆಯನ್ನು ಮಾಡುವುದೋ, ಉತ್ತಮವಾಗಿ ಇರುತ್ತದೆ. ಓ ಮಹಾರಾಜನೇ, ಅಂಬಿಕಾದೇವಿಯ ಸಂಗಡ ಯುದ್ಧವನ್ನು ಮಾಡು ವುದು ಮಾತ್ರ ಸರಿಯಾಗಿರುವಂತೆ ಕಾಣುವುದಿಲ್ಲವು. ॥೪೬॥

ಈ ಹೆಂಗುಸು ಈ ಲೋಕದಲ್ಲಿರುವ ಇತರರಂತೆ ಸಾಮಾನ್ಯಳಾದ ಹೆಂಗುಸಾ ಗಿಲ್ಲವು. ಇವಳು ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿ, ದೈತ್ಯರ ವಿನಾಶ ಕ್ಕಾಗಿ ಅವತರಿಸಿ ಇರುವ ತುಂಬ ಬಲಿಷ್ಠಳಾದ ಮಾಯೆಯೆಂಬುದಾಗಿ ಪ್ರಸಿದ್ಧಿಯನ್ನು ಹೊಂದಿರುವ ದೇವಿಯಾಗಿ ಆವಿರ್ಭವಿಸಿ ಇರುತ್ತಾಳೆ ! ॥೪೭॥

ವ್ಯಾಸಋಷಿಯು ಹೇಳಿದನು.—ಹೀಗೆ ಹೇಳುತ್ತಿರುವ ಆ ಸೈನಿಕರ ನಿಜವಾದ ಮಾತನ್ನು ಕೇಳಿದರೂ ಮರಣವು ಸಮೀಪಿಸಿರುವ, ಕಾಲದಿಂದ ಮೋಹವನ್ನು ಹೊಂದಿದವನಾದ ಆ ಶುಂಭನು ಕೋಪದಿಂದ ತುಂಬ ನಡುಗುತ್ತಿರುವ ತುಟಿಯುಳ್ಳವ ನಾಗಿ ಹೀಗೆ ಪ್ರತ್ಯುತ್ತರವನ್ನು ಹೇಳಿದನು. ॥೪೮॥

|| ಶುಂಭ ಉವಾಚ ||

**ಯೂಯಂ ಗಚ್ಛತ ಪಾತಾಲಂ ಶರಣಂ ವಾ ಭಯಾತುರಾಃ ।**
**ಹನಿಷ್ಯಾಮ್ಯಹಮುದ್ಯೈವ ತಾಂ ಚ ತಾಶ್ಚ ಸಮುದ್ಯತಃ ॥೪೯॥**

**ಜಿತ್ವಾ ಸರ್ವಾನ್ಸುರಾನಾಜೌ ಕೃತ್ವಾ ರಾಜ್ಯಂ ಸುಪುಷ್ಕಲಂ ।**
**ಕಥಂ ನಾರೀಭಯೋದ್ವಿಗ್ನಃ ಪಾತಾಲಂ ಪ್ರವಿಶಾಮ್ಯಹಂ ॥೫೦॥**

**ನಿಹತ್ಯ ಪಾರ್ಷದಾನ್ಸರ್ವಾನ್ ರಕ್ತಬೀಜಮುಖಾನ್ ರಣೇ ।**
**ಪ್ರಾಣತ್ರಾಣಾಯ ಗಚ್ಛಾಮಿ ಹಿತ್ವಾ ಕಿಂ ವಿಪುಲಂ ಯಶಃ ॥೫೧॥**

**ಮರಣಂ ತ್ವನಿವಾರ್ಯಂ ವೈ ಪ್ರಾಣಿನಾಂ ಕಾಲಕಲ್ಪಿತಂ ।**
**ತದ್ಭಯಂ ಜನ್ಮನೋಪಾತ್ತಂ ತ್ಯಜೇತ್ಕೋ ದುರ್ಲಭಂ ಯಶಃ ॥೫೨॥**

---

ಶುಂಭನು ಹೇಳಿದನು—ಎಲೈ ಸೈನಿಕರೇ, ಭಯದಿಂದ ಗಾಬರಿಗೊಂಡಿರುವ ನೀವು ಮಾತ್ರ ಪಾತಾಳ ಲೋಕಕ್ಕೆ ಹೋಗಿರಿ ಅಥವಾ ದೇವಿಯನ್ನಾದರೂ ಶರಣು ಹೊಂದಿರಿ. ನಾನಾದರೋ ಈಗಲೇ ಯುದ್ಧಕ್ಕೆ ಹೋಗಿ ಆ ದೇವಿಯನ್ನೂ ಮತ್ತು ಇತರ ಆಯಾಯ ಶಕ್ತಿದೇವತೆಯರನ್ನೂ ಸಹ ಪ್ರಯತ್ನ ಪೂರ್ವಕವಾಗಿ ನಾಶಮಾಡುವೆನು ! ||೪೯||

ನಾನು ದೇವತೆಗಳೆಲ್ಲರನ್ನೂ ಯುದ್ಧದಲ್ಲಿ ಗೆದ್ದು, ಸಂಪತ್ತುಗಳಿಂದ ದೊಡ್ಡದಾಗಿರುವ ರಾಜ್ಯವನ್ನು ಚನ್ನಾಗಿ ಆಳಿ, ಈಗ ಹೆಂಗುಸಿಗೆ ಹೆದರಿಕೊಂಡು ಸ್ಥಿರವಿಲ್ಲದ ಬುದ್ಧಿಯುಳ್ಳವನಾಗಿ ಪಾತಾಳವನ್ನು ಹೇಗೆತಾನೇ ಹೊಂದುವೆನು ! ||೫೦||

ಯುದ್ಧದಲ್ಲಿ ನನಗೆ ಮೈಗಾವಲಿನವರಾಗಿದ್ದ ರಕ್ತಬೀಜನೇ ಮೊದಲಾದ ರಾಕ್ಷಸರೆಲ್ಲರನ್ನೂ ಯುದ್ಧದಲ್ಲಿ ನಾಶಪಡಿಸಿಕೊಂಡು, ಕೀರ್ತಿಯನ್ನೂ ಕಳೆದುಕೊಂಡು ನನ್ನ ಪ್ರಾಣವನ್ನು ಮಾತ್ರ ಕಾಪಾಡಿಕೊಳ್ಳುವುದಕ್ಕಾಗಿ ಹೋಗುವೆನೇನು ? ||೫೧||

ಪ್ರಾಣಿಗಳಿಗೆ ಮರಣವು ಆಯಾಯ ಕಾಲದಲ್ಲಿ ಸಂಭವಿಸಬೇಕೆಂದು ಕ್ಲ್ಪಪ್ತವಾಗಿರುತ್ತದೆ. ಮತ್ತು ಇದನ್ನು ನಮಗೆ ಯಾವ ವಿಧದಿಂದಲೂ ತಡೆಯಲು ಸಾಧ್ಯವಿಲ್ಲವು. ಈ ವಿಧವಾಗಿರುವ ಮರಣದ ಭಯವು ಹುಟ್ಟಿದಂದಿನಿಂದಲೇ ಬಂದಿರುತ್ತದೆ. ಹೀಗಿರುವಲ್ಲಿ ಮರಣಕ್ಕೆ ಹೆದರಿಕೊಂಡು ಪಾತಾಳಕ್ಕೆ ಹೋಗುವುದು ಯುಕ್ತವಲ್ಲ. ಯಾರು ತಾನೇ ಬಹಳ ಕಷ್ಟಪಟ್ಟುಸಂಪಾದಿಸಿರುವ ಕೀರ್ತಿಯನ್ನೂ ಕಳೆದುಕೊಂಡಾನು ? ||೫೨||

**ನಿಶುಂಭಾಹಂ ಗಮಿಷ್ಯಾಮಿ ರಥಾರೂಢೋ ರಣಾಜಿರೇ ।**
**ಹತ್ವಾ ತಾಮಾಗಮಿಷ್ಯಾಮಿ ನಾಽಽಗಮಿಷ್ಯಾಮಿ ಚಾನ್ಯಥಾ ॥೫೩॥**

**ತ್ವಂ ತು ಸೇನಾಯುತೋ ವೀರ ಪಾರ್ಷ್ಣಿಗ್ರಾಹೋ ಭವಸ್ವ ಮೇ ।**
**ತರಸಾ ತಾಂ ಶರೈಸ್ತೀಕ್ಷ್ಣೈರ್ನಾರೀಂ ನಯ ಯಮಾಲಯೇ ॥೫೪॥**

॥ ನಿಶುಂಭ ಉವಾಚ ॥

**ಅಹಮದ್ಯ ಹನಿಷ್ಯಾಮಿ ಗತ್ವಾ ದುಷ್ಟಾಂ ಚ ಕಾಲಿಕಾಂ ।**
**ಆಗಮಿಷ್ಯಾಮ್ಯಹಂ ಶೀಘ್ರಂ ಗೃಹೀತ್ವಾ ತಾಮಥಾಂಬಿಕಾಂ ॥೫೫॥**

**ಮಾ ಚಿಂತಾಂ ಕುರು ರಾಜೇಂದ್ರ ವರಾಕಾಯಾಸ್ತು ಕಾರಣೇ ।**
**ಕ್ವೈಷಾ ಬಾಲಾ ಕ್ವ ಮೇ ಬಾಹುವೀರ್ಯಂ ವಿಶ್ವವಶಂಕರಂ ॥೫೬॥**

**ತ್ಯಕ್ತ್ವಾಽರ್ತಿಂ ವಿಪುಲಾಂ ಭ್ರಾತಃಭುಂಕ್ಷ್ವ ಭೋಗಾನನುತ್ತಮಾನ್ ।**
**ಆನಯಿಷ್ಯಾಮ್ಯಹಂ ಕಾಮಂ ಮಾನಿನೀಂ ಮಾನಸಂಯುತಾಂ ॥೫೭॥**

---

ಎಲೈ ನಿಶುಂಭನೇ, ನಾನು ರಥವನ್ನು ಹತ್ತಿದವನಾಗಿ ಯುದ್ಧಕ್ಕಾಗಿ ಹೋಗುವೆನು. ಯುದ್ಧರಂಗದಲ್ಲಿ ಆ ದೇವಿಯನ್ನು ಕೊಂದು ಹಿಂತಿರುಗಿ ಬರುವೆನು. ಆ ದೇವಿಯನ್ನು ನಾನು ಕೊಲ್ಲದೆ ಹಿಂದಕ್ಕೆ ಬರುವುದಿಲ್ಲವು! ॥೫೩॥

ಎಲೈ ವೀರನಾದ ನಿಶುಂಭನೇ, ನೀನು ಸೇನಾಸಹಿತನಾಗಿ ನನಗೆ ಬೆಂಬಲವಾದ ಸಹಾಯಕನಾಗಿ ಯುದ್ಧಕ್ಕೆ ಸಿದ್ಧನಾಗಿರು. ನೀನು ಆ ಸ್ತ್ರೀಯನ್ನು ಕ್ರೂರವಾದ ಬಾಣಗಳಿಂದ ಯಮನ ಮನೆಯನ್ನು ಪಡೆಯಿಸು. ॥೫೪॥

ನಿಶುಂಭನು ಹೇಳಿದನು—ನಾನು ಈಗ ಯುದ್ಧಕ್ಕೆ ಹೋಗಿ ದುಷ್ಟಳಾಗಿರುವ ಕಾಳಿಕಾದೇವಿಯನ್ನು ಕೊಲ್ಲುವೆನು. ಮತ್ತು ಹೀಗೆ ಯುದ್ಧಮಾಡಿ ಪರಾಕ್ರಮವನ್ನು ತೋರಿಸಿರುವ ಅಂಬಿಕಾದೇವಿಯನ್ನು ಹಿಡಿದುಕೊಂಡು ಬೇಗನೆ ಬರುವೆನು. ॥೫೫॥

ಓ ರಾಜಶ್ರೇಷ್ಠನೇ, ನೀಚಳಾಗಿರುವ ಈ ಸ್ತ್ರೀಯ ವಿಷಯವಾಗಿ ನೀನು ಆತಂಕದ ಯೋಚನೆಯನ್ನು ಮಾಡಬೇಡ. ಈ ಹುಡುಗಿಯು ಎಲ್ಲಿ? ಲೋಕವನ್ನೆಲ್ಲವನ್ನೂ ತನ್ನ ಅಧೀನದಲ್ಲಿ ಇರಿಸಿಕೊಂಡಿರುವ ನನ್ನ ಬಾಹುಬಲವೆಲ್ಲಿ? ॥೫೬॥

ಎಲೈ ಸೋದರನೇ, ಬಹಳ ಹೆಚ್ಚಾಗಿರುವ ಮನೋರೋಗವನ್ನು ಬಿಟ್ಟು ಶ್ರೇಷ್ಠವಾದ ಭೋಗಗಳನ್ನು ಅನುಭವಿಸು. ನಾನು ಬಹಳ ಮಟ್ಟಿನ ಅಭಿಮಾನದಿಂದ ಕೂಡಿರುವ ಆ ದೇವಿಯನ್ನು ಹಿಡಿದು ತರುವೆನು! ॥೫೭॥

ಮಯಿ ತಿಷ್ಠತಿ ತೇ ರಾಜನ್ನ ಯುಕ್ತಂ ಗಮನಂ ರಣೇ ।
ಗತ್ವಾಽಹಮಾನಯಿಷ್ಯಾಮಿ ತವಾರ್ಥೇ ವೈ ಜಯಶ್ರಿಯಂ ॥೫೮॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಭ್ರಾತರಂ ಜ್ಯೇಷ್ಠಂ ಕನೀಯಾನ್ಬಲಗರ್ವಿತಃ ।
ರಥಮಾಸ್ಥಾಯ ವಿಪುಲಂ ಸನ್ನದ್ಧಃ ಸ್ವಬಲಾವೃತಃ ॥೫೯॥

ಜಗಾಮ ತರಸಾ ತೂರ್ಣಂ ಸಂಗರೇ ಕೃತಮಂಗಲಃ ।
ಸಂಸ್ತುತೋ ವಂದಿಸೂತೈಶ್ಚ ಸಾಯುಧಃ ಸಪರಿಷ್ಕರಃ ॥೬೦॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಏಕೋನತ್ರಿಂಶೋಽಧ್ಯಾಯಃ

---

ಓ ರಾಜನೇ, ನಾನು ಬದುಕಿದ್ದು ಯುದ್ಧಕ್ಕೆ ಹೋಗಲು ಸಿದ್ಧನಾಗಿರುವಾಗ, ನೀನು ಯುದ್ಧಕ್ಕೆ ಹೋಗುವುದು ಯುಕ್ತವಲ್ಲವು. ನಿನಗೋಸ್ಕರವಾಗಿ ನಾನು ಯುದ್ಧಕ್ಕೆ ಹೋಗಿ ಜಯಲಕ್ಷ್ಮಿಯನ್ನು ಸಂಪಾದಿಸಿಕೊಂಡು ತರುವೆನು. ॥೫೮॥

ವ್ಯಾಸಋಷಿಯು ಹೇಳಿದನು—ಹೆಚ್ಚಾದ ಬಲದಿಂದ ಹೆಮ್ಮೆಯುಳ್ಳ ಚಿಕ್ಕ ತಮ್ಮನಾದ ನಿಶುಂಭನು ತನ್ನ ಅಣ್ಣನಾದ ಶುಂಭನ ಸಂಗಡ ಹೀಗೆ ಹೇಳಿ ದೊಡ್ಡ ದಾಗಿರುವ ರಥವನ್ನು ಹತ್ತಿಕೊಂಡು ತನ್ನ ಸೇನೆಯೊಡನೆ ಸಿದ್ಧನಾದನು. ॥೫೯॥

ಯುದ್ಧಕ್ಕಾಗಿ ಹೊರಡುವ ಈ ನಿಶುಂಭನನ್ನು ನೋಡಿ ಹೊಗಳುವಭಟರು ಇವನನ್ನು ಹೊಗಳಿದರು. ಸೂತರೂ ಕೂಡ ಇವನ ಗುಣಗಳನ್ನು ಶ್ಲಾಘಿಸಿದರು. ಇವನಿಗೆ ಯುದ್ಧಕ್ಕೆ ಪ್ರಯಾಣಮಾಡುವ ಕಾಲದಲ್ಲಿ ನಡೆಸುವ ಮಂಗಲಕಾರ್ಯ ಗಳನ್ನು ಮಾಡಿದರು. ಅನಂತರದಲ್ಲಿ ಈ ನಿಶುಂಭನು ತನ್ನ ಆಯುಧಗಳನ್ನು ಎಲ್ಲ ವನ್ನೂ ತೆಗೆದುಕೊಂಡು ತನ್ನ ಪರಿವಾರದವರೊಡನೆ ಯುದ್ಧಕ್ಕಾಗಿ ಹೊರಟನು.॥೬೦॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ತ್ರಿಂಶೋಽಧ್ಯಾಯಃ ||

### ಮೂವತ್ತನೆಯ ಅಧ್ಯಾಯವು

|| ವ್ಯಾಸ ಉವಾಚ ||

**ನಿಶುಂಭೋ ನಿಶ್ಚಯಂ ಕೃತ್ವಾ ಮರಣಾಯ ಜಯಾಯ ವಾ ।**
**ಸೋದ್ಯಮಃ ಸಬಲಃ ಶೂರೋ ರಣೇ ದೇವೀಮುಪಾಯಯೌ ॥೧॥**

**ತಮಾಜಗಾಮ ಶುಂಭೋಽಪಿ ಸ್ವಬಲೇನ ಸಮಾವೃತಃ ।**
**ಪ್ರೇಕ್ಷಕೋಽಭೂದ್ರಣೇ ರಾಜಾ ಸಂಗ್ರಾಮರಸಪಂಡಿತಃ ॥೨॥**

**ಗಗನೇ ಸಂಸ್ಥಿತಾ ದೇವಾಸ್ತದಾಭ್ರಪಟಲಾವೃತಾಃ ।**
**ದಿದೃಕ್ಷವಸ್ತು ಸಂಗ್ರಾಮೇ ಸೇಂದ್ರಾ ಯಕ್ಷಗಣಾಸ್ತಥಾ ॥೩॥**

---

ವ್ಯಾಸಋಷಿಯು ಹೇಳಿದನು — ಶೂರನಾದ ನಿಶುಂಭನು ಯುದ್ಧದಲ್ಲಿ ತಾನು ಮರಣವನ್ನು ಹೊಂದುವುದಕ್ಕಾಗಲಿ ಅಥವಾ ಜಯವನ್ನು ಪಡೆಯುವುದಕ್ಕಾಗಲಿ ನಿಶ್ಚಯವನ್ನು ಮಾಡಿಕೊಂಡು ಸೇನೆಯಿಂದ ಕೂಡಿದವನಾಗಿ ಪ್ರಯತ್ನವನ್ನು ಮಾಡುವವನಾಗಿ ದೇವಿಯನ್ನು ಎದುರಿಸಲು ಪ್ರಯಾಣ ಮಾಡಿದನು. ||೧||

ಜನಮೇಜಯರಾಜನೇ, ಯುದ್ಧಪರಾಕ್ರಮದ ಸವಿಯನ್ನು ಮನಗಂಡಿರುವ ಬುದ್ಧಿವಂತನಾದ ಶುಂಭನೂ ತನ್ನ ಸೇನೆಯಿಂದ ಕೂಡಿದವನಾಗಿ ಅವನನ್ನು ಅನುಸರಿಸಿ ಪ್ರಯಾಣ ಮಾಡಿದನು. ವೀರರಸಾಭಿಜ್ಞನಾದ ಸಹೃದಯನಾದ ಶುಂಭನು ಯುದ್ಧದಲ್ಲಿ ಆ ನಿಶುಂಭನ ಯುದ್ಧದ ಕ್ರಮವನ್ನು ನೋಡತಕ್ಕವನಾಗಿ ನಿಂತನು. ||೨||

ಆಗ ದೇವತೆಗಳು, ಇಂದ್ರನೂ, ಯಕ್ಷರೂ ಸಹ ಯುದ್ಧವನ್ನು ನೋಡಲು ಇಚ್ಛೆಯುಳ್ಳವರಾಗಿ ಅಂತರಿಕ್ಷದಲ್ಲಿ ಮೋಡಗಳ ಮರೆಯಲ್ಲಿ ಇದ್ದರು. ||೩||

ನಿಶುಂಭೋಽಥ ರಣೇ ಗತ್ವಾ ಧನುರಾದಾಯ ಶಾರ್ಙ್ಗಕಂ ।
ಚಕಾರ ಶರವೃಷ್ಟಿಂ ಸ ಭೀಷಯಞ್ಜಗದಂಬಿಕಾಂ ॥೪॥

ಮುಂಚಂತಂ ಶರಜಾಲಾನಿ ನಿಶುಂಭಂ ಚಂಡಿಕಾ ರಣೇ ।
ವೀಕ್ಷ್ಯಾಽಽದಾಯ ಧನುಃ ಶ್ರೇಷ್ಠಂ ಜಹಾಸ ಸುಸ್ವರಂ ಮುಹುಃ ॥೫॥

ಉವಾಚ ಕಾಲಿಕಾಂ ದೇವೀ ಪಶ್ಯ ಮೂರ್ಖತ್ವಮೇತಯೋಃ ।
ಮರಣಾಯಾಗತೌ ಕಾಲಿ ಮತ್ಸಮೀಪಮಿಹಾಧುನಾ ॥೬॥

ದೃಷ್ಟ್ವಾ ದೈತ್ಯವಧಂ ಘೋರಂ ರಕ್ತಬೀಜಾತ್ಯಯಂ ತಥಾ ।
ಜಯಾಶಾಂ ಕುರುತಸ್ತ್ವೇತೌ ಮೋಹಿತೌ ಮಮ ಮಾಯಯಾ ॥೭॥

---

ಅನಂತರದಲ್ಲಿ ನಿಶುಂಭನು ಯುದ್ಧಕ್ಕೆ ಹೋಗಿ ಕೊಂಬಿನಿಂದ ಮಾಡಿದ ಧನುಸ್ಸನ್ನು ತೆಗೆದುಕೊಂಡು ಜಗನ್ಮಾತೆಯನ್ನು ಹೆದರಿಸುವವನಾಗಿ ಬಾಣಗಳ ಮಳೆಯನ್ನೇ ಸುರಿಸಿದನು. ॥೪॥

ಚಂಡಿಕಾದೇವಿಯು ಯುದ್ಧದಲ್ಲಿ ಬಾಣಸಮೂಹವನ್ನು ಬಿಡುತ್ತಿರುವ ನಿಶುಂಭನನ್ನು ನೋಡಿ ಉತ್ತಮವಾದ ಧನುಸ್ಸನ್ನು ತಾನೂ ಕೈಯಲ್ಲಿ ಹಿಡಿದುಕೊಂಡು ಮನೋಹರವಾದ ಧ್ವನಿಯಿಂದ ಬಾರಿಬಾರಿಗೂ ನಕ್ಕಳು. ೫॥

ಆಗ ಚಂಡಿಕಾದೇವಿಯು ಕಾಳಿಕಾದೇವಿಯನ್ನು ಕುರಿತು ಹೀಗೆ ಹೇಳಿದಳು. ಎಲೈ ಕಾಳಿಕಾದೇವಿಯೇ, ಈ ಶುಂಭ, ನಿಶುಂಭರಿಬ್ಬರ ದಡ್ಡತನವನ್ನು ನೋಡು! ಇವರಿಬ್ಬರೂ ಈಗ ಮರಣವನ್ನು ಹೊಂದುವುದಕ್ಕಾಗಿ ನನ್ನ ಹತ್ತಿರಕ್ಕೆ ಬಂದಿರುತ್ತಾರೆ. ॥೬॥

ಭಯಂಕರವಾಗಿರುವ ರಾಕ್ಷಸರ ಸಂಹಾರವನ್ನೂ ರಕ್ತಬೀಜಾಸುರನ ವಧೆಯನ್ನೂ ನೋಡಿದ್ದರೂ ನನ್ನ ಮಾಯೆಯ ಅತಿಶಯವಾದ ಮಹಿಮೆಯಿಂದ ಮೋಹಿತರಾಗಿ ಯುದ್ಧದಲ್ಲಿ ಇನ್ನೂ ಜಯದ ಆಸೆಯನ್ನು ಇಟ್ಟುಕೊಂಡಿರುವರು. ದೇವಿಯು ಮಾಯಾವಿಶಿಷ್ಟವಾದ ಬ್ರಹ್ಮರೂಪಳೆಂಬುದು ಇಲ್ಲಿ ಸೂಚಿತವಾಗಿದೆ. ॥೭॥

ಆಶಾ ಬಲವತೀ ಹ್ಯೇಷಾ ನ ಜಹಾತಿ ನರಂ ಕ್ವಚಿತ್ ।
ಭಗ್ನಂ ಹೃತಬಲಂ ನಷ್ಟಂ ಗತಪಕ್ಷಂ ವಿಚೇತನಂ ॥೮॥

ಆಶಾಪಾಶನಿಬದ್ಧೌ ದ್ವೌ ಯುದ್ಧಾಯ ಸಮುಪಾಗತೌ ।
ನಿಹಂತವ್ಯೌ ಮಯಾ ಕಾಲಿ ರಣೇ ಶುಂಭನಿಶುಂಭಕೌ ॥೯॥

ಆಸನ್ನಮರಣಾವೇತೌ ಸಂಪ್ರಾಪ್ತೌ ದೈವಮೋಹಿತೌ ।
ಪಶ್ಯತಾಂ ಸರ್ವದೇವಾನಾಂ ಹನಿಷ್ಯಾಮ್ಯಹಮದ್ಯ ತೌ ॥೧೦॥

ಇತ್ಯುಕ್ತ್ವಾ ಕಾಲಿಕಾಂ ಚಂಡೀ ಕರ್ಣಾಕೃಷ್ಟಶರೋತ್ಕರೈಃ ।
ಛಾದಯಾಮಾಸ ತರಸಾ ನಿಶುಂಭಂ ಪುರತಃ ಸ್ಥಿತಂ ॥೧೧॥

---

ಲೋಕದಲ್ಲಿ ಪ್ರತಿಯೊಬ್ಬನಿಗೂ ತಾನು ಜಯಿಸಬೇಕೆಂಬ ಆಸೆಯು ಬಲವಾಗಿ ಇರುತ್ತದೆ. ಇದು ಯಾರನ್ನೂ ಬಿಡುವುದಿಲ್ಲ. ಮನುಷ್ಯನು ಯುದ್ಧದಲ್ಲಿ ಸೋತು ಹೋಗಿರಲಿ, ಅವನಿಗೆ ಶಕ್ತಿಯಿಲ್ಲದಿರಲಿ, ಅಥವಾ ಅವನಿಗೆ ಸಹಾಯವು ಇಲ್ಲದಿರಲಿ, ಅವನು ತನ್ನ ಸರ್ವಸ್ವವನ್ನೂ ಕಳೆದುಕೊಂಡಿರಲಿ, ಬುದ್ಧಿಯಿಲ್ಲದಿರಲಿ, ಹೇಗಿದ್ದರೂ ಯಾವ ಮನುಷ್ಯನನ್ನೂ ಈ ಜಯಾಸೆಯು ಬಿಟ್ಟುಹೋಗುವುದಿಲ್ಲವು. ॥೮॥

ಎಲೈ ಕಾಳಿಕಾದೇವಿಯೇ, ಆಶೆಯೆಂಬ ಹಗ್ಗದಿಂದ ಕಟ್ಟಲ್ಪಟ್ಟವರಾಗಿ ಯುದ್ಧಕ್ಕೋಸ್ಕರ ಬಂದಿರುವ ಈ ಶುಂಭನಿಶುಂಭರಿಬ್ಬರೂ ಯುದ್ಧದಲ್ಲಿ ನನ್ನಿಂದ ಕೊಲ್ಲಲ್ಪಡಲು ಯೋಗ್ಯರಾಗಿರುತ್ತಾರೆ. ॥೯॥

ಮರಣ ಕಾಲವು ಸಮೀಪಿಸಿರುವ ಮತ್ತು ಅದೃಷ್ಟದ ಮೋಹಕ್ಕೆ ಸಿಕ್ಕಿಕೊಂಡಿರುವ, ಯುದ್ಧಕ್ಕಾಗಿ ಬಂದು ಸಿಕ್ಕಿರುವ ಈ ರಾಕ್ಷಸರಿಬ್ಬರನ್ನೂ, ನಾನು ಎಲ್ಲ ದೇವತೆಗಳೂ ನೋಡುತ್ತಿರುವ ಹಾಗೆಯೇ ಈಗಲೇ ಕೊಂದು ಬಿಡುವೆನು. ॥೧೦॥

ವ್ಯಾಸಮುಷಿಯು ಹೇಳಿದನು.—ಚಂಡಿಕಾದೇವಿಯು ಕಾಳಿಕಾದೇವಿಯ ಸಂಗಡ ಹೀಗೆ ಹೇಳಿ ಕಿವಿಯ ವರೆಗೂ ಎಳೆದು ಬಿಟ್ಟ ಬಾಣಗಳಿಂದ ತನ್ನ ಎದುರಿಗೆ ಯುದ್ಧಕ್ಕಾಗಿ ನಿಂತಿರುವ ನಿಶುಂಭನನ್ನು ಮುಚ್ಚುವಂತೆ ಬೇಗನೆ ಹೊಡೆದಳು. ॥೧೧॥

ದಾನವೋಽಪಿ ಶರಾಂಸ್ತಸ್ಯಾಶ್ಚಿಚ್ಛೇದ ನಿಶಿತೈಃ ಶರೈಃ ।
ತಯೋಃ ಪರಸ್ಪರಂ ಯುದ್ಧಂ ಬಭೂವಾತಿಭಯಾನಕಂ ॥೧೨॥

ಕೇಸರೀ ಕೇಶಜಾಲಾನಿ ಧುನ್ವಾನಃ ಸೈನ್ಯಸಾಗರಂ ।
ಗಾಹಯಾಮಾಸ ಬಲವಾನ್ ಸರಸೀಂ ವಾರಣೋ ಯಥಾ ॥೧೩॥

ನಖೈರ್ದಂತಪ್ರಹಾರೈಸ್ತು ದಾನವಾನ್ ಪುರತಃ ಸ್ಥಿತಾನ್ ।
ಚಖಾದ ಚ ವಿಶೀರ್ಣಾಂಗಾನ್ ಗಜಾನಿವ ಮದೋತ್ಕಟಾನ್ ॥೧೪॥

ಏವಂ ವಿಮಥ್ಯಮಾನೇ ತು ಸೈನ್ಯೇ ಕೇಸರಿಣಾ ತದಾ ।
ಅಭ್ಯಧಾವನ್ನಿಶುಂಭೋಽಥ ವಿಕೃಷ್ಟವರಕಾರ್ಮುಕಃ ॥೧೫॥

ಅನ್ಯೇಽಪಿ ಕ್ರುದ್ಧಾ ದೈತ್ಯೇಂದ್ರಾ ದೇವೀಂ ಹಂತುಮುಪಾಯಯುಃ ।
ಸಂದಷ್ಟದಂತರಸನಾ ರಕ್ತನೇತ್ರಾ ಹ್ಯನೇಕಶಃ ॥೧೬॥

---

ನಿಶುಂಭನು ಕೂಡ ಆ ದೇವಿಯು ಬಿಟ್ಟ ಬಾಣಗಳನ್ನು ತನ್ನ ಹರಿತವಾದ ಬಾಣಗಳಿಂದ ಕತ್ತರಿಸಿದನು. ಅವರಿಬ್ಬರಿಗೂ ಬಹಳ ಭಯಂಕರವಾದ ಯುದ್ಧವು ಪರಸ್ಪರವಾಗಿ ನಡೆಯಿತು. ||೧೨||

ಸಿಂಹವೂ ತನ್ನ ಕೇಸರಗಳನ್ನು ಕೊಡವುತ್ತಾ, ದೊಡ್ಡ ಆನೆಯು ಕೊಳವನ್ನು ಪ್ರವೇಶಿಸುವ ಹಾಗೆ, ಸಮುದ್ರದಂತಿರುವ ರಾಕ್ಷಸರ ಸೇನೆಯನ್ನು ಪ್ರವೇಶಿಸಿತು. ||೧೩||

ಸಿಂಹವೂ ಕೂಡ ತನ್ನ ಉಗುರುಗಳಿಂದಲೂ ಮತ್ತು ಹಲ್ಲುಗಳ ಏಟಿನಿಂದಲೂ ಸಹ ಎದುರಿಗೆ ಇರುವ ರಾಕ್ಷಸರನ್ನು, ಮದದಿಂದ ಕೊಬ್ಬಿರುವ ಆನೆಗಳನ್ನು ಸೀಳಿ ಅವುಗಳ ಚೂರುಚೂರಾದ ಅಂಗಗಳನ್ನು ತಿನ್ನುವಂತೆ, ರಾಕ್ಷಸರನ್ನು ಕೊಂದು ತಿಂದಿತು ! ||೧೪||

ಆಗ ಯುದ್ಧದಲ್ಲಿ ಸಿಂಹದಿಂದ ಸೇನೆಯು ಹೀಗೆ ಹಾಳಾಗುತ್ತಿರುವುದನ್ನು ನೋಡಿ ನಿಶುಂಭನು ತನ್ನ ಶ್ರೇಷ್ಠವಾದ ಧನುಸ್ಸನ್ನು ಎಳೆದು ಹಿಡಿದುಕೊಂಡು ಬಾಣಗಳನ್ನು ಬಿಡುತ್ತಾ ಎದುರಿಸಿ ಓಡಿಬಂದನು. ||೧೫||

ಇತರರಾದ ಅನೇಕ ರಾಕ್ಷಸಶ್ರೇಷ್ಠರೂ ಕೋಪವುಳ್ಳವರಾಗಿ ತಮ್ಮ ತಮ್ಮ ಹಲ್ಲುಗಳನ್ನೂ, ನಾಲಿಗೆಯನ್ನೂ ಕಚ್ಚಿಕೊಂಡು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ದೇವಿಯನ್ನು ಹೊಡೆಯಲು ಬಂದರು. ||೧೬||

ತತ್ರಾಜಗಾಮ ತರಸಾ ಶುಂಭಃ ಸೈನ್ಯಸಮಾವೃತಃ ।
ನಿಹತ್ಯ ಕಾಲಿಕಾಂ ಕೋಪಾದ್ಗೃಹೀತುಂ ಜಗದಂಬಿಕಾಂ ॥೧೭॥

ತತ್ರಾಗತ್ಯ ದದರ್ಶಾಜಾವಂಬಿಕಾಂ ಚ ಪುರಃ ಸ್ಥಿತಾಂ ।
ರೌದ್ರರಸಯುತಾಂ ಕಾಂತಾಂ ಶೃಂಗಾರರಸಸಂಯುತಾಂ ॥೧೮॥

ತಾಂ ವೀಕ್ಷ್ಯ ವಿಪುಲಾಪಾಂಗೀಂ ತ್ರೈಲೋಕ್ಯವರಸುಂದರೀಂ ।
ಸುರಕ್ತನಯನಾಂ ರಮ್ಯಾಂ ಕ್ರೋಧರಕ್ತೇಕ್ಷಣಾಂ ತಥಾ ॥೧೯॥

ವಿವಾಹೇಚ್ಛಾಂ ಪರಿತ್ಯಜ್ಯ ಜಯಾಶಾಂ ದೂರತಸ್ತಥಾ ।
ಮರಣೇ ನಿಶ್ಚಯಂ ಕೃತ್ವಾ ತಸ್ಥಾವಾಹಿತಕಾರ್ಮುಕಃ ॥೨೦॥

ತಂ ತಥಾ ದಾನವಂ ದೇವೀ ಸ್ಮಿತಪೂರ್ವಮಿದಂ ವಚಃ ।
ಬಭಾಷೇ ಶೃಣ್ವತಾಂ ತೇಷಾಂ ದೈತ್ಯಾನಾಂ ರಣಮಸ್ತಕೇ ॥೨೧॥

---

ಸೇನೆಯಿಂದ ಕೂಡಿದವನಾಗಿ ಶುಂಭನು ಕಾಳಿಕಾದೇವಿಯನ್ನು ಯುದ್ಧದಲ್ಲಿ ಕೊಂದು ಅಂಬಿಕಾದೇವಿಯನ್ನು ಕೈಸೆರೆ ಹಿಡಿದುಕೊಂಡು ಹೋಗಬೇಕೆಂದು ರಣಾಂಗಣಕ್ಕೆ ಬೇಗನೆ ಬಂದನು. ॥೧೭॥

ಆ ಶುಂಭನು ಯುದ್ಧರಂಗದಲ್ಲಿ ಬಂದು ಸನ್ನಿವೇಶಕ್ಕೆ ತಕ್ಕಂತೆ ರೌದ್ರರಸದಿಂದಲೂ ಸ್ವಾಭಾವಿಕವಾದ ಶೃಂಗಾರರಸದಿಂದಲೂ ಕೂಡಿರುವ ಮನೋಹರಳಾದ ದೇವಿಯು ಎದುರಿಗೆ ನಿಂತಿರುವುದನ್ನು ಕಂಡನು. ॥೧೮॥

ವಿಸ್ತಾರವಾದ ಕಟಾಕ್ಷವುಳ್ಳವಳಾದ ಮತ್ತು ಮೂರು ಲೋಕಗಳಲ್ಲೂ ಉತ್ತಮ ಸುಂದರಿಯಾದ ನಸುಗೆಂಪಾದ ಕಣ್ಣುಳ್ಳವಳಾದುದರಿಂದ ನೋಡಲು ಚನ್ನಾಗಿರುವ ದೇವಿಯು ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿರುವುದನ್ನು ನೋಡಿ ಶುಂಭನು ಅವಳನ್ನು ಮದುವೆ ಮಾಡಿಕೊಳ್ಳಬೇಕೆಂಬ ಆಸೆಯನ್ನೂ, ಯುದ್ಧದಲ್ಲಿ ತಾನು ಜಯಿಸುವೆನೆಂಬ ಆಸೆಯನ್ನು ಸಹ ದೂರದಲ್ಲಿ ಬಿಟ್ಟು, ತನಗೆ ಮರಣವಾಗುವುದು ಖಂಡಿತವೆಂದು ನಿಶ್ಚಯ ಮಾಡಿಕೊಂಡು, ವೀರನಾದುದರಿಂದ ಧನುಸ್ಸನ್ನು ಬಲವಾಗಿ ಹಿಡಿದುಕೊಂಡು ಕಾಳಗಕ್ಕೆ ನಿಂತನು. ॥೧೯-೨೦॥

ಹಾಗೆ ಇರುವ ಆ ರಾಕ್ಷಸನನ್ನು ದೇವಿಯು ಮಂದಹಾಸದಿಂದ ನಗುತ್ತಾ ನೋಡಿ ಯುದ್ಧರಂಗದಲ್ಲಿ ಇತರರಾದ ರಾಕ್ಷಸರೆಲ್ಲರೂ ಕೇಳುವಂತೆ ಮುಂದೆ ಹೇಳುವ ಮಾತನ್ನು ಹೇಳಿದಳು. ॥೨೧॥

**ಗಚ್ಛಧ್ವಂ ಪಾಮರಾ ಯೂಯಂ ಪಾತಾಲಂ ವಾ ಜಲಾರ್ಣವಂ ।**
**ಜೀವಿತಾಶಾಂ ಸ್ಥಿರಾಂ ಕೃತ್ವಾ ತ್ಯಕ್ತ್ವಾ ಽತ್ರೈವಾಽಽಯುಧಾನಿ ಚ ॥೨೨॥**

**ಅಥವಾ ಮಚ್ಛರಾಘಾತಹತಪ್ರಾಣಾ ರಣಾಜಿರೇ ।**
**ಪ್ರಾಪ್ಯ ಸ್ವರ್ಗಸುಖಂ ಸರ್ವೇ ಕ್ರೀಡಂತು ವಿಗತಜ್ವರಾಃ ॥೨೩॥**

॥ ವ್ಯಾಸ ಉವಾಚ ॥

**ಕಾತರತ್ವಂ ಚ ಶೂರತ್ವಂ ನ ಭವತ್ಯೇವ ಸರ್ವಥಾ ।**
**ದದಾಮ್ಯಭಯದಾನಂ ವೈ ಯಾಂತು ಸರ್ವೇ ಯಥಾಸುಖಂ ॥೨೪॥**

**ಇತ್ಯಾಕರ್ಣ್ಯ ವಚಸ್ತಸ್ಯಾ ನಿಶುಂಭೋ ಮದಗರ್ವಿತಃ ।**
**ನಿಶಿತಂ ಖಡ್ಗಮಾದಾಯ ಚರ್ಮ ಚೈವಾಷ್ಟಚಂದ್ರಕಂ ॥೨೫॥**

---

ಪಾಮರರಾದ ರಾಕ್ಷಸರೇ, ನೀವು ನಿಮ್ಮ ಪ್ರಾಣದ ಮೇಲಿನ ಆಸೆಯನ್ನು ಸ್ಥಿರವಾಗಿ ಇಟ್ಟುಕೊಂಡು ನಿಮ್ಮ ನಿಮ್ಮ ಆಯುಧಗಳನ್ನು ಇಲ್ಲಿಯೇ ಬಿಟ್ಟು ಪಾತಾಳಲೋಕವನ್ನಾಗಲಿ ಅಥವಾ ಸಮುದ್ರವನ್ನಾಗಲಿ ಪ್ರವೇಶಮಾಡಿ ಬದುಕಿಕೊಳ್ಳಿರಿ. ॥೨೨॥

ಹಾಗಿಲ್ಲದಿದ್ದರೆ ನನ್ನ ಬಾಣದ ಏಟಿನಿಂದ ನೀವು ಯುದ್ಧರಂಗದಲ್ಲಿ ಪ್ರಾಣಗಳನ್ನು, ಬಿಟ್ಟು ಯಾವ ವಿಧವಾದ ಆತಂಕವೂ ಇಲ್ಲದವರಾಗಿ ವೀರಸ್ವರ್ಗವನ್ನು ಹೊಂದಿ ಅಲ್ಲಿ ಉಂಟಾಗುವ ಸೌಖ್ಯವನ್ನು ಸಂತೋಷದಿಂದ ಅನುಭವಿಸಿರಿ. ॥೨೩॥

ನಿಮಗೆಲ್ಲರಿಗೂ ನಾನು ಅಭಯಪ್ರದಾನ ಮಾಡಿರುತ್ತೇನೆ. ನೀವು ನಾನು ಹೇಳಿದಂತೆ ಮಾಡುವುದಾದರೆ ನಿಮ್ಮನ್ನು ನಾನು ಕೊಲ್ಲುವುದಿಲ್ಲ. ನಿಮ್ಮನ್ನು ಯಾವ ವಿಧವಾದ ಹಿಂಸೆಗೂ ಗುರಿಮಾಡುವುದಿಲ್ಲ. ನಿಮ್ಮ ಶೂರತ್ವವನ್ನು ಮಾತ್ರ ನಾನು ಯಾವಾಗಲೂ ಯಾವ ಪ್ರಕಾರದಲ್ಲೂ ಒಪ್ಪುವುದಿಲ್ಲ. ಇಷ್ಟರಿಂದ ಮಾತ್ರ ನೀವು ನಿಮ್ಮಷ್ಟಕ್ಕೆ ನಿಮ್ಮನ್ನು ಹೇಡಿಗಳೆಂದು ತಿಳಿದುಕೊಳ್ಳಬೇಡಿರಿ. ನೀವೆಲ್ಲರೂ, ನಿಮಗೆ ಎಲ್ಲ ಬಗೆಯಲ್ಲೂ ಹೇಗೆ ಆದರೆ ಸುಖವುಂಟಾಗುವುದೋ ಆ ಪ್ರಕಾರದಿಂದ ಕೆಲಸಮಾಡಿಕೊಂಡು ಇಲ್ಲಿಂದ ಹೊರಡಿರಿ. ॥೨೪॥

ವ್ಯಾಸಮಹರ್ಷಿಯು ಹೇಳಿದನು—ಹೆಚ್ಚಾದ ಶಕ್ತಿಯ ಮದದಿಂದ ಅಹಂಕಾರವುಳ್ಳವನಾದ ನಿಶುಂಭನು ಆ ದೇವಿಯು ಹೀಗೆ ಹೇಳಿದ ಮಾತನ್ನು ಕೇಳಿದನು. ಕೂಡಲೆ ಹರಿತವಾದ ತನ್ನ ಕತ್ತಿಯನ್ನೂ ಎಂಟು ಕಡೆಗಳಲ್ಲಿಯೂ ಭದ್ರವಾಗಿ

ಧಾವಮಾನಸ್ತು ತರಸಾಽಸಿನಾ ಸಿಂಹಂ ಮದೋತ್ಕಟಂ ।
ಜಘಾನಾತಿಬಲಾನ್ಮೂರ್ಧ್ನಿ ಭ್ರಾಮಯನ್ ಜಗದಂಬಿಕಾಂ ॥೨೬॥

ತತೋ ದೇವೀ ಸ್ವಗದಯಾ ವಂಚಯಿತ್ವಾಽಸಿಪಾತನಂ ।
ತಾಡಯಾಮಾಸ ತಂ ಬಾಹೋರ್ಮೂಲೇ ಪರಶುನಾ ತದಾ ॥೨೭॥

ಖಡ್ಗೇನ ನಿಹತಃ ಸೋಽಪಿ ಬಾಹುಮೂಲೇ ಮಹಾಮದಃ ।
ಸಂಸ್ತಭ್ಯ ವೇದನಾಂ ಭೂಯೋ ಜಘಾನ ಚಂಡಿಕಾಂ ತದಾ ॥೨೮॥

ಸಾಽಪಿ ಘಂಟಾಸ್ವನಂ ಘೋರಂ ಚಕಾರ ಭಯದಂ ನೃಣಾಂ ।
ಪಪೌ ಪುನಃ ಪುನಃ ಪಾನಂ ನಿಶುಂಭಂ ಹಂತುಮಿಚ್ಛತಿ ॥೨೯॥

---

ಕಟ್ಟಿಹಾಕಿರುವ ಚಂದ್ರಾಯುಧವನ್ನೂ ಗುರಾಣಿಯನ್ನೂ ತೆಗೆದುಕೊಂಡು, ಕೊಬ್ಬಿನಿಂದ ಕೂಡಿ ಎದುರಿಸಲು ಅಸಾಧ್ಯವಾಗಿರುವ ಆ ಚಂದ್ರಾಯುಧವನ್ನು ದೇವಿಯ ಮೇಲೆ ಪ್ರಯೋಗಿಸಿ ದೇವಿಯ ವಾಹನವಾದ ಸಿಂಹವನ್ನು ನೋಡಿ, ತಾನು ಓಡಿ ಬಂದು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಆ ಜಗನ್ಮಾತೆಯಾದ ದೇವಿಗೂ ಭ್ರಾಂತಿಯುಂಟಾಗುವಂತೆ ಮಾಡಿ, ಆ ಸಿಂಹದ ತಲೆಯ ಮೇಲೂ ಹೊಡೆದನು. (ಶುಂಭನು ಸ್ವಲ್ಪಹೊತ್ತು ನಿಶುಂಭನ ಯುದ್ಧವನ್ನು ನೋಡುತ್ತಿದ್ದು ಅರಮನೆಗೆ ಹಿಂತಿರುಗಿದನು.) ||೨೫-೨೬||

ಅನಂತರದಲ್ಲಿ ದೇವಿಯು ತನ್ನ ಗದೆಯಿಂದ ಅವನು ಪ್ರಯೋಗಿಸಿರುವ ಕತ್ತಿಯ ಏಟನ್ನು ತಪ್ಪಿಸಿಕೊಂಡು, ಆಗ ತನ್ನ ಕೊಡಲಿಯಿಂದ ಅವನನ್ನು ತೋಳಿನ ಬುಡದಲ್ಲಿ ಹೊಡೆದಳು. ||೨೭||

ಬಹಳ ಕೊಬ್ಬಿನಿಂದ ಕೂಡಿರುವ ಆ ನಿಶುಂಭನಾದರೋ ತನ್ನ ತೋಳಿನ ಬುಡದಲ್ಲಿ ದೇವಿಯು ಪ್ರಹರಿಸಿದರೂ ಆ ವೇದನೆಯನ್ನು ಸಹಿಸಿಕೊಂಡು ಆಗ ಚಂಡಿಕಾದೇವಿಯನ್ನು ಪುನಃ ಹೊಡೆದನು. ||೨೮||

ಆ ದೇವಿಯೂ ಕೂಡ ಜನರೆಲ್ಲರಿಗೂ ಭಯವನ್ನುಂಟುಮಾಡುವ ಭಯಂಕರವಾದ ಘಂಟಾನಾದವನ್ನು ಮಾಡಿದಳು. ಮತ್ತು ನಿಶುಂಭನನ್ನು ಕೊಲ್ಲಲು ಇಚ್ಛೆಯುಳ್ಳವಳಾಗಿ ಬಾರಿಬಾರಿಗೂ ಮದ್ಯದ ವೀರಪಾನವನ್ನು ಮಾಡಿದಳು. ||೨೯||

ಏವಂ ಪರಸ್ಪರಂ ಯುದ್ಧಂ ಬಭೂವಾತಿಭಯಪ್ರದಂ ।
ದೇವಾನಾಂ ದಾನವಾನಾಂ ಚ ಪರಸ್ಪರಜಯೈಷಿಣಾಂ ॥೩೦॥

ಪಲಾದಾಃ ಪಕ್ಷಿಣಃ ಕ್ರೂರಾಃ ಸಾರಮೇಯಾಶ್ಚ ಜಂಬುಕಾಃ ।
ನನೃತುಶ್ಚಾತಿಸಂತುಷ್ಟಾ ಗೃಧ್ರಾಃ ಕಂಕಾಶ್ಚ ವಾಯಸಾಃ ॥೩೧॥

ರಣಭೂರ್ಭಾತಿ ಭೂಯಿಷ್ಠಪತಿತಾಸುರವರ್ಷ್ಮಕೈಃ ।
ರುಧಿರಸ್ರಾವಸಂಯುಕ್ತೈರ್ಗಜಾಶ್ವದೇಹಸಂಕುಲಾ ॥೩೨॥

ಪತಿತಾನ್ದಾನವಾನ್ದೃಷ್ಟ್ವಾ ನಿಶುಂಭೋಽತಿರುಷಾನ್ವಿತಃ ।
ಪ್ರಯಯೌ ಚಂಡಿಕಾಂ ತೂರ್ಣಂ ಗದಾಮಾದಾಯ ದಾರುಣಾಂ ॥೩೩॥

ಸಿಂಹಂ ಜಘಾನ ಗದಯಾ ಮಸ್ತಕೇ ಮದಗರ್ವಿತಃ ।
ಪ್ರಹೃತ್ಯ ಚ ಸ್ಮಿತಂ ಕೃತ್ವಾ ಪುನರ್ದೇವೀಮತಾಡಯತ್ ॥೩೪॥

---

ಹೀಗೆ ಒಬ್ಬರನ್ನೊಬ್ಬರು ಜಯಿಸಲು ಅಪೇಕ್ಷಿಸುತ್ತಿರುವ ದೇವೀ ನಿಶುಂಭ ಇವರಿಗೂ ದೇವತೆಗಳಿಗೂ, ರಾಕ್ಷಸರಿಗೂ, ಸಹ ಯುದ್ಧವು ಬಹಳ ಭಯವನ್ನುಂಟು ಮಾಡುವಂತೆ ಪರಸ್ಪರವಾಗಿ ನಡೆಯಿತು ! ॥೩೦॥

ಮಾಂಸವನ್ನು ತಿನ್ನುವ ಹಕ್ಕಿಗಳೂ, ಕ್ರೂರವಾದ ನಾಯಿಗಳೂ ಮತ್ತು ನರಿಗಳೂ, ಬಕಗಳೂ, ರಣಹದ್ದುಗಳೂ, ಕಾಗೆಗಳೂ ಸಹ ತುಂಬ ಸಂತೋಷದಿಂದ ಕುಣಿದಾಡಿದುವು. ॥೩೧॥

ಯುದ್ಧರಂಗದ ಭೂಮಿಯು, ರಕ್ತ ಸುರಿಯುತ್ತಿರುವ ಆನೆ, ಕುದುರೆ ಇವುಗಳ ಶರೀರಗಳಿಂದಲೂ, ಹೆಚ್ಚಾಗಿ ಕತ್ತರಿಸಿ ಬಿದ್ದಿರುವ ರಾಕ್ಷಸರ ಶರೀರಗಳಿಂದಲೂ ತುಂಬಿರುತ್ತಾ ಉಜ್ವಲವಾಗಿತ್ತು ! ॥೩೨॥

ನಿಶುಂಭನು ಯುದ್ಧದಲ್ಲಿ ರಾಕ್ಷಸರು ಹತರಾಗಿ ಬಿದ್ದಿರುವುದನ್ನು ನೋಡಿ, ಬಹಳ ಕೋಪದಿಂದ ಕೂಡಿದವನಾಗಿ, ಭಯಂಕರವಾದ ಗದಾಯುಧವನ್ನು ತೆಗೆದುಕೊಂಡು ಬೇಗನೆ ಚಂಡಿಕಾದೇವಿಯನ್ನು ಕುರಿತು ಹೊಡೆಯಲು ನುಗ್ಗಿ ಮುಂದೆ ಬಂದನು. ॥೩೩॥

ಕೊಬ್ಬಿನ ಅಹಂಕಾರವುಳ್ಳವನಾದ ಆ ನಿಶುಂಭನು ತನ್ನ ಗದಾಯುಧದಿಂದ ಸಿಂಹವನ್ನು ತಲೆಯಮೇಲೆ ಹೊಡೆದನು. ಅನಂತರದಲ್ಲಿ ನಗುತ್ತಾ ದೇವಿಯನ್ನು ಬದಲಾಗಿ ಗದೆಯಿಂದ ಬಡಿದನು. ॥೩೪॥

**ಸಾऽಪಿ ತಂ ಕುಪಿತಾऽತೀವ ನಿಶುಂಭಂ ಪುರತಃ ಸ್ಥಿತಂ ।**
**ಪ್ರಹರಂತಂ ಸಮಿಾಕ್ಷ್ಯಾಥ ದೇವೀ ವಚನಮಬ್ರವೀತ್ ॥೩೫॥**

॥ ದೇವ್ಯುವಾಚ ॥

**ತಿಷ್ಠ ಮಂದಮತೇ ತಾವದ್ಯಾವತ್ಖಡ್ಗಮಿದಂ ತವ ।**
**ಗ್ರೀವಾಯಾಂ ಪ್ರೇರಯಾಮ್ಯಸ್ಮಾದ್ಗಂತಾऽಸಿ ಯಮಸಾದನಂ ॥೩೬॥**

॥ ವ್ಯಾಸ ಉವಾಚ ॥

**ಇತ್ಯುಕ್ತ್ವಾ ತರಸಾ ದೇವೀ ಕೃಪಾಣೇನ ಸಮಾಹಿತಾ ।**
**ಚಿಚ್ಛೇದ ಮಸ್ತಕಂ ತಸ್ಯ ನಿಶುಂಭಸ್ಯಾಥ ಚಂಡಿಕಾ ॥೩೭॥**

**ಸ ಚ್ಛಿನ್ನಮಸ್ತಕೋ ದೇವ್ಯಾ ಕಬಂಧೋऽತೀವ ದಾರುಣಃ ।**
**ಬಭ್ರಾಮ ಚ ಗದಾಪಾಣಿಸ್ತ್ರಾಸಯನ್ ದೇವತಾಗಣಾನ್ ॥೩೮॥**

---

ಆ ದೇವಿಯು ಮುಂದುಗಡೆಯಲ್ಲಿ ನಿಂತಿರುವ ನಿಶುಂಭನನ್ನು ನೋಡಿ ಅವನು ತನ್ನನ್ನೂ ಸಿಂಹವನ್ನೂ ಸಹ ಲಕ್ಷಿಸದೆ ಹೊಡೆಯುವುದನ್ನು ನೋಡಿ ಬಹಳ ಹೆಚ್ಚಾಗಿ ಕೋಪಗೊಂಡು ಹೀಗೆ ಹೇಳಿದಳು. ॥೩೫॥

ದೇವಿಯು ಹೇಳಿದಳು—ಎಲೈ ದಡ್ಡನೇ, ಸ್ಥಿರನಾಗಿ ನಿಲ್ಲು. ಈ ಕತ್ತಿಯನ್ನು ನಿನ್ನ ಕುತ್ತಿಗೆಯಲ್ಲಿ ನಾನು ಪ್ರೇರಿಸುವೆನು. ಇದರಿಂದ ನೀನು ಯಮನ ಮನೆಗೆ ಬೇಗನೆ ಹೋಗುವೆ. ಅಲ್ಲಿಯವರೆಗೂ ಸ್ಥಿರನಾಗಿ ನಿಂತಿರು. ॥೩೬॥

ವ್ಯಾಸಋಷಿಯು ಹೇಳಿದನು—ಚಂಡಿಕಾದೇವಿಯು ಹೀಗೆ ಹೇಳಿ ಬಹಳ ಜಾಗರೂಕಳಾಗಿ ಆ ನಿಶುಂಭನ ತಲೆಯನ್ನು ಕತ್ತಿಯಿಂದ ಬೇಗನೆ ಕತ್ತರಿಸಿದಳು. ॥೩೭॥

ದೇವಿಯಿಂದ ನಿಶುಂಭನ ತಲೆಯು ಕತ್ತರಿಸಲ್ಪಟ್ಟ ಅನಂತರದಲ್ಲೂ ಭಯಂಕರವಾದ ತಲೆಯಿಲ್ಲದ ಅವನ ಶರೀರವು ಗದೆಯನ್ನು ಹಾಗೆಯೇ ಹಿಡಿದುಕೊಂಡು ದೇವತೆಗಳನ್ನು ಬೆದರಿಸುವುದಾಗಿ ಯುದ್ಧರಂಗದಲ್ಲಿ ಪೂರ್ವವೇಗದಿಂದ ಸ್ವಲ್ಪ ಹೊತ್ತಿನವರೆಗೆ ಅಲೆದಾಡುತ್ತಿತ್ತು. ॥೩೮॥

ದೇವೀ ತಸ್ಯ ಶಿತೈರ್ಬಾಣೈಶ್ಚಿಚ್ಛೇದ ಚರಣೌ ಕರೌ ।
ಪಪಾತೋರ್ವ್ಯಾಂ ತತಃ ಪಾಪೀ ಗತಾಸುಃ ಪರ್ವತೋಪಮಃ ॥೩೯॥

ತಸ್ಮಿನ್ನಿಪತಿತೇ ದೈತ್ಯೇ ನಿಶುಂಭೇ ಭೀಮವಿಕ್ರಮೇ ।
ಹಾಹಾಕಾರೋ ಮಹಾನಾಸೀತ್ತತ್ಸೈನ್ಯೇ ಭಯಕಂಪಿತೇ ॥೪೦॥

ತ್ಯಕ್ತ್ವಾಽಯುಧಾನಿ ಸರ್ವಾಣಿ ಸೈನಿಕಾಃ ಕ್ಷತಜಾಽಽಪ್ಲುತಾಃ ।
ಜಗ್ಮುರ್ಬುಂಬಾರವಂ ಸರ್ವೇ ಕುರ್ವಾಣಾ ರಾಜಮಂದಿರಂ ॥೪೧॥

ತಾನಾಗತಾನ್ಸುಸಂಪ್ರೇಕ್ಷ್ಯ ಶುಂಭಃ ಶತ್ರುನಿಷೂದನಃ ।
ಪಪ್ರಚ್ಛ ಕ್ವ ನಿಶುಂಭೋಽಸೌ ಕಥಂ ಭಗ್ನಾಃ ಪಲಾಯಿತಾಃ ॥೪೨॥

ತಚ್ಛ್ರುತ್ವಾ ವಚನಂ ರಾಜ್ಞಸ್ತೇ ಪ್ರೋಚುಃ ಪ್ರಣತಾ ಭೃಶಂ ।
ರಾಜಂಸ್ತೇ ನಿಹತೋ ಭ್ರಾತಾ ಶೇತೇ ಸಮರಮೂರ್ಧನಿ ॥೪೩॥

---

ಅನಂತರದಲ್ಲಿ ದೇವಿಯು ಹರಿತವಾದ ಬಾಣಗಳಿಂದ ಅವನ ಕಾಲುಗಳನ್ನೂ, ಕೈಯಿಗಳನ್ನೂ ಸಹ ಕತ್ತರಿಸಿದಳು. ಆ ಮೇಲೆ ಬೆಟ್ಟಕ್ಕೆ ಸಮನಾದ ಶರೀರವುಳ್ಳ ಆ ಪಾಪಿಯು ಪ್ರಾಣವನ್ನು ಕಳೆದುಕೊಂಡವನಾಗಿ ಭೂಮಿಯಲ್ಲಿ ಬಿದ್ದನು. ॥೪೦॥

ಭಯಂಕರವಾದ ಪರಾಕ್ರಮವುಳ್ಳ, ರಾಕ್ಷಸನಾದ ಆ ನಿಶುಂಭನು ಹೀಗೆ ಹತನಾದ ತರುವಾಯ ಭಯದಿಂದ ನಡುಗುತ್ತಿರುವ ಆ ರಾಕ್ಷಸರ ಸೇನೆಯಲ್ಲಿ ಹಾ! ಹಾ! ಕಾರವು ಬಹಳಮಟ್ಟಿಗೆ ಎದ್ದಿತು. ॥೪೦॥

ಸೇನೆಯವರೆಲ್ಲರೂ ಎಲ್ಲ ಆಯುಧಗಳನ್ನೂ ಬಿಟ್ಟು, ರಕ್ತದಿಂದ ನೆನೆಸಲ್ಪಟ್ಟ ಶರೀರವುಳ್ಳವರಾಗಿ ಮುಖವಾದ್ಯವನ್ನು ಮಾಡುತ್ತಾ ಹಿಂತಿರುಗಿ ರಾಜನಾದ ಶುಂಭನ ಮನೆಯನ್ನು ಸೇರಿದರು. ॥೪೧॥

ಶತ್ರುಗಳನ್ನು ನಾಶಪಡಿಸುವವನಾದ ಆ ಶುಂಭನು ಹಿಂತಿರುಗಿ ಬಂದಿರುವ ಅವರನ್ನು ಚನ್ನಾಗಿ ನೋಡಿ, ನಿಶುಂಭನು ಎಲ್ಲಿ? ನೀವು ಹೇಗೆ ಯುದ್ಧದಲ್ಲಿ ಸೋತು ಓಡಿಬಂದಿರುತ್ತೀರಿ? ಇದನ್ನು ನನಗೆ ಹೇಳಿ. ಎಂದು ಕೇಳಿದನು. ॥೪೨॥

ರಾಜನಾದ ಶುಂಭನ ಆ ಮಾತುಗಳನ್ನು ಕೇಳಿ, ಆ ರಾಕ್ಷಸರು ಅವನಿಗೆ ಭಕ್ತಿಪೂರ್ವಕವಾಗಿ ನಮಸ್ಕಾರವನ್ನು ಮಾಡಿ, ಓ ರಾಜನೇ, ನಿನ್ನ ತಮ್ಮನಾದ ನಿಶುಂಭನು ಯುದ್ಧರಂಗದಲ್ಲಿ ಹೊಡೆಯಲ್ಪಟ್ಟು ಸತ್ತುಬಿದ್ದಿರುವನು! ॥೪೩॥

ತಯಾ ನಿಪಾತಿತಾಃ ಶೂರಾಃ ಯೇ ಚ ತೇಽಪ್ಯನುಜಾಽನುಗಾಃ ।
ವಯಂ ತ್ವಾಂ ಕಥಿತುಂ ಸರ್ವಂ ವೃತ್ತಾಂತಂ ಸಮುಪಾಗತಾಃ ॥೪೪॥

ನಿಶುಂಭೋ ನಿಹತಸ್ತತ್ರ ತಯಾ ಚಂಡಿಕಯಾಽಧುನಾ ।
ನ ಹಿ ಯುದ್ಧಸ್ಯ ಕಾಲೋಽದ್ಯ ತವ ರಾಜನ್ ರಣಾಂಗಣೇ ॥೪೫॥

ದೇವಕಾರ್ಯಂ ಸಮುದ್ದಿಶ್ಯ ಕಾಽಪೀಯಂ ಪರಮಾಂಗನಾ ।
ಹಂತುಂ ದೈತ್ಯಕುಲಂ ನೂನಂ ಪ್ರಾಪ್ತೇತಿ ಪರಿಚಿಂತಯ ॥೪೬॥

ನೈಷಾ ಪ್ರಾಕೃತಯೋಷೈವ ದೇವೀ ಶಕ್ತಿರನುತ್ತಮಾ ।
ಅಚಿಂತ್ಯಚರಿತಾ ಕ್ವಾಪಿ ದುರ್ಜ್ಞೇಯಾ ದೈವತೈರಪಿ ॥೪೭॥

ನಾನಾರೂಪಧರಾಽತೀವ ಮಾಯಾಮೂಲವಿಶಾರದಾ ।
ವಿಚಿತ್ರಭೂಷಣಾ ದೇವೀ ಸರ್ವಾಯುಧಧರಾ ಶುಭಾ ॥೪೮॥

---

ನಿನ್ನ ತಮ್ಮನನ್ನು ಅನುಸರಿಸಿಕೊಂಡು ಬೆಂಬಲವಾಗಿ ಹೋಗಿದ್ದ ಶೂರರೆಲ್ಲರೂ ಆ ದೇವಿಯಿಂದ ನಾಶಮಾಡಲ್ಪಟ್ಟರು! ನಾವು ಮಾತ್ರ ನಿನಗೆ ಈ ವರ್ತಮಾನವೆಲ್ಲವನ್ನೂ ಹೇಳುವುದಕ್ಕಾಗಿ ಹಿಂತಿರುಗಿ ಬಂದಿರುತ್ತೇವೆ. ॥೪೪॥

ಓ ರಾಜನೇ, ಆ ಚಂಡಿಕಾದೇವಿಯಿಂದ ಈಗ ನಿಶುಂಭನು ಆ ಯುದ್ಧರಂಗದಲ್ಲಿ ಕೊಲ್ಲಲ್ಪಟ್ಟನು! ನಿನಗೆ ಈಗ ಯುದ್ಧಮಾಡಲು ಅನುಕೂಲವಾದ ಕಾಲವು ಅಲ್ಲವು! ॥೪೫॥

ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿ ಯಾರೋ ಮಹಾಮಹಿಮಳಾದ ಒಬ್ಬ ಶ್ರೇಷ್ಠಳಾದ ಹೆಂಗುಸು ರಾಕ್ಷಸರ ವಂಶವನ್ನು ನಿರ್ಮೂಲಮಾಡುವುದಕ್ಕಾಗಿ ಇಲ್ಲಿಗೆ ಬಂದಿರುತ್ತಾಳೆಂಬುದನ್ನು ನೀನು ಚನ್ನಾಗಿ ಯೋಚಿಸು. ॥೪೬॥

ಈ ಸ್ತ್ರೀಯು ಇತರ ಸ್ತ್ರೀಯರಂತೆ ಸಾಮಾನ್ಯಳಾದ ಸ್ತ್ರೀಯಾಗಿಲ್ಲವು. ದೇವತೆಗಳಿಂದಲೂ ತಿಳಿಯಲು ಅಸಾಧ್ಯವಾದ ಚರಿತ್ರೆಯುಳ್ಳವಳಾದ ಈಕೆಯು ಸರ್ವಶ್ರೇಷ್ಠಳಾದ ದೇವತೆಗಳೆಲ್ಲರ ಶಕ್ತಿದೇವಿಯಾಗಿರಬೇಕು! ॥೪೭॥

ಈ ದೇವಿಯು ಅನೇಕವಿಧವಾದ ರೂಪಗಳನ್ನು ಧರಿಸಿರುವವಳು. ಮಾಯೆಯ ಮೂಲಕಾರಣವನ್ನು ಚನ್ನಾಗಿ ತಿಳಿದಿರುವವಳು. ಅನೇಕ ವಿಧವಾದ ಆಭರಣಗಳಿಂದ

**ಗಹನಾ ಗೂಢಚರಿತಾ ಕಾಲರಾತ್ರಿರಿವಾಪರಾ ।**
**ಅಪಾರಪಾರಗಾ ಪೂರ್ಣಾ ಸರ್ವಲಕ್ಷಣಸಂಯುತಾ ॥೪೯॥**

**ಅಂತರಿಕ್ಷಸ್ಥಿತಾ ದೇವಾಸ್ತಾಂ ಸ್ತುವಂತ್ಯಕುತೋಭಯಾಃ ।**
**ದೇವಕಾರ್ಯಂ ಚ ಕುರ್ವಾಣಾಂ ಶ್ರೀದೇವೀಂ ಪರಮಾದ್ಭುತಾಂ ॥೫೦॥**

**ಪಲಾಯನಂ ಪರೋ ಧರ್ಮಃ ಸರ್ವಥಾ ದೇಹರಕ್ಷಣಂ ।**
**ರಕ್ಷಿತೇ ಕಿಲ ದೇಹೇಽಸ್ಮಿನ್ ಕಾಲೇಽಸ್ಮತ್ಸುಖತಾಂ ಗತೇ ॥೫೧॥**

---

ಅಲಂಕರಿಸಿಕೊಂಡಿರುವ, ನಾನಾಬಗೆಯ ಆಯುಧಗಳನ್ನು ಧರಿಸಿಕೊಂಡಿರುವ, ಮಂಗಳಕರಳಾದ ದೇವಿಯಾಗಿರುತ್ತಾಳೆ! ॥೪೮॥

ಈ ದೇವಿಯು ಯಾರೆಂಬುದು, ಇತರರು ಯಾರಿಂದಲೂ ತಿಳಿಯಲಸಾಧ್ಯ ವಾಗಿದೆ! ಎರಡನೆಯ ಕಾಳರಾತ್ರಿಯೋ ಎಂಬ ಹಾಗೆ ಈ ದೇವಿಯು ಇರುವಳು. ಇವಳ ನಡವಳಿಕೆಯ ಚರಿತ್ರೆಯನ್ನು ತಿಳಿಯಲು ಸಾಧ್ಯವೇ ಇಲ್ಲವು. ಈ ದೇವಿಯು ಅಪಾರವಾದ ಈ ಸಂಸಾರಸಾಗರದ ಅಥವಾ ಜ್ಞಾನಸಮುದ್ರದ ಇನ್ನೊಂದು ದಡ ವನ್ನೂ ತಲಪಿರುವವಳು, ಎಲ್ಲೆಡೆಗಳಲ್ಲೂ ವ್ಯಾಪಿಸಿರುವವಳು, ಎಲ್ಲ ವಿಧವಾದ ಒಳ್ಳೆಯ ಗುಣಗಳಿಂದ ತುಂಬಿರುವವಳು, ಮತ್ತು ಸಮಸ್ತವಾದ ಶುಭಲಕ್ಷಣಗಳಿಂದ ಕೂಡಿರುವವಳೂ ಆಗಿರುತ್ತಾಳೆ. ಎಂದು ತೋರುತ್ತಿದೆ! ದೇವಿಯದರ್ಶನದಿಂದ ರಾಕ್ಷ ಸರಿಗೂ ಸಮಯವಿಶೇಷಗಳಲ್ಲಿ ಮೇಲಾದ ತಿಳಿವಳಿಕೆಯು ತೋರಿ ಮರೆಯಾಗುವು ದುಂಟೆಂಬುದನ್ನು ಗಮನಿಸಬಹುದು. ॥೪೯॥

ದೇವತೆಗಳು ಯಾವ ಭಯವೂ ಇಲ್ಲದವರಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು ದೇವಕಾರ್ಯವನ್ನು ಮಾಡುತ್ತಿರುವ ಬಹಳ ಆಶ್ಚರ್ಯಕರಳಾದ ಈ ಶ್ರೀದೇವಿಯನ್ನು ಸ್ತೋತ್ರಮಾಡುತ್ತಿರುವರು. ॥೫೦॥

ಓ ಪ್ರಭುವೇ, ಇಂತಹ ಪ್ರತಿಕೂಲ ಸಮಯದಲ್ಲಿ ನೀನು ಯುದ್ಧ ಮಾಡು ವುದನ್ನು ಬಿಟ್ಟು ಕಣ್ಮರೆಯಾಗಿರುವುದು ನಿನಗೆ ಧರ್ಮವು. ಸರ್ವಪ್ರಕಾರದಿಂದಲೂ ಶರೀರವನ್ನು ರಕ್ಷಿಸಿಕೊಳ್ಳುವುದೂ ಉತ್ತಮವಾಗಿರುವ ಧರ್ಮವಾಗಿದೆ. ಈ ಶರೀರ ವನ್ನು ಕಾಪಾಡಿಕೊಂಡಲ್ಲಿ ನಮಗೆ ಸುಖವನ್ನುಂಟುಮಾಡುವ ಕಾಲವು ಬರುವುದು. ನಮಗೆ ಆಗ ಯುದ್ಧದಲ್ಲಿ ಜಯವು ಖಂಡಿತವಾಗಿ ಲಭಿಸುವುದು. ॥೫೧॥

ಸಂಗ್ರಾಮೋ ವಿಜಯೋ ರಾಜನ್ ಭವಿತಾ ತೇ ನ ಸಂಶಯಃ ।
ಕಾಲಃ ಕರೋತಿ ಬಲಿನಂ ಸಮಯೇ ನಿರ್ಬಲಂ ಕ್ವಚಿತ್ ॥೫೨॥

ತಂ ಪುನಃ ಸಬಲಂ ಕೃತ್ವಾ ಜಯಾಯೋಪದಧಾತಿ ಹಿ ।
ದಾತಾರಂ ಯಾಚಕಂ ಕಾಲಃ ಕರೋತಿ ಸಮಯೇ ಕ್ವಚಿತ್ ॥೫೩॥

ಭಿಕ್ಷುಕಂ ಧನದಾತಾರಂ ಕರೋತಿ ಸಮಯಾಂತರೇ ।
ವಿಷ್ಣುಃ ಕಾಲವಶೇ ನೂನಂ ಬ್ರಹ್ಮಾ ವಾ ಪಾರ್ವತೀಪತಿಃ ॥೫೪॥

ಇಂದ್ರಾದ್ಯಾ ನಿರ್ಜರಾಃ ಸರ್ವೇ ಕಾಲ ಏವ ಪ್ರಭುಃ ಸ್ವಯಂ ।
ತಸ್ಮಾತ್ಕಾಲಂ ಪ್ರತೀಕ್ಷಸ್ವ ವಿಪರೀತಂ ತವಾಽಧುನಾ ॥೫೫॥

ಸಂಮುಖೋ ದೇವತಾನಾಂ ಚ ದೈತ್ಯಾನಾಂ ನಾಶಹೇತುಕಃ ।
ಏಕೈವ ಚ ಗತಿರ್ನಾಸ್ತಿ ಕಾಲಸ್ಯ ಕಿಲ ಭೂಪತೇ ॥೫೬॥

---

ಕಾಲವು ಆಯಾ ಪ್ರಾಣಿಗಳಿಗೆ ಅನುಕೂಲವಾಗಿದ್ದಾಗ ಅವರನ್ನು ಬಲವುಳ್ಳವರನ್ನಾಗಿ ಮಾಡುವುದು. ಹಾಗೆಯೇ ಪ್ರತಿಕೂಲವಾದಾಗ ಅವರನ್ನು ಬಲವಿಲ್ಲದವರನ್ನಾಗಿಯೂ ಮಾಡುವುದು. ಹೀಗೆ ಮಾಡತಕ್ಕ ಕಾಲವು ಬದಲಾಗಿ ಅವರವರಿಗೆ ಬಲವನ್ನುಂಟುಮಾಡಿ ಜಯವನ್ನೂ ಉಂಟುಮಾಡಿಕೊಡುವುದು. ||೫೨||

ಕಾಲವು ಒಂದೊಂದು ವೇಳೆಯಲ್ಲಿ ದಾನ ಮಾಡುವವನನ್ನು ಯಾಚಕನನ್ನಾಗಿಯೂ, ಇನ್ನೊಂದು ವೇಳೆಯಲ್ಲಿ ಭಿಕ್ಷುಕನನ್ನು ದಾನಮಾಡುವವನನ್ನಾಗಿಯೂ ಮಾಡುವುದು. ||೫೩||

ವಿಷ್ಣುವೂ, ಬ್ರಹ್ಮನೂ, ಪಾರ್ವತೀಪತಿಯಾದ ಶಿವನೂ, ಇಂದ್ರನೇ ಮೊದಲಾದ ದೇವತೆಗಳೂ ಎಲ್ಲರೂ ಸಹ ಕಾಲಕ್ಕೆ ಅಧೀನರಾಗಿರುವರು. ಆದುದರಿಂದ ಕಾಲವು ಎಲ್ಲರಿಗೂ ಪ್ರಭುವಾಗಿರುವುದು. ಈ ವಿಧವಾಗಿರುವ ಕಾಲವು ನಿನಗೆ ಈಗ ಪ್ರತಿಕೂಲವಾಗಿರುವ ಕಾರಣ ನೀನು ಕಾಲವನ್ನು ನಿರೀಕ್ಷಣೆ ಮಾಡಿಕೊಂಡು ಸುಮ್ಮನಿರುವುದು ಉತ್ತಮ. ||೫೪-೫೫||

ಓ ಸ್ವಾಮಿಯೇ, ಹೀಗಿರುವ ಕಾಲವು ದೇವತೆಗಳಿಗೆ ಅನುಕೂಲವಾದರೆ ಆಗ ಅದು ರಾಕ್ಷಸರ ನಾಶಕ್ಕೆ ಕಾರಣವಾಗುವುದು. ಹಾಗೆಯೇ ಅದು ರಾಕ್ಷಸರಿಗೆ ಅನು

ನಾನಾರೂಪಧರಾಸ್ಯಸ್ತಿ ಜ್ಞಾತವ್ಯಂ ತಸ್ಯ ಚೇಷ್ಟಿತಂ ।
ಕದಾಚಿತ್ಸಂಭವೋ ನೃಣಾಂ ಕದಾಚಿತ್ಪ್ರಲಯಸ್ತಥಾ ॥೫೭॥

ಉತ್ಪತ್ತಿಹೇತುಃ ಕಾಲೋಽನ್ಯಃ ಕ್ಷಯಹೇತುಸ್ತಥಾಪರಃ ।
ಪ್ರತ್ಯಕ್ಷಂ ತೇ ಮಹಾರಾಜ ದೇವಾಃ ಸರ್ವೇ ಸವಾಸವಾಃ ॥೫೮॥

ಕರದಾಸ್ತೇ ಕೃತಾಃ ಪೂರ್ವಂ ಕಾಲೇನ ಸಂಮುಖೇನ ಚ ।
ತೇಽಸ್ಯೈವ ವಿಮುಖೇನಾದ್ಯ ಬಲಿನೋಽಬಲಯಾಽಸುರಾಃ ॥೫೯॥

ನಿಹತಾ ನಿತರಾಂ ಕಾಲಃ ಕರೋತಿ ಚ ಶುಭಾಶುಭಂ ।
ನೈವಾತ್ರ ಕಾರಣಂ ಕಾಲೀ ನೈವ ದೇವಾಃ ಸನಾತನಾಃ ॥೬೦॥

ಯಥಾ ತೇ ರೋಚತೇ ರಾಜಂಸ್ತಥಾ ಕುರು ವಿಮೃಶ್ಯ ಚ ।
ಕಾಲೋಽಯಂ ನಾತ್ರ ಹೇತುಸ್ತೇ ದಾನವಾನಾಂ ತಥಾ ಪುನಃ ॥೬೧॥

---

ಕೂಲವಾದರೆ ದೇವತೆಗಳ ನಾಶಕ್ಕೆ ಕಾರಣವಾಗುವುದು. ಹೀಗೆ ಕಾಲವು ಯಾವಾಗಲೂ ಒಬ್ಬರಿಗೇ ಒಂದೇ ರೂಪವುಳ್ಳದ್ದಾಗಿರುವುದಿಲ್ಲವು. ||೫೬||

ಆ ಕಾಲವು ಕೆಲಸವು ಮಾಡತಕ್ಕ ರೀತಿಯು ಯಾವಾಗಲೂ ಒಂದೇ ವಿಧವಾಗಿರುವುದೆಂದು ತಿಳಿಯುವುದಕ್ಕಾಗುವುದಿಲ್ಲವು. ಆದುದರಿಂದ ಆ ಕಾಲವು ಮಾಡುವ ಕೆಲಸವು ಅನೇಕ ವಿಧವಾಗಿರುತ್ತದೆ. ಈ ಕಾಲವು ಒಂದು ಸಮಯದಲ್ಲಿ ಜನರ ಉತ್ಪತ್ತಿಗೆ ಕಾರಣವಾಗಿರುತ್ತದೆ. ಮತ್ತೊಂದುವೇಳೆ ಇದು ಜನರ ನಾಶಕ್ಕೆ ಕಾರಣವಾಗಿರುವುದು. ||೫೭||

ಆದುದರಿಂದ ಪ್ರಾಣಿಗಳ ಉತ್ಪತ್ತಿಗೆ ಕಾರಣವಾದ ಕಾಲವೂ ಬೇರೆಯಾಗಿರುವುದು. ಹಾಗೆಯೇ ಪ್ರಾಣಿಗಳ ನಾಶಕ್ಕೆ ಕಾರಣವಾದ ಕಾಲವೂ ಬೇರೆಯಾಗಿರುವುದು. ಓ ಮಹಾರಾಜನೇ, ಇದು ನಿನಗೆ ಸಾಕ್ಷಾತ್ತಾಗಿ ಅನುಭವಕ್ಕೂ ಬಂದಿರುತ್ತದೆ. ಹೇಗೆಂದರೆ ನಿನಗೆ ಅನುಕೂಲವಾಗಿದ್ದ ಕಾಲದಿಂದ ಮೊದಲು ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ನಿನಗೆ ಸೋತು ಅಧೀನರಾಗಿ ಕಪ್ಪವನ್ನು ಕೊಡುವವರಾಗಿದ್ದರು. ಈಗ ಅದೇ ಕಾಲವು ಪ್ರತಿಕೂಲವಾಗಿರುವಕಾರಣ ಬಲವುಳ್ಳವರಾದರೂ ರಾಕ್ಷಸರು ಒಬ್ಬ ಹೆಂಗಸಿನಿಂದ ಕೊಲ್ಲಲ್ಪಟ್ಟರು ! ||೫೮-೫೯||

ಆದುದರಿಂದ ಕಾಲವೇ ಜನರಿಗೆ ಒಳ್ಳೆಯದನ್ನೂ, ಕೆಟ್ಟದ್ದನ್ನೂ ಮಾಡುವುದು. ಆದುದರಿಂದ ಈಗ ರಾಕ್ಷಸರು ನಾಶವಾದುದಕ್ಕೆ ಕಾಳಿಯೂ, ಯಾವಾಗಲೂ

ತ್ವದಗ್ರತೋ ಗತಃ ಶಕ್ರೋ ಭಗ್ನಃ ಸಂಖ್ಯೇ ನಿರಾಯುಧಃ ।
ತಥಾ ವಿಷ್ಣುಸ್ತಥಾ ರುದ್ರೋ ವರುಣೋ ಧನದೋ ಯಮಃ ॥೬೨॥

ತಥಾ ತ್ವಮಪಿ ರಾಜೇಂದ್ರ ವೀಕ್ಷ್ಯ ಕಾಲವಶಂ ಜಗತ್ ।
ಪಾತಾಲಂ ಗಚ್ಛ ತರಸಾ ಜೀವನ್ ಭದ್ರಮವಾಪ್ಸ್ಯಸಿ ॥೬೩॥

ಮೃತೇ ತ್ವಯಿ ಮಹಾರಾಜ ಶತ್ರವಸ್ತೇ ಮುದಾನ್ವಿತಾಃ ।
ಮಂಗಲಾನಿ ಪ್ರಗಾಯಂತೋ ವಿಚರಿಷ್ಯಂತಿ ಸರ್ವತಃ ॥೬೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ತ್ರಿಂಶೋಽಧ್ಯಾಯಃ

---

ಇರುವ ದೇವತೆಗಳೂ ಕೂಡ ಕಾರಣರಲ್ಲವು ! ಓ ರಾಜನೇ, ಈಗ ನಿನಗೆ ಹೇಗೆ ಮಾಡುವುದು ಸರಿ ಎಂದು ತೋರುವುದೋ, ಅದನ್ನು ಚನ್ನಾಗಿ ವಿಮರ್ಶೆಮಾಡಿ ಕೆಲಸವನ್ನು ಮಾಡು. ಈಗಿನ ಕಾಲವು ನಿನಗೂ ಮತ್ತು ರಾಕ್ಷಸರಿಗೂ ಅನುಕೂಲ ವಾದುದಾಗಿಲ್ಲವು. ॥೬೦-೬೧॥

ಏಕೆಂದರೆ, ನಿನ್ನ ಎದುರಿಗೆ ಮೊದಲು ಇಂದ್ರನು ಯುದ್ಧದಲ್ಲಿ ಸೋತವನಾಗಿ ಆಯುಧವಿಲ್ಲದವನಾದನು. ಹೀಗೆಯೇ ವಿಷ್ಣುವೂ, ರುದ್ರನೂ, ವರುಣನೂ ಕುಬೇರನೂ ಯಮನೂ ಸಹ ಸೋತು ನಿರಾಯುಧರಾದರು. ॥೬೨॥

ಓ ರಾಜೇಂದ್ರನೇ, ನೀನೂ ಕೂಡ ಈ ಪ್ರಪಂಚವು ಕಾಲಕ್ಕೆ ಅಧೀನನಾಗಿ ರುವುದೆಂಬುದನ್ನು ತಿಳಿದು, ಬೇಗನೆ ಪಾತಾಳಲೋಕಕ್ಕೆ ಹೋಗು. ಬದುಕಿದ್ದರೆ ಒಳ್ಳೆಯದನ್ನು ಹೊಂದುವೆ ! ॥೬೩॥

ಓ ಮಹಾರಾಜನೇ, ನೀನು ಈ ಮಾತನ್ನು ಕೇಳದೆ ಯುದ್ಧಕ್ಕೆ ಹೋಗಿ ಮರಣವನ್ನು ಹೊಂದಿದರೆ, ನಿನ್ನ ಶತ್ರುಗಳು ಸಂತೋಷದಿಂದ ಕೂಡಿದವರಾಗಿ ಸುಖಕರವಾದ ಸಂಗೀತಗಳನ್ನು ಹಾಡುವವರಾಗಿ ಎಲ್ಲ ಕಡೆಯಲ್ಲಿಯೂ ಸ್ವೇಚ್ಛೆ ಯಿಂದ ಸ್ವತಂತ್ರರಾಗಿ ಸಂಚಾರಮಾಡುವರು. ಆದುದರಿಂದ ಅಷ್ಟಕ್ಕೆ ಅವಕಾಶ ಕೊಡದಂತೆ ನೀನು ಬದುಕಿಕೊಂಡಿರುವುದಕ್ಕೆ ತಕ್ಕ ಪ್ರಯತ್ನವನ್ನು ಮಾಡತಕ್ಕದ್ದು ಉತ್ತಮವಾಗಿರುವುದು ! ॥೬೪॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

॥ ಏಕತ್ರಿಂಶೋಽಧ್ಯಾಯಃ ॥

### ಮೂವತ್ತೊಂದನೆಯ ಅಧ್ಯಾಯವು

॥ ವ್ಯಾಸ ಉವಾಚ ॥

**ಇತಿ ತೇಷಾಂ ವಚಃ ಶ್ರುತ್ವಾ ಶುಂಭೋದೈತ್ಯ ಪತಿಸ್ತಥಾ ।**
**ಉವಾಚ ಸೈನಿಕಾನಾಶು ಕೋಪಾಕುಲಿತಲೋಚನಃ ॥೧॥**

॥ ಶುಂಭ ಉವಾಚ ॥

**ಜಾಲ್ಮಾಃ ಕಿಂ ಬ್ರೂತ ದುರ್ವಾಚ್ಯಂ ಕೃತ್ವಾ ಜೀವಿತುಮುತ್ಸಹೇ ।**
**ನಿಹತ್ಯ ಸಚಿವಾನ್ ಭ್ರಾತ್ರ್ಯನ್ನಿರ್ಲಜ್ಜೋ ವಿಚರಾಮಿ ಕಿಂ ॥೨॥**

**ಕಾಲಃ ಕರ್ತಾ ಶುಭಾನಾಂ ವಾಽಶುಭಾನಾಂ ಬಲವತ್ತರಃ ।**
**ಕಾ ಚಿಂತಾ ಮಮ ದುರ್ವಾರೇ ತಸ್ಮಿನ್ನೀಶೇಽಪ್ಯರೂಪಕೇ ॥೩॥**

---

ವ್ಯಾಸಋಷಿಯು ಹೇಳಿದನು—ರಾಕ್ಷಸರಿಗೆ ರಾಜನಾಗಿರುವ ಶುಂಭನು ಹೀಗೆ ಹೇಳಿದ ಆ ರಾಕ್ಷಸರ ಮಾತುಗಳನ್ನು ಕೇಳಿ ಕೋಪದಿಂದ ಕೆರಳಿದ ಕಣ್ಣುಗಳುಳ್ಳವನಾಗಿ ಬೇಗನೆ ಆ ಸೇನೆಯವರನ್ನು ಕುರಿತು ಮಾತನಾಡಿದನು. ॥೧॥

ಶುಂಭನು ಹೇಳಿದನು—ಎಲೈ ನೀಚರಾ, ನೀವು ಏನನ್ನು ಹೇಳಿದಿರಿ? ಬಾಯಿನಿಂದ ಹೇಳುವುದಕ್ಕೂ ಸಹ ಅಯೋಗ್ಯವಾದ ಕೆಲಸವನ್ನು ಮಾಡಿದ ಮೇಲೂ ನಾನು ಜೀವಿಸುವುದಕ್ಕೆ ಉತ್ಸಾಹಪಡಲೆ! ಮಂತ್ರಿಗಳನ್ನೂ, ಅಣ್ಣತಮ್ಮಂದಿರನ್ನೂ ಸಹ ಕೊಲ್ಲಿಸಿ ನಾಚಿಕೆ ಇಲ್ಲದವನಾಗಿ ನಾನು ಸಂಚರಿಸಲೇನು? ॥೨॥

ಕಾಲವೇ ಜನರಿಗೆ ಒಳ್ಳೆಯದನ್ನೂ, ಕೆಟ್ಟದ್ದನ್ನೂ ಆಯಾ ಕಾಲದಲ್ಲಿ ಸಂಭವಿಸುವಂತೆ ಮಾಡುವುದು. ಮತ್ತು ಅದು ಎಲ್ಲಕ್ಕಿಂತಲೂ ಬಲವಾದುದು. ಆ

**ಯದ್ಭವತಿ ತದ್ಭವತು ಯತ್ಕರೋತಿ ಕರೋತು ತತ್ ।**
**ನ ಮೇ ಚಿಂತಾಽಸ್ತಿ ಕುತ್ರಾಪಿ ಮರಣಾಜ್ಜೀವನಾತ್ತಥಾ ॥೪॥**

**ಸ ಕಾಲೋಽಪ್ಯನ್ಯಥಾಕರ್ತುಂ ಭಾವಿತೋ ನೇಶತೇ ಕ್ವಚಿತ್ ।**
**ನ ವರ್ಷತಿ ಚ ಪರ್ಜನ್ಯಃ ಶ್ರಾವಣೇ ಮಾಸಿ ಸರ್ವಥಾ ॥೫॥**

**ಕದಾಚಿನ್ಮಾರ್ಗಶೀರ್ಷೇ ವಾ ಪೌಷೇ ಮಾಘೇಽಥ ಫಾಲ್ಗುನೇ ।**
**ಅಕಾಲೇ ವರ್ಷತೀವಾಽಽಶು ತಸ್ಮಾನ್ಮುಖ್ಯೋ ನ ಚಾಸ್ತ್ಯಯಂ ॥೬॥**

---

ಕಾಲಕ್ಕೆ ಆಕಾರವಿಲ್ಲವು. ನನಗೆ ತಪ್ಪಿಸಿಕೊಳ್ಳಲೂ ತಡೆಯಲೂ ಅಸಾಧ್ಯವಾಗಿರುವುದರಿಂದ ನನಗೂ ಪ್ರಭುವಾಗಿರುವ ಆ ಕಾಲದ ವಿಷಯದಲ್ಲಿ ನಾನು ಯೋಚನೆ ಮಾಡತಕ್ಕದ್ದು ಏನಿದೆ? ಆದುದರಿಂದ ನನಗೆ ಸಾವಿನ ಕಾಲವು ಸಮೀಪಿಸಿದ್ದರೆ ನಾನು ಪಾತಾಳಕ್ಕೆ ಹೋದರೂ ಮರಣವು ತಪ್ಪಲಾರದು! ॥೩॥

ಆ ಕಾಲದಿಂದ ನನಗೆ ಯಾವುದು ಆಗಬೇಕಾಗಿದೆಯೋ ಅದು ಆಗಲಿ, ಕಾಲವು ಏನನ್ನು ಮಾಡುತ್ತದೆಯೋ ಅದನ್ನು ಮಾಡಲಿ! ನನಗೆ ಮರಣದಿಂದಾಗಲಿ, ಬದುಕಿರುವುದರಿಂದಾಗಲಿ ಆದರದ ಅಥವಾ ಆತಂಕದ ಯಾವ ಯೋಚನೆಯೂ ನನಗೆ ಇರಬೇಕಾಗಿಲ್ಲವು! ॥೪॥

ಅಲ್ಲದೆ ಆ ಕಾಲವನ್ನು ಆರಾಧನೆ ಮಾಡಿದರೂ ಅದು ಬದಲಾಗಿ ನಮಗೆ ಅನುಕೂಲವಾಗಲಾರದು. ಹಾಗೆ ಅನುಕೂಲವಾಗುವುದಾದರೆ ನಮ್ಮ ನಮ್ಮ ಇಷ್ಟಾನುಸಾರವಾದ ಫಲಗಳು ಕಾಲದ ಆರಾಧನೆಯಿಂದ ಉಂಟಾಗಬೇಕಾಗುವುದು. ಈ ರೀತಿಯಾಗಿ ಅನುಭವವು ಇಲ್ಲದೆ ಇರುವುದರಿಂದ ಕಾಲಕ್ಕಿಂತಲೂ ದೈವಗತಿಯೇ ದೊಡ್ಡದೆಂದು ನಾನು ತಿಳಿಯಬೇಕಾಗಿದೆ! ಈ ಕಾಲವು ದೈವಗತಿಯನ್ನು ಅನುಸರಿಸಿಯೇ ನಡೆಯಬೇಕಾಗಿರುತ್ತದೆ. ಹೇಗೆಂದರೆ ಶ್ರಾವಣಮಾಸದಲ್ಲಿ ಮಳೆಯು ಹುಯ್ಯಬೇಕೆಂಬ ದೈವ ನಿಯಮವನ್ನು ಅನುಸರಿಸಿ ಮಳೆಯು ಹುಯ್ಯುವುದೇ ಹೊರತು ಅದನ್ನು ಕಾಲವೂ ಮೀರುವುದಿಲ್ಲ. ಆದುದರಿಂದ ಕಾಲಕ್ಕೆ ಅಷ್ಟು ಪ್ರಾಮುಖ್ಯವನ್ನು ಹೇಳುವುದೂ ಯುಕ್ತವಾಗಿಲ್ಲವು. ॥೫॥

ಒಂದೊಂದು ವೇಳೆ ಮಾರ್ಗಶಿರಮಾಸ, ಪುಷ್ಯಮಾಸ, ಅಥವಾ ಫಾಲ್ಗುಣ ಮಾಸ ಇಂತಹ ಕಾಲವಲ್ಲದ ಕಾಲದಲ್ಲಿ ಮಳೆಯು ಬರುವುದುಂಟು. ಕಾಲಕ್ಕೆ ಪ್ರಾಧಾನ್ಯವಿದ್ದಲ್ಲಿ ಲೋಕಕ್ಕೆ ಅನುಕೂಲವಾದ ಕಾಲದಲ್ಲಿ ಮಾತ್ರ ವೃಷ್ಟಿಯು

ಕಾಲೋ ನಿಮಿತ್ತಮಾತ್ರಂ ತು ದೈವಂ ಹಿ ಬಲವತ್ತರಂ ।
ದೈವೇನ ನಿರ್ಮಿತಂ ಸರ್ವಂ ನಾನ್ಯಥಾ ಭವತೀತ್ಯದಃ ॥೭॥

ದೈವಮೇವ ಪರಂ ಮನ್ಯೇ ಧಿಕ್ಪೌರುಷಮನರ್ಥಕಂ ।
ಜೇತಾ ಯಃ ಸರ್ವದೇವಾನಾಂ ನಿಶುಂಭೋಽಪ್ಯನಯಾ ಹತಃ ॥೮॥

ರಕ್ತಬೀಜೋ ಮಹಾಶೂರಃ ಸೋಽಪಿ ನಾಶಂ ಗತೋ ಯದಾ ।
ತದಾಽಹಂ ಕೀರ್ತಿಮುತ್ಸೃಜ್ಯ ಜೀವಿತಾಶಾಂ ಕರೋಮಿ ಕಿಂ ॥೯॥

---

ಬಂದು ಪ್ರತಿಕೂಲವಾದ ಕಾಲದಲ್ಲಿ ನಿಲ್ಲಬಹುದಾಗಿತ್ತು. ಹಾಗೂ ಇಲ್ಲವು! ಹಾಗೆ ನಡೆಯುವುದಿಲ್ಲವಾದ್ದರಿಂದ,ಕಾಲವು ದೈವಗತಿಗಿಂತ ಹೆಚ್ಚು ಪ್ರಬಲವಾದುದೂ ಮುಖ್ಯವಾದುದೂ ಅಲ್ಲವು! ಜನ್ಮಾಂತರೀಯ ಕರ್ಮಕ್ಕೇ ದೈವವೆಂದೂ ಹೆಸರು! ॥೬॥

ಕಾಲವೆಂಬುದು ಬಲವತ್ತರವಾದ ದೈವಗತಿಯನ್ನು ಪ್ರಕಟಮಾಡುವುದಾಗಿರುವುದು. ಆದುದರಿಂದ ಇದು ದೈವಗತಿಯ ಜೊತೆಗೆ ನಿಮಿತ್ತಕಾರಣ ಮಾತ್ರವಾಗಿರುವುದು. ದೈವದಿಂದ ಕ್ಲಪ್ತವಾದುದೆಲ್ಲವೂ ಬೇರೆ ರೀತಿಯಲ್ಲಿ ಎಂದಿಗೂ ಆಗಲಾರದು. ಆದುದರಿಂದ ದೈವಗತಿಯೇ ಮುಖ್ಯವು. ಪೌರುಷ ಕರ್ಮಗಳ ಒಗ್ಗಟ್ಟೇ ದೈವವಾಗುತ್ತದೆ. ಕಾಲವು ಮುಖ್ಯವಲ್ಲವು. ಎಂಬ ಈ ಸಿದ್ಧಾಂತವು ಏರ್ಪಡುತ್ತದೆ. ॥೭॥

ದೈವಗತಿ ಮತ್ತು ಪುರುಷಪ್ರಯತ್ನ ಇವೆರಡರಲ್ಲಿ ಪುರುಷಪ್ರಯತ್ನವನ್ನು ದೈವಗತಿಗಿಂತ ಉತ್ತಮವೆಂದು ನಾನು ತಿಳಿದಿದ್ದನು! ಆದರೆ ಈ ಪುರುಷಪ್ರಯತ್ನವನ್ನು ದೈವಗತಿಗಿಂತ ಮುಖ್ಯವೆಂದು ಹೇಳುವುದಕ್ಕಾಗುವುದಿಲ್ಲವು. ಏಕೆಂದರೆ ಪ್ರತಿಯೊಂದು ಕಾರ್ಯದ ಸಿದ್ಧಿ ಅಸಿದ್ಧಿಗಳಿಗೂ ದೈವವೇ ಕಾರಣವು. ಸಮಸ್ತ ದೇವತೆಗಳನ್ನೂ ಜಯಿಸಿದ ನನ್ನ ತಮ್ಮನಾದ ನಿಶುಂಭನು ಈಗ ಈ ಹೆಂಗುಸಿನಿಂದ ಕೊಲ್ಲಲ್ಪಟ್ಟನು. ಪುರುಷಪ್ರಯತ್ನವು ಮುಖ್ಯವಾಗಿದ್ದರೆ ಹೀಗೆ ಆಗುತ್ತಿರಲಿಲ್ಲ. ಆದ್ದರಿಂದ ವೇದಪ್ರಮಾಣದಿಂದಲೂ ಮುಖ್ಯವೆಂದು ಸಿದ್ಧವಾಗಿರುವ ದೈವಗತಿಯನ್ನು ಅವಲಂಬಿಸಿಕೊಂಡು ಈಗ ನಾನು ಕೆಲಸವನ್ನು ಮಾಡುವೆನು. ॥೮॥

ಮತ್ತು ರಕ್ತಬೀಜನೆಂಬ ಅಸುರನು ಬಹಳ ಶೂರನಾದವನು. ಅವನೂ ಈ ನಾಶವನ್ನು ಹೊಂದಿರುವನು. ಆದುದರಿಂದ ನಾನು ನನ್ನ ಹೆಸರನ್ನೂ ಕೆಡಿಸಿಕೊಂಡು ಬದುಕಲು ಆಸೆಯನ್ನು ಮಾಡುವೆನೇನು? ದೈವದಿಂದ ಕ್ಲಪ್ತವಾಗಿರುವುದು ಆಗಲಿ! ॥೯॥

**ಸ್ರಾಪ್ತೇ ಕಾಲೇ ಸ್ವಯಂ ಬ್ರಹ್ಮಾ ಪರಾರ್ಧದ್ವಯಸಂಮಿತೇ ।**
**ನಿಧನಂ ಯಾತಿ ತರಸಾ ಜಗತ್ಕರ್ತಾ ಸ್ವಯಂ ಪ್ರಭುಃ ॥೧೦॥**

**ಚತುರ್ಯುಗಸಹಸ್ರಂ ತು ಬ್ರಹ್ಮಣೋ ದಿವಸೇ ಕಿಲ ।**
**ಪತಂತಿ ಭವನಾತ್ಪಂಚ ನವ ಚೇಂದ್ರಾಸ್ತಥಾ ಪುನಃ ॥೧೧॥**

**ತಥೈವ ದ್ವಿಗುಣೇ ವಿಷ್ಣುರ್ಮರಣಾಯೋಪಕಲ್ಪತೇ ।**
**ತಥೈವ ದ್ವಿಗುಣೇ ಕಾಲೇ ಶಂಕರಃ ಶಾಂತಿಮೇತಿ ಚ ॥೧೨॥**

---

ಅಲ್ಲದೆ ಎರಡು ಪರಾರ್ಧಕಾಲವು ಮುಗಿದ ಮೇಲೆ ಸಮಸ್ತವಾದ ಪ್ರಪಂಚವನ್ನು ನಿರ್ಮಾಣಮಾಡಿದವನಾದ ತನಗೆ ತಾನೇ ಪ್ರಭುವಾದ ಬ್ರಹ್ಮನೂ ತನ್ನ ಆ ಆಯುಷ್ಯದ ಕಾಲವು ಮುಗಿದ ಕೂಡಲೆ ಬೇಗನೆ ನಾಶವನ್ನು ಹೊಂದುವನು.॥೧೦॥

ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಒಂದು ಸಾವಿರ ಸರದಿ ಉರುಳುವಷ್ಟು ಕಾಲವಾದರೆ, ಅದು ಬ್ರಹ್ಮನ ಒಂದು ಹಗಲಾಗುತ್ತದೆ. ಅವನ ರಾತ್ರಿಯೂ ಅಷ್ಟೇ ಪರಿಮಾಣವುಳ್ಳದು. ಇಂತಹ ಮುನ್ನೂರ ಅರವತ್ತು ದಿನಗಳಾದರೆ ಬ್ರಹ್ಮನಿಗೆ ಒಂದು ವರ್ಷವಾಗುತ್ತದೆ. ಇಂತಹ ಒಂದುನೂರು ವರ್ಷವು ಬ್ರಹ್ಮನ ಆಯುಃಕಾಲವು. ಬ್ರಹ್ಮನ ಒಂದು ಹಗಲಿನಲ್ಲಿ ಹದಿನಾಲ್ಕು ಜನ ಇಂದ್ರರು ಕ್ರಮವಾಗಿ ಅಧಿಕಾರ ಮಾಡುತ್ತಾರೆ. ಒಬ್ಬ ಇಂದ್ರನ ಅಧಿಕಾರ ಕಾಲವು ಬ್ರಹ್ಮನ ಒಂದು ಹಗಲಿನಲ್ಲಿ ಹದಿನಾಲ್ಕನೆಯ ಒಂದು ಭಾಗವಾಗಿರುತ್ತದೆ. ॥೧೧॥

ಬ್ರಹ್ಮನು ಹೇಗೆ ತನ್ನ ಆಯುಷ್ಯಕಾಲವು ಮುಗಿದ ಕೂಡಲೆ ನಾಶವನ್ನು ಹೊಂದುವನೋ, ಹಾಗೆಯೇ ವಿಷ್ಣುವೂ ಬ್ರಹ್ಮನ ಆಯುಸ್ಸಿನ ಎರಡರಷ್ಟು ಕಾಲವು ಮುಗಿದು ಬಂದಕೂಡಲೆ ಮರಣವನ್ನು ಹೊಂದುವನು. ವಿಷ್ಣುವು ತನ್ನ ಆಯುಸ್ಸಿನ ಕೊನೆಯಲ್ಲಿ ನಶಿಸುವ ಹಾಗೆಯೇ, ಶಂಕರನೂ ವಿಷ್ಣುವಿನ ಆಯುಷ್ಯದ ಎರಡರಷ್ಟು ಕಾಲವು ಮುಗಿದ ಕೂಡಲೆ ತಾನೂ ಶಾಂತನಾಗುವನು. ಹೀಗೆ ತ್ರಿಮೂರ್ತಿಗಳೇ ಮೊದಲಾದ ದೊಡ್ಡವರೂ ತಮ್ಮ ಪೂರ್ವಕರ್ಮ, ಉಪಾಸನೆ, ಯೋಗ್ಯತೆಗಳಿಗೆ ಅನುಗುಣವಾಗಿ ಆಧಿಕಾರಿಕ ಪುರುಷರಾಗಿರುತ್ತಾರೆ. ಎಂದು ತಾತ್ಪರ್ಯವು. ॥೧೨॥

ಕಾ ಚಿಂತಾ ಮರಣೇ ಮೂಢಾ ನಿಶ್ಚಲೇ ದೈವನಿರ್ಮಿತೇ ।
ಮಹೀಮಹೀಧರಾಣಾಂ ಚ ನಾಶಃ ಸೂರ್ಯಶಶಾಂಕಯೋಃ ॥೧೩॥

ಜಾತಸ್ಯ ಹಿ ಧ್ರುವಂ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ಅಧ್ರುವೇಽಸ್ಮಿನ್ ಶರೀರೇ ತು ರಕ್ಷಣೀಯಂ ಯಶಃ ಸ್ಥಿರಂ ॥೧೪॥

ರಥೋ ಮೇ ಕಲ್ಪ್ಯತಾಂ ಶೀಘ್ರಂ ಗಮಿಷ್ಯಾಮಿ ರಣಾಜಿರೇ ।
ಜಯೋ ವಾ ಮರಣಂ ವಾಪಿ ಭವತ್ವದ್ಯೈವ ದೈವತಃ ॥೧೫॥

ಇತ್ಯುಕ್ತ್ವಾ ಸೈನಿಕಾನ್ ಶುಂಭೋ ರಥಮಾಸ್ಥಾಯ ಸತ್ವರಃ ।
ಪ್ರಯಯಾವಂಬಿಕಾ ಯತ್ರ ಸಂಸ್ಥಿತಾ ತುಹಿನಾಚಲೇ ॥೧೬॥

---

ಎಲೈ ದಡ್ಡರಾದ ಸೈನಿಕರಿರಾ, ದೈವಗತಿಯಿಂದ ಕ್ಲ್ಪಪ್ತವಾಗಿರುವುದಾದ ಮರಣವು ಸ್ಥಿರವಾಗಿ ತಪ್ಪದೆ ಇರುವಾಗ, ಇದಕ್ಕೆ ಯೋಚನೆಯನ್ನು ಮಾಡುವುದೇನು? ಭೂಮಿಯೂ, ಬೆಟ್ಟಗಳೂ, ಸೂರ್ಯನೂ, ಚಂದ್ರನೂ ಇವರಿಗೆಲ್ಲರಿಗೂ ನಾಶವು ನಿಶ್ಚಯವಾಗಿ ತಪ್ಪದೆ ಉಂಟಾಗುವುದು ! ||೧೩||

ಹೀಗೆ ಹುಟ್ಟಿದವನಿಗೆ ಮರಣವೂ, ಮರಣವನ್ನು ಹೊಂದಿದವನಿಗೆ ಹುಟ್ಟುವಿಕೆಯೂ ಸಹ ನಿಯತವಾಗಿ ಪುನಃ ಪುನಃ ಬರುತ್ತಿರುವುದು. ಈ ಶರೀರವು ಸ್ಥಿರವಲ್ಲದೆ ಇರುವಾಗ ಸ್ಥಿರವಾದ ಕೀರ್ತಿಯನ್ನು ಮಾತ್ರ ಎಲ್ಲರೂ ಕಾಪಾಡಿಕೊಳ್ಳಬೇಕು. ||೧೪||

ನನ್ನ ರಥವು ಬೇಗನೆ ಸಿದ್ಧವಾಗಲಿ. ನಾನು ಯುದ್ಧಕ್ಕಾಗಿ ಹೊರಡುವೆನು. ಯುದ್ಧರಂಗದಲ್ಲಿ ಜಯವಾಗಲಿ ಮರಣವಾಗಲಿ, ಈಗಲೇ ದೈವಗತಿಯಿಂದ ಏನು ಆಗಬೇಕಾಗಿರುವುದೋ ಅದು ಆಗಲಿ. ||೧೫||

ಶುಂಭನು ತನ್ನ ಸೈನಿಕರಿಗೆ ಹೀಗೆ ಹೇಳಿ, ತಾನು ರಥವನ್ನು ಹತ್ತಿಕೊಂಡು ಹಿಮಾಚಲದಲ್ಲಿ ಅಂಬಿಕಾದೇವಿಯು ಯಾವ ಪ್ರದೇಶದಲ್ಲಿದ್ದಳೋ ಅಲ್ಲಿಗೆ ಯುದ್ಧಕ್ಕೋಸ್ಕರ ಬೇಗನೆ ಹೋದನು. ||೧೬||

ಸೈನ್ಯಂ ಪ್ರಚಲಿತಂ ತಸ್ಯ ಸಂಗೇ ತತ್ರ ಚತುರ್ವಿಧಂ ।
ಹಸ್ತ್ಯಶ್ವರಥಪಾದಾತಿಸಂಯುತಂ ಸಾಯುಧಂ ಬಹು ॥೧೭॥

ತತ್ರ ಗತ್ವಾಚಲೇ ಶುಂಭಃ ಸಂಸ್ಥಿತಾ ಜಗದಂಬಿಕಾ ।
ತ್ರೈಲೋಕ್ಯಮೋಹಿನೀಂ ಕಾಂತಾಮಪಶ್ಯತ್ಸಿಂಹವಾಹಿನೀಂ ॥೧೮॥

ಸರ್ವಾಭರಣಭೂಷಾಢ್ಯಾಂ ಸರ್ವಲಕ್ಷಣಸಂವೃತಾಂ ।
ಸ್ತೂಯಮಾನಾಂ ಸುರೈಃ ಸ್ವಸ್ಥೈರ್ಗಂಧರ್ವ ಯಕ್ಷಕಿನ್ನರೈಃ ॥೧೯॥

ಪುಷ್ಪೈಶ್ಚ ಪೂಜ್ಯಮಾನಾಂ ಚ ಮಂದಾರಪಾದಪೋದ್ಭವೈಃ ।
ಕುರ್ವಾಣಾಂ ಶಂಖನಿನದಂ ಘಂಟಾನಾದಂ ಮನೋಹರಂ ॥೨೦॥

ದೃಷ್ಟ್ವಾ ತಾಂ ಮೋಹಮಗಮಚ್ಛುಂಭಃ ಕಾಮವಿಮೋಹಿತಃ ।
ಪಂಚಬಾಣಾಽಽಹತಃ ಕಾಮಂ ಮನಸಾ ಸಮಚಿಂತಯತ್ ॥೨೧॥

---

ಆ ಶುಂಭನು ಹೊರಟಾಗ ಅವನ ಜೊತೆಯಲ್ಲಿ ಆನೆ, ಕುದುರೆ, ರಥ, ಕಾಲಾಳು ಎಂಬುದಾಗಿ ನಾಲ್ಕುವಿಧವಾದ ಸೇನೆಯೂ ಬಹಳವಾಗಿ ಯುದ್ಧಕ್ಕಾಗಿ ಹೊರಟಿತು. ॥೧೭॥

ಆ ಶುಂಭನು ಆ ಹಿಮಾಚಲಕ್ಕೆ ಹೋಗಿ ಅಲ್ಲಿ ಸ್ಥಿರವಾಗಿರುವ, ಮೂರು ಲೋಕವನ್ನು ಮೋಹಗೊಳಿಸುವ, ಸುಂದರಳಾದ, ಸಿಂಹವಾಹನದಲ್ಲಿ ಮಂಡಿಸಿರುವ ಜಗನ್ಮಾತೆಯನ್ನು ನೋಡಿದನು. ॥೧೮॥

ಸಮಸ್ತವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವಳಾಗಿಯೂ, ಎಲ್ಲ ಬಗೆಯ ಒಳ್ಳೆಯ ಸ್ತ್ರೀಲಕ್ಷಣಗಳಿಂದ ಕೂಡಿದವಳಾಗಿಯೂ, ಮನಸ್ಸಮಾಧಾನದಿಂದುಂಟಾದ ಸಂತೋಷದಿಂದಕೂಡಿರುವ ದೇವತೆಗಳು, ಯಕ್ಷರು, ಗಂಧರ್ವರು, ಕಿನ್ನರರು, ಇವರಿಂದ ಸ್ತೋತ್ರಮಾಡಲ್ಪಟ್ಟವಳಾಗಿಯೂ, ಮಂದಾರವೆಂಬ ಕಲ್ಪವೃಕ್ಷದ ಹೂವುಗಳಿಂದ ಪೂಜಿಸಲ್ಪಟ್ಟವಳಾಗಿಯೂ, ಶಂಖಧ್ವನಿಯನ್ನೂ ಮತ್ತು ಮನೋಹರವಾದ ಗಂಟೆಯ ಧ್ವನಿಯನ್ನು ಮಾಡುತ್ತಲೂ ಇರುವ ದೇವಿಯನ್ನು ನೋಡಿದನು ! ॥೧೯-೨೦॥

ಶುಂಭನು ಆ ದೇವಿಯನ್ನು ನೋಡಿ ಮನ್ಮಥನ ಐದು ಬಾಣಗಳಿಂದಲೂ ಹೊಡೆಯಲ್ಪಟ್ಟು ಕಾಮವಿಕಾರಕ್ಕೆ ಪರವಶನಾದನು. ಅನಂತರದಲ್ಲಿ ತನ್ನ ಮನಸ್ಸಿನಲ್ಲಿ ಹೀಗೆ ಯೋಚನೆಯನ್ನು ಮಾಡಿದನು. ॥೨೧॥

**ಅಹೋ ರೂಪಮಿದಂ ಸಮ್ಯಗಹೋ ಚಾತುರ್ಯಮದ್ಭುತಂ ।**
**ಸೌಕುಮಾರ್ಯಂ ಚ ಧೈರ್ಯಂ ಚ ಪರಸ್ಪರವಿರೋಧಿಯತ್ ॥೨೨॥**

**ಸುಕುಮಾರಾಽತಿತನ್ವಂಗೀ ಸದ್ಯಃ ಪ್ರಕಟಯೌವನಾ ।**
**ಚಿತ್ರಮೇತದಸೌ ಬಾಲಾ ಕಾಮಭಾವವಿವರ್ಜಿತಾ ॥೨೩॥**

**ಕಾಮಕಾಂತಾಸಮಾ ರೂಪೇ ಸರ್ವಲಕ್ಷಣಲಕ್ಷಿತಾ ।**
**ಅಂಬಿಕೇಯಂ ಕಿಮೇತತ್ತು ಹಂತಿ ಸರ್ವಾನ್ಮಹಾಬಲಾನ್ ॥೨೪॥**

**ಉಪಾಯಃ ಕೋಽತ್ರ ಕರ್ತವ್ಯೋ ಯೇನ ಮೇ ವಶಗಾ ಭವೇತ್ ।**
**ನ ಮಂತ್ರಾ ವಾ ಮರಾಲಾಕ್ಷೀಸಾಧನೇ ಸನ್ನಿಧೌ ಮಮ ॥೨೫॥**

---

ಈ ದೇವಿಯಲ್ಲಿ ಕಂಡುಬರುವ ದೇಹದ ಸುಕುಮಾರತ್ವವೂ, ಯುದ್ಧದಲ್ಲಿ ಧೈರ್ಯವೂ ಸಹ ಪರಸ್ಪರ ವಿರೋಧಿಗಳಾದ ಗುಣಗಳಾಗಿರುವುದರಿಂದ ಈಕೆಯ ಸೌಂದರ್ಯವೂ ಮತ್ತು ಯುದ್ಧದಲ್ಲಿ ಶಕ್ತಿಕೌಶಲಗಳೂ ಅದ್ಭುತವಾಗಿರುತ್ತವೆ. ॥೨೨॥

ಅಲ್ಲದೆ ಈ ಕೃಶಾಂಗಿಯೂ ಮೃದುವಾದ ಮತ್ತು ಮನೋಹರವಾದ ಅವಯವ ವುಳ್ಳವಳಾಗಿ ಈಗತಾನೇ ಹೊರಹೊಮ್ಮುತ್ತಿರುವ ಯೌವ್ವನವುಳ್ಳವಳಾದರೂ ಬಾಲ್ಯ ಭಾವದಿಂದ ಇನ್ನೂ ಕೂಡಿ ಕಾಮಸಂಬಂಧವಾದ ಮನೋಭಾವವಿಲ್ಲದಿರುವುದು ಆಶ್ಚರ್ಯಕರವಾಗಿರುತ್ತದೆ! ॥೨೩॥

ಈ ಅಂಬಿಕಾದೇವಿಯು ಸೌಂದರ್ಯದಲ್ಲಿ ಮನ್ಮಥನ ಹೆಂಡಿತಿಯಾದ ರತಿಗೆ ಸಮಳಾಗಿ, ಸಕಲ ವಿಧವಾದ ಶುಭಲಕ್ಷಣಗಳಿಂದ ಕೂಡಿದವಳಾಗಿ ಇದ್ದರೂ ತುಂಬ ಬಲಿಷ್ಠರಾದ ರಾಕ್ಷಸ ಶೂರರೆಲ್ಲರನ್ನೂ ನಾಶಮಾಡುತ್ತಿರುವುದು, ಎಂದರೆ ಲಾವಣ್ಯವತಿಯಾದ ರಮಣಿಯು ಸಹಜವಾದ ಶೃಂಗಾರಕರ್ಮವನ್ನು ಬಿಟ್ಟು ವೀರ ಕರ್ಮವನ್ನು ಮಾಡುತ್ತಿರುವುದು, ಆಶ್ಚರ್ಯಕರವಾಗಿರುತ್ತದೆ! ॥೨೪॥

ಹಂಸದಂತಿರುವ ಕಣ್ಣುಳ್ಳ ಇವಳನ್ನು ವಶಪಡಿಸಿಕೊಳ್ಳಬೇಕಾದರೆ ತಕ್ಕ ಉಪಾಯವು ಯಾವುದು? ಅದನ್ನು ಮಾಡುವುದು ಹೇಗೆ? ಅದಕ್ಕೆ ತಕ್ಕ ಮಂತ್ರ ಗಳು ಯಾವುವೂ ನನ್ನಲ್ಲಿಲ್ಲವು. ಆದುದರಿಂದ ಯಾವ ವಿಧವಾದ ಉಪಾಯವನ್ನು ಮಾಡಬೇಕು? ॥೨೫॥

**ಸರ್ವಮಂತ್ರಮಯೀ ಹ್ಯೇಷಾ ಮೋಹಿನೀ ಮದಗರ್ವಿತಾ ।**
**ಸುಂದರೀಯಂ ಕಥಂ ಮೇ ಸ್ಯಾದ್ವಶಗಾ ವರವರ್ಣಿನೀ ॥೨೬॥**

**ಪಾತಾಲಗಮನಂ ಮೇಽದ್ಯ ನ ಯುಕ್ತಂ ಸಮರಾಂಗಣಾತ್ ।**
**ಸಾಮದಾನವಿಭೇದೈಶ್ಚ ನೇಯಂ ಸಾಧ್ಯಾ ಮಹಾಬಲಾ ॥೨೭॥**

**ಕಿಂ ಕರ್ತವ್ಯಂ ಕ್ವ ಗಂತವ್ಯಂ ವಿಷಮೇ ಸಮುಪಸ್ಥಿತೇ ।**
**ಮರಣಂ ನೋತ್ತಮಂ ಚಾತ್ರ ಸ್ತ್ರೀಕೃತಂ ತು ಯಶೋಽಪಹೃತ್॥೨೮॥**

**ಮರಣಂ ಋಷಿಭಿಃ ಪ್ರೋಕ್ತಂ ಸಂಗರೇ ಮಂಗಲಾಸ್ಪದಂ ।**
**ಯತ್ರತ್ಸಮಾನಬಲಯೋರ್ಯೋಧಯೋರ್ಯುಧ್ಯತೋಃಕಿಲ ॥೨೯॥**

---

ಈ ಸ್ತ್ರೀಯು ಎಲ್ಲ ವಿಧವಾದ ಮಂತ್ರಸ್ವರೂಪಳಾಗಿರುವಂತೆ ತೋರುತ್ತಿರುವಳು! ಆದುದರಿಂದಲೇ ಯೌವನಮದದ ಅಹಂಕಾರದಿಂದ ಕೊಬ್ಬಿದವಳಾಗಿ ಎಲ್ಲರನ್ನೂ ಮೋಹಗೊಳಿಸುತ್ತಿರುವಳು! ಹೀಗಿರುವ ಉತ್ತಮ ಸ್ತ್ರೀಯಾದ ಈ ಸುಂದರಿಯು ಹೇಗೆ ನನ್ನ ಅಧೀನಕ್ಕೆ ಒಳಪಡುವಳು? ॥೨೬॥

ಈಗ ಯುದ್ಧರಂಗವನ್ನು ಬಿಟ್ಟು ಪಾತಾಳಲೋಕಕ್ಕೆ ನಾನು ಓಡುವುದೂ ಯುಕ್ತವಾದುದಲ್ಲವು. ಬಹಳ ಬಲವುಳ್ಳವಳಾದ ಈ ಹೆಂಗುಸು ಸಾಮ, ದಾನಗಳೆಂಬ ಉಪಾಯಗಳ ಬಗೆಗಳಿಂದಲೂ ನನಗೆ ವಶವಾಗುವಂತೆ ಮಾಡುವುದೂ ಸಾಧ್ಯವಾಗಿಲ್ಲವು. ॥೨೭॥

ಈಕೆಯು ಯಾವ ಉಪಾಯದಿಂದಲೂ ಯಾವ ಮಂತ್ರದಿಂದಲೂ ವಶವಾಗುವುದಿಲ್ಲ. ಯುದ್ಧಕ್ಕಾಗಿ ಕರೆಯುತ್ತಿದ್ದಾಳೆಯಾದುದರಿಂದ ಪಾತಾಳಕ್ಕೆ ಓಡುವುದೂ ಯುಕ್ತವಲ್ಲವು! ಹೀಗೆ ಒದಗಿರುವ ಈ ಬಿಕ್ಕಟ್ಟಿನ ಸಂಕಟದಲ್ಲಿ ಏನನ್ನು ಮಾಡುವುದು? ಎಲ್ಲಿಗೆ ಹೋಗುವುದು? ಸ್ತ್ರೀಯಿಂದ ಯುದ್ಧದಲ್ಲಿ ಮರಣವಾದರೆ ಅದು ಶೂರನಾದ ನನ್ನ ಒಳ್ಳೆಯ ಕೀರ್ತಿಯನ್ನು ಖಂಡಿತವಾಗಿ ಹಾಳುಮಾಡುತ್ತದೆ! ॥೨೮॥

ಯುದ್ಧರಂಗದಲ್ಲಿ ಸಮವಾದ ಬಲವುಳ್ಳ ಇಬ್ಬರು ಯೋಧರು ಯುದ್ಧಮಾಡಿದಾಗ ಅವರಲ್ಲಿ ಯಾರಾದರೂ ಮರಣವನ್ನು ಹೊಂದಿದರೆ, ಋಷಿಗಳು ಆ ಮರಣವನ್ನು ಶ್ಲಾಘ್ಯವೆಂತಲೂ, ಮಂಗಳಕರವಾದುದರಿಂದ ಉತ್ತಮವೆಂತಲೂ ಹೇಳುವರು. ॥೨೯॥

ಪ್ರಾಪ್ತೇಯಂ ದೈವರಚಿತಾ ನಾರೀನರಶತೋತ್ತಮಾ ।
ನಾಶಾಯಾಽಸ್ಮತ್ಕುಲಸ್ಯೇಹ ಸಮರ್ಥಾಽತಿಬಲಾಽಬಲಾ ॥೩೦॥

ವೃಥಾ ಕಿಂ ಸಾಮವಾಕ್ಯಾನಿ ಮಯಾ ಯೋಜ್ಯಾನಿ ಸಾಂಪ್ರತಂ ।
ಹನನಾಯಾಽಽಗತಾ ಹ್ಯೇಷಾ ಕಿಂ ತು ಸಾಮ್ನಾ ಪ್ರಸೀದತಿ ॥೩೧॥

ನ ದಾನೈಶ್ಚಾಲಿತುಂ ಯೋಗ್ಯಾ ನಾನಾಶಸ್ತ್ರವಿಭೂಷಿತಾ ।
ಭೇದಸ್ತು ವಿಕಲಃ ಕಾಮಂ ಸರ್ವದೇವವಶಾಗಮಾ ॥೩೨॥

ತಸ್ಮಾತ್ತು ಮರಣಂ ಶ್ರೇಯೋ ನ ಸಂಗ್ರಾಮೇ ಪಲಾಯನಂ ।
ಜಯೋ ವಾ ಮರಣಂ ವಾಽದ್ಯ ಭವತ್ಯೇವಂ ಯಥಾವಿಧಿ ॥೩೩॥

---

ಅನೇಕಮಂದಿ ಮನುಷ್ಯರಿಗಿಂತ ಉತ್ತಮಳಾದ, ಅಬಲೆ (ಬಲವಿಲ್ಲದಿರುವ) ಎನ್ನಿಸಿಕೊಂಡಿದ್ದರೂ ಮಿಗಿಲಾದ ಬಲವುಳ್ಳ, ಈ ಹೆಂಗುಸನ್ನು ನಮ್ಮ ವಂಶವನ್ನು ನಾಶಮಾಡುವುದಕ್ಕಾಗಿಯೇ ನಮ್ಮ ದುರ್ದೈವದಿಂದ ನಿರ್ಮಿಸಿ ಕಳುಹಿಸಿದೆಯೋ ಎಂಬಂತೆ ಈಗ ಈ ಸ್ತ್ರೀಯು ಬಂದಿದಾಳೆ, ಎಂದು ತೋರುತ್ತಿದೆ! ||೩೦||

ನನ್ನನ್ನು ಕೊಲ್ಲುವುದಕ್ಕಾಗಿ ಬಂದಿರುವ ಈ ಸ್ತ್ರೀಯ ವಿಷಯದಲ್ಲಿ ನಾನೂ ಈಗ ಮೃದುವಾದ ಮಾತುಗಳನ್ನಾಡುತ್ತಿರುವುದು ವ್ಯರ್ಥವೇ ಸರಿ. ನಮ್ಮನ್ನು ಕೊಲ್ಲುವುದಕ್ಕೆಂತಲೇ ಬಂದಿರುವ ಈ ಸ್ತ್ರೀಯು ಸಾಮೋಪಾಯದಿಂದ ಪ್ರಸನ್ನಳಾಗುವಳೇ? ಎಂದಿಗೂ ಇಲ್ಲವು! ||೩೧||

ಈ ಸ್ತ್ರೀಯು ಅನೇಕ ವಿಧವಾದ ಆಯುಧಗಳನ್ನು ಧರಿಸಿಕೊಂಡಿರುವ ಕಾರಣದಿಂದ ದಾನೋಪಾಯದಿಂದಲೂ ವಶವಾಗುವವಳಲ್ಲವು. ಈ ಸ್ತ್ರೀಯು ಎಲ್ಲ ದೇವತೆಗಳ ವಶದಲ್ಲಿರುವ ಕಾರಣದಿಂದ ಎಂದರೆ ಇವಳು ದೇವತೆಗಳ ರಕ್ಷಣೆಗಾಗಿಯೇ ಬಂದಿರುವುದರಿಂದ ಭೇದೋಪಾಯದಿಂದಲೂ ಇವಳು ವಶವಾಗಲಾರಳು. ||೩೨||

ಆದುದರಿಂದ ಈಗ ನನಗೆ ಓಡುವುದಕ್ಕಿಂತಲೂ ಯುದ್ಧದಲ್ಲಿ ಮರಣವೇ ಉತ್ತಮವು. ಹಣೆಯ ಬರಹವೂ ವಿಧಿಯ ಕಟ್ಟಳೆಯೂ ಹೇಗೆ ಇರುವುದೋ ಅದಕ್ಕೆ ಅನುಸಾರವಾಗಿ ಜಯವಾಗಲಿ ಅಥವಾ ಮರಣವೇ ಆಗಲಿ ಯಾವುದಾದರೂ ಆಗಲಿ. ಈಗ ಯುದ್ಧಮಾಡುವುದೇ ಉತ್ತಮವು. ||೩೩||

|| ವ್ಯಾಸ ಉವಾಚ ||

**ಇತಿ ಸಂಚಿಂತ್ಯ ಮನಸಾ ಶುಂಭಃ ಸತ್ತ್ವಾಶ್ರಿತೋಽಭವತ್ ।**
**ಯುದ್ಧಾಯ ಸುಸ್ಥಿರೋ ಭೂತ್ವಾ ತಾಮುವಾಚ ಪುರಃಸ್ಥಿತಾಂ ॥೩೪॥**

**ದೇವಿ ಯುಧ್ಯಸ್ವ ಕಾಂತೇಽದ್ಯ ವೃಥಾಽಯಂ ತೇ ಪರಿಶ್ರಮಃ ।**
**ಮೂರ್ಖಾಽಸಿ ಕಿಲ ನಾರೀಣಾಂ ನಾಯಂ ಧರ್ಮಃ ಕದಾಚನ ॥೩೫॥**

**ನಾರೀಣಾಂ ಲೋಚನೇ ಬಾಣಾ ಭ್ರುವಾವೇವ ಶರಾಸನಂ ।**
**ಹಾವಭಾವಸ್ತು ಶಸ್ತ್ರಾಣಿ ಪುಮಾಂಲ್ಲಕ್ಷ್ಯಂ ವಿಚಕ್ಷಣಃ ॥೩೬॥**

**ಸನ್ನಾಹಶ್ಚಾಂಗರಾಗೋಽತ್ರ ರಥಶ್ಚಾಪಿ ಮನೋರಥಃ ।**
**ಮಂದಪ್ರಜಲ್ಪಿತಂ ಭೇರೀಶಬ್ದೋ ನಾನ್ಯಃ ಕದಾಚನ ॥೩೭॥**

---

ವ್ಯಾಸಋಷಿಯು ಹೇಳಿದನು—ಶುಂಭನು ಹೀಗೆ ಮನಸ್ಸಿನಲ್ಲಿ ಯೋಚಿಸಿಕೊಂಡು ವೀರರಿಗೆ ಉಚಿತವಾದ ಧೈರ್ಯಗುಣವನ್ನು ಆಶ್ರಯಿಸಿದನು. ಯುದ್ಧವನ್ನು ಮಾಡಲು ಸ್ಥಿರವಾಗಿ ನಿಂತುಕೊಂಡು ಮುಂದುಗಡೆಯಲ್ಲಿರುವ ಅಂಬಿಕಾದೇವಿಯನ್ನು ಕುರಿತು ಹೀಗೆ ಮಾತನಾಡಿದನು. ||೩೪||

ಎಲೈ ಮನೋಹರಳಾದ ದೇವಿಯೇ, ನೀನು ಈಗ ಯುದ್ಧವನ್ನು ಮಾಡು. ಆದರೆ ನೀನು ಯುದ್ಧ ಮಾಡುವುದರಲ್ಲಿ ನಿನ್ನ ಈ ಶ್ರಮವು ವ್ಯರ್ಥವಾಗುವುದು. ನೀನು ದಡ್ಡಳಾದ ಛಲಗಾರಳಾಗಿರುತ್ತೀಯೆ. ಏಕೆಂದರೆ ಹೀಗೆ ಯುದ್ಧವನ್ನು ಮಾಡುವುದು ಯಾವಾಗಲೂ ಹೆಂಗುಸರ ಧರ್ಮವಲ್ಲವು. ||೩೫||

ಹೆಂಗುಸರಿಗೆ ಕಣ್ಣಿನ ದೃಷ್ಟಿಗಳೇ ಬಾಣಗಳು, ಹುಬ್ಬುಗಳೇ ಧನುಸ್ಸಾಗಿರುವುದು. ಶೃಂಗಾರ ಚೇಷ್ಟೆಗಳೂ, ಅಭಿಪ್ರಾಯಗಳೂ ಸಹ ಇತರ ವಿಧವಾದ ಆಯುಧಗಳಾಗಿರುವುವು. ಬುದ್ಧಿವಂತನಾದ ರಸಿಕ ಪುರುಷನೇ ಈ ಬಾಣಗಳಿಗೆ ಗುರಿಯಾಗಿ ಸಿಕ್ಕುವ ಲಕ್ಷ್ಯವಾಗಿರುವನು! ||೩೬||

ನಾರಿಯರಿಗೆ ಯುದ್ಧ ಸಿದ್ಧತೆಯು ಗಂಧ, ಹೂ ಇವುಗಳಾಗಿರುವುದು. ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುತ್ತಿರುವ ಭೋಗಗಳ ಇಚ್ಛೆಯೇ ರಥವಾಗಿರುವುದು. ಮೆಲ್ಲಗೆ ನಿದಾನವಾಗಿ ಮಾತನಾಡುವುದೇ ಯುದ್ಧದಲ್ಲಿ ಮೊಳಗುವ ಭೇರಿಯ ಧ್ವನಿಯಾಗಿರುವುದು. ಇವುಗಳೇ ಸ್ತ್ರೀಯರಿಗೆ ಯುದ್ಧಸಾಮಗ್ರಿಯು. ಇವುಗಳಿಂದ ನಡೆಯಿಸುವ

ಅನ್ಯಾಸ್ತ್ರಧಾರಣಂ ಸ್ತ್ರೀಣಾಂ ವಿಡಂಬನಮಸಂಶಯಂ ।
ಲಜ್ಜೈವ ಭೂಷಣಂ ಕಾಂತೇ ನ ತು ಧಾರ್ಷ್ಟ್ಯಂ ಕದಾಚನ ॥೩೮॥

ಯುಧ್ಯಮಾನಾ ವರಾ ನಾರೀ ಕರ್ಕಶೇವಾಭಿದೃಶ್ಯತೇ ।
ಸ್ತನೌ ಸಂಗೋಪನೀಯೌ ವಾ ಧನುಷಃ ಕರ್ಷಣೇ ಕಥಂ ॥೩೯॥

ಕ್ವ ಮಂದಗಮನಂ ಕುತ್ರ ಗದಾಮಾದಾಯ ಧಾವನಂ ।
ಬುದ್ಧಿದಾ ಕಾಲಿಕಾ ತೇಽತ್ರ ಚಾಮುಂಡಾ ಪರನಾಯಿಕಾ ॥೪೦॥

---

ಯುದ್ಧವನ್ನೇ ಸ್ತ್ರೀಯರು ಮಾಡತಕ್ಕದ್ದು. ಬೇರೆ ಶಸ್ತ್ರಾಸ್ತ್ರಗಳಿಂದ ಯುದ್ಧವನ್ನು ಅವರು ಯಾವಾಗಲೂ ಮಾಡಬಾರದು ! ॥೩೭॥

ಇವುಗಳಲ್ಲದೆ ಬೇರೆಯವಾಗಿರುವ ಆಯುಧಗಳನ್ನು ಧರಿಸಿರುವುದು ಸ್ತ್ರೀಯರಿಗೆ ಸ್ವಲ್ಪವೂ ಸಂದೇಹವಿಲ್ಲದೆ ವಂಚಿಸುವ ಅನುಕರಣವಾಗಿರುವುದು. ಎಲೌ ಕಾಂತೆಯೇ, ಸ್ತ್ರೀಯರಿಗೆ ನಾಚಿಕೆಯೇ ಆಭರಣವಾಗಿರುವುದು. ಮತ್ತು ಯಾವಾಗಲೂ ಗಂಡಸಿನಂತೆ ಧೀರತನವು ಎಂದರೆ ಅಪಕಾರ ಮಾಡುವ ದಿಟ್ಟತನವು ಭೂಷಣವಲ್ಲವು. ॥೩೮॥

ಯುದ್ಧಮಾಡುವವಳಾದ ಹೆಂಗುಸು ಶ್ರೇಷ್ಠಳಾದರೂ ಕಾಳಗದಲ್ಲಿ ತೊಡಗಿದರೆ, ಮಾನಮರ್ಯಾದೆಗಳಿಲ್ಲದ ಕರ್ಕಶಸ್ವಭಾವದವಳಾಗಿ ಕಂಡುಬರುವಳು. ಏಕೆಂದರೆ, ಯುದ್ಧಮಾಡುವ ಕಾಲದಲ್ಲಿ ಧನುಸ್ಸನ್ನು ಎಳೆಯುವಾಗ ಸ್ತನಗಳನ್ನು ಹೇಗೆ ಮುಚ್ಚಿಕೊಂಡಿರುವುದು ? ॥೩೯॥

ಮೃದುವೂ ಅಂದವೂ ಆದ ಮಂದಗಮನವು ಎಲ್ಲಿ ? ಕ್ರೂರವಾದ ಗದೆಯನ್ನು ತೆಗೆದುಕೊಂಡು ಶತ್ರುವನ್ನು ಬೆನ್ನಟ್ಟಿ, ಎದುರಿಸಿ, ಓಡುವುದು ಎಲ್ಲಿ ? ಇವೆರಡೂ ಅನ್ಯೋನ್ಯವಾಗಿ ಸರಿಹೊಂದುವುದಿಲ್ಲವು. ಹೀಗಿರುವಾಗ ಸರಿಯಾದ ಬುದ್ಧಿಯನ್ನು ಹೇಳದೆ ಇಂತಹ ಸಲಹೆಯನ್ನು ಹೇಳುವವಳು ಕಾಲಿಕೆಯೊಬ್ಬಳೇ ! ಬಹು ಜನರಲ್ಲಿ ವ್ಯವಹರಿಸದೆ, ಮೋಸಕಪಟಗಳನ್ನರಿಯದೆ ಇರುವ ಚಾಮುಂಡಾದೇವಿಯೂ ಅಷ್ಟು ಚತುರಳಲ್ಲವು! (ಪರಬ್ರಹ್ಮತತ್ತ್ವವೇ ನಾಯಕನಾಗಿ ಉಳ್ಳ ಪರಾಶಕ್ತಿಯ ತತ್ತ್ವಸ್ವರೂಪಳಾಗಿದ್ದಾಳೆ ಎಂದೂ ಪರನಾಯಿಕಾ ಎಂಬ ಪದದಿಂದ ಸೂಚಿತವಾಗಿದೆ.) ॥೪೦॥

ಚಂಡಿಕಾ ಮಂತ್ರಮಧ್ಯಸ್ಥಾ ಲಾಲನೇಸುಸ್ವರಾ ಶಿವಾ ।
ವಾಹನಂ ಮೃಗರಾಡಾಸ್ತೇ ಸರ್ವಸತ್ತ್ವಭಯಂಕರಃ ॥೪೧॥

ವೀಣಾನಾದಂ ಪರಿತ್ಯಜ್ಯ ಘಂಟಾನಾದಂ ಕರೋಷಿ ಯತ್ ।
ರೂಪಯೌವನಯೋಃ ಸರ್ವಂ ವಿರೋಧಿ ವರವರ್ಣಿನಿ ॥೪೨॥

ಯದಿ ತೇ ಸಂಗರೇಚ್ಛಾಽಸ್ತಿ ಕುರೂಪಾ ಭವ ಭಾಮಿನಿ ।
ಲಂಬೋಷ್ಠೀ ಕುನಖೀ ಕ್ರೂರಾ ಧ್ವಾಂಕ್ಷವರ್ಣಾ ವಿಲೋಚನಾ॥೪೩॥

ಲಂಬಪಾದಾ ಕುದಂತೀ ಚ ಮಾರ್ಜಾರನಯನಾಕೃತಿಃ ।
ಈದೃಶಂ ರೂಪಮಾಸ್ಥಾಯ ತಿಷ್ಠ ಯುದ್ಧೇ ಸ್ಥಿರಾ ಭವ ॥೪೪॥

---

ಚಂಡಿಕಾದೇವಿಯೂ ಮಂತ್ರಾಲೋಚನೆಯನ್ನು ಹೇಳುವುದರಲ್ಲಿ ಮೃದುವಾದ ಇಂಪಾದ ಸ್ವರವೇ ಇಲ್ಲದವಳಾಗಿರುವುದರಿಂದ ಸಮಾಧಾನಮಾಡುವ ಶಕ್ತಿಯುಳ್ಳವಳಲ್ಲವು! ಇಷ್ಟೇ ಅಲ್ಲದೆ ನಿನ್ನ ವಾಹನವೋ ಎಲ್ಲ ಪ್ರಾಣಿಗಳಿಗೂ ಭಯಂಕರವಾದ ಸಿಂಹವಾಗಿರುತ್ತದೆ! (ಆದುದರಿಂದ ಇವುಗಳನ್ನು ಬಿಟ್ಟು ನನ್ನನ್ನು ಸ್ವೀಕರಿಸೆಂದು ಶುಂಭನ ಭಾವವು.) ॥೪೧॥

ಎಲೌ ಉತ್ತಮಸ್ತ್ರೀಯೇ, ನೀನು ವೀಣೆಯನ್ನು ನುಡಿಯಿಸುವುದನ್ನು ಬಿಟ್ಟು ಘಂಟೆಯನ್ನು ಬಾರಿಸುವುದು, ನಿನ್ನ ಸೌಂದರ್ಯ ಮತ್ತು ಯೌವ್ವನ ಇವುಗಳಿಗೆ ಕೊಂಚವೂ ಅನುರೂಪವಾಗದೆ ಇವೆಲ್ಲವೂ ವಿರೋಧವಾಗಿ ಇರುವುವು! ॥೪೨॥

ಎಲೌ ರೂಪಸಂಪತ್ತುಳ್ಳ ರಮಣಿಯೇ, ನಿನಗೆ ಯುದ್ಧಮಾಡಲು ಇಚ್ಛೆಯಿದ್ದರೆ ಈ ಸುಂದರವಾದ ಆಕಾರವನ್ನು ಬಿಡು. ಕುತ್ಸಿತವಾದ ಆಕಾರವನ್ನು ಹೊಂದು. ಹೇಗೆಂದರೆ, ಜೋಲಾಡುತ್ತಿರುವ ತುಟಿಗಳುಳ್ಳವಳಾಗು. ಕೆಟ್ಟ ಉಗುರುಗಳುಳ್ಳವಳೂ, ಭಯಂಕರಳೂ, ಕಾಗೆಯಂತೆ ಮೈಬಣ್ಣವುಳ್ಳವಳೂ, ಮತ್ತು ಒಳ್ಳೆಯ ಕಣ್ಣಿಲ್ಲದವಳೂ ಆಗು. ॥೪೩॥

ಮತ್ತು ಉದ್ದವಾದ ಕಾಲುಗಳುಳ್ಳವಳೂ, ಕೆಟ್ಟುಹೋಗಿರುವ ಹಲ್ಲುಗಳುಳ್ಳವಳೂ ಮತ್ತು ಬೆಕ್ಕಿನ ಕಣ್ಣಿನಂತಿರುವ ಕಣ್ಣುಗಳುಳ್ಳವಳೂ ಆಗು. ಹೀಗೆ ಇರುವ ಆಕಾರವನ್ನು ಹೊಂದಿ ಯುದ್ಧಕ್ಕಾಗಿ ಸ್ಥಿರಳಾಗಿ ನಿಂತುಕೋ. (ಆ ರೂಪಕ್ಕೂ ಯುದ್ಧದ ಕ್ರೌರ್ಯಕ್ಕೂ ಹೊಂದಿಕೆಯಾಗಿರುತ್ತದೆ ಎಂದು ಭಾವವು.) ॥೪೪॥

ಕರ್ಕಶಂ ವಚನಂ ಬ್ರೂಹಿ ತತೋ ಯುದ್ಧಂ ಕರೋಮ್ಯಹಂ ।
ಈದೃಶೀಂ ಸುವತೀಂ ದೃಷ್ಟ್ವಾ ನ ಮೇ ಪಾಣಿಃ ಪ್ರಸೀದತಿ ॥೪೫॥
ಹಂತುಂ ತ್ವಾಂ ಮೃಗಶಾವಾಕ್ಷಿ ಕಾಮುಕಾಂತೋಪಮೇ ಮೃಧೇ ।

॥ ವ್ಯಾಸ ಉವಾಚ ॥

ಇತಿ ಬ್ರುವಾಣಂ ಕಾಮಾರ್ತಂ ವೀಕ್ಷ್ಯ ತಂ ಜಗದಂಬಿಕಾ ॥೪೬॥
ಸ್ಮಿತಪೂರ್ವಮಿದಂ ವಾಕ್ಯಮುವಾಚ ಭರತೋತ್ತಮ ।

॥ ದೇವ್ಯುವಾಚ ॥

ಕಿಂ ವಿಷೀದಸಿ ಮಂದಾತ್ಮನ್ ಕಾಮಬಾಣವಿಮೋಹಿತ ॥೪೭॥
ಪ್ರೇಕ್ಷಿಕಾಽಹಂ ಸ್ಥಿತಾ ಮೂಢ ಕುರು ಕಾಲಿಕಯಾ ಮೃಧಂ ।
ಚಾಮುಂಡಯಾ ವಾ ಕುರ್ವೇತೇ ತವ ಯೋಗ್ಯೇ ರಣಾಂಗಣೇ॥೪೮॥

---

ನಾನು ಹೇಳಿದಂತೆ ಆಕಾರವನ್ನು ಧರಿಸಿಕೊಂಡು ನೀನು ಕಠಿಣವಾದ ಮಾತುಗಳನ್ನಾಡು. ಅನಂತರದಲ್ಲಿ ನಾನೂ ನಿನ್ನೊಡನೆ ಕಾಠಿನ್ಯದಿಂದ ಕೂಡಿ ಯುದ್ಧವನ್ನು ಮಾಡುವೆನು. ಹಾಗೆ ಮಾಡದಿದ್ದರೆ ಇಂತಹ ಹುಲ್ಲೆಯಂತಿರುವ ಕಣ್ಣುಳ್ಳ, ಮನೋಹರವಾದ ಆಕಾರವುಳ್ಳ, ರತಿಯಂತಿರುವ ರಮಣಿಯಾದ ನಿನ್ನನ್ನು ನೋಡಿ, ಯುದ್ಧದಲ್ಲಿ ಹೊಡೆಯಲು ನನಗೆ ಕೈಯು ಒಲಿದು ಬರುವುದಿಲ್ಲ! ಎಂದು ಶುಂಭನು ದೇವಿಯ ಸಂಗಡ ಹೇಳಿದನು. ॥೪೫॥

ವ್ಯಾಸಋಷಿಯು ಹೇಳಿದನು— ಎಲೈ ಭರತವಂಶದ ರಾಜಶ್ರೇಷ್ಠನಾದ ಜನಮೇಜಯನೇ, ಕೇಳು—ಜಗನ್ಮಾತೆಯಾದ ದೇವಿಯು ಹೀಗೆ ಹೇಳುತ್ತಿರುವ, ಮತ್ತು ಸ್ತ್ರೀಯ ಮೇಲಿನ ವ್ಯಾಮೋಹದಿಂದ ಸಂಕಟಪಡುತ್ತಿರುವ ಆ ಶುಂಭನನ್ನು ನೋಡಿ ದೇವಿಯು ಮಂದಹಾಸದಿಂದ ಕೂಡಿದವಳಾಗಿ ಈ ಮಾತನ್ನು ಉತ್ತರವಾಗಿ ಹೇಳಿದಳು. ॥೪೬॥

ದೇವಿಯು ಹೇಳಿದಳು— ಎಲೈ ದಡ್ಡನೇ, ಕಾಮಬಾಣದ ಏಟಿನಿಂದ ಮೋಹವನ್ನು ಹೊಂದಿರುವ ಶುಂಭನೇ, ನೀನು ಸುಮ್ಮನೆ ಏಕೆ ಹೀಗೆ ವ್ಯಸನಪಡುತ್ತೀಯೆ? ನಾನು ಯುದ್ಧವನ್ನು ನೋಡುತ್ತಿರುತ್ತೇನೆ. ನೀನು ಕಾಳಿಕಾದೇವಿಯೊಡನೆಯಾಗಲಿ,

ಪ್ರಹರಸ್ವ ಯಥಾಕಾಮಂ ನಾಹಂ ತ್ವಾಂ ಯೋದ್ಧುಮುತ್ಸಹೇ ।
ಇತ್ಯುಕ್ತ್ವಾ ಕಾಲಿಕಾಂ ಪ್ರಾಹ ದೇವೀ ಮಧುರಯಾ ಗಿರಾ ॥೪೯॥

ಜಹ್ಯೇನಂ ಕಾಲಿಕೇ ಕ್ರೂರೇ ಕುರೂಪಪ್ರಿಯಮಾಹವೇ ।

॥ ವ್ಯಾಸ ಉವಾಚ ॥

ಇತ್ಯುಕ್ತಾ ಕಾಲಿಕಾ ಕಾಲಪ್ರೇರಿತಾ ಕಾಲರೂಪಿಣೀ ॥೫೦॥

ಗದಾಂ ಪ್ರಗೃಹ್ಯ ತರಸಾ ತಸ್ಥಾವಾಜೌ ಕೃತೋದ್ಯಮಾ ।
ತಯೋಃ ಪರಸ್ಪರಂ ಯುದ್ಧಂ ಬಭೂವಾತಿ ಭಯಾನಕಂ ॥೫೧॥

ಪಶ್ಯತಾಂ ಸರ್ವದೇವಾನಾಂ ಮುನೀನಾಂ ಚ ಮಹಾತ್ಮನಾಂ ।
ಗದಾಮುದ್ಯಮ್ಯ ಶುಂಭೋಽಥ ಜಘಾನ ಕಾಲಿಕಾಂ ರಣೇ ॥೫೨॥

---

ಚಾಮುಂಡಿಕಾದೇವಿಯೊಡನೆಯಾಗಲಿ ಯುದ್ಧವನ್ನು ಮಾಡು. ಅವರು ನಿನಗೆ ಯುದ್ಧರಂಗದಲ್ಲಿ ಯುದ್ಧಮಾಡಲು ತಕ್ಕ ಎದುರಾಳಿಗಳಾಗಿರುವರು ! ॥೪೭-೪೮॥

ಎಲೈ ಶುಂಭನೇ, ನೀನು ನಿನ್ನ ಇಚ್ಛೆಬಂದಂತೆ ಆಯುಧಗಳಿಂದ ಅವರೊಡನೆ ಯುದ್ಧವನ್ನು ಮಾಡು. ನಾನು ಮಾತ್ರ ನಿನ್ನೊಡನೆ ಯುದ್ಧವನ್ನು ಮಾಡಲು ಉತ್ಸಾಹವನ್ನು ಪಡೆದಿಲ್ಲವು. ಹೀಗೆಂದು ಹೇಳಿ ದೇವಿಯು ಮೃದುವಾದ ಮಾತಿನಿಂದ ಕಾಳಿಕಾದೇವಿಯನ್ನು ಕುರಿತು ಹೀಗೆ ಹೇಳಿದಳು. ॥೪೯॥

ಎಲೈ ಕ್ರೂರಳಾದ ಕಾಳಿಕಾದೇವಿಯೇ, ನೀನು ಕುತ್ಸಿತವಾದ ರೂಪದಲ್ಲಿ ಇಷ್ಟವುಳ್ಳವನಾದ ಇವನನ್ನು ಸಂಹರಿಸು. ಎಂದು ದೇವಿಯು ಅಪ್ಪಣೆಮಾಡಿದಳು. ॥೫೦॥

ವ್ಯಾಸಋಷಿಯು ಹೇಳಿದನು—ಪ್ರಳಯಕಾಲದ ಯಮನಂತೆ ಭಯಂಕರವಾದ ರೂಪವುಳ್ಳ, ದೇವಿಯಿಂದ ಹೀಗೆ ಹೇಳಲ್ಪಟ್ಟ ಕಾಳಿಕಾದೇವಿಯು ಶುಂಭನ ಮರಣಕಾಲದಿಂದ ಪ್ರೇರಿತಳಾಗಿ, ದೇವಿಯ ಆಜ್ಞೆಯನ್ನೂ ನಡೆಯಿಸುವವಳಾಗಿ, ಗದಾಯುಧವನ್ನು ಹಿಡಿದುಕೊಂಡು ಯುದ್ಧಮಾಡುವುದಕ್ಕೋಸ್ಕರ ಪ್ರಯತ್ನವುಳ್ಳವಳಾಗಿ ಬೇಗನೆ ಸಿದ್ಧಳಾದಳು. ಆಗ ಶುಂಭನಿಗೂ ಕಾಳಿಕಾದೇವಿಗೂ ಪರಸ್ಪರವಾಗಿ ಬಹಳ ಭಯಂಕರವಾದ ಯುದ್ಧವು ನಡೆಯಿತು. ॥೫೧॥

ಕಾಲಿಕಾ ದೈತ್ಯರಾಜಾನಂ ಗದಯಾ ನ್ಯಹನದ್ಭೃಶಂ ।
ಬಭಂಜಾಸ್ಯ ರಥಂ ಚಂಡೀ ಗದಯಾ ಕನಕೋಜ್ಜ್ವಲಂ ॥೫೩॥

ಖರಾನ್ ಹತ್ವಾ ಜಘಾನಾಶು ದಾರುಕಂ ದಾರುಣಸ್ವನಾ ।
ಸ ಪದಾತಿರ್ಗದಾಂ ಗುರ್ವೀಂ ಸಮಾದಾಯ ಕ್ರುಧಾನ್ವಿತಃ ॥೫೪॥

ಕಾಲಿಕಾಭುಜಯೋರ್ಮಧ್ಯೇ ಪ್ರಹಸನ್ನ ಹನತ್ತದಾ ।
ವಂಚಯಿತ್ವಾ ಗದಾಪಾತಂ ಖಡ್ಗಮಾದಾಯ ಸತ್ವರಾ ॥೫೫॥

ಚಿಚ್ಛೇದಾಸ್ಯ ಭುಜಂ ಸವ್ಯಂ ಸಾಯುಧಂ ಚಂದನಾರ್ಚಿತಂ ।
ಸ ಚ್ಛಿನ್ನಬಾಹುರ್ವಿರಥೋ ಗದಾಪಾಣಿಃ ಪರಿಪ್ಲುತಃ ॥೫೬॥

---

ಮಹಾಮಹಿಮೆಯುಳ್ಳ ಮುನಿಗಳೂ, ಸಮಸ್ತರಾದ ದೇವತೆಗಳೂ ಸಹ ನೋಡುತ್ತಿರಲು, ಶುಂಭನು ಯುದ್ಧದಲ್ಲಿ ಕಾಳಿಕಾದೇವಿಯನ್ನು ಗದಾಯುಧದಿಂದ ಎತ್ತಿ ಹೊಡೆದನು. ॥೫೨॥

ಕಾಳಿಕಾದೇವಿಯೂ ರಾಕ್ಷಸರಿಗೆ ರಾಜನಾದ ಶುಂಭನನ್ನು ಗದೆಯಿಂದ ಬಲವಾಗಿ ಹೊಡೆದಳು. ಕೋಪವುಳ್ಳವಳಾಗಿ ಚಿನ್ನದ ಕೆತ್ತನೆಯ ಕೆಲಸದಿಂದ ಹೊಳೆಯುತ್ತಿರುವ ಅವನ ರಥವನ್ನೂ ತನ್ನ ಗದಾಯುಧದಿಂದ ಮುರಿದಳು. ॥೫೩॥

ರಥಕ್ಕೆ ಕಟ್ಟಲ್ಪಟ್ಟಿದ್ದ ಕತ್ತೆಗಳನ್ನು ಕೊಂದು ಕಾಳಿಕಾದೇವಿಯು ಭಯಂಕರವಾಗಿ ಗರ್ಜಿಸುತ್ತಾ ಅವನ ಸಾರಥಿಯನ್ನೂ ಕೊಂದಳು.

ಆಗ ಕಾಲಾಳಿನಂತಾದ ಆ ಶುಂಭನು ಕೋಪದಿಂದ ಕೂಡಿದವನಾಗಿ ಭಾರವಾದ ದೊಡ್ಡದಾದ ಗದೆಯನ್ನು ತೆಗೆದುಕೊಂಡು ನಗುತ್ತಾ ಕಾಳಿಕಾದೇವಿಯನ್ನು ಎದೆಗೆ ಗುರಿಯಿಟ್ಟು ಹೊಡೆದನು. ॥೫೪॥

ಆಗ ಕಾಳಿಕಾದೇವಿಯು ಅವನು ಹೊಡೆದ ಗದೆಯ ಏಟನ್ನು ತಪ್ಪಿಸಿಕೊಂಡು ಬೇಗನೆ ಕತ್ತಿಯನ್ನು ತೆಗೆದುಕೊಂಡು, ಗಂಧದ ಲೇಪವನ್ನು ಪಡೆದಿದ್ದ ಆಯುಧವನ್ನು ಹಿಡಿದಿದ್ದ ಅವನ ಎಡತೋಳನ್ನು ಕತ್ತರಿಸಿದಳು. ॥೫೫॥

ಆಗ ರಥವಿಲ್ಲದವನೂ, ಕತ್ತರಿಸಲ್ಪಟ್ಟ ತೋಳುಳ್ಳವನೂ ಆಗಿದ್ದ ಆ ಶುಂಭನು ರಕ್ತದಿಂದ ನೆನೆದವನಾಗಿ ಒಂದು ಕೈಯಿಂದ ಗದೆಯನ್ನು ಹಿಡಿದುಕೊಂಡು ಕಾಳಿಕಾದೇವಿಯನ್ನು ಸಮೀಪಿಸಿ ಹೊಡೆದನು. ॥೫೬॥

ರುಧಿರೇಣ ಸಮಾಗಮ್ಯ ಕಾಲಿಕಾಮುಹನತ್ತದಾ ।
ಕಾಲೀ ಚ ಕರವಾಲೇನ ಭುಜಂ ತಸ್ಯಾಥ ದಕ್ಷಿಣಂ ॥೫೭॥

ಚಿಚ್ಛೇದ ಪ್ರಹಸಂತೀ ಸಾ ಸಗದಂ ಕಿಲ ಸಾಂಗದಂ ।
ಕರ್ತುಂ ಪಾದಪ್ರಹಾರಂ ಸ ಕುಪಿತಃ ಪ್ರಯಯೌ ಜವಾತ್ ॥೫೮॥

ಕಾಲೀ ಚಿಚ್ಛೇದ ಚರಣೌ ಖಡ್ಗೇನಾಸ್ಯ ತ್ವರಾನ್ವಿತಾ ।
ಸ ಚ್ಛಿನ್ನಕರಪಾದೋಽಪಿ ತಿಷ್ಠ ತಿಷ್ಠೇತಿ ಚಾಬ್ರುವನ್ ॥೫೯॥

ಧಾವಮಾನೋ ಯಯಾವಾಶು ಕಾಲಿಕಾಂ ಭೀಷಯನ್ನಿವ ।
ತಮಾಗಚ್ಛಂತಮಾಲೋಕ್ಯ ಕಾಲಿಕಾ ಕಮಲೋಪಮಂ ॥೬೦॥

ಚಕರ್ತ ಮಸ್ತಕಂ ಕಂಠಾದ್ರುಧಿರೌಘವಹಂ ಭೃಶಂ ।
ಭಿನ್ನೇಽಸೌ ಮಸ್ತಕೇ ಭೂಮೌ ಪಪಾತ ಗಿರಿಸನ್ನಿಭಃ ॥೬೧॥

---

ಆ ತರುವಾಯ ಕಾಳಿಕಾದೇವಿಯು ನಗುತ್ತಾ ಗದಾಯುಧವನ್ನು ಹಿಡಿದಿದ್ದ, ಭುಜಕೀರ್ತಿಯಿಂದ ಅಲಂಕರಿಸಲ್ಪಟ್ಟಿದ್ದ, ಅವನ ಬಲತೋಳನ್ನೂ ಕತ್ತಿಯಿಂದ ಹೊಡೆದು ಕತ್ತರಿಸಿದಳು. ॥೫೭॥

ಶುಂಭನು ಕೋಪದಿಂದ ಕೆರಳಿ ತನ್ನ ಕಾಲಿನಿಂದ ಕಾಳಿಕಾದೇವಿಯನ್ನು ಒದೆಯುವುದಕ್ಕಾಗಿ ಬೇಗನೆ ಮುನ್ನುಗ್ಗಿಹೋದನು. ಆಗ ಕಾಳಿಯು ತ್ವರೆಯಿಂದ ಕತ್ತಿಯಿಂದ ಅವನ ಕಾಲುಗಳನ್ನೂ ಕತ್ತರಿಸಿದಳು. ॥೫೮॥

ಅವನು ಕತ್ತರಿಸಲ್ಪಟ್ಟ ಕೈಕಾಲುಗಳುಳ್ಳವನಾಗಿದ್ದರೂ ನಿಲ್ಲು, ನಿಲ್ಲು, ಎಂದು ಹೇಳುತ್ತಾ ಕಾಳಿಕಾದೇವಿಯನ್ನು ಹೆದರಿಸುವವನ ಹಾಗೆ ಹಿಂದಿನ ವೇಗದಿಂದಲೇ ಓಡುತ್ತಾ ಬರುತ್ತಿರುವಂತೆ ಕಂಡುಬಂದನು ! ಕಮಲದಂತೆ ರಕ್ತದಿಂದ ಕೆಂಪಗಿರುವ, ಹೊರಳಿಕೊಂಡು ಬರುತ್ತಿರುವಂತೆ ತೋರುತ್ತಿರುವ, ಬಹಳಮಟ್ಟಿಗೆ ರಕ್ತದ ಪ್ರವಾಹವನ್ನು ಸುರಿಸುತ್ತಿರುವ, ಆ ಶುಂಭನನ್ನು ನೋಡಿ ಕಾಳಿಕಾದೇವಿಯು ಬೇಗನೆ ಅವನ ಕುತ್ತಿಗೆಯ ಮೇಲಿನಿಂದ ಅವನ ತಲೆಯನ್ನೂ ಕತ್ತರಿಸಿ ಕೆಡವಿದಳು. ॥೫೯-೬೦॥

ಬೆಟ್ಟದಂತಿರುವ ದೇಹವುಳ್ಳ, ಆ ಶುಂಭನು ತನ್ನ ತಲೆಯು ಕತ್ತರಿಸಲ್ಪಟ್ಟ ಅನಂತರದಲ್ಲಿ ಭೂಮಿಯಲ್ಲಿ ಬಿದ್ದನು. ಅವನ ಪ್ರಾಣಗಳೂ ಶರೀರದಿಂದ ಹೊರಟು ಬೇಗನೆ ಹಾರಿಹೋದುವು. ॥೬೧॥

ಪ್ರಾಣಾ ವಿನಿರ್ಯಯುಸ್ತಸ್ಯ ದೇಹಾದುತ್ಕ್ರಮ್ಯ ಸತ್ವರಂ ।
ಗತಾಸುಂ ಪತಿತಂ ದೈತ್ಯಂ ದೃಷ್ಟ್ವಾ ದೇವಾಃ ಸವಾಸವಾಃ ॥೬೨॥

ತುಷ್ಟುವುಸ್ತಾಂ ತದಾದೇವೀಂ ಚಾಮುಂಡಾಂ ಕಾಲಿಕಾಂ ತಥಾ ।
ವವುರ್ವಾತಾಃ ಶಿವಾಸ್ತತ್ರ ದಿಶಶ್ಚ ವಿಮಲಾ ಭೃಶಂ ॥೬೩॥

ಬಭೂವುಶ್ಚಾಗ್ನಯೋ ಹೋಮೇ ಪ್ರದಕ್ಷಿಣಶಿಖಾಃ ಶುಭಾಃ ।
ಹತಶೇಷಾಶ್ಚ ಯೇ ದೈತ್ಯಾಃ ಪ್ರಣಮ್ಯ ಜಗದಂಬಿಕಾಂ ॥೬೪॥

ತ್ಯಕ್ತ್ವಾಯುಧಾನಿ ತೇ ಸರ್ವೇ ಪಾತಾಲಂ ಪ್ರಯಯುರ್ನೃಪ ।
ಏತತ್ತೇ ಸರ್ವಮಾಖ್ಯಾತಂ ದೇವ್ಯಾಶ್ಚರಿತಮುತ್ತಮಂ ॥೬೫॥

ಶುಂಭಾದೀನಾಂ ವಧಂ ಚೈವ ಸುರಾಣಾಂ ರಕ್ಷಣಂ ತಥಾ ।
ಏತದಾಖ್ಯಾನಕಂ ಸರ್ವಂ ಪಠಂತಿ ಭುವಿ ಮಾನವಾಃ ॥೬೬॥

---

ಪ್ರಾಣಗಳು ಹೋದಬಳಿಕ ಶುಂಭನು ಬಿದ್ದುದನ್ನು ನೋಡಿ ಇಂದ್ರನೂ ದೇವತೆಗಳೂ ಆಗ ಚಾಮುಂಡಾದೇವಿಯನ್ನೂ, ಅಂಬಿಕಾದೇವಿಯನ್ನೂ, ಕಾಳಿಕಾದೇವಿಯನ್ನೂ ಸಹ ಹೊಗಳಿದರು. ಅದರಿಂದ ಸಂತುಷ್ಟಳಾದ ದೇವಿಯು ದೇವತೆಗಳೇ ಮುಂತಾದವರಿಗೆ ಇಷ್ಟವಾದ ವರಗಳನ್ನೂ ಅನುಗ್ರಹಿಸಿ ಅಲ್ಲಿಯೇ ಕಣ್ಮರೆಯಾದಳು ! ॥೬೨॥

ಆಗ ಯುದ್ಧರಂಗದಲ್ಲಿ ದೇವಿಗೆ ಜಯವಾದ ಮೇಲೆ ಮಂಗಳಕರವಾದ ತಂಗಾಳಿಗಳು ಸುಖವನ್ನುಂಟುಮಾಡುತ್ತಾ ಬೀಸಿದುವು. ದಿಕ್ಕುಗಳೆಲ್ಲವೂ ಬಹುಮಟ್ಟಿಗೆ ನಿರ್ಮಲವಾದುವು. ಹೋಮಮಾಡುವ ಕಾಲದಲ್ಲಿ ಅಗ್ನಿಗಳು ಪ್ರದಕ್ಷಿಣಾಕಾರವಾದ ಜ್ವಾಲೆಗಳುಳ್ಳವುಗಳಾಗಿ ಪ್ರಕಾಶಿಸುತ್ತಿದ್ದುವು ! ॥೬೩॥

ಓ ರಾಜನೇ, ಕೇಳು. ಯುದ್ಧದಲ್ಲಿ ನಾಶವನ್ನು ಹೊಂದದೆ ಉಳಿದಿದ್ದ ರಾಕ್ಷಸರೆಲ್ಲರೂ ತಮ್ಮ ತಮ್ಮ ಆಯುಧಗಳನ್ನು ಬಿಟ್ಟು ಜಗನ್ಮಾತೆಯಾದ ಅಂಬಿಕಾದೇವಿಗೆ ನಮಸ್ಕಾರಮಾಡಿ ಪಾತಾಳಲೋಕಕ್ಕೆ ಹೊರಟು ಹೋದರು ! ಓ ಜನಮೇಜಯರಾಜನೇ, ಈ ಪ್ರಕಾರವಾದ ದೇವಿಯ ಉತ್ತಮವಾದ ಚರಿತ್ರೆಯನ್ನು ನಿನಗೆ ಹೇಳಿದುದಾಯಿತು. ॥೬೪-೬೫॥

ಶುಂಭನೇ ಮೊದಲಾದ ರಾಕ್ಷಸರ ಸಂಹಾರವನ್ನೂ, ದೇವತೆಗಳ ಮತ್ತು ಧರ್ಮದ ರಕ್ಷಣೆಯನ್ನೂ ಸಹ ವಿಸ್ತಾರವಾಗಿಯೂ ಸಮಗ್ರವಾಗಿಯೂ ಹೇಳುವ ಈ

ಶೃಣ್ವಂತಿ ಚ ಸದಾ ಭಕ್ತ್ಯಾ ತೇ ಕೃತಾರ್ಥಾ ಭವಂತಿ ಹಿ ।
ಅಪುತ್ರೋ ಲಭತೇ ಪುತ್ರಾನ್ನಿರ್ಧನಶ್ಚ ಧನಂ ಬಹು ॥೬೭॥

ರೋಗೀ ಚ ಮುಚ್ಯತೇ ರೋಗಾತ್ಸರ್ವಾನ್ಕಾಮಾನವಾಪ್ನುಯಾತ್ ।
ಶತ್ರುತೋ ನ ಭಯಂ ತಸ್ಯ ಯ ಇದಂ ಚರಿತಂ ಶುಭಂ ।
ಶೃಣೋತಿ ಪಠತೇ ನಿತ್ಯಂ ಮುಕ್ತಿಮಾಪ್ನೋಯತೇ ನರಃ ॥೬೮॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಏಕತ್ರಿಂಶೋಽಧ್ಯಾಯಃ

---

ಉಪಾಖ್ಯಾನವನ್ನು ಸಂಪೂರ್ಣವಾಗಿ ಭೂಲೋಕದಲ್ಲಿ ಯಾವ ಮನುಷ್ಯರು ಭಕ್ತಿಯಿಂದ ಓದುತ್ತಾರೋ ಮತ್ತು ಕೇಳುತ್ತಾರೆಯೋ ಅವರು ಜನ್ಮವೆತ್ತಿದುದರ ಪ್ರಯೋಜನವನ್ನು ಹೊಂದುವರು, ಮತ್ತು ಕೃತಾರ್ಥರಾಗುವರು. ॥೬೬॥

ಈ ಚರಿತ್ರೆಯನ್ನು ಅಚಲವೂ ಅನನ್ಯವೂ ಆಗಿರುವ ಭಕ್ತಿಯಿಂದ ಓದುವವನೂ ಕೇಳುವವನೂ ಮಕ್ಕಳಿಲ್ಲದವನಾಗಿದ್ದರೆ, ಮಕ್ಕಳನ್ನೂ, ಬಡವನು ಹೆಚ್ಚಾದ ಸಂಪತ್ತನ್ನೂ ಹೊಂದುವನು. ರೋಗಿಯು ಆರೋಗ್ಯವುಳ್ಳವನಾಗುವನು. ಮತ್ತು ಪ್ರತಿಯೊಬ್ಬರೂ ತಮ್ಮ ಇಷ್ಟಗಳೆಲ್ಲವನ್ನೂ ತಪ್ಪದೆ ಪಡೆಯುವರು ! ॥೬೭॥

ಯಾವನು ಈ ಶುಭಕರವಾದ ಚರಿತ್ರೆಯನ್ನು ಓದುತ್ತಾನೋ ಕೇಳುವನೋ ಅಂಥವನಿಗೆ ಶತ್ರುವಿನಿಂದ ಭಯವು ಉಂಟಾಗುವುದಿಲ್ಲವು ! ಯಾವ ಮನುಷ್ಯನು ಪ್ರತಿನಿತ್ಯವೂ ಇದನ್ನು ಪಠಿಸುವನೋ ಅವನು ಕ್ರಮವಾಗಿ ಮುಕ್ತಿಯನ್ನು ಹೊಂದಲು ಅರ್ಹನಾಗಿ ಕಡೆಗೆ ಮೋಕ್ಷವನ್ನೂ ಪಡೆಯುವನು ! ॥೬೮॥

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ದ್ವಾತ್ರಿಂಶೋಽಧ್ಯಾಯಃ ||

### ಮೂವತ್ತೆರಡನೆಯ ಅಧ್ಯಾಯವು

|| ಜನಮೇಜಯ ಉವಾಚ ||

**ಮಹಿಮಾ ವರ್ಣ್ಯತೇ ಸಮ್ಯಕ್ಚಂಡಿಕಾಯಾಸ್ತ್ವಯಾ ಮುನೇ ।**
**ಕೇನ ಚಾರಾಧಿತಾ ಪೂರ್ವಂ ಚರಿತತ್ರಯಯೋಗತಃ ॥೧॥**

**ಪ್ರಸನ್ನಾ ಕಸ್ಯ ವರದಾ ಕೇನ ಪ್ರಾಪ್ತಂ ಫಲಂ ಮಹತ್ ।**
**ಆರಾಧ್ಯ ಕಾಮದಾಂ ದೇವೀಂ ಕಥಯಸ್ವ ಕೃಪಾನಿಧೇ ॥೨॥**

---

ಜನಮೇಜಯರಾಜನು ಕೇಳಿದನು — ಓ ವ್ಯಾಸಋಷಿಯೇ, ನೀನು ಚಂಡಿಕಾ ದೇವಿಯ ಮಹಿಮೆಯನ್ನು ಚನ್ನಾಗಿ ತಿಳಿಯಹೇಳಿರುತ್ತೀಯೆ. ಪೂರ್ವಕಾಲದಲ್ಲಿ ಈ ದೇವಿಯನ್ನು ಯಾರು ಯಾರು ಚರಿತ್ರತ್ರಯದೊಡನೆ ಆರಾಧಿಸಿದರು ? ಯಾರ ಯಾರ ವಿಷಯದಲ್ಲಿ ದೇವಿಯು ಪ್ರಸನ್ನಳಾಗಿ ವರಗಳನ್ನು ಅನುಗ್ರಹಿಸಿದಳು ? ಭಕ್ತರ ಕೋರಿಕೆಗಳನ್ನು ನೆರವೇರಿಸುವ ದೇವಿಯನ್ನು ಸಂತೋಷಪಡಿಸಿ ಯಾರು ಯಾರು ಮಹಾಫಲಗಳನ್ನು ಪಡೆದರು ? ದಯಾಳುವಾದ ವ್ಯಾಸನೇ, ಇದೆಲ್ಲವನ್ನೂ ನನಗೆ ತಿಳಿಯಹೇಳು. ||೧||

ಹಿಂದಿನ ಅಧ್ಯಾಯಗಳಲ್ಲಿ ಬ್ರಹ್ಮಾ, ವಿಷ್ಣು, ರುದ್ರ, ವಾಣೀ, ಲಕ್ಷ್ಮೀ, ಗೌರೀ, ಇಂದ್ರ ಮುಂತಾದ ದೊಡ್ಡವರೂ, ಎಲ್ಲ ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ದೇವಿಯನ್ನು ಆರಾಧಿಸಿ ಸಿದ್ಧಿಯನ್ನು ಪಡೆದು ಕೃತಾರ್ಥರಾದರೆಂದು ನೀನು ಹೇಳಿರುವೆ ಎಂಬುದು ನಿಜವು. ಆದರೆ ದೇವಿಯ ಆರಾಧನೆಯ ರೀತಿಗಳು ನಾನಾಬಗೆಯಾಗಿವೆ. ದೇವಿಯ ಮಂತ್ರ, ಜಪ, ಧ್ಯಾನ, ಉಪಾಸನೆ, ಸಮಾಧಿ, ಪೂಜಾ, ಸ್ತೋತ್ರ, ಪಠನ, ಹೋಮ ಎಂದು ಮುಂತಾಗಿ ಬಹುವಿಧವಾಗಿರುವ ಕ್ರಮ

**ಉಪಾಸನಾವಿಧಿಂ ಬ್ರಹ್ಮಂಸ್ತಥಾ ಪೂಜಾವಿಧಿಂ ವದ ।**
**ವಿಸ್ತರೇಣ ಮಹಾಭಾಗ ಹೋಮಸ್ಯ ಚ ವಿಧಿಂ ಪುನಃ ॥೩॥**

॥ ಸೂತ ಉವಾಚ ॥

**ಇತಿ ಭೂಪವಚಃ ಶ್ರುತ್ವಾ ಪ್ರೀತಃ ಸತ್ಯವತೀಸುತಃ ।**
**ಪ್ರತ್ಯುವಾಚ ನೃಪಂ ಕೃಷ್ಣೋ ಮಹಾಮಾಯಾಪ್ರಪೂಜನಂ ॥೪॥**

॥ ವ್ಯಾಸ ಉವಾಚ ॥

**ಸ್ವಾರೋಚಿಷೇಂತರೇ ಪೂರ್ವಂ ಸುರಥೋ ನಾಮ ಪಾರ್ಥಿವಃ ।**
**ಬಭೂವ ಪರಮೋದಾರಃ ಪ್ರಜಾಪಾಲನತತ್ಪರಃ ॥೫॥**

**ಸತ್ಯವಾದೀ ಕರ್ಮಪರೋ ಬ್ರಾಹ್ಮಣಾನಾಂ ಚ ಪೂಜಕಃ ।**
**ಗುರುಭಕ್ತಿರತೋ ನಿತ್ಯಂ ಸ್ವದಾರಗಮನೇ ರತಃ ॥೬॥**

---

ಗಳಲ್ಲಿ ಪ್ರಥಮ ಮಧ್ಯಮ ಉತ್ತಮವೆಂಬ ಚರಿತ್ರತ್ರಯದಿಂದ ಕೂಡಿದ ಪಠನ, ಧ್ಯಾನ, ಹೋಮಾದಿಗಳಿಂದ ಯಾರು ಯಾರಿಗೆ ಇಷ್ಟಾರ್ಥಪ್ರಾಪ್ತಿಯಾಗಿದೆ ಎಂದು ಮುಂತಾದ ಸಂಗತಿಗಳನ್ನು ನನಗೆ ತಿಳಿಯಹೇಳೆಂದು ದೇವೀಭಕ್ತನಾಗಿರುವ ಜನಮೇಜಯರಾಜನು ಈಗ ವಿಶೇಷ ವಿಷಯದ ಪ್ರಶ್ನೆಯನ್ನು ಕೇಳಿದನೆಂದು ತಾತ್ಪರ್ಯವು.॥೨॥

ಅದೃಷ್ಟವಂತನಾದ, ಬ್ರಾಹ್ಮಣೋತ್ತಮನಾದ, ವ್ಯಾಸಋಷಿಯೇ, ದೇವಿಯ ಉಪಾಸನಾ, ಪೂಜಾ, ಹೋಮ ಇವುಗಳ ಪ್ರಯೋಗಕ್ರಮವನ್ನು ವಿಸ್ತಾರವಾಗಿ ನನಗೆ ತಿಳಿಯಹೇಳು. ॥೩॥

ಸೂತಪುರಾಣಿಕನು ಹೇಳಿದನು—ಸತ್ಯವತೀ ದೇವಿಯ ಮಗನಾದ ವ್ಯಾಸ ಋಷಿಯು ಹೀಗೆ ಕೇಳಿದ ಜನಮೇಜಯರಾಯನ ಮಾತನ್ನು ಲಾಲಿಸಿ ಅವನನ್ನು ಕುರಿತು ಮಹಾಮಾಯಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವ ದೇವಿಯ ಪೂಜೆಯಲ್ಲಿ ವಿಶೇಷ ಕ್ರಮವನ್ನು ಹಿಂದಿನ ಭಕ್ತರ ಉದಾಹರಣೆಯೊಡನೆ ವಿವರಿಸಿ ಹೀಗೆ ಹೇಳಿದನು. ॥೪॥

ಪೂರ್ವಕಾಲದಲ್ಲಿ ಸ್ವಾರೋಚಿಷವೆಂಬ ಎರಡನೆಯ ಮನ್ವಂತರದಲ್ಲಿ ಬಹಳ ಉದಾರವಾದ ಮನಸ್ಸುಳ್ಳವನೂ, ಪ್ರಜೆಗಳನ್ನು ರಕ್ಷಣೆಮಾಡುವುದರಲ್ಲಿ ಆಸಕ್ತನೂ ಆದ ಸುರಥನೆಂಬ ರಾಜನು ಇದ್ದನು. ॥೫॥

**ದಾನಶೀಲೋಽವಿರೋಧೀ ಚ ಧನುರ್ವೇದೈಕಪಾರಗಃ ।**
**ಏವಂ ಪಾಲಯತೋ ರಾಜ್ಯಂ ಮ್ಲೇಚ್ಛಾಃ ಪರ್ವತವಾಸಿನಃ ॥೭॥**

**ಬಲಾಚ್ಛತ್ರುತ್ವಮಾಪನ್ನಾಃ ಸೈನ್ಯಂ ಕೃತ್ವಾ ಚತುರ್ವಿಧಂ ।**
**ಹಸ್ತ್ಯಶ್ವರಥಪಾದಾತಿಸಹಿತಾಸ್ತೇ ಮದೋತ್ಕಟಾಃ ॥೮॥**

---

ಆ ಸುರಥನೆಂಬ ರಾಜನು ಸತ್ಯವನ್ನು ಹೇಳುವವನಾಗಿಯೂ, ಸತ್ಕರ್ಮಗಳನ್ನು ಮಾಡುವವನಾಗಿಯೂ, ಬ್ರಾಹ್ಮಣರನ್ನು ಗೌರವಿಸುವವನಾಗಿಯೂ ಯಾವಾಗಲೂ ಗುರುಜನಗಳಲ್ಲಿ ಭಕ್ತಿಯಿಂದ ನಡೆಯುವುದರಲ್ಲಿ ಆಸಕ್ತಿಯುಳ್ಳವನಾಗಿಯೂ ತನ್ನ ಪತ್ನಿಯಲ್ಲಿ ಮಾತ್ರವೇ ಅನುರಾಗದಿಂದ ಸೌಖ್ಯವನ್ನು ಅನುಭವಿಸುವವನಾಗಿಯೂ, ದಾನವನ್ನು ಮಾಡುವ ಸ್ವಭಾವವುಳ್ಳವನಾಗಿಯೂ ಯಾರೊಡನೆಯೂ ವಿರೋಧವಿಲ್ಲದಿರುವವನಾಗಿಯೂ ಮತ್ತು ಧನುರ್ವೇದದ ತಿಳಿವಳಿಕೆಯಲ್ಲಿ ಮುಖ್ಯವಾದ ಮತ್ತು ಹೆಚ್ಚಾದ ಪಾಂಡಿತ್ಯವುಳ್ಳವನಾಗಿಯೂ ಇದ್ದನು. ॥೬॥

ಹೀಗೆ ರಾಜ್ಯವನ್ನು ಪಾಲನೆಮಾಡುತ್ತಿರುವ ಸುರಥರಾಜನಿಗೆ ಬೆಟ್ಟದಲ್ಲಿ ವಾಸಮಾಡುವವರಾದ ಮ್ಲೇಚ್ಛಜನರು ಇನ್ನೊಬ್ಬರ ಸಹಾಯಕ್ಕಾಗಿ ಬಂದು ಇವನನ್ನು ಬಲವಂತವಾಗಿ ಶತ್ರುವೆಂದು ಭಾವಿಸಿ ನಾಲ್ಕುವಿಧವಾದ ಸೇನೆಯನ್ನು ಕೂಡಿಸಿಕೊಂಡು, ಆನೆ, ಕುದುರೆ, ರಥ, ಕಾಲಾಳು ಇವುಗಳಿಂದ ಕೂಡಿದವರಾಗಿ ಮದದಿಂದ ಕೊಬ್ಬಿದವರಾಗಿ ಇವನ ರಾಜ್ಯವನ್ನು ಹಿಡಿಯುವುದರಲ್ಲಿ ಆಸಕ್ತರಾಗಿ ಯುದ್ಧಕ್ಕೆ ಬಂದರು. ॥೭-೮॥

ಧ್ರುವನೆಂಬ ರಾಜನ ಮೊಮ್ಮಗನಾದ ನಂದಿರುತ್ ಎಂಬುವನು ತನ್ನ ರಾಜ್ಯವನ್ನು ವಿಸ್ತರಿಸುವ ಆಶೆಯಿಂದ ಈ ಸುರಥನನ್ನು ಶತ್ರುವನ್ನಾಗಿ ಭಾವನೆ ಮಾಡಿಕೊಂಡು ಯುದ್ಧಮಾಡಲು ದಂಡೆತ್ತಿಬಂದನು. ಇವನು ತನ್ನ ಸಹಾಯಕ್ಕಾಗಿ ಮ್ಲೇಚ್ಛರನ್ನೂ ಪ್ರೇರಿಸಿ ಕರೆತಂದಿದ್ದನು. ಹಾಗೆ ಕೋಲಾಹಲದಿಂದ ಅನ್ಯಾಯವಾಗಿ ಯುದ್ಧಮಾಡುವವರಾದುದರಿಂದಲೂ, ಅಥವಾ ಕೋಲಾ ಎಂಬ ರಾಜಧಾನಿಯಾದ ಪಟ್ಟಣವನ್ನು ನಾಶಮಾಡಿದುದರಿಂದಲೂ ಇವರಿಗೆ ಕೋಲಾವಿಧ್ವಂಸಿಗಳೆಂದು ಹೆಸರು ಬಂದಿರುವುದು, ಎಂದು ಬ್ರಹ್ಮವೈವರ್ತಪುರಾಣದಲ್ಲಿ ಪ್ರಕೃತಿಖಂಡದಲ್ಲಿ ದುರ್ಗೋಪಾಖ್ಯಾನದಲ್ಲಿ ಹೇಳಿರುವುದು.

ಕೋಲಾವಿಧ್ವಂಸಿನಃ ಪ್ರಾಪ್ತಾಃ ಪೃಥ್ವೀಗ್ರಹಣತತ್ಪರಾಃ ।
ಸುರಥಃ ಸೈನ್ಯಮಾದಾಯ ಸಂಮುಖಃ ಸಮುಪದ್ಯತ ॥೯॥

ಯುದ್ಧಂ ಸಮಭವದ್ಘೋರಂ ತಸ್ಯ ತೈರತಿದಾರುಣೈಃ ।
ಮ್ಲೇಚ್ಛಾನಾಂ ತು ಬಲಂ ಸ್ವಲ್ಪಂ ರಾಜ್ಞಸ್ತದ್ಬಲಮುದ್ಧತಂ ॥೧೦॥

ತಥಾಽಪಿ ತೈರ್ಜಿತೋ ಯುದ್ಧೇ ದೈವಾದ್ರಾಜಾ ಪರಾಜಿತಃ।
ಭಗ್ನಶ್ಚ ಸ್ವಪುರಂ ಪ್ರಾಪ್ತಃ ಸುರಕ್ಷಂ ದುರ್ಗಮಂಡಿತಂ ॥೧೧॥

ಚಿಂತಯಾಮಾಸ ಮೇಧಾವೀ ರಾಜಾ ನೀತಿವಿಚಕ್ಷಣಃ ।
ಪ್ರಧಾನಾನ್ವಿಮನಾ ದೃಷ್ಟ್ವಾ ಶತ್ರುಪಕ್ಷಸಮಾಶ್ರಿತಾನ್ ॥೧೨॥

ಸ್ಥಾನಂ ಗೃಹೀತ್ವಾ ವಿಪುಲಂ ಪರಿಖಾದುರ್ಗಮಂಡಿತಂ ।
ಕಾಲಪ್ರತೀಕ್ಷಾ ಕರ್ತವ್ಯಾ ಕಿಂ ವಾ ಯುದ್ಧಂ ವರಂ ಮತಂ ॥೧೩॥

---

ಸುರಥರಾಜನೂ ತನ್ನ ಸೇನೆಯನ್ನು ತೆಗೆದುಕೊಂಡು ಯುದ್ಧಕ್ಕಾಗಿ ಎದುರಾದನು. ಆ ಸುರಥರಾಜನಿಗೂ ಬಹಳ ಕ್ರೂರರಾದ ಮ್ಲೇಚ್ಛರಿಗೂ ಸಹ ಬಹಳ ಭಯಂಕರವಾದ ಯುದ್ಧವು ನಡೆಯಿತು. ||೯||

ಮ್ಲೇಚ್ಛರ ಸೇನೆಯು ಕೊಂಚವಿದ್ದಿತು. ರಾಜನ ಸೇನೆಯು ಬಹಳವಾಗಿತ್ತು. ಆದಾಗ್ಯೂ ಅನ್ಯಾಯದಿಂದ ಯುದ್ಧಮಾಡುವವರಾದ ಅವರ ಸಂಗಡ ನ್ಯಾಯದಿಂದ ಯುದ್ಧಮಾಡುವವನಾದ ಸುರಥರಾಜನು ಯುದ್ಧದಲ್ಲಿ ದುರ್ದೈವದ ಮಹಿಮೆಯ ಫಲವಾಗಿ ಅವರಿಂದ ಜಯಿಸಲ್ಪಟ್ಟು ಸೋತು ಹೋದನು. ||೧೦||

ಸುರಥರಾಜನು ಯುದ್ಧದಲ್ಲಿ ಸೋತು ಹಿಂತಿರುಗಿದವನಾಗಿ ದುರ್ಗದಿಂದ ಕೂಡಿಕೊಂಡು ಚನ್ನಾಗಿ ರಕ್ಷಣೆಮಾಡುವುದಾಗಿರುವ ತನ್ನ ಪಟ್ಟಣಕ್ಕೆ ಬಂದನು. ರಾಜನೀತಿಯನ್ನು ಚನ್ನಾಗಿ ತಿಳಿದಿರುವನಾಗಿಯೂ, ಬುದ್ಧಿವಂತನಾಗಿಯೂ ಇರುವವನಾದ ಕಾರಣ ಆ ರಾಜನು ತನ್ನ ಮಂತ್ರಿಗಳೂ ಶತ್ರುವಿನ ಪಕ್ಷಕ್ಕೆ ಸೇರಿದವರಾಗಿ ತನ್ನ ರಾಜ್ಯದ ರಕ್ಷಣೆಯ ವಿಷಯದಲ್ಲಿ ಮನಸ್ಸಿಲ್ಲದೆ ಇರುವುದನ್ನು ಕಂಡು ವ್ಯಸನಪಟ್ಟು ಆತಂಕದಿಂದ ಕೂಡಿದ್ದರೂ ಹೀಗೆ ಯೋಚನೆಮಾಡಿದನು. ||೧೧-೧೨||

ಕೋಟೆ ಮತ್ತು ಅಗುಳು ಇವುಗಳಿಂದಲೂ ದುರ್ಗದಿಂದಲೂ ಕೂಡಿಕೊಂಡಿರುವ ವಿಸ್ತಾರವಾದ ಪ್ರದೇಶವನ್ನು ಆಶ್ರಯಿಸಿಕೊಂಡು ಶತ್ರುವಿನ ಆಪತ್ಕಾಲವನ್ನೂ,

**ಮಂತ್ರಿಣಃ ಶತ್ರುವಶಗಾ ಮಂತ್ರಯೋಗ್ಯಾ ನ ತೇ ಕಿಲ ।**
**ಕಿಂ ಕರೋಮೀತಿ ಮನಸಾ ಭೂಪತಿಃ ಸಮಚಿಂತಯತ್ ॥೧೪॥**

**ಕದಾಚಿತ್ತೇ ಗೃಹೀತ್ವಾ ಮಾಂ ಪಾಪಾಚಾರಾಃ ಪರಾಶ್ರಿತಾಃ ।**
**ಶತ್ರುಭ್ಯೋಽಥ ಪ್ರದಾಸ್ಯಂತಿ ತದಾ ಕಿಂ ವಾ ಭವಿಷ್ಯತಿ ॥೧೫॥**

**ಪಾಪಬುದ್ಧಿಷು ವಿಶ್ವಾಸೋ ನ ಕರ್ತವ್ಯಃ ಕದಾಚನ ।**
**ಕಿಂ ನ ತೇ ವೈ ಪ್ರಕುರ್ವಂತಿ ಯೇ ಲೋಭವಶಗಾ ನರಾಃ ॥೧೬॥**

**ಭ್ರಾತರಂ ಪಿತರಂ ಮಿತ್ರಂ ಸುಹೃದಂ ಬಾಂಧವಂ ತಥಾ ।**
**ಗುರುಂ ಪೂಜ್ಯಂ ದ್ವಿಜಂ ದ್ವೇಷ್ಟಿ ಲೋಭಾವಿಷ್ಟಃ ಸದಾ ನರಃ ॥೧೭॥**

---

ನಮ್ಮ ಸುದೈವದ ಕಾಲವನ್ನೂ, ನಿರೀಕ್ಷಣೆ ಮಾಡುತ್ತಿರುವುದು ಉತ್ತಮವೋ? ಅಥವಾ ಈಗ ಅಪಜಯವಾಗಿದ್ದಾಗ್ಯೂ ಪುನಃ ಸೇನೆಯನ್ನು ಸೇರಿಸಿಕೊಂಡು ಯುದ್ಧ ಮಾಡುವುದು ಉತ್ತಮವೋ? ಹೇಗೆ ಮಾಡೋಣ? ॥೧೩॥

ನನ್ನ ಮಂತ್ರಿಗಳ ಸಂಗಡಸೇರಿ ಆಲೋಚನೆಮಾಡೋಣವೆಂದರೆ ಆ ಮಂತ್ರಿಗಳು ಶತ್ರುಗಳ ಪಕ್ಷಕ್ಕೇ ಸೇರಿಕೊಂಡಿರುವರು. ಆದುದರಿಂದ ಇವರು ಮಂತ್ರಾಲೋಚನೆಯನ್ನು ಮಾಡಲು ಯೋಗ್ಯರಾಗಿರುವುದಿಲ್ಲವಾದಕಾರಣ ನಾನು ಏನನ್ನು ಮಾಡಲಿ? ಎಂದು ರಾಜನು ತನ್ನ ಮನಸ್ಸಿನಲ್ಲಿ ಯೋಚಿಸಿದನು. ॥೧೪॥

ಅಲ್ಲದೆ ಕೆಟ್ಟ ನಡತೆಯುಳ್ಳವರಾಗಿಯೂ, ಶತ್ರುರಾಜರನ್ನು ಆಶ್ರಯಿಸಿದವರಾಗಿಯೂ, ಇರುವ ಆ ನನ್ನ ಮಂತ್ರಿಗಳು ಒಂದುವೇಳೆ ನನ್ನನ್ನೂ ಕೈಸೆರೆ ಹಿಡಿದುಕೊಂಡು ಶತ್ರುಗಳಿಗೆ ಒಪ್ಪಿಸುವರು. ಆಗ ನನ್ನ ಸ್ಥಿತಿಗತಿಯ ಪರಿಣಾಮವು ಏನಾಗುವುದೋ? ॥೧೫॥

ಕೆಡಕನ್ನುಂಟುಮಾಡುವ ಬುದ್ಧಿಯುಳ್ಳವರಲ್ಲಿ ಯಾವಾಗಲೂ, ನಂಬಿಕೆಯನ್ನು ಇಡಬಾರದು. ಯಾವ ಮನುಷ್ಯರು ಅತ್ಯಾಸೆಗೆ ಅಧೀನರಾಗುವರೋ ಅವರು ಯಾವ ಕೆಟ್ಟ ಕೆಲಸವನ್ನು ತಾನೇ ಮಾಡದೆ ಇರುತ್ತಾರೆ? ॥೧೬॥

ಲೋಭದಿಂದ ಆವರಿಸಲ್ಪಟ್ಟ ಮನುಷ್ಯನು ಅಣ್ಣತಮ್ಮಂದಿರನ್ನೂ, ತಂದೆಯನ್ನೂ, ಸ್ನೇಹಿತನನ್ನೂ, ನಂಟರಿಷ್ಟರನ್ನೂ, ಒಳ್ಳೆಯ ಮನಸ್ಸುಳ್ಳ ಸತ್ಪುರುಷನನ್ನೂ, ಗುರುವನ್ನೂ, ಪೂಜೆಗೆ ಯೋಗ್ಯನಾದವನನ್ನೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನೂ, ಸಹ ಯಾವಾಗಲೂ ದ್ವೇಷಮಾಡುತ್ತಿರುವನು. ॥೧೭॥

ತಸ್ಮಾನ್ಮಯಾ ನ ಕರ್ತವ್ಯೋ ವಿಶ್ವಾಸಃ ಸರ್ವಥಾಽಧುನಾ ।
ಮಂತ್ರಿವರ್ಗೇಽತಿಪಾಪಿಷ್ಠೇ ಶತ್ರುಪಕ್ಷಸಮಾಶ್ರಿತೇ ॥೧೮॥

ಇತಿ ಸಂಚಿಂತ್ಯ ಮನಸಾ ರಾಜಾ ಪರಮದುರ್ಮನಾಃ ।
ಏಕಾಕೀ ಹಯಮಾರುಹ್ಯ ನಿರ್ಜಗಾಮ ಪುರಾತ್ತತಃ ॥೧೯॥

ಅಸಹಾಯೋಽಥ ನಿರ್ಗತ್ಯ ಗಹನಂ ವನಮಾಶ್ರಿತಃ ।
ಚಿಂತಯಾಮಾಸ ಮೇಧಾವೀ ಕ್ವ ಗಂತವ್ಯಂ ಮಯಾ ಪುನಃ ॥೨೦॥

ಯೋಜನತ್ರಯಮಾತ್ರೇ ತು ಮುನೇರಾಶ್ರಮಮುತ್ತಮಂ ।
ಜ್ಞಾತ್ವಾ ಜಗಾಮ ಭೂಪಾಲಸ್ತಾಪಸಸ್ಯ ಸುಮೇಧಸಃ ॥೨೧॥

ಬಹುವೃಕ್ಷಸಮಾಯುಕ್ತಂ ನದೀಪುಲಿನಸಂಶ್ರಿತಂ ।
ನಿರ್ವೈರಶ್ವಾಪದಾಕೀರ್ಣಂ ಕೋಕಿಲಾರಾವಮಂಡಿತಂ ॥೨೨॥

---

ಲೋಭದಿಂದ ಕೂಡಿರುವವನ ಸ್ವಭಾವವು ಹೀಗೆ ಇರುವ ಕಾರಣದಿಂದ ಶತ್ರುಪಕ್ಷವನ್ನು ಆಶ್ರಯಿಸಿರುವ ಬಹಳ ಪಾಪಿಷ್ಠವಾದ ಮಂತ್ರಿವರ್ಗದ ವಿಷಯದಲ್ಲಿ ಈಗ ನಾನು ಸರ್ವವಿಧದಿಂದಲೂ ನಂಬಿಕೆಯನ್ನು ಇಟ್ಟಿರಬಾರದು. ॥೧೮॥

ಹೀಗೆ ಬಹಳಮಟ್ಟಿಗೆ ಆತಂಕದ ಯೋಚನೆಯಿಂದ ಮನಸ್ಸಿನಲ್ಲಿ ಉತ್ಸಾಹ ವಿಲ್ಲದೆ ಹೆಚ್ಚಾದ ವ್ಯಸನವುಳ್ಳವನಾಗಿ ಮೇಲೆ ಹೇಳಿದ ರೀತಿಯಿಂದ ಯೋಚನೆ ಯನ್ನು ಮಾಡಿ ನಿಶ್ಚಯಿಸಿಕೊಂಡು, ಕಡೆಗೆ ಒಬ್ಬನೇ ಕುದುರೆಯನ್ನು ಹತ್ತಿಕೊಂಡು ಆ ಪಟ್ಟಣದಿಂದ ಹೊರಕ್ಕೆ ಹೊರಟನು. ॥೧೯॥

ಅನಂತರದಲ್ಲಿ ಮುಂದಾಲೋಚನೆಯಲ್ಲಿ ಬುದ್ಧಿವಂತನಾದ ರಾಜನು ಯಾವ ವಿಧವಾದ ಸಹಾಯವೂ ಇಲ್ಲದವನಾಗಿದ್ದುದರಿಂದ ದಟ್ಟವಾದ ಕಾಡನ್ನು ಹೊಂದಿದವ ನಾಗಿ ಮುಂದೆ ಎಲ್ಲಿಗೆ ಹೋಗತಕ್ಕದ್ದೆಂದು ಯೋಚನೆಯನ್ನು ಮಾಡಿದನು. ॥೨೦॥

ಆ ರಾಜನು ಅಲ್ಲಿಗೆ ಮೂರು ಯೋಜನ ದೂರದಲ್ಲಿ ಸುಮೇಧಸ್ಸೆಂಬ ಋಷಿಯ ಅತ್ಯುತ್ತಮವಾದ ಆಶ್ರಮವು ಇರುವುದೆಂದು ತಿಳಿದು ಅಲ್ಲಿಗೆ ಹೋದನು. ॥೨೧॥

ಆ ಸುಮೇಧಾ ಋಷಿಯ ಆಶ್ರಮವು ಅನೇಕವಾದ ಮರಗಳಿಂದಲೂ, ಹೊಳೆ ಯಲ್ಲಿ ಮರಳುಗುಡ್ಡೆಗಳಿಂದಲೂ, ತಮ್ಮ ತಮ್ಮಲ್ಲಿ ಪರಸ್ಪರವಾಗಿರುವ ವೈರವನ್ನು ಬಿಟ್ಟು ಪ್ರೀತಿಯಿಂದಿರುವ ದುಷ್ಟಪ್ರಾಣಿಗಳಿಂದಲೂ, ಕೋಗಿಲೆಯ ಧ್ವನಿಯಿಂದಲೂ

ಶಿಷ್ಯಾಧ್ಯಯನಶಬ್ದಾಢ್ಯಂ ಮೃಗಯೂಥಶತಾವೃತಂ ।
ನೀವಾರಾನ್ನಸುಪಕ್ವಾಢ್ಯಂ ಸುಪುಷ್ಪಫಲಪಾದಪಂ ॥೨೩॥

ಹೋಮಧೂಮಸುಗಂಧೇನ ಪ್ರೀತಿದಂ ಪ್ರಾಣಿನಾಂ ಸದಾ ।
ವೇದಧ್ವನಿಸಮಾಕ್ರಾಂತಂ ಸ್ವರ್ಗಾದಪಿ ಮನೋಹರಂ ॥೨೪॥

ದೃಷ್ಟ್ವಾ ತಮಾಶ್ರಮಂ ರಾಜಾ ಬಭೂವಾಸೌ ಮುದಾನ್ವಿತಃ ।
ಭಯಂ ತ್ಯಕ್ತ್ವಾ ಮತಿಂ ಚಕ್ರೇ ವಿಶ್ರಾಮಾಯ ದ್ವಿಜಾಶ್ರಮೇ ॥೨೫॥

ಆಸಜ್ಯ ಪಾದಪೇಽಶ್ವಂ ತು ಜಗಾಮ ವಿನಯಾನ್ವಿತಃ ।
ದೃಷ್ಟ್ವಾ ತಂ ಮುನಿಮಾಸೀನಂ ಸಾಲಚ್ಛಾಯಾಸು ಸಂಶ್ರಿತಂ ॥೨೬॥

ಮೃಗಾಜಿನಾಸನಂ ಶಾಂತಂ ತಪಸಾತಿಕೃಶಂ ಋಜುಂ ।
ಅಧ್ಯಾಪಯಂತಂ ಶಿಷ್ಯಾಂಶ್ಚ ವೇದಶಾಸ್ತ್ರಾರ್ಥದರ್ಶಿನಂ ॥೨೭॥

---

ವೇದಾಧ್ಯಯನ ಮಾಡುತ್ತಿರುವ ಶಿಷ್ಯರ ವೇದಧ್ವನಿಯಿಂದಲೂ, ಹುಲ್ಲೆಕರುಗಳ ಅನೇಕ ಹಿಂಡುಗಳಿಂದಲೂ, ಚನ್ನಾಗಿ ಬೆಳೆದಿರುವ ನವಣೆಯೇ ಮುಂತಾದ ಆಹಾರ ಧಾನ್ಯಗಳಿಂದಲೂ, ತುಂಬ ಹೂವು ಹಣ್ಣು ಇವುಗಳುಳ್ಳ ಮರಗಳಿಂದಲೂ ತುಂಬಿರುವುದಾಗಿ ಶೋಭಿಸುತ್ತಾ ಇತ್ತು. ॥೨೨-೨೩॥

ಅಲ್ಲದೆ ಹೋಮದ ಹೊಗೆಯ ಸುವಾಸನೆಯಿಂದ ಯಾವಾಗಲೂ ಪ್ರಾಣಿಗಳಿಗೆ ಪ್ರೀತಿಯನ್ನುಂಟುಮಾಡುವುದಾಗಿರುವ, ವೇದಧ್ವನಿಯಿಂದ ತುಂಬಿರುವ, ಸ್ವರ್ಗಕ್ಕಿಂತಲೂ ಮನೋಹರವಾದ, ಆ ಸುಮೇಧಾಋಷಿಯ ಆಶ್ರಮವನ್ನು ರಾಜನು ನೋಡಿ, ತಾನು ಶತ್ರುಗಳಿಂದುಂಟಾದ ಭಯವನ್ನು ಮರೆತುಬಿಟ್ಟು, ಆ ಬ್ರಾಹ್ಮಣರ ಆಶ್ರಮದಲ್ಲಿ ವಿಶ್ರಾಂತಿಯನ್ನು ಹೊಂದಬೇಕೆಂದು ಸಂತೋಷದಿಂದ ಮನಸ್ಸುಮಾಡಿದನು. ॥೨೪-೨೫॥

ಮತ್ತು ರಾಜನು ತನ್ನ ಕುದುರೆಯನ್ನು ಮರದಲ್ಲಿ ಕಟ್ಟಿಹಾಕಿ, ವಿನಯದಿಂದ ಕೂಡಿದವನಾಗಿ ಆ ಆಶ್ರಮಕ್ಕೆ ಹೋದನು. ಅಲ್ಲಿ ಹುಲ್ಲೆಯ ಚರ್ಮದ ಆಸನದಲ್ಲಿ ಕೂತುಕೊಂಡಿರುವ, ತಪಸ್ಸಿನಿಂದ ಕೃಶಾಂಗನಾಗಿರುವ, ಸರಳವಾದ ಬುದ್ಧಿಯಿಂದ ಉಪಶಾಂತನಾಗಿ, ಮತ್ತಿಯ ಮರದ ನೆರಳಿನಲ್ಲಿ ಶಿಷ್ಯರಿಗೆ ಪಾಠಗಳನ್ನು ಕಲಿಸುತ್ತಿರುವ, ವೇದ, ಶಾಸ್ತ್ರ ಇವುಗಳ ಅರ್ಥವನ್ನು ತಿಳಿದಿರುವ ಸುಮೇಧಾಋಷಿಯನ್ನು ನೋಡಿ, ಆ ಸುರಥರಾಜನು ಆ ಋಷಿಯ ಸಮೀಪಕ್ಕೆ ಹೋದನು. ॥೨೬-೨೭॥

ರಹಿತಂ ಕ್ರೋಧಲೋಭಾದ್ಯೈರ್ದ್ವಂದ್ವಾತೀತಂ ವಿಮತ್ಸರಂ ।
ಆತ್ಮಜ್ಞಾನರತಂ ಸತ್ಯವಾದಿನಂ ಶಮಸಂಯುತಂ ॥೨೮॥

ತಂ ವೀಕ್ಷ್ಯ ಭೂಪತಿರ್ಭೂಮೌ ಪಪಾತ ದಂಡವತ್ತದಾ ।
ತದಗ್ರೇಽಶ್ರುಜಲಾಪೂರ್ಣನಯನಃ ಪ್ರೇಮಸಂಯುತಃ ॥೨೯॥

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ತಮುವಾಚ ತದಾ ಮುನಿಃ ।
ಶಿಷ್ಯೋ ದದೌ ಬೃಸೀಂ ತಸ್ಮೈ ಗುರುಣಾನೋದಿತಸ್ತದಾ ॥೩೦॥

ಉತ್ಥಾಯ ನೃಪತಿಸ್ತಸ್ಯಾಂ ಸಮಾಸೀನಸ್ತದಾಜ್ಞಯಾ ।
ಅರ್ಘ್ಯಪಾದ್ಯಾರ್ಹಣಂ ಚಕ್ರೇ ಸುಮೇಧಾ ವಿಧಿಪೂರ್ವಕಂ ॥೩೧॥

ಪಪ್ರಚ್ಛಾತ್ರ ಕುತಃ ಪ್ರಾಪ್ತಃ ಕಸ್ತ್ವಂ ಚಿಂತಾಪರಃ ಕಥಂ ।
ಕಥಯಸ್ವ ಯಥಾಕಾಮಂ ಸಂವೃತಂ ಕಾರಣಂ ತ್ವಿಹ ॥೩೨॥

---

ರಾಗ, ದ್ವೇಷ, ಕ್ರೋಧ, ಲೋಭ ಮೊದಲಾದ ದ್ವಂದ್ವಗಳಿಂದ ಬಿಡಲ್ಪಟ್ಟವನಾಗಿ ಶೀತೋಷ್ಣ, ಸುಖದುಃಖ, ಕ್ಷುತ್ಪಿಪಾಸೆ ಎಂದು ಮುಂತಾದ ದ್ವಂದ್ವ ಧರ್ಮಗಳನ್ನು ಗೆದ್ದು, ಯಾವ ಪ್ರಾಣಿಯ ವಿಷಯದಲ್ಲಿಯೂ, ಅಸೂಯೆ ಇಲ್ಲದೆ, ಯಾವಾಗಲೂ ನಿಜವನ್ನು ಹೇಳುತ್ತಾ, ಉಪಶಾಂತಿಯಿಂದ ಕೂಡಿದವನಾಗಿ, ಆತ್ಮಜ್ಞಾನದಲ್ಲಿ ಬಹಳ ಆಸಕ್ತಿಯಿಂದಿರುವ ಆ ಸುಮೇಧಾಋಷಿಯನ್ನು ರಾಜನು ನೋಡಿ ಆಗ ಅವನ ಮುಂದುಗಡೆಯಲ್ಲಿ ತನ್ನ ಕಣ್ಣುಗಳಿಂದ ಆನಂದಬಾಷ್ಪದ ನೀರನ್ನು ಸುರಿಸುವವನಾಗಿ, ಪ್ರೀತಿಯಿಂದ ಕೂಡಿದವನಾಗಿ ಆ ಋಷಿಗೆ ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿದನು. ॥೨೮-೨೯॥

ಆಗ ಸುಮೇಧಾಋಷಿಯು ಎಲೈ ರಾಜನೇ, ಮೇಲಕ್ಕೆ ಏಳು, ಏಳು, ನಿನಗೆ ಒಳ್ಳೆಯದಾಗಲಿ! ಎಂದು ಹರಸಿ ಹೇಳಿದನು. ಆ ಮೇಲೆ ಗುರುವು ಪ್ರೇರಿಸಿದಂತೆ ಶಿಷ್ಯನು ಅವನಿಗಾಗಿ ಒಂದು ಆಸನವನ್ನು ತಂದು ಕೊಟ್ಟನು. ॥೩೦॥

ರಾಜನು ಆ ಋಷಿಯ ಅಪ್ಪಣೆಯ ಮೇರೆಗೆ ಮೇಲಕ್ಕೆ ಎದ್ದು ಆ ಆಸನದಲ್ಲಿ ಕೂತುಕೊಂಡನು. ಸಮೇಧಾಋಷಿಯು ಶಾಸ್ತ್ರದಲ್ಲಿ ಹೇಳಿರುವ ಕ್ರಮದಂತೆ ಆ ರಾಜನಿಗೆ ಅರ್ಘ್ಯ, ಪಾದ್ಯವೇ ಮೊದಲಾದ ಸತ್ಕಾರವನ್ನು ಮಾಡಿದನು. ॥೩೧॥

ಆ ಸುಮೇಧಾಋಷಿಯು ರಾಜನನ್ನು ಕುರಿತು, ನೀನು ಯಾರು? ಎಲ್ಲಿಂದ ಇಲ್ಲಿಗೆ ಬಂದೆ? ನಿನಗೆ ಯೋಚನೆಗೆ ಕಾರಣವು ಹೇಗೆ ಉಂಟಾಯಿತು? ಇವೆಲ್ಲವನ್ನೂ

ಕಿಮಾಗಮನಕೃತ್ಯಂ ತೇ ಬ್ರೂಹಿ ಕಾರ್ಯಂ ಮನೋಗತಂ ।
ಕರಿಷ್ಯೇ ವಾಂಛಿತಂ ಕಾಮಮಸಾಧ್ಯಮಪಿ ಯತ್ತ್ವವ ॥೩೩॥

॥ ರಾಜೋವಾಚ ॥

ಸುರಥೋ ನಾಮ ರಾಜಾಽಹಂ ಶತ್ರುಭಿಶ್ಚ ಪರಾಜಿತಃ ।
ತ್ಯಕ್ತ್ವಾ ರಾಜ್ಯಂ ಗೃಹಂ ಭಾರ್ಯಾಮಹಂ ತೇ ಶರಣಂ ಗತಃ ॥೩೪॥

ಯದಾಜ್ಞಾಪಯಸೇ ಬ್ರಹ್ಮಂಸ್ತದಹಂ ಭಕ್ತಿತತ್ಪರಃ ।
ಕರಿಷ್ಯಾಮಿ ನ ಮೇ ತ್ರಾತಾ ತ್ವದನ್ಯಃ ಪೃಥಿವೀತಲೇ ॥೩೫॥

ಶತ್ರುಭ್ಯೋ ಮೇ ಭಯಂ ಘೋರಂ ಪ್ರಾಪ್ತೋಽಸ್ಮ್ಯದ್ಯ ತವಾಂತಿಕಂ ।
ತ್ರಾಯಸ್ವ ಮುನಿಶಾರ್ದೂಲ ಶರಣಾಗತವತ್ಸಲ ॥೩೬॥

---

ರಹಸ್ಯವಾಗಿರುವ ಇದರ ಕಾರಣವನ್ನೂ ಸಹ ನನಗೆ ಮರೆಮಾಚದಂತೆ ನಿನ್ನ ಇಷ್ಟ ಪ್ರಕಾರವಾಗಿ ತಿಳಿಸು. ॥೩೨॥

ನೀನು ಇಲ್ಲಿಗೆ ಯಾವ ಕಾರ್ಯಕ್ಕಾಗಿ ಬಂದಿದೀಯೆ? ನಿನ್ನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ಹೇಳು? ನಿನ್ನ ಕೆಲಸವು ಅಸಾಧ್ಯವಾಗಿದ್ದಾಗ್ಯೂ ನನ್ನ ಕೈಲಾದಮಟ್ಟಿಗೆ ನನ್ನ ಮನಃಪೂರ್ವಕವಾಗಿ ನಿನ್ನ ಇಷ್ಟವು ನಡೆಯುವಂತೆ ಮಾಡುವೆನು! ॥೩೩॥

ರಾಜನು ಹೇಳಿದನು—ನಾನು ಸುರಥನೆಂದು ಹೆಸರುಳ್ಳ ರಾಜನು. ಶತ್ರುಗಳಿಂದ ಪರಾಜಿತನಾಗಿರುತ್ತೇನೆ. ರಾಜ್ಯವನ್ನು, ಮನೆಯನ್ನು, ಹೆಂಡತಿಯನ್ನೂ ಸಹ ಬಿಟ್ಟು ನಿನ್ನನ್ನು ಶರಣುಹೊಂದಿರುತ್ತೇನೆ. ॥೩೪॥

ಎಲೈ ಬ್ರಾಹ್ಮಣೋತ್ತಮನೇ, ನೀನು ಏನು ಅಪ್ಪಣೆಮಾಡುವೆಯೋ ಅದನ್ನು ಭಕ್ತಿಗೆ ಅಧೀನನಾಗಿ ಮಾಡುತ್ತೇನೆ. ಈ ಭೂಮಿಯಲ್ಲಿ ನಿನಗಿಂತಲೂ ಬೇರೆಯಾದವನು ನನ್ನನ್ನು ಕಾಪಾಡುವವನು ಯಾರೂ ಇಲ್ಲವು. ॥೩೫॥

ನನಗೆ ಶತ್ರುಗಳಿಂದ ಭಯಂಕರವಾದ ಹೆದರಿಕೆಯು ಉಂಟಾಗಿರುತ್ತದೆ. ಆದ್ದರಿಂದ, ಈಗ ನಾನು ನಿನ್ನ ಹತ್ತಿರಕ್ಕೆ ಬಂದಿರುತ್ತೇನೆ. ಓ ಋಷಿಶ್ರೇಷ್ಠನೇ, ಶರಣು ಬಂದವರನ್ನು ಅಕ್ಕರೆಯಿಂದ ನೋಡುವ ಓ ಸುಮೇಧಾಋಷಿಯೇ, ಹೀಗೆ ಬಂದಿರುವ ನನ್ನನ್ನು ರಕ್ಷಿಸು. ॥೩೬॥

|| ಋಷಿರುವಾಚ ||

**ನಿರ್ಭಯಂ ವಸ ರಾಜೇಂದ್ರ ನಾತ್ರ ತೇ ಶತ್ರವಃ ಕಿಲ ।**
**ಆಗಮಿಷ್ಯಂತಿ ಬಲಿನೋ ನಿಶ್ಚಯಂ ತಪಸೋ ಬಲಾತ್ ॥೩೭॥**

**ನಾತ್ರ ಹಿಂಸಾ ಪ್ರಕರ್ತವ್ಯಾ ವನವೃತ್ತ್ಯಾ ನೃಪೋತ್ತಮ ।**
**ಕರ್ತವ್ಯಂ ಜೀವನಂ ಶಸ್ತ್ರೈರ್ನೀವಾರಫಲಮೂಲಕೈಃ ॥೩೮॥**

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ನಿರ್ಭಯಃ ಸ ನೃಪಸ್ತದಾ ।**
**ಉವಾಸಾಶ್ರಮ ಏವಾಸೌ ಫಲಮೂಲಾಶನಃ ಶುಚಿಃ ॥೩೯॥**

**ಕದಾಚಿತ್ಸ ನೃಪಸ್ತತ್ರ ವೃಕ್ಷಚ್ಛಾಯಾಂ ಸಮಾಶ್ರಿತಃ ।**
**ಚಿಂತಯಾಮಾಸ ಚಿಂತಾರ್ತೋ ಗೃಹ ಏವ ಗತಾಶಯಃ ॥೪೦॥**

---

ಸುಮೇಧಾಋಷಿಯು ಹೇಳಿದನು—ಎಲೈ ರಾಜಶ್ರೇಷ್ಠನೇ, ನೀನು ಯಾವ ಭಯವೂ ಇಲ್ಲದವನಾಗಿ ಇಲ್ಲಿ ವಾಸವನ್ನು ಮಾಡು. ಈ ಆಶ್ರಮಕ್ಕೆ ನಿನ್ನ ಶತ್ರುಗಳು ಬಲಿಷ್ಠರಾದಾಗ್ಯೂ ನನ್ನ ತಪಸ್ಸಿನ ಬಲದಿಂದ ನಿಜವಾಗಿಯೂ ಪ್ರವೇಶಿಸಲಾರರು! ॥೩೭॥

ಎಲೈ ರಾಜಶ್ರೇಷ್ಠನೇ, ಆದರೆ ಈ ಆಶ್ರಮದಲ್ಲಿ ಯಾವ ಹಿಂಸೆಯನ್ನೂ ಮಾಡಕೂಡದು. ಕಾಡಿನಲ್ಲಿ ವಾಸಮಾಡುವುದರ ನಿಮಿತ್ತದಿಂದ ಶ್ಲಾಘ್ಯವಾದ ಮತ್ತು ಪರಿಶುದ್ಧವಾದ ನವಣೆ, ಹಣ್ಣುಗಳು, ಗೆಡ್ಡೆಗಳು ಇವುಗಳಿಂದ ಜೀವನವನ್ನು ಮಾಡಿಕೊಂಡಿರಬೇಕು. ॥೩೮॥

ವ್ಯಾಸಋಷಿಯು ಹೇಳಿದನು—ಹೀಗೆ ಹೇಳಿದ ಋಷಿಯ ಮಾತನ್ನು ಕೇಳಿ ಆಗ ಆ ರಾಜನು ಯಾವ ಭಯವೂ ಇಲ್ಲದವನಾಗಿ ಆ ಸುಮೇಧಾಋಷಿಯ ಆಶ್ರಮದಲ್ಲಿಯೇ ಹಣ್ಣುಗಳು, ಗೆಡ್ಡೆಗೆಣಸು ಇವುಗಳನ್ನು ತಿಂದುಕೊಂಡು ಪರಿಶುದ್ಧನಾಗಿ ವಾಸಮಾಡಿಕೊಂಡಿದ್ದನು. ॥೩೯॥

ಒಂದಾನೊಂದು ದಿನದಲ್ಲಿ ಆ ಧೊರೆಯು ಆ ಆಶ್ರಮದ ಮರದ ನೆರಳನ್ನು ಆಶ್ರಯಿಸಿದವನಾಗಿರುತ್ತಾ, ತನ್ನ ಅರಮನೆಯ ಯೋಗಕ್ಷೇಮದ ವಿಷಯದಲ್ಲಿ ಅಭಿಮಾನವನ್ನು ಬಿಡದೆ ಹೊಂದಿದವನಾಗಿ ವ್ಯಸನಪಡುತ್ತಾ ಹೀಗೆ ಯೋಚಿಸತೊಡಗಿದನು. ॥೪೦॥

ರಾಜ್ಯಂ ಮೇ ಶತ್ರುಭಿಃ ಪ್ರಾಪ್ತಂ ಮ್ಲೇಚ್ಛೈಃ ಪಾಪರತೈಃ ಸದಾ ।
ಸಂಪೀಡಿತಾಃ ಸ್ಯುರ್ಲೋಕಾಸ್ತೈರ್ದುರಾಚಾರೈರ್ಗತತ್ರಪೈಃ ॥೪೧॥

ಗಜಾಶ್ಚ ತುರಗಾಃ ಸರ್ವೇ ದುರ್ಬಲಾ ಭಕ್ಷ್ಯವರ್ಜಿತಾಃ ।
ಜಾತಾಃ ಸ್ಯುರ್ವಾತ್ರ ಸಂದೇಹಃ ಶತ್ರುಣಾ ಪರಿಪೀಡಿತಾಃ ॥೪೨॥

ಸೇವಕಾ ಮಮ ಸರ್ವೇ ತೇ ಶತ್ರೂಣಾಂ ವಶವರ್ತಿನಃ ।
ದುಃಖಿತಾ ಏವ ಜಾತಾಃ ಸ್ಯುಃ ಪಾಲಿತಾ ಯೇ ಮಯಾ ಪುರಾ ॥೪೩॥

ಧನಂ ಮೇ ಸುದುರಾಚಾರೈರಸದ್ವ್ಯಯಪರೈಃ ಪರೈಃ ।
ದ್ಯೂತಾಸವಭುಜಿಷ್ಯಾದಿಸ್ಥಾನೇ.ಸ್ಯಾತ್ತ್ಯಾಪಿತಂ ಕಿಲ ॥೪೪॥

ಕೋಶಕ್ಷಯಂ ಕರಿಷ್ಯಂತಿ ವ್ಯಸನೈಃ ಪಾಪಬುದ್ಧಯಃ ।
ನ ಪಾತ್ರದಾನನಿಪುಣಾ ಮ್ಲೇಚ್ಛಾಸ್ತೇ ಮಂತ್ರಿಣೋಽಪಿ ಮೇ ॥೪೫॥

---

ಯಾವಾಗಲೂ ಕೆಟ್ಟಕೆಲಸದಲ್ಲಿ ಆಸಕ್ತರಾಗಿರುವ ನನ್ನ ಶತ್ರುಗಳಾದ ಆ ಮ್ಲೇಚ್ಛರಿಂದ ನನ್ನ ರಾಜ್ಯವು ಹೊಂದಲ್ಪಟ್ಟಿರುತ್ತದೆ. ನಾಚಿಕೆಯಿಲ್ಲದವರಾದ, ದುರಾಚಾರಿಗಳಾದ ಆ ಮ್ಲೇಚ್ಛರಿಂದ ನನ್ನ ಪ್ರಜೆಗಳೆಲ್ಲರೂ ಪೀಡಿಸಲ್ಪಟ್ಟಿರುವರು. ॥೪೧॥

ಆನೆಗಳೂ, ಕುದುರೆಗಳೂ ಇವೆಲ್ಲವೂ ಶತ್ರುಗಳಿಂದ ಪೀಡಿಸಲ್ಪಟ್ಟವುಗಳಾಗಿ ತಿನ್ನುವುದಕ್ಕೆ ಸಾಕಾದಷ್ಟಿಲ್ಲದಿರುವವುಗಳಾಗಿ ಬಲವಿಲ್ಲದೆ ಇರುವುವು. ಈ ವಿಷಯದಲ್ಲಿ ಕೊಂಚವೂ ಸಂದೇಹವಿರುವುದಿಲ್ಲವು. ॥೪೨॥

ಯಾವ ಜನರನ್ನು ನಾನು ಚನ್ನಾಗಿ ಕಾಪಾಡಿಕೊಂಡು ರಾಜ್ಯಭಾರ ಮಾಡುವ ಕಾಲದಲ್ಲಿ ಸೇವಕರನ್ನಾಗಿರಿಸಿಕೊಂಡಿದ್ದೆನೋ ಅವರೆಲ್ಲರೂ ಈಗ ಶತ್ರುಗಳ ಅಧೀನಕ್ಕೆ ಸಿಕ್ಕಿದವರಾಗಿ ದುಃಖವುಳ್ಳವರಾಗಿ ಇರುವರು. ॥೪೩॥

ಬಹಳಮಟ್ಟಿನ ಕೆಟ್ಟನಡತೆಯುಳ್ಳವರಾದ, ನೀಚಮಾರ್ಗದಲ್ಲಿ ಖರ್ಚನ್ನು ಮಾಡುವವರಾದ ನನ್ನ ಆ ಶತ್ರುಗಳು ನಾನು ಕೂಡಿಸಿಟ್ಟಿದ್ದ ದುಡ್ಡನ್ನೆಲ್ಲವನ್ನೂ ತೆಗೆದುಕೊಂಡು ಜೂಜು, ಮದ್ಯಸೇವನೆ, ವೇಶ್ಯಾಸಹವಾಸ ಇವುಗಳಲ್ಲಿ ಆ ಹಣವನ್ನು ದುಷ್ಟವಾದ ರೀತಿಯಲ್ಲಿ ವೆಚ್ಚಮಾಡಿರಬಹುದು. ॥೪೪॥

ಕೆಟ್ಟಬುದ್ಧಿಯವರಾದ, ಆ ಮ್ಲೇಚ್ಛರೂ, ನನ್ನ ಮಂತ್ರಿಗಳೂ ಸಹ ಸರಿಯಾದ ಪಾತ್ರದಲ್ಲಿ ದಾನಮಾಡಲು ಬುದ್ಧಿವಂತರಾಗಿಲ್ಲದವರಾದ ಕಾರಣ ದ್ಯೂತಾಕ್ಷವ್ಯಗಯಾ

ಇತಿ ಚಿಂತಾಪರೋ ರಾಜಾ ವೃಕ್ಷಮೂಲಸ್ಥಿತೋ ಯದಾ ।
ತದಾಽಽಜಗಾಮ ವೈಶ್ಯಸ್ತು ಕಶ್ಚಿದಾರ್ತಿಪರಸ್ತಥಾ ॥೪೬॥

ನೃಪೇಣ ಪುರತೋ ದೃಷ್ಟಃ ಪಾರ್ಶ್ವೇ ತತ್ರೋಪವೇಶಿತಃ ।
ಪಪ್ರಚ್ಛ ತಂ ನೃಪಃ ಕೋಽಸಿ ಕುತ ಏವಾಽಽಗತೋ ವನಂ ॥೪೭॥

ಕೋಽಸಿ ಕಸ್ಮಾಚ್ಚ ದೀನೋಽಸಿ ಹರಿಣಃ ಶೋಕಪೀಡಿತಃ ।
ಬ್ರೂಹಿ ಸತ್ಯಂ ಮಹಾಭಾಗ ಮೈತ್ರೀ ಸಾಪ್ತಪದೀ ಮತಾ ॥೪೮॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ವಚನಂ ರಾಜ್ಞಸ್ತಮುವಾಚ ವಿಶೋತ್ತಮಃ ।
ಉಪವಿಶ್ಯ ಸ್ಥಿರೋ ಭೂತ್ವಾ ಮತ್ವಾ ಸಾಧುಸಮಾಗಮಂ ॥೪೯॥

---

ವೇಶ್ಯಾ, ಪಾನಾದಿ, ಸಪ್ತ ವ್ಯಸನಗಳಲ್ಲಿಯೂ ದುಡ್ಡನ್ನು ವೆಚ್ಚಮಾಡಿ ನನ್ನ ಭಂಡಾರವನ್ನು ನಾಶಮಾಡುವರು. ॥೪೫॥

ರಾಜನು ಆ ಮರದ ಬುಡದಲ್ಲಿ ಕೂತುಕೊಂಡು ಯಾವಾಗ ಹೀಗೆ ಯೋಚನೆ ಮಾಡುತ್ತಾ ಹಿಂದಿನ ಮಮತೆ ಅಭಿಮಾನಗಳನ್ನು ಬಿಡುವುದರಲ್ಲಿ ಅಶಕ್ತನಾಗಿದ್ದನೋ ಆಗ ಇವನ ಹಾಗೆಯೇ ಸಂಕಟವುಳ್ಳವನಾದ ಒಬ್ಬ ವೈಶ್ಯನು ಅಲ್ಲಿಗೆ ಬಂದನು. ॥೪೬॥

ದೊರೆಯು ಅವನನ್ನು ಎದುರಿಗೆ ಕಂಡು ತನ್ನ ಪಕ್ಕದಲ್ಲಿ ಕೂರಿಸಿಕೊಂಡನು. ಅನಂತರದಲ್ಲಿ ಅವನನ್ನು ಕುರಿತು, ನೀನು ಯಾರು? ಎಲ್ಲಿಂದ ಈ ಕಾಡಿಗೆ ಬಂದೆ? ಎಂಬುದಾಗಿ ರಾಜನು ಪ್ರಶ್ನೆ ಮಾಡಿದನು. ॥೪೭॥

ಸ್ನೇಹವೆಂಬುವುದು ಏಳು ಹೆಜ್ಜೆ ನಡೆಯುವಷ್ಟರ ಕಾಲದಲ್ಲಿ ಉಂಟಾಗುವುದು. ಆದುರಿಂದ ನೀನು ನಿಜವನ್ನು ನನ್ನೊಡನೆ ಹೇಳು. ಎಲೈ ಅದೃಷ್ಟಶಾಲಿಯೇ, ನೀನು ಯಾರು? ನಿನ್ನ ಜಾತಿ, ದೇಶಗಳು ಯಾವುವು? ಯಾವ ಕಾರಣದಿಂದ ದುಃಖವುಳ್ಳವನಾಗಿರುತ್ತೀಯೆ? ಮತ್ತು ದೈನ್ಯದ ದುಃಖದಿಂದ ನೀನು ಕೃಶನಾಗಿರುತ್ತೀಯೆ! ಇದರ ಕಾರಣವನ್ನು ಹೇಳು. ॥೪೮॥

ವ್ಯಾಸಋಷಿಯು ಹೇಳಿದನು—ವೈಶ್ಯಶ್ರೇಷ್ಠನು ರಾಜನ ಮಾತನ್ನು ಕೇಳಿ ಸ್ಥಿರನಾಗಿ ಕೂತುಕೊಂಡು ಸತ್ಪುರುಷನ ಸಹವಾಸ ಉಂಟಾಯಿತೆಂದು ತಿಳಿದು ಸಮಾಧಾನಗೊಂಡ ಮನಸ್ಸುಳ್ಳವನಾಗಿ ಮಾತನಾಡಿದನು. ॥೪೯॥

|| ವೈಶ್ಯ ಉವಾಚ ||

ಮಿತ್ರಾಹಂ ವೈಶ್ಯಜಾತೀಯಃ ಸಮಾಧಿರ್ನಾಮ ವಿಶ್ರುತಃ ।
ಧನವಾನ್ ಧರ್ಮನಿಪುಣಃ ಸತ್ಯವಾಗನಸೂಯಕಃ ||೫೦||

ಪುತ್ರದಾರೈರ್ನಿರಸ್ತೋಽಹಂ ಧನಲುಬ್ಧೈರಸಾಧುಭಿಃ ।
ಕೃಪಣೇತಿಮಿಷಂ ಕೃತ್ವಾ ತ್ಯಕ್ತ್ವಾ ಮಾಯಾಂ ಸುದುಸ್ತ್ಯಜಾಂ ।
ಸ್ವಜನೇನ ಚ ಸಂತ್ಯಕ್ತಃ ಪ್ರಾಪ್ತೋಽಸ್ಮಿ ವನಮಾಶು ವೈ ||೫೧||

ಕೋಽಸಿ ತ್ವಂ ಭಾಗ್ಯವಾನ್ಭಾಸಿ ಕಥಯಸ್ವ ಪ್ರಿಯಾಧುನಾ ।

|| ರಾಜೋವಾಚ ||

ಸುರಥೋ ನಾಮ ರಾಜಾಽಹಂ ದಸ್ಯುಭಿಃ ಪೀಡಿತೋಽಭವಂ ||೫೨||

ಪ್ರಾಪ್ತೋಽಸ್ಮಿ ಗತರಾಜ್ಯೋಽತ್ರ ಮಂತ್ರಿಭಿಃ ಪರಿವಂಚಿತಃ ।
ದಿಷ್ಟ್ಯಾ ತ್ವಮತ್ರ ಮಿತ್ರಂ ಮೇ ಮಿಲಿತೋಽಸಿ ವಿಶೋತ್ತಮ ||೫೩||

---

ವೈಶ್ಯನು ಹೇಳಿದನು—ಓ ಸ್ನೇಹಿತನೇ, ನಾನು ವೈಶ್ಯರ ಜಾತಿಯವನು. ಸಮಾಧಿ ಎಂಬ ಹೆಸರಿನಿಂದ ಪ್ರಸಿದ್ಧನು, ಹಣವಂತನು, ಧರ್ಮಮಾಡುವುದರಲ್ಲಿ ನಿಪುಣನು, ನಿಜವಾದ ಮಾತನಾಡುವವನು, ಅಸೂಯೆ ಇಲ್ಲದವನೂ ಆಗಿದ್ದನು.||೫೦||

ನನ್ನ ಹೆಂಡಿತಿಯೂ, ಮಕ್ಕಳೂ ಸಹ ದುಷ್ಟರಾಗಿ ದುಡ್ಡಿನ ಆಸೆಯಿಂದ ನಾನು ಲೋಭಿಯು ಎಂದು ನೆವವನ್ನು ಮಾಡಿ ಯಾರಿಗೂ ಬಿಡಲಶಕ್ಯವಾದ ಗಂಡ, ತಂದೆ, ಎಂಬ ಪ್ರೇಮದ ಮೋಹವನ್ನು ಕೂಡ ಬಿಟ್ಟು, ನನ್ನನ್ನು ಓಡಿಸಿಬಿಟ್ಟಿರುತ್ತಾರೆ. ನನ್ನ ಜನಗಳೂ ನನ್ನನ್ನು ಬಿಟ್ಟಿರುವಕಾರಣ ಬೇಗನೆ ಈ ಕಾಡನ್ನು ಹೊಂದಿರುತ್ತೇನೆ!||೫೧||

ಎಲೈ ಸ್ನೇಹಿತನೇ, ನೀನು ಯಾರು? ಅದೃಷ್ಟಶಾಲಿಯಾಗಿ ಕಾಣಿಸುತ್ತೀಯೆ. ಈಗ ಇದನ್ನು ಹೇಳು, ಎಂದು ಸಮಾಧಿ ಎಂಬ ವೈಶ್ಯನು ಕೇಳಲು--ರಾಜನು ಅವನಿಗೆ ಪ್ರತ್ಯುತ್ತರವನ್ನು ಹೇಳಿದನು. ನಾನು ಸುರಥನೆಂಬ ರಾಜನು, ಮಂತ್ರಿಗಳು ನನಗೆ ಮೋಸಮಾಡಿದರು! ಅದರಿಂದ ಕಳ್ಳರಾದ ಮ್ಲೇಚ್ಛರು ನನ್ನನ್ನು ಸೋಲಿಸಿದರು, ಇದರಿಂದ ನನ್ನ ರಾಜ್ಯವು ನನ್ನ ಕೈತಪ್ಪಿತು! ಆದುದರಿಂದ ನಾನೂ ಇಲ್ಲಿಗೆ ಬಂದಿರುತ್ತೇನೆ. ಎಲೈ ವೈಶ್ಯಶ್ರೇಷ್ಠನೇ, ನೀನು ದೈವಗತಿಯಿಂದ ಇಲ್ಲಿ ನನಗೆ ಸ್ನೇಹಿತನಾಗಿ ದೊರೆತಿರುತ್ತೀಯೆ! ||೫೩||

ಸುಖೇನ ವಿಹರಿಷ್ಯಾವೋ ವನೇಽತ್ರ ಶುಭಪಾದಪೇ ।
ಶೋಕಂ ತ್ಯಜ ಮಹಾಬುದ್ಧೇ ಸ್ವಸ್ಥೋ ಭವ ವಿಶೋತ್ತಮ ॥೫೪॥

ಅತ್ರೈವ ಚ ಯಥಾಕಾಮಂ ಸುಖಂ ತಿಷ್ಠ ಮಯಾ ಸಹ ।

॥ ವೈಶ್ಯ ಉವಾಚ ॥

ಕುಟುಂಬಂ ಮೇ ನಿರಾಲಂಬಂ ಮಯಾಹೀನಂ ಸುದುಃಖಿತಂ ॥೫೫॥

ಭವಿಷ್ಯತಿ ಚ ಚಿಂತಾಽರ್ತಂ ವ್ಯಾಧಿಶೋಕೋಪತಾಪಿತಂ ।
ಭಾರ್ಯಾದೇಹೇ ಸುಖಂ ನೋ ವಾ ಪುತ್ರದೇಹೇ ನ ವಾ ಸುಖಂ ।
ಇತಿ ಚಿಂತಾತುರಂ ಚೇತೋ ನ ಮೇ ಶಾಮ್ಯತಿ ಭೂಮಿಪ ॥೫೬॥

ಕದಾ ದ್ರಕ್ಷ್ಯೇ ಸುತಂ ಭಾರ್ಯಾಂ ಗೃಹಂ ಸ್ವಜನಮೇವ ಚ ।
ಸ್ವಸ್ಥಂ ನ ಮನ್ಮನೋ ರಾಜನ್ ಗೃಹಚಿಂತಾಕುಲಂ ಭೃಶಂ ॥೫೭॥

---

ನಾವಿಬ್ಬರೂ ಮಂಗಳ ಸುಖಕರವಾದ ಮರಗಳುಳ್ಳ ಈ ಕಾಡಿನಲ್ಲಿ ಸುಖವಾಗಿ ವಿಹಾರಮಾಡಿಕೊಂಡಿರೋಣ. ಎಲೈ ವೈಶ್ಯೋತ್ತಮನೇ, ಬಹಳ ಬುದ್ಧಿಶಾಲಿಯೇ, ನೀನು ವ್ಯಸನವನ್ನು ಬಿಡು, ಇಲ್ಲಿಯೇ ನನ್ನೊಡನೆ ನಿನ್ನ ಇಷ್ಟಬಂದಂತೆ ಸುಖವಾಗಿ ಇರು. ಎಂದು ರಾಜನು ಹೇಳಿದನು. ॥೫೪॥

ವೈಶ್ಯನು ಹೇಳಿದನು---ನನ್ನ ಪತ್ನಿಯು ನನ್ನಿಂದ ಬಿಡಲ್ಪಟ್ಟವಳಾಗಿ ಯಾರ ಆಶ್ರಯವೂ ಇಲ್ಲದವಳಾಗಿ, ರೋಗ ದುಃಖ ಇವುಗಳಿಂದ ಸಂಕಟಪಡಿಸಲ್ಪಟವಳಾಗಿ, ಬಹಳ ಯೋಚನೆಯಿಂದ ದುಃಖವುಳ್ಳವಳಾಗಿರುವಳು. ॥೫೫॥

ಓ ರಾಜನೇ, ನನ್ನ ಹೆಂಡತಿಗೆ ದೇಹದಲ್ಲಿ ಸುಖವಿಲ್ಲವೊ ? ಮಗನಿಗೂ ಶರೀರ ದಲ್ಲಿ ಸುಖವಿಲ್ಲವೋ ಏನೋ, ಎಂದು ನನ್ನ ಮನಸ್ಸು ಯೋಚನೆಯಿಂದ ಸಂಕಟ ಪಡುವುದಾಗಿ ಸಮಾಧಾನವನ್ನು ಹೊಂದುವುದಾಗಿಲ್ಲವು! ॥೫೬॥

ಓ ರಾಜನೇ, ನಾನು ಮಗನನ್ನೂ, ಹೆಂಡತಿಯನ್ನೂ, ನನ್ನ ಮನೆಯನ್ನೂ ನನ್ನ ಜನವನ್ನೂ ಸಹ ಯಾವಾಗ ನೋಡುವೆನೋ ? ಎಂಬುದಾಗಿ ಯೋಚನೆಯಿಂದ ಕೊಂಚವೂ ನನಗೆ ಸುಖವಾಗಿರುವುದಿಲ್ಲವು ! ॥೫೭॥

|| ರಾಜೋವಾಚ ||

**ಯೈರ್ನಿರಸ್ತೋsಸಿ ಪುತ್ರಾದ್ಯೈರಸದ್ವೃತ್ತೈಃ ಸುಬಾಲಿಶೈಃ ।**
**ತಾನ್ ದೃಷ್ಟ್ವಾ ಕಿಂ ಸುಖಂ ತೇsದ್ಯ ಭವಿಷ್ಯತಿ ಮಹಾಮತೇ ॥೫೮॥**

**ಹಿತಕಾರೀ ವರಃ ಶತ್ರುಃ ದುಃಖದಾಃ ಸುಹೃದಃ ಕುತಃ ।**
**ತಸ್ಮಾತ್ಸ್ಥಿರಂ ಮನಃ ಕೃತ್ವಾ ವಿಹರಸ್ವ ಮಯಾ ಸಹ ॥೫೯॥**

|| ವೈಶ್ಯ ಉವಾಚ ||

**ಮನೋ ಮೇ ನ ಸ್ಥಿರಂ ರಾಜನ್ ಭವತ್ಯದ್ಯ ಸುದುಃಖಿತಂ ।**
**ಚಿಂತಯಾsತ್ರ ಕುಟುಂಬಸ್ಯ ದುಸ್ತ್ಯಜಸ್ಯ ದುರಾತ್ಮಭಿಃ ॥೬೦॥**

|| ರಾಜೋವಾಚ ||

**ಮಮಾಪಿ ರಾಜ್ಯಜಂ ದುಃಖಂ ದುನೋತಿ ಕಿಲ ಮಾನಸಂ ।**
**ಪೃಚ್ಛಾವೋsದ್ಯ ಮುನಿಂ ಶಾಂತಂ ಶೋಕನಾಶನಮೌಷಧಂ ॥೬೧॥**

---

ರಾಜನು ಹೇಳಿದನು—ದಡ್ಡರಾಗಿರುವ ದುರ್ಮಾರ್ಗದಲ್ಲಿರುವ ಮಕ್ಕಳೇ ಮೊದಲಾದವರಿಂದ ನೀನು ಹೊರಕ್ಕೆ ಹೊರಡಿಸಲ್ಪಟ್ಟಿರುತ್ತೀಯೆ. ಆದುದರಿಂದ ಎಲೈ ಬುದ್ಧಿವಂತನೇ, ನಿನಗೆ ಕೆಡುಕನ್ನು ಉಂಟುಮಾಡಿರುವ ಅವರನ್ನು ನೋಡುವುದರಿಂದ ನಿನಗೆ ಈಗ ಯಾವ ಬಗೆಯ ಸುಖವು ಉಂಟಾಗುವುದು? ||೫೮||

ಓ ವೈಶ್ಯನೇ, ಹಿತವನ್ನು ಮಾಡುವವನು ಶತ್ರುವಾದರೂ ಉತ್ತಮವು. ದುಃಖವನ್ನುಂಟುಮಾಡುವವರಾದರೆ ಅವರು ಹೇಗೆ ಸ್ನೇಹಿತರಾದಾರು? ಆದುದರಿಂದ ಮನಸ್ಸನ್ನು ಸ್ಥಿರಮಾಡಿಕೊಂಡು ನನ್ನೊಡನೆ ವಿಹರಿಸುತ್ತಿರು. ||೫೯||

ವೈಶ್ಯನು ಹೇಳಿದನು — ಓ ದೊರೆಯೇ, ದುಷ್ಟವಾದ ರಾಗಾದಿಗಳಿಂದಕೂಡಿದ ಮನಸ್ಸುಳ್ಳವರಿಂದ ಬಿಡಲಸಾಧ್ಯವಾಗಿರುವ ಹೆಂಡತಿಯೇ ಮೊದಲಾದವರ ಯೋಚನೆಯಿಂದ ನನ್ನ ಮನಸ್ಸು ಸ್ಥಿರವಾಗಿಲ್ಲವು. ದುಃಖವುಳ್ಳದ್ದಾಗಿರುವುದು! ||೬೦||

ಓ ವೈಶ್ಯನೇ, ನನ್ನ ಮನಸ್ಸನ್ನು ಕೂಡ ರಾಜ್ಯನಾಶದಿಂದ ಉಂಟಾದ ದುಃಖವು ಸಂಕಟಪಡಿಸುತ್ತಿದೆ. ಆದುದರಿಂದ ನಾವಿಬ್ಬರೂ ಕೂಡ ಉಪಶಾಂತಿಯಿಂದಿರುವ ಈ ಋಷಿಯನ್ನು ಕಂಡು ದುಃಖವನ್ನು ನಾಶಮಾಡುವ ಔಷಧಿಯು ಉಪಾಯವು ಯಾವುದೆಂಬುದನ್ನು ಕೇಳೋಣ. ಎಂದು ರಾಜನು ವೈಶ್ಯನಿಗೆ ಹೇಳಿದನು. ||೬೧||

|| ವ್ಯಾಸ ಉವಾಚ ||

**ಇತಿ ಕೃತ್ವಾ ಮತಿಂ ತೌ ತು ರಾಜಾ ವೈಶ್ಯಶ್ಚ ಜಗ್ಮತುಃ ।**
**ಮುನಿಂ ತೌ ವಿನಯೋಪೇತೌ ಪ್ರಷ್ಟುಂ ಶೋಕಸ್ಯ ಕಾರಣಂ ॥೬೨॥**

**ಗತ್ವಾ ತಂ ಪ್ರಣಿಪತ್ಯಾಹ ರಾಜಾ ಋಷಿಮನುತ್ತಮಂ ।**
**ಆಸೀನಂ ಸಮ್ಯಗಾಸೀನಃ ಶಾಂತಂ ಶಾಂತಿಮುಪಾಗತಃ ॥೬೩॥**

---

ವ್ಯಾಸಋಷಿಯು ಹೇಳಿದನು—ರಾಜನೂ ವೈಶ್ಯನೂ ಸಹ ಹೀಗೆ ಬುದ್ಧಿಯನ್ನು ಸ್ಥಿರವಾಗಿ ಮಾಡಿಕೊಂಡು ವಿನಯದಿಂದ ಕೂಡಿದವರಾಗಿ ದುಃಖಕ್ಕೆ ಕಾರಣವೇನೆಂಬುದನ್ನು ಅವರಿಬ್ಬರೂ ಋಷಿಯನ್ನು ಕೇಳಲು ಸುಮೇಧಾಋಷಿಯ ಸಮೀಪಕ್ಕೆ ಬಂದರು. ॥೬೨॥

ಉಪಶಾಂತಿಯನ್ನು ಹೊಂದಿರುವವನಾಗಿಯೂ, ಸುಖವಾಗಿ ಕೂತುಕೊಂಡಿರುವವನಾಗಿಯೂ, ಮತ್ತು ಶ್ರೇಷ್ಠನಾಗಿಯೂ ಇರುವ ಸುಮೇಧಾಋಷಿಯ ಹತ್ತಿರಕ್ಕೆ ಹೋಗಿ ನಮಸ್ಕಾರವನ್ನು ಮಾಡಿ, ಉಪಶಾಂತಿಯನ್ನು ಹೊಂದಿರುವವನಾಗಿ ಸುಖವಾಗಿ ಕೂತುಕೊಂಡಿರುವವನಾದ ರಾಜನು ಋಷಿಯನ್ನು ಪ್ರಶ್ನೆಮಾಡಿದನು. ॥೬೩॥

ಇಲ್ಲಿಗೆ ದೇವೀಭಾಗವತ ಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### ॥ ತ್ರಯಸ್ತ್ರಿಂಶೋಽಧ್ಯಾಯಃ ॥

### ಮೂವತ್ತಮೂರನೆಯ ಅಧ್ಯಾಯವು

॥ ರಾಜೋವಾಚ ॥

**ಮುನೇ ವೈಶ್ಯೋಽಯಮಧುನಾ ವನೇ ಮೇ ಮಿತ್ರತಾಂ ಗತಃ ।**
**ಪುತ್ರದಾರೈರ್ನಿರಸ್ತೋಽಯಂ ಪ್ರಾಪ್ತೋಽತ್ರ ಮಮ ಸಂಗಮಂ ॥೧॥**

**ಕುಟುಂಬವಿರಹೇಣಾಸೌ ದುಃಖಿತೋಽತೀವ ದುರ್ಮನಾಃ ।**
**ನ ಶಾಂತಿಮುಪಯಾತ್ಯೇಷ ತಥಾಪಿ ಮಮ ಸಾಂಪ್ರತಂ ॥೨॥**

**ಗತರಾಜ್ಯಸ್ಯ ದುಃಖೇನ ಶೋಕಾರ್ತೋಽಸ್ಮಿ ಮಹಾಮತೇ ।**
**ನಿಷ್ಕಾರಣಂ ಚ ಮೇ ಚಿಂತಾ ಹೃದಯಾನ್ನ ನಿವರ್ತತೇ ॥೩॥**

---

ರಾಜನು ಹೇಳಿದನು—ಓ ಋಷಿಯೇ, ಈ ವೈಶ್ಯನು ಈಗ ಈ ಕಾಡಿನಲ್ಲಿ ನನಗೆ ಸ್ನೇಹಿತನಾಗಿರುವನು. ಇವನು ತನ್ನ ಹೆಂಡಿತಿಮಕ್ಕಳು ಇವರಿಂದ ಹೊರಡಿಸಲ್ಪಟ್ಟವನಾಗಿ ಇಲ್ಲಿ ನನ್ನ ಸಹವಾಸವನ್ನು ಹೊಂದಿರುತ್ತಾನೆ. ॥೧॥

ಇವನು ತನ್ನ ಹೆಂಡಿತಿಯ ವಿರಹದಿಂದ ಬಹಳವಾಗಿ ದುಃಖದಿಂದ ಕೂಡಿದ ಮನಸ್ಸುಳ್ಳವನಾಗಿರುವನು. ಇವನ ಮನಸ್ಸಿಗೆ ಸಮಾಧಾನವಿಲ್ಲ. ಇವನ ಹಾಗೆಯೇ ನಾನೂ ಕೂಡ ರಾಜ್ಯವನ್ನು ಕಳಿದುಕೊಂಡು ದುಃಖಕ್ಕೆ ಈಡಾಗಿ ಸಂಕಟಪಡುತ್ತಿದ್ದೇನೆ. ಹೆಚ್ಚಾದ ತಿಳಿವಳಿಕೆಯುಳ್ಳ ಓ ಋಷಿಯೇ, ತಕ್ಕ ಕಾರಣವಿಲ್ಲದೆ ಉಂಟಾಗಿರುವ ನನ್ನ ಮನಸ್ಸಿನ ಚಿಂತೆಯು ಹೋಗುವುದಿಲ್ಲ. ॥೨-೩॥

ಹಯಾ ಮೇ ದುರ್ಬಲಾಃ ಸ್ಯುಃ ಕಿಂ ಗಜಾಃ ಶತ್ರುವಶಂ ಗತಾಃ ।
ಭೃತ್ಯವರ್ಗಸ್ತಥಾ ದುಃಖೀ ಜಾತಃ ಸ್ಯಾತ್ತು ಮಯಾ ವಿನಾ ।
ಕೋಶಕ್ಷಯಂ ಕರಿಷ್ಯಂತಿ ರಿಪವೋಽತಿಬಲಾತ್‌ಕ್ಷಣಾತ್ ॥೪॥

ಇತ್ಯೇವಂ ಚಿಂತಯಾನಸ್ಯ ನ ಮೇ ನಿದ್ರಾ ತನೌ ಸುಖಂ ।
ಜಾನಾಮೀದಂ ಜಗನ್ಮಿಥ್ಯಾ ಸ್ವಪ್ನವತ್ಸರ್ವಮೇವ ಹಿ ॥೫॥

ಜಾನತೋಽಪಿ ಮನೋಭ್ರಾಂತಂ ನ ಸ್ಥಿರಂ ಭವತಿ ಪ್ರಭೋ ।
ಕೋಽಹಂ ಕೇಽಶ್ವಾ ಗಜಾಃ ಕೇಽಮೀ ನ ತೇ ಮೇಽಸ್ತಿ ಸಹೋದರಾಃ ॥೬॥

ನ ಪುತ್ರಾ ನ ಚ ಮಿತ್ರಾಣಿ ಯೇಷಾಂ ದುಃಖಂ ದುನೋತಿ ಮಾಂ ।
ಭ್ರಮೋಽಯಮಿತಿ ಜಾನಾಮಿ ತಥಾಪಿ ಮಮ ಮಾನಸಃ ॥೭॥
ಮೋಹೋ ನೈವಾಪಸರತಿ ಕಿಂ ತತ್ಕಾರಣಮದ್ಭುತಂ ।

---

ನನ್ನ ಕುದುರೆಗಳೂ ಆನೆಗಳೂ ಶತ್ರುಗಳವಶವನ್ನು ಹೊಂದಿ ಇವೆಯೋ? ಇವುಗಳು ಹೋಗಲು ಕಾರಣವೇನು ? ನನ್ನೊಡನೆ ಇಲ್ಲದಿರುವುದರಿಂದ ನನ್ನ ಭೃತ್ಯರು ದುಃಖವುಳ್ಳವರಾಗಿರುವರು. ನನ್ನ ಶತ್ರುಗಳು ಬಲಾತ್ಕಾರದಿಂದ ನನ್ನ ಭಂಡಾರವನ್ನೆಲ್ಲವನ್ನೂ ವಶಮಾಡಿಕೊಂಡು ಒಂದು ಕ್ಷಣಕಾಲದ ಒಳಗೆ ತಮ್ಮಿಷ್ಟಬಂದಂತೆ ಅದೆಲ್ಲವನ್ನೂ ನಾಶಮಾಡುತ್ತಿರುವರೋ ? ॥೩॥

ಹೀಗೆಂದು ಯೋಚನೆಯನ್ನು ಮಾಡುತ್ತಿರುವ ನನಗೆ ನಿದ್ರೆಯು ಬರುವುದಿಲ್ಲವು. ದೇಹದಲ್ಲಿ ಸುಖವೂ ಇಲ್ಲವು. ಆದರೆ ಈ ಪ್ರಪಂಚವೆಲ್ಲವನ್ನೂ ಸ್ವಪ್ನದಲ್ಲಿ ಕಂಡ ವಸ್ತುವಿನಂತೆ ಸ್ಥಿರವಲ್ಲವೆಂದು ನಾನು ತಿಳಿದು ಇರುತ್ತೇನೆ. ॥೪॥

ಓ ಪ್ರಭುವೇ, ಈ ಪ್ರಪಂಚವೆಲ್ಲವೂ ವಾಸ್ತವವಲ್ಲದ್ದೆಂದು ನಾನು ತಿಳಿದಿದ್ದರೂ ನನ್ನ ಮನಸ್ಸು ಸ್ಥಿರವಾಗಿಲ್ಲವು. ನಾನು ಯಾರು ? ಕುದುರೆಗಳು ಯಾವುವು ? ಈ ಆನೆಗಳು ಯಾವುವು ? ಇವುಗಳೆಲ್ಲವೂ ನನ್ನೊಡನೆ ಹುಟ್ಟಿದವುಗಳಲ್ಲವು. ॥೫॥

ಈ ಆನೆ ಮುಂತಾದವುಗಳಿಗೂ ನನಗೂ ಪಿತಾಪುತ್ರಭಾವವು ಏನೂ ಇರುವುದಿಲ್ಲವು. ಇವು ನನಗೆ ಸ್ನೇಹಿತರಲ್ಲವು. ಹೀಗೆ ನಾನು ತಿಳಿದಿದ್ದಾಗ್ಯೂ ಇವುಗಳ ದೆಸೆಯಿಂದ ಉಂಟಾದ ದುಃಖವು ನನ್ನನ್ನು ಸಂಕಟಪಡಿಸುತ್ತಿರುವುದು. ಇವುಗಳಿಗೂ ನನಗೂ ಇರುವ ಸಂಬಂಧವು ಮಮಕಾರವೆಂದೂ, ಅದು ಕೇವಲ ಭ್ರಮೆಯೆಂತಲೂ

ಸ್ವಾಮಿಂಸ್ತ್ವಮಸಿ ಸರ್ವಜ್ಞಃ ಸರ್ವಸಂಶಯನಾಶಕೃತ್ ॥೭॥

॥ ವ್ಯಾಸ ಉವಾಚ ॥

ಕಾರಣಂ ಬ್ರೂಹಿ ಮೋಹಸ್ಯ ಮಮಾಸ್ಯ ಚ ದಯಾನಿಧೇ ।
ಇತಿ ಪೃಷ್ಟಸ್ತದಾ ರಾಜ್ಞಾ ಸುಮೇಧಾ ಮುನಿಸತ್ತಮಃ ॥೮॥

ತಮುವಾಚ ಪರಂ ಜ್ಞಾನಂ ಶೋಕಮೋಹವಿನಾಶನಂ ।

॥ ಋಷಿ ಉವಾಚ ॥

ಶೃಣು ರಾಜನ್ಪ್ರವಕ್ಷ್ಯಾಮಿ ಕಾರಣಂ ಬಂಧಮೋಕ್ಷಯೋಃ ॥೯॥
ಮಹಾಮಾಯೇತಿ ವಿಖ್ಯಾತಾ ಸರ್ವೇಷಾಂ ಪ್ರಾಣಿನಾಮಿಹ ।

---

ತಿಳಿದಿರುವೆನು. ಆದಾಗ್ಯೂ ನನ್ನ ಮನಸ್ಸು ಈ ಅಭಿಮಾನದ ಮೋಹಕ್ಕೇ ಒಳಗಾಗಿರುವುದು. ಮೋಹವು ಮಾತ್ರ ಹೋಗುವುದಿಲ್ಲವು. ಹೀಗಾಗುವುದಕ್ಕೆ ಕಾರಣವೇನು? ಇದು ಬಹು ಆಶ್ಚರ್ಯವನ್ನುಂಟುಮಾಡುತ್ತಿರುವುದು. ॥೬॥

ಓ ಸ್ವಾಮಿಯೇ, ನೀನು ದಯಾನಿಧಿಯು, ಸರ್ವವನ್ನೂ ತಿಳಿದಿರುವವನು. ಅಲ್ಲದೆ ಎಲ್ಲ ಸಂಶಯಗಳನ್ನೂ ನಾಶಮಾಡಲು ಸಮರ್ಥನು. ಆದುದರಿಂದ ನನಗೆ ಮತ್ತು ಈ ವೈಶ್ಯೋತ್ತಮನಿಗೆ ಸಹ ಈಗ ಉಂಟಾಗಿರುವ ಈ ಮೋಹದ ಕಾರಣವನ್ನು ತಿಳಿಯಹೇಳು. ॥೭॥

ವ್ಯಾಸಮುನಿಯು ಹೇಳಿದನು—ಮುನಿಶ್ರೇಷ್ಠನಾದ ಆ ಸುಮೇಧಾಋಷಿಯು ರಾಜನಿಂದ ಹೀಗೆ ಪ್ರಶ್ನೆಮಾಡಲ್ಪಟ್ಟವನಾಗಿ ದುಃಖವೂ ಅದಕ್ಕೆ ಕಾರಣವಾದ ಅಜ್ಞಾನವೂ ಇವೆರಡನ್ನೂ ನಾಶಮಾಡುವ ಉತ್ಕೃಷ್ಟವಾದ ಜ್ಞಾನಸಾಧನವನ್ನು ಅವನಿಗೆ ಹೀಗೆ ತಿಳಿಯಹೇಳಿದನು. ॥೮॥

ಋಷಿಯು ಹೇಳಿದನು– ಎಲ್ಲ ಪ್ರಾಣಿಗಳ ಬಂಧಕ್ಕೂ ಮೋಕ್ಷಕ್ಕೂ ಕಾರಣವು ಇಂಥಾದ್ದೆಂದು ತಿಳಿಸಿದರೆ ಆ ಬಂಧಕ್ಕೂ ಕಾರಣವಾದ ಮೋಹಕ್ಕೂ ಕಾರಣವನ್ನು ಹೇಳಿದಂತಾಗುತ್ತದೆ ಎಂದು ಋಷಿಯು ಭಾವಿಸಿಕೊಂಡು ಉತ್ತರವನ್ನು ಕೊಡುವನು—ಎಲೈ ರಾಜನೇ, ಬಂಧಮೋಕ್ಷಗಳಿಗೆ ಕಾರಣವನ್ನು ಹೇಳುವೆನು ಕೇಳು. ಈ ಪ್ರಪಂಚದಲ್ಲಿ ಎಲ್ಲ ಪ್ರಾಣಿಗಳಿಗೂ ಬಂಧವನ್ನೂ ಎಂದರೆ ಈ ಪ್ರಾಪಂಚಿಕವಾದ ಸುಖ, ದುಃಖ, ರಾಗ, ದ್ವೇಷಗಳ ಅನುಭವದಲ್ಲಿನ ನಿರ್ಬಂಧವನ್ನೂ, ಈ ಸಾಂಸಾರಿಕವಾದ ನಿರ್ಬಂಧ ದುಃಖದಿಂದ ಬಿಡುಗಡೆ ಎಂಬ ಮೋಕ್ಷ

**ಬ್ರಹ್ಮಾ ವಿಷ್ಣುಸ್ತಥೇಶಾನಸ್ತು ರಾಷಾಡ್ವರುಣೋಽ ನಿಲಃ ॥೧೦॥**

**ಸರ್ವೇ ದೇವಾ ಮನುಷ್ಯಾಶ್ಚ ಗಂಧರ್ವೋಽರಗರಾಕ್ಷಸಾಃ ।**
**ವೃಕ್ಷಾಶ್ಚ ವಿವಿಧಾ ವಲ್ಲ್ಯಃ ಪಶವೋ ಮೃಗಪಕ್ಷಿಣಃ ॥೧೧॥**

**ಮಾಯಾಧೀನಾಶ್ಚ ತೇ ಸರ್ವೇ ಭಾಜನಂ ಬಂಧಮೋಕ್ಷಯೋಃ ।**
**ತಯಾ ಸೃಷ್ಟಮಿದಂ ಸರ್ವಂ ಜಗತ್ಸ್ಥಾವರಜಂಗಮಮ್ ॥೧೨॥**
**ತದ್ವಶೇ ವರ್ತತೇ ನೂನಂ ಮೋಹಜಾಲೇನ ಯಂತ್ರಿತಂ ।**

---

ವನ್ನೂ ಉಂಟುಮಾಡುವುದಾಗಿರುವ ಎಲ್ಲರಲ್ಲೂ ವ್ಯಾಪಿಸಿರುವ ಮತ್ತು ಎಲ್ಲಕ್ಕೂ ಕಾರಣವಾಗಿಯೂ ಇರುವ ಅಜ್ಞಾನವೆಂಬ ಮಹಾಮಾಯಾ ಎಂಬುದಾಗಿ ಪ್ರಸಿದ್ಧ ವಾಗಿರುವ ಒಂದು ತತ್ವಸ್ವರೂಪಳಾದ ದೇವಿಯು ಇರುವಳು. ಇವಳು ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳ ಸಾಮ್ಯಾವಸ್ಥಾರೂಪವಾದ ಮೂಲ ಪ್ರಕೃತಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ, ಎಲ್ಲ ಪ್ರಾಣಿಗಳಿಗೂ ಅವುಗಳ ಬಂಧ ಮೋಕ್ಷಗಳಿಗೂ ಕಾರಣವಾಗಿ ಇರುವಳು. ಬ್ರಹ್ಮ-ವಿಷ್ಣು ಮೊದಲಾದ ದೊಡ್ಡ ಜನರೂ ಕೂಡ ಈ ಪ್ರಕೃತಿಗೆ ಅಧೀನರಾಗಿರುವರು. ಮೇಲಿನ ಪುಟ ೨೩೩-೫ ಗಳನ್ನು ನೋಡಿ. ॥೯॥

ಬ್ರಹ್ಮ, ವಿಷ್ಣು, ಈಶ್ವರ, ಇಂದ್ರ, ವರುಣ, ವಾಯು ಮತ್ತು ಇತರ ಎಲ್ಲ ದೇವತೆಗಳೂ, ಮನುಷ್ಯರೂ, ಗಂಧರ್ವರೂ, ನಾಗಗಳೂ, ರಾಕ್ಷಸರೂ, ವೃಕ್ಷ ಗಳೂ ಅನೇಕ ವಿಧವಾದ ಬಳ್ಳಿಗಳೂ, ಪಶುಗಳೂ, ಮೃಗಗಳೂ, ಹಕ್ಕಿಗಳೂ ಇವೆ ಲ್ಲವೂ ಸಹ ಈ ಮಾಯೆಗೆ ಅಧೀನವಾಗಿರುವುವು. ಮತ್ತು ಅವು ಈ ಸಾಂಸಾರಿಕ ನಿರ್ಬಂಧ ದುಃಖಕ್ಕೆ ಗುರಿಯಾಗಿ ಸಿಕ್ಕಿವೆ. ಅಲ್ಲದೆ ಈ ದುಃಖನಿವೃತ್ತಿ ಎಂಬ ಮೋಕ್ಷ ಎಂದರೆ ಬಿಡುಗಡೆಯನ್ನು ಅವು ಯಥಾಕಾಲದಲ್ಲಿ ಅಪೇಕ್ಷಿಸುತ್ತವೆ. ಆದುದ ರಿಂದ ಅವೆಲ್ಲವೂ ಈ ಬಂಧಮೋಕ್ಷಗಳಿಗೆ ಆಶ್ರಯಗಳಾಗಿರುವುವು. ॥೧೦-೧೧॥

ಸ್ಥಿರವಾದ ಪರ್ವತ-ವೃಕ್ಷಾದಿಗಳಿಂದಲೂ, ಚರಪ್ರಾಣಿಗಳಿಂದಲೂ ತುಂಬಿ ಸಾಗುತ್ತಿರುವ ಈ ಪ್ರಪಂಚವು ಆ ದೇವಿಯಿಂದ ಸೃಷ್ಟಿಮಾಡಲ್ಪಟ್ಟಿರುವುದು. ಹೀಗೆ ಸೃಷ್ಟಿಮಾಡಲ್ಪಟ್ಟ ಪ್ರಪಂಚವು ಮೋಹದ ಎಂದರೆ ತತ್ವದ ತಿಳಿವಳಿಕೆ ಇಲ್ಲದಿರುವಿಕೆ ಎಂಬ ಅಜ್ಞಾನದ ಬಲೆಯಿಂದ ಕಟ್ಟಲ್ಪಟ್ಟದ್ದಾಗಿ ಆ ದೇವಿಯ ಅಧೀನವಲ್ಲಿರುವುದು.

ಮಾಯೆಯು ಎಂದರೆ, ಬ್ರಹ್ಮ ವಿಷಯಕವಾದ ಅಜ್ಞಾನವು, ಬ್ರಹ್ಮರೂಪ ನಾದ ಜೀವನಲ್ಲಿ ಅನಾದಿಯಾಗಿ ಬಂದು ಸೇರಿಕೊಂಡಿರುವುದರಿಂದ, ತದ್ವ್ಯತಿರಿಕ್ತ

ತ್ವಂ ಕಿಯಾನ್ಮಾನುಷೇಷ್ವೇಕಃ ಕ್ಷತ್ರಿಯೋ ರಜಸಾಽಽವಿಲಃ ॥೧೩॥
ಜ್ಞಾನಿನಾಮಪಿ ಚೇತಾಂಸಿ ಮೋಹಯತ್ಯನಿಶಂ ಹಿ ಸಾ ।
ಬ್ರಹ್ಮೇಶವಾಸುದೇವಾದ್ಯಾ ಜ್ಞಾನೇ ಸತ್ಯಪಿ ಶೇಷತಃ ॥೧೪॥
ತೇಽಪಿ ರಾಗವಶಾಲ್ಲೋಕೇ ಭ್ರಮಂತಿ ಪರಿಮೋಹಿತಾಃ ।

---

ಪದಾರ್ಥಜ್ಞಾನವು ಆ ಮಾಯೆಯ ವಿಕ್ಷೇಪಶಕ್ತಿಯ ಪ್ರಭಾವದಿಂದ ಉಂಟಾಗುತ್ತಿರು ವುದರಿಂದ ಮಾಯಾಧೀನವೆಂಬುವುದು ಸ್ಪಷ್ಟವು. ಆದರೆ ಕಾರ್ಯವು ಎಲ್ಲವೂ ಕರ್ತೃವಿನ ಅಧೀನವು ಎಂಬುದು ಲೋಕದಲ್ಲಿ ಕಂಡುಬಂದಿದೆ. ಮಾಯಾಧೀನವು ಎಂಬುದು ಹೇಗೆ? ಎಂದರೆ, ಎಲ್ಲಕ್ಕೂ ಕರ್ತೃವು ಈ ದೇವಿಯೇ ಹೊರತು ಬೇರೆ ಕರ್ತೃವಿಲ್ಲವು. ಆದುದರಿಂದ ಇವೆಲ್ಲವೂ ಆ ದೇವಿಯಿಂದ ಸೃಷ್ಟಿಸಲ್ಪಟ್ಟು ಆ ದೇವಿಗೆ ಅಧೀನವಾಗಿರುವುದು.॥೧೨॥

ಬ್ರಹ್ಮಜ್ಞಾನವು ಇದ್ದಾಗ್ಯೂ ನನಗೆ ಮೋಹವು ಹೋಗಲಿಲ್ಲವಲ್ಲ? ಇದು ಏಕೆ? ಎಂದು ಕೇಳುವುದಾದರೆ, ಆ ದೇವಿಯು ಜ್ಞಾನಿಗಳ ಮನಸ್ಸನ್ನೂ ಕೂಡ ಯಾವಾಗಲೂ ಮೋಹಗೊಳಿಸುತ್ತಿರುವಳು. ಈ ವಿಷಯದಲ್ಲಿ ಮಾರ್ಕಂಡೇಯ ಪುರಾಣದ ವಚನವು ಹೀಗೆ ಹೇಳುತ್ತಿರುವುದು —"ಜ್ಞಾನಿನಾಮಪಿಚೇತಾಂಸಿ ದೇವೀ ಭಗವತೀಹಿಸಾ । ಬಲಾದಾಕೃಷ್ಯಮೋಹಾಯ ಮಹಾಮಾಯಾ ಪ್ರಯಚ್ಛತಿ ॥" ಎಂದರೆ ಪೂಜ್ಯಳಾದ ಷಡ್ಗುಣೈಶ್ವರ್ಯಸಂಪನ್ನಳಾದ ಮಹಾಮಹಿಮಶಾಲಿನಿಯಾದ ಆ ದೇವಿಯು ಜ್ಞಾನಿಗಳಾದವರ ಮನಸ್ಸೆಲ್ಲವನ್ನೂ ಬಲವಂತವಾಗಿ ಎಳೆದು ಮೋಹ ದಲ್ಲಿ ಕೆಡವುವಳು. ಸುಖದುಃಖಗಳ ಭೋಗವನ್ನು ಅನುಭವಿಸಬೇಕಾದುದಕ್ಕೆ ಅನು ಕೂಲ ಕಾರಣವಾಗಿರುವ ಪ್ರಾರಬ್ಧಕರ್ಮದ ಶೇಷವು ಎಲ್ಲಿಯವರೆಗೆ ಉಳಿದು ನಿಂತಿ ರುವುದೋ ಆ ಕರ್ಮಶೇಷವೂ ಮುಗಿಯುವವರೆಗೂ ಆಯಾಯ ಪ್ರಾಣಿಯು ಬ್ರಹ್ಮಜ್ಞಾನಿಯೇ ಆಗಲಿ, ಯಾರೇ ಆಗಲಿ, ಆ ಕರ್ಮಾಧೀನವಾಗಿ ಭೋಗವನ್ನು ಅನುಭವಿಸುವುದಕ್ಕಾಗಿ ಮೋಹವನ್ನು ಹೊಂದಿ ವ್ಯವಹರಿಸುತ್ತಿರಲೇ ಬೇಕಾಗಿರು ವುದು. ಆದುದರಿಂದ ಈ ನಿಯಮವನ್ನು ಅನುಸರಿಸಿ ಬ್ರಹ್ಮನೂ, ಈಶ್ವರನೂ, ವಿಷ್ಣುವೂ ಸಹ ಬ್ರಹ್ಮಜ್ಞಾನಿಗಳಾಗಿ ಇದ್ದಾಗ್ಯೂ ಪ್ರಾರಬ್ಧಕರ್ಮಶೇಷದಿಂದ ಮೋ ಹಕ್ಕೆ ಅಧೀನರಾಗಿ ಲೋಕಗಳಲ್ಲಿ ತಮ್ಮ ತಮ್ಮ ವಿಶೇಷ ಅಧಿಕಾರ, ಕಾರ್ಯಗಳನ್ನು ನೆರವೇರಿಸುತ್ತಾ ತಿರುಗುತ್ತಿರುವರು. ದೇವತೆಗಳಾದ ಬ್ರಹ್ಮ-ವಿಷ್ಣು-ಈಶ್ವರರ ಅವ ಸ್ಥೆಯೇ ಹೀಗಿರುವಾಗ ರಜೋಗುಣದಿಂದ ವಿಕ್ಷಿಪ್ತನಾಗಿರುವ, ಮನುಷ್ಯರಲ್ಲಿ ಒಬ್ಬ

**ಪುರಾ ಸತ್ಯಯುಗೇ ರಾಜನ್ವಿಷ್ಣುರ್ನಾರಾಯಣಃ ಸ್ವಯಂ ॥೧೫॥**

**ಶ್ವೇತದ್ವೀಪಂ ಸಮಾಸಾದ್ಯ ಚಕಾರ ವಿಪುಲಂ ತಪಃ ।**
**ವರ್ಷಾಣಾಮಯುತಂ ಯಾವದ್ಬ್ರಹ್ಮವಿದ್ಯಾಪ್ರಸಕ್ತಯೇ ॥೧೬॥**

**ಅನಶ್ವರಸುಖಾಯಾಸೌ ಚಿಂತಯಾನಸ್ತತಃ ಪರಂ ।**
**ಏಕಸ್ಮಿನ್ನಿರ್ಜನೇ ದೇಶೇ ಬ್ರಹ್ಮಾಽಪಿ ಪರಮಾದ್ಭುತೇ ॥೧೭॥**

**ಸ್ಥಿತಸ್ತಪಸಿ ರಾಜೇಂದ್ರ ಮೋಹಸ್ಯ ವಿನಿವೃತ್ತಯೇ ।**
**ಕದಾಚಿದ್ವಾಸುದೇವೋಽಸೌ ಸ್ಥಲಾಂತರಮತಿರ್ಹರಿಃ ॥೧೮॥**

**ತಸ್ಮಾದ್ದೇಶಾತ್ಸಮುತ್ಥಾಯ ಜಗಾಮಾಸ್ಯದಿದೃಕ್ಷಯಾ ।**
**ಚತುರ್ಮುಖೋಽಪಿ ರಾಜೇಂದ್ರ ತಥೈವ ನಿಃಸೃತಃ ಸ್ಥಲಾತ್ ॥೧೯॥**

---

ನಾದ, ಕ್ಷತ್ರಿಯನಾದ ಓ ಸುರಥಮಹಾರಾಜನೇ, ನಿನ್ನ ವಿಷಯದಲ್ಲಿ ಹೇಳಬೇಕಾದುದೇನು ? ॥೧೪॥

ಬ್ರಹ್ಮ-ವಿಷ್ಣು-ಮಹೇಶ್ವರರಿಗೂ ಮೋಹವು ತಪ್ಪಿದ್ದಲ್ಲವೆಂಬುವ ವಿಷಯದಲ್ಲಿ ಉದಾಹರಣೆಯನ್ನು ಹೇಳುವರು. ಪೂರ್ವದಲ್ಲಿ ನಾರಾಯಣನಾದ ವಿಷ್ಣುವೂ ತಾನು ಶ್ವೇತದ್ವೀಪದಲ್ಲಿದ್ದುಕೊಂಡು ಶಾಶ್ವತವಾದ ಸುಖವು ಉಂಟಾಗುವುದಕ್ಕೂ, ನಿತ್ಯವಾಗಿರುವ ಆನಂದವು ಸರ್ವದಾ ತನಗೆ ಸ್ಥಿರವಾಗಿ ಇರುವುದಕ್ಕೂ, ಬ್ರಹ್ಮಜ್ಞಾನವು ಸ್ಥಿರವಾಗಿ ನೆಲಸಿರುವುದಕ್ಕೂ ಸಹ, ಹತ್ತು ಸಾವಿರ ವರ್ಷಗಳ ಕಾಲದವರೆಗೂ ಘೋರವಾದ ತಪಸ್ಸನ್ನು ಮಾಡಿದನು. ॥೧೫-೧೬॥

ಎಲೈ ರಾಜಶ್ರೇಷ್ಠನೇ, ಚತುರ್ಮುಖಬ್ರಹ್ಮನೂ ಕೂಡ, ಬಹಳ ಆಶ್ಚರ್ಯಕರವಾದ ಜನಸಂಚಾರವಿಲ್ಲದಿರುವ ಒಂದಾನೊಂದು ಪ್ರದೇಶದಲ್ಲಿದ್ದುಕೊಂಡು ಶಾಶ್ವತವಾದ ಸುಖವನ್ನು ಹೊಂದುವುದಕ್ಕಾಗಿಯೂ, ಮೋಹವು ನಿಶ್ಶೇಷವಾಗಿ ನಾಶವಾಗುವುದಕ್ಕಾಗಿಯೂ ಸಹ ಪರಬ್ರಹ್ಮನ ಧ್ಯಾನವನ್ನು ಮಾಡುವವನಾಗಿ ತಪಸ್ಸನ್ನು ಮಾಡುತ್ತಿದ್ದನು. ॥೧೭॥

ಹೀಗೆ ಇರುವಾಗ ಒಂದಾನೊಂದು ಕಾಲದಲ್ಲಿ ವಿಷ್ಣುವು ತಾನು ತಪಸ್ಸನ್ನು ಮಾಡುತ್ತಿದ್ದ ಪ್ರದೇಶವನ್ನು ಬಿಟ್ಟು ಹೆಚ್ಚು ಅನುಕೂಲವಾದ ಬೇರೆ ಪ್ರದೇಶವನ್ನು ತಪಸ್ಸಿಗಾಗಿ ಪಡೆಯಬೇಕೆಂಬ ಇಚ್ಛೆಯಿಂದ ತಾನು ಮೊದಲು ತಪಸ್ಸನ್ನು ಮಾಡ

ಮಿಲಿತೌ ಮಾರ್ಗಮಧ್ಯೇ ತು ಚತುರ್ಮುಖ ಚತುರ್ಭುಜೌ ।
ಅನ್ಯೋನ್ಯಂ ಪೃಷ್ಟವಂತೌ ತೌ ಕಸ್ತ್ವಂ ಕಸ್ತ್ವಮಿತಿ ಸ್ಮ ಹ ॥೨೦॥

ಬ್ರಹ್ಮಾ ಪ್ರೋವಾಚ ತಂ ದೇವಂ ಕರ್ತಾಽಹಂ ಜಗತಃ ಕಿಲ ।
ವಿಷ್ಣುಸ್ತಮಾಹ ಭೋ ಮೂರ್ಖ ಜಗತ್ಕರ್ತಾಽಹಮಚ್ಯುತಃ ॥೨೧॥

ತ್ವಂ ಕಿಯಾನ್ಬಲಹೀನೋಽಸಿ ರಜೋಗುಣಸಮಾಶ್ರಿತಃ ।
ಸತ್ತ್ವಾಶ್ರಿತಂ ಹಿ ಮಾಂ ವಿದ್ಧಿ ವಾಸುದೇವಂ ಸನಾತನಂ ॥೨೨॥

ಮಯಾ ತ್ವಂ ರಕ್ಷಿತೋಽದ್ಯೈವ ಕೃತ್ವಾ ಯುದ್ಧಂ ಸುದಾರುಣಂ ।
ಶರಣಂ ಮೇ ಸಮಾಯಾತೋ ದಾನವಾಭ್ಯಾಂ ಪ್ರಪೀಡಿತಃ ॥೨೩॥

---

ತ್ತಿದ್ದ ಪ್ರದೇಶದಿಂದ ಎದ್ದು ಹೊರಟನು. ಈ ವಿಷ್ಣುವಿನಂತೆಯೇ ಚತುರ್ಮುಖ ಬ್ರಹ್ಮನೂ ಕೂಡ ತನ್ನ ಸ್ಥಲವನ್ನು ಬಿಟ್ಟು ಸ್ಥಲಾಂತರವನ್ನು ನೋಡಲು ಹೊರಟನು. ||೧೮-೧೯||

ಈ ಚತುರ್ಮುಖಬ್ರಹ್ಮನೂ, ನಾಲ್ಕು ಭುಜಗಳುಳ್ಳವನಾದ ವಿಷ್ಣುವೂ ಸಹ ಮಧ್ಯಮಾರ್ಗದಲ್ಲಿ ಸೇರಿದವರಾಗಿ, ಪರಸ್ಪರವಾಗಿ ನೀನು ಯಾರು? ನೀನು ಯಾರು? ಎಂಬುದಾಗಿ ಪ್ರಶ್ನೆ ಮಾಡಿದರು. ಇವರಿಬ್ಬರಿಗೂ ಇರುವ ಪಿತಾಪುತ್ರಭಾವವು ಮೋಹದ ಮಹಿಮೆಯಿಂದ ಮರೆತುಹೋಯಿತು. ವಸ್ತುವಿನ ನಿಜವಾದ ಸ್ಥಿತಿಯನ್ನು ಮುಚ್ಚು ವುದು ಮೋಹದ ಮೊದಲನೆಯದಾದ ಆವರಣಶಕ್ತಿಯ ಕಾರ್ಯವು. ಅದನ್ನು ಬೇರೆಯ ರೀತಿಯಾಗಿ ಕಾಣಿಸುವಂತೆ ಮಾಡುವುದು ಆ ಮೋಹದ ಎರಡನೆಯದಾದ ವಿಕ್ಷೇಪಶಕ್ತಿಯ ಕಾರ್ಯವಾಗಿರುವುದು. ||೨೦||

ಬ್ರಹ್ಮನು—ನಾನು ಜಗತ್ತೆಲ್ಲವನ್ನೂ ಸೃಷ್ಟಿಮಾಡಿದ ಬ್ರಹ್ಮನು ಎಂದು ವಿಷ್ಣುವನ್ನು ಕುರಿತು ಹೇಳಿದನು. ವಿಷ್ಣುವು ಬ್ರಹ್ಮನನ್ನು ಕುರಿತು ಹೇಳಿದನು:— ಎಲೈ ದಡ್ಡನೇ, ನಾನು ಜಗತ್ತನ್ನು ನಿರ್ಮಿಸಿದವನು. ನೀನು ರಜೋಗುಣವನ್ನು ಆಶ್ರಯಿಸಿರುತ್ತೀಯೇ. ಆದುದರಿಂದ ನನ್ನಷ್ಟು ಬಲವಿಲ್ಲದವನಾಗಿರುತ್ತೀಯೆ ! ಆದು ದರಿಂದ ನೀನು ಎಷ್ಟರವನು ? ಸತ್ತ್ವಗುಣವನ್ನು ಆಶ್ರಯಿಸಿದ ನಿತ್ಯನಾದ ವಾಸು ದೇವನೆಂದು ನನ್ನನ್ನು ತಿಳಿ. ||೨೧-೨೨||

ಅಲ್ಲದೆ ನೀನು ಈಗತಾನೇ ಭಯಂಕರವಾದ ಯುದ್ಧವನ್ನು ಮಾಡಿ ನನ್ನಿಂದ ರಕ್ಷಿಸಲ್ಪಟ್ಟಿರುವೆ. ರಾಕ್ಷಸರಿಂದ ಪೀಡಿಸಲ್ಪಟ್ಟವನಾಗಿ ನೀನು ಈಗ ಸ್ವಲ್ಪ ಕಾಲಕ್ಕೆ

ಮಯಾ ತೌ ನಿಹತೌ ಕಾಮಂ ದಾನವೌ ಮಧುಕೈಟಭೌ ।
ಕಥಂ ಗರ್ವಾಯಸೇ ಮಂದ ಮೋಹೋಽಯಂ ತ್ಯಜ ಸಾಂಪ್ರತಂ ॥೨೪॥

ನ ಮತ್ತೋಽಪ್ಯಧಿಕಃ ಕಶ್ಚಿತ್ಸಂಸಾರೇಽಸ್ಮಿನ್ಪ್ರಸಾರಿತೇ ।

॥ ಋಷಿರುವಾಚ ॥

ಏವಂ ಪ್ರವದಮಾನೌ ತೌ ಬ್ರಹ್ಮವಿಷ್ಣೂ ಪರಸ್ಪರಂ ॥೨೫॥

ಸ್ಫುರದೋಷ್ಠೌ ವೇಪಮಾನೌ ಲೋಹಿತಾಕ್ಷೌ ಬಭೂವತುಃ ।
ಪ್ರಾದುರ್ಬಭೂವ ಸಹಸಾ ತಯೋರ್ವಿವದಮಾನಯೋಃ ॥೨೬॥

ಮಧ್ಯೇಲಿಂಗಂ ಸುಧಾಶ್ವೇತಂ ವಿಪುಲಂ ದೀರ್ಘಮುದ್ಭುತಂ ।
ಆಕಾಶೇ ತರಸಾ ತತ್ರ ವಾಗುವಾಚಾಽಶರೀರಿಣೀ ॥೨೭॥

---

ಮುಂಚೆ ನನ್ನನ್ನು ಶರಣುಹೊಂದಿದೆ. ಮತ್ತು ನಿನ್ನನ್ನು ನಾನು ರಕ್ಷಿಸಿರುವೆನು. ಹೇಗೆಂದರೆ—॥೨೩॥

ಮಧುಕೈಟಭರೆಂಬ ರಾಕ್ಷಸರಿಬ್ಬರೂ ನನ್ನ ಇಚ್ಛಾನುಸಾರವಾಗಿ ಈಗ ನನ್ನಿಂದ ಕೊಲ್ಲಲ್ಪಟ್ಟರು. ಹೀಗಿರುವಾಗ, ಎಲೈ ದಡ್ಡನೇ, ನೀನು ಹೇಗೆ ಹೆಮ್ಮೆಪಡುತ್ತೀಯೆ? ಈಗ ನೀನು—ನಾನು ಬ್ರಹ್ಮನು, ಹೆಚ್ಚಿನವನು, ಎಂಬ ಮೋಹವನ್ನು ಬಿಡು. ಎಲ್ಲ ಕಡೆಯಲ್ಲಿಯೂ ದೊಡ್ಡದಾಗಿ ಹರಡಿರುವ ಈ ಸಂಸಾರದಲ್ಲಿ ನನಗಿಂತಲೂ ಹೆಚ್ಚಾಗಿರುವವನು ಇಲ್ಲವು! ಎಂದು ವಿಷ್ಣುವು ಹೇಳಿದನು. ॥೨೪॥

ಸುಮೇಧಾಋಷಿಯು ಹೇಳಿದನು—ನಾನು ಹೆಚ್ಚಾದವನು, ನಾನು ದೊಡ್ಡವನು, ಎಂದು ಬ್ರಹ್ಮನೂ ವಿಷ್ಣುವೂ ಸಹ ಪರಸ್ಪರವಾಗಿ ಜಗಳವಾಡುತ್ತಾ ಇರುವಲ್ಲಿ ಅವರ ತುಟಿಗಳು ನಡುಗುತ್ತಾ ಕಣ್ಣುಗಳು ಕೆಂಪಾಗಿ, ಇಬ್ಬರಿಗೂ ಕೋಪವು ಹೆಚ್ಚಿತು. ॥೨೫॥

ಇಬ್ಬರೂ ಹೀಗೆ ವಿವಾದಮಾಡುತ್ತಿರುವಾಗ ಆ ಇಬ್ಬರ ಮಧ್ಯದಲ್ಲಿ ಸುಣ್ಣದಂತೆ ಶುಭ್ರವಾಗಿಯೂ, ದೊಡ್ಡದಾಗಿಯೂ, ಉದ್ದವಾಗಿಯೂ ಇರುವ ಶಿವಲಿಂಗವು ಬೇಗನೆ ಉದ್ಭವಿಸಿತು! ॥೨೬॥

ಆಗ ಲಿಂಗವು ಉದ್ಭವಿಸಿದ ಸ್ಥಳದಲ್ಲಿ ಪರಸ್ಪರವಾಗಿ ವಿವಾದಮಾಡುತ್ತಿರುವ ತುಂಬ ಭಾಗ್ಯಶಾಲಿಗಳಾಗಿರುವ ಆ ಬ್ರಹ್ಮವಿಷ್ಣುಗಳನ್ನು ಸಂಬೋಧಿಸಿ ಬೇಗನೆ ಆಕಾಶದಲ್ಲಿ ಅಶರೀರವಾಣಿಯು ಕೇಳಿಸಿತು! ॥೨೭॥

ತೌ ಸಂಬೋಧ್ಯ ಮಹಾಭಾಗೌ ವಿವದಂತೌ ಪರಸ್ಪರಂ ।
ಬ್ರಹ್ಮನ್ವಿಷ್ಣೋ ವಿವಾದಂ ಮಾ ಕುರುತಾಂ ವಾಂ ಪರಸ್ಪರಂ ॥೨೮॥

ಲಿಂಗಸ್ಯಾಸ್ಯ ಪರಂಪಾರಮಧಸ್ತಾದುಪರಿ ಧ್ರುವಂ ।
ಯೋ ಯಾತಿ ಯುವಯೋರ್ಮಧ್ಯೇ ಸ ಶ್ರೇಷ್ಠೋ ವಾಂ ಸದೈವ ಹಿ ॥೨೯॥

ಏಕಃ ಪ್ರಯಾತು ಪಾತಾಳಮಾಕಾಶಮಪರೋಽಧುನಾ ।
ಪ್ರಮಾಣಂ ನೋ ವಚಃ ಕಾರ್ಯಂ ತ್ಯಕ್ತ್ವಾ ವಾದಂ ನಿರರ್ಥಕಂ ॥೩೦॥

ಮಧ್ಯಸ್ಥಃ ಸರ್ವದಾ ಕಾರ್ಯೋ ವಿವಾದೇಽಸ್ಮಿನ್ದ್ವಯೋರಿಹ ।

॥ ಋಷಿರುವಾಚ ॥

ತಚ್ಛ್ರುತ್ವಾ ವಚನಂ ದಿವ್ಯಂ ಸಜ್ಜೀಭೂತೌ ಕೃತೋದ್ಯಮೌ ॥೩೧॥
ಜಗ್ಮತುರ್ಮಾತುಮುಗ್ರಸ್ಥಂ ಲಿಂಗಮದ್ಭುತದರ್ಶನಂ ।

---

ಎಲೈ ಬ್ರಹ್ಮನೇ, ವಿಷ್ಣುವೇ, ನೀವಿಬ್ಬರೂ ಪರಸ್ಪರವಾಗಿ ವಿವಾದವನ್ನು ಮಾಡಬೇಡಿರಿ. ವಿವಾದವನ್ನು ಮಾಡುತ್ತಿರುವ ನಿಮ್ಮಿಬ್ಬರ ಮಧ್ಯದಲ್ಲಿ ಆವಿರ್ಭವಿಸಿರುವ ಈ ಲಿಂಗಕ್ಕೆ ಇರುವ ಮೂಲಭಾಗವನ್ನೂ, ಮೇಲುಭಾಗವನ್ನೂ ಸಹ ನಿಮ್ಮಿಬ್ಬರಲ್ಲಿ ಯಾರು ನೋಡಿಕೊಂಡು ಬರುವರೋ ಅವರೇ ನಿಮ್ಮಿಬ್ಬರಲ್ಲಿ ಬಲವುಳ್ಳವರು ಮತ್ತು ಶ್ರೇಷ್ಠರು ಆಗಿರುವರು. ಈ ಮಾತು ನಿಜವು. ॥೨೯॥

ಈಗ ನಿಮ್ಮಿಬ್ಬರಲ್ಲಿ ಒಬ್ಬನು ಪಾತಾಳಕ್ಕೆ ಹೋಗಿ ಈ ಲಿಂಗದ ಮೂಲಭಾಗವನ್ನು ಕಂಡುಹಿಡಿಯಲಿ. ಇನ್ನೊಬ್ಬನು ಲಿಂಗದ ಅಗ್ರಭಾಗವನ್ನು ನೋಡುವುದಕ್ಕಾಗಿ ಆಕಾಶಕ್ಕೆ ಪ್ರಯಾಣ ಮಾಡಲಿ. ನೀವಿಬ್ಬರೂ ರಾಗದ್ವೇಷಗಳಿಗೆ ಅಧೀನರಾಗಿರುವುದರಿಂದ ಪ್ರಯೋಜನವಿಲ್ಲದಿರುವ ಈ ವಿವಾದವನ್ನು ನಿಲ್ಲಿಸಿರಿ. ಆದರೆ ನಿಮ್ಮಿಬ್ಬರ ಈ ವಿವಾದವಿಷಯದಲ್ಲಿ ನಿರ್ಣಯವನ್ನು ಮಾಡಲು ಒಬ್ಬ ಮಧ್ಯಸ್ಥನಾದವನನ್ನು ಯಾವಾಗಲೂ ಹೊಂದಿರಬೇಕಾದುದು ಉತ್ತಮವೂ ಮತ್ತು ಆವಶ್ಯಕವೂ ಅಲ್ಲವೇ? ಆದುದರಿಂದ ನಿಮ್ಮಿಬ್ಬರಿಗೂ ಮಧ್ಯಸ್ಥಗಾರನಾಗಿರುವ ನಾನು ಹೇಳುವ ಮಾತನ್ನು ನೀವು ನಿಶ್ಚಯವಾಗಿ ನೆರವೇರಿಸತಕ್ಕದ್ದು. ॥೩೦॥

ಸುಮೇಧಾಋಷಿಯು ಹೇಳಿದನು—ಶ್ರೇಷ್ಠವಾಗಿರುವ ಆ ಮಾತನ್ನು ಕೇಳಿ ಅದರಂತೆ ಪ್ರಯತ್ನಪಡಲು ಸಿದ್ಧರಾಗಿ ಆ ಬ್ರಹ್ಮವಿಷ್ಣುಗಳು ವಿವಾದಮಾಡುತ್ತಿರುವ ತಮ್ಮಿಬ್ಬರ ಮಧ್ಯದಲ್ಲಿರುವ ಉದ್ಭವಿಸಿರುವ ಆಶ್ಚರ್ಯಕರವಾದ ಲಿಂಗದ ಎತ್ತರ

ಪಾತಾಲಮಗಮದ್ವಿಷ್ಣುರ್ಬ್ರಹ್ಮಾಪ್ಯಾಕಾಶಮೇವ ಚ ॥೩೨॥

ಪರಿಮಾತುಂ ಮಹಾಲಿಂಗಂ ಸ್ವಮಹತ್ತ್ವವಿವೃದ್ಧಯೇ ।
ವಿಷ್ಣುರ್ಗತ್ವಾ ಕಿಯದ್ದೇಶಂ ಶ್ರಾಂತಃ ಸರ್ವಾತ್ಮನಾ ಯತಃ ॥೩೩॥

ನ ಪ್ರಾಪಾಂತಂ ಸ ಲಿಂಗಸ್ಯ ಪರಿವೃತ್ಯ ಯಯೌ ಸ್ಥಲಂ ।
ಬ್ರಹ್ಮಾಗಚ್ಛತ್ತತಶ್ಚೋರ್ಧ್ವಂ ಪತಿತಂ ಕೇತಕೀ ದಲಂ ॥೩೪॥

ಶಿವಸ್ಯ ಮಸ್ತಕಾತ್ಪ್ರಾಪ್ಯ ಪರಾವೃತ್ತೋ ಮುದಾವೃತಃ ।
ಆಗತ್ಯ ತರಸಾ ಬ್ರಹ್ಮಾ ವಿಷ್ಣವೇ ಕೇತಕೀದಲಂ ॥೩೫॥
ದರ್ಶಯಿತ್ವಾ ಚ ವಿತಥಮುವಾಚ ಮದನೋಹಿತಃ ।

---

ಮತ್ತು ಆಳವನ್ನು ಅಳತೆಯಿಂದ ಗೊತ್ತುಮಾಡಲು ಆದರವುಳ್ಳವರಾಗಿ ಪ್ರಯಾಣ ಮಾಡಿದರು. ॥೩೧॥

ತಮ್ಮ ತಮ್ಮ ಮಾಹಾತ್ಮ್ಯವು ಹೆಚ್ಚು ಎಂದು ಹೇಳಿಸಿ ಸ್ಥಾಪಿಸುವುದಕ್ಕಾಗಿ ದೊಡ್ಡದಾಗಿರುವ ಆ ಲಿಂಗದ ವ್ಯಾಪ್ತಿಯನ್ನು ಅಳತೆಯಿಂದ ಗೊತ್ತುಮಾಡಲು ವಿಷ್ಣುವು ಪಾತಾಳಲೋಕಕ್ಕೂ, ಬ್ರಹ್ಮನು ಆಕಾಶಕ್ಕೂ ಸಹ ಹೊರಟರು. ॥೩೨॥

ವಿಷ್ಣುವು ಲೆಕ್ಕಕ್ಕೆ ಮೀರುವಷ್ಟು ದೂರದವರೆಗೂ ಹೋದನು ! ಆಗ ಅವನಿಗೆ ತುಂಬ ಆಯಾಸವಾಯಿತು. ಆದುದರಿಂದ ಅವನು ಆ ಲಿಂಗದ ಮೂಲಭಾಗವನ್ನು ಕಂಡುಹಿಡಿಯಲಾಗಲಿಲ್ಲ ! ಆಗ ಅವನು ಹಿಂತಿರುಗಿ ತಾನು ಹೊರಟ ಸ್ಥಳಕ್ಕೆ ಪುನಃ ಬಂದನು. ॥೩೩॥

ಅತ್ತಲಾಗಿ ಬ್ರಹ್ಮನು ಮೇಲು ಮುಖವಾಗಿಯೂ ಹೊರಟಿರುವ ಆ ಲಿಂಗದ ಮೇಲುಭಾಗವನ್ನು ಕಂಡುಹಿಡಿಯಲು ಪ್ರಯಾಣಮಾಡಿದನು. ದಾರಿಯಲ್ಲಿ ಒಂದು ತಾಳೆಯ ಹೂವು ಶಿವನ ತಲೆಯ ಮೇಲಿನಿಂದ ಬೀಳುತ್ತಿದ್ದುದನ್ನು ಕಂಡು ಅದನ್ನು ಪಡೆದು ಹಿಡಿದುಕೊಂಡು ಸಂತೋಷದಿಂದ ಹಿಂತಿರುಗಿದನು. ॥೩೪॥

ಬ್ರಹ್ಮನು ಬೇಗನೆ ಬಂದು ವಿಷ್ಣುವಿಗೆ ಆ ತಾಳೆಯ ಹೂವನ್ನು ತೋರಿಸಿದನು. ಅನಂತರದಲ್ಲಿ ಕೊಬ್ಬಿನಿಂದ ಮೋಹವುಳ್ಳವನಾಗಿ ವಿಷ್ಣುವಿನ ಸಂಗಡ ಸುಳ್ಳು ಮಾತನ್ನು ಹೀಗೆ ಹೇಳಿದನು. ॥೩೫॥

ಲಿಂಗಸ್ಯ ಮಸ್ತಕಾದೇತದ್ಗೃಹೀತಂ ಕೇತಕೀದಲಂ ॥೩೬॥

ಅಭಿಜ್ಞಾನಾಯ ಚಾನೀತಂ ತವ ಚಿತ್ತಪ್ರಶಾಂತಯೇ ।
ಶ್ರುತ್ವಾ ತದ್ಬ್ರಹ್ಮಣೋ ವಾಕ್ಯಂ ದೃಷ್ಟ್ವಾ ಚ ಕೇತಕೀದಲಂ ॥೩೭॥

ಹರಿಸ್ತಂ ಪ್ರತ್ಯುವಾಚೇದಂ ಸಾಕ್ಷೀ ಕಃ ಕಥಯಾಽಧುನಾ ।
ಯಥಾರ್ಥವಾದೀ ಮೇಧಾವೀ ಸದಾಚಾರಃ ಶುಚಿಃ ಸಮಃ ॥೩೮॥

ಸಾಕ್ಷೀ ಭವತಿ ಸರ್ವತ್ರ ವಿವಾದೇ ಸಮುಪಸ್ಥಿತೇ ।

॥ ಬ್ರಹ್ಮೋವಾಚ ॥

ದೂರದೇಶಾತ್ಸಮಾಯಾತಿ ಸಾಕ್ಷೀ ಕಃ ಸಮಯೇಽಧುನಾ ॥೩೯॥
ಯತ್ಸತ್ಯಂ ತದ್ವಚಃ ಸೇಯಂ ಕೇತಕೀ ಕಥಯಿಷ್ಯತಿ ।

---

ಎಲೈ ವಿಷ್ಣುವೇ, ಲಿಂಗದ ತಲೆಯ ಮೇಲಿನಿಂದ ಈ ತಾಳೆಯ ಹೂವನ್ನು ನಾನು ನಿನ್ನ ಮನಸ್ಸಿನ ಸಮಾಧಾನತೆಗಾಗಿಯೂ, ನಾನು ಲಿಂಗದ ಮೇಲುಭಾಗವನ್ನು ನೋಡಿಕೊಂಡು ಬಂದುದರ ಗುರುತಿಗಾಗಿಯೂ ಸಹ ತಂದಿರುತ್ತೇನೆ. ॥೩೬॥

ವಿಷ್ಣುವು ಬ್ರಹ್ಮನ ಆ ಮಾತನ್ನು ಕೇಳಿ ಅವನ ಕೈಯಲ್ಲಿರುವ ತಾಳೆಯ ಹೂವಿನ ಸೀಳನ್ನು ನೋಡಿ, ಈಗ ನೀನು ಹೇಳುವ ಮಾತಿಗೆ ಸಾಕ್ಷಿಯು ಯಾರಿರುವರು? ಎಂದು ಕೇಳಿದನು. ಮತ್ತು ಸಾಕ್ಷಿಯಾಗಿರುವವರು. ಯಾವಾಗಲೂ ನಿಜವನ್ನು ಹೇಳುವವರಾಗಿಯೂ, ಬುದ್ಧಿವಂತರಾಗಿಯೂ, ಒಳ್ಳೆಯದಾದ ಆಚಾರವುಳ್ಳವರಾಗಿಯೂ, ವಿವಾದವನ್ನು ಮಾಡುವವರಿಬ್ಬರ ವಿಷಯದಲ್ಲಿಯೂ ಯಾವ ವಿಧವಾದ ಪಕ್ಷಪಾತವೂ ಇಲ್ಲದೆ ಇಬ್ಬರಿಗೂ ಒಂದೇ ಸಮನಾಗಿರುವವರಾಗಿಯೂ ಇರಬೇಕು. ಆಗ ಅಂಥವರು ಸಾಕ್ಷಿಯಾಗಿದ್ದುಕೊಂಡು ವಿವಾದವನ್ನು ತೀರ್ಮಾನ ಮಾಡುವರು. ಎಂದು ಹೇಳಿದನು. ಈಗ ನಮ್ಮಿಬ್ಬರಿಗೂ ನಡೆಯುತ್ತಿರುವ ಈ ವಿವಾದದಲ್ಲಿ ಯಾರನ್ನು ನಾವು ಸಾಕ್ಷಿಯಾಗಿರುವುದಕ್ಕೆ ವಿಚಾರಿಸಿ ಗೊತ್ತುಮಾಡಿಕೊಂಡು ಈ ನಮ್ಮ ವಿವಾದವನ್ನು ಸರಿಪಡಿಸುವುದು? ಎಂದೂ ಕೇಳಿದನು. ॥೩೭-೩೮॥

ಬ್ರಹ್ಮನು ಹೇಳಿದನು—ವಿಷ್ಣುವೇ, ನಾನು ಆ ದೂರದೇಶದಿಂದ ಈ ಲಿಂಗದ ಅಗ್ರಭಾಗವನ್ನು ನೋಡಿಕೊಂಡು ಬಂದಿರುವೆನು. ನೀನು ಹೇಳುವ ಮಾತನ್ನು ಒಪ್ಪಬೇಕಾದುದೇ ಸರಿ. ಆದರೂ ದೂರವಾಗಿರುವ ಈ ಸ್ಥಳದ ವಿಷಯವನ್ನು

ಇತ್ಯುಕ್ತಾ ಪ್ರೇರಿತಾ ತತ್ರ ಬ್ರಹ್ಮಣಾ ಕೇತಕೀಸ್ಫುಟಂ ॥೪೦॥

ವಚನಂ ಪ್ರಾಹ ತರಸಾ ಶಾಙ್ಗಿಣಂ ಪ್ರತ್ಯಬೋಧಯತ್ ।
ಶಿವಮೂರ್ಧ್ನಿ ಸ್ಥಿತಾಂ ಬ್ರಹ್ಮಾ ಗೃಹೀತ್ವಾ ಮಾಂ ಸಮಾಗತಃ ॥೪೧॥

ಸಂದೇಹೋಽತ್ರ ನ ಕರ್ತವ್ಯಸ್ತ್ವಯಾ ವಿಷ್ಣೋ ಕದಾಚನ ।
ಮಮ ವಾಕ್ಯಂ ಪ್ರಮಾಣಂ ಹಿ ಬ್ರಹ್ಮಾ ಪಾರಂಗತೋಽಸ್ಯ ಹ ॥೪೨॥

ಗೃಹೀತ್ವಾ ಮಾಂ ಸಮಾಯಾತಃ ಶಿವಭಕ್ತ್ಯೈಃ ಸಮರ್ಪಿತಾಂ ।
ಕೇತಕ್ಯಾ ವಚನಂ ಶ್ರುತ್ವಾ ಹರಿರಾಹ ಸ್ಮಯನ್ನಿವ ॥೪೩॥

ಮಹಾದೇವಃ ಪ್ರಮಾಣಂ ಮೇ ಯದ್ಯಸೌ ವಚನಂ ವದೇತ್ ।

॥ ಋಷಿರುವಾಚ ॥

ತದಾಕರ್ಣ್ಯ ಹರೇರ್ವಾಕ್ಯಂ ಮಹಾದೇವಃ ಸನಾತನಃ ॥೪೪॥

---

ತಿಳಿದಿರುವವರು ಇಲ್ಲಿಗೆ ಸಾಕ್ಷಿಯಾಗಿ ಈ ಸಮಯದಲ್ಲಿ ಯಾರು ಬರುವರು? ಆದರೆ ಈ ತಾಳೆಯ ಹೂವು ಮಾತ್ರ ನಿಜವಾದ ಆ ವಿಷಯವನ್ನು ಹೇಳುವುದು. ॥೩೯॥

ಬ್ರಹ್ಮನಿಂದ ಹೀಗೆ ಹೇಳಲ್ಪಟ್ಟನಂತರ ಆ ಪ್ರದೇಶದಲ್ಲಿ ತಾಳೆಯು ಹೂವೂ ಬ್ರಹ್ಮನಿಂದ ಪ್ರೇರಿಸಲ್ಪಟ್ಟದ್ದಾಗಿ ಬೇಗನೆ ವಿಷ್ಣುವನ್ನು ಕುರಿತು ಮಾತನಾಡುತ್ತಾ, ಬ್ರಹ್ಮನು ಲಿಂಗದ ಅಗ್ರಭಾಗವನ್ನು ದರ್ಶನ ಮಾಡಿದ ವಿಷಯವನ್ನು ತಿಳಿಸಿತು. ॥೪೦॥

ನಾನು ಲಿಂಗದ ರೂಪದಿಂದಿರುವ ಶಿವನ ಶಿರಸ್ಸಿನಲ್ಲಿದ್ದೆನು. ನನ್ನನ್ನು ಬ್ರಹ್ಮನು ಅಲ್ಲಿಂದ ತೆಗೆದುಕೊಂಡು ಬಂದನು. ಓ ವಿಷ್ಣುವೇ, ಈ ವಿಷಯದಲ್ಲಿ ನೀನು ಸಂದೇಹಪಡಬೇಡ, ನನ್ನ ಮಾತು ನಿಜವಾದುದು. ಬ್ರಹ್ಮನು ಈ ಹುರುಡಿನ ವಿವಾದದಲ್ಲಿ ಒಪ್ಪಿಕೊಂಡಂತೆ ಶಿವನ ಶಿರಸ್ಸಿನ ಅಗ್ರಭಾಗವನ್ನು ನೋಡಿರುವನು. ಆದುದರಿಂದ ಅವನು ಈ ಸಂದ್ಯದಲ್ಲಿ ಪಾರಂಗತನಾಗಿರುವನು. ॥೪೧-೪೨॥

ಶಿವನ ಶಿರಸ್ಸಿನಲ್ಲಿ ಭಕ್ತರು ಅರ್ಪಿಸಿದ್ದ ನನ್ನನ್ನು ಈ ಬ್ರಹ್ಮನು ತೆಗೆದುಕೊಂಡು ಬಂದಿರುವನು. ಎಂದು ಬ್ರಹ್ಮನಿಗೆ ಸರಿಯಾದ ಸಾಕ್ಷಿಯಾಗಿ ಆ ತಾಳೆಯ ಹೂವು ಹೇಳಿದುದನ್ನು ಕೇಳಿ ವಿಷ್ಣುವು ಆಶ್ಚರ್ಯಪಡುತ್ತಾ ಮಾತನಾಡಿದನು. ॥೪೩॥

ಆಗ ವಿಷ್ಣುವು ಈ ತಾಳೆಯ ಹೂವು ಹೀಗೆ ಬ್ರಹ್ಮನ ಪರವಾಗಿ ಹೇಳುವುದಾದರೆ ನನ್ನ ಕಡೆಗೆ ಮಹಾದೇವನೇ ಸಾಕ್ಷಿಯಾಗಿ ನಿಜವನ್ನು ಹೇಳುವನು! ಎಂದು ಹೇಳಿದನು. ॥೪೪॥

ಕುಪಿತಃ ಕೇತಕೀಂ ಪ್ರಾಹ ಮಿಥ್ಯಾವಾದಿನಿ ಮಾ ವದ ।
ಗಚ್ಛತೋ ಮಧ್ಯತಃ ಪ್ರಾಪ್ತಾ ಪತಿತಾ ಮಸ್ತಕಾನ್ಮಮ ॥೪೫॥

ಮಿಥ್ಯಾಭಿಭಾಷಿಣೀ ತ್ಯಕ್ತಾ ಮಯಾ ತ್ವಂ ಸರ್ವದೈವ ಹಿ ।
ಬ್ರಹ್ಮಾ ಲಜ್ಜಾಪರೋ ಭೂತ್ವಾ ನನಾಮ ಮಧುಸೂದನಂ ॥೪೬॥

ಶಿವೇನ ಕೇತಕೀ ತ್ಯಕ್ತಾ ತದ್ದಿನಾತ್ಕುಸುಮೇಷು ವೈ ।
ಏವಂ ಮಾಯಾಬಲಂ ವಿದ್ಧಿ ಜ್ಞಾನಿನಾಮಪಿ ಮೋಹದಂ ॥೪೭॥

ಅನ್ಯೇಷಾಂ ಪ್ರಾಣಿನಾಂ ರಾಜನ್ ಕಾ ವಾರ್ತಾ ವಿಭ್ರಮಂ ಪ್ರತಿ ।
ದೇವಾನಾಂ ಕಾರ್ಯಸಿದ್ಧ್ಯರ್ಥಂ ಸರ್ವದೈವ ರಮಾಪತಿಃ ॥೪೮॥
ದೈತ್ಯಾನ್ವಂಚಯತೇ ಚಾಶು ತ್ಯಕ್ತ್ವಾ ಪಾಪಭಯಂ ಹರಿಃ ।

---

ಸುಮೇಧಾಋಷಿಯು ಹೇಳಿದನು—ವಿಷ್ಣುವಿನ ಆ ಮಾತನ್ನು ಕೇಳಿ ಆ ನಿತ್ಯನಾಗಿರುವ ಮಹಾದೇವನು ತಾನಾಗಿಯೇ ಬಂದು ಕೋಪವುಳ್ಳವನಾಗಿ ತಾಳೆಯ ಹೂವನ್ನು ಕುರಿತು ಹೇಳಿದನು—ನೀನು ಸುಳ್ಳನ್ನು ಹೇಳುವವಳಾಗಿರುತ್ತೀಯೆ. ನೀನು ನನ್ನ ತಲೆಯ ಮೇಲಿನಿಂದ ಕೆಳಕ್ಕೆ ಬೀಳುತ್ತಿರುವವಳಾಗಿದ್ದೆ. ಹೀಗಿರುವ ನಿನ್ನನ್ನು ನನ್ನ ಶಿರಸ್ಸಿನ ದರ್ಶನಾರ್ಥಿಯಾಗಿ ಹೋಗುತ್ತಿದ್ದ ಬ್ರಹ್ಮನು ಮಧ್ಯ ಮಾರ್ಗದಲ್ಲಿ ಹೊಂದಿದನು. ||೪೫||

ನೀನು ಸುಳ್ಳನ್ನು ಹೇಳುವ ಕಾರಣ ನಾನು ಇನ್ನು ಮುಂದೆ ನಿನ್ನನ್ನು ಸರ್ವ ಕಾಲದಲ್ಲಿಯೂ ತ್ಯಜಿಸಿ ಬಿಟ್ಟಿರುವೆನು ! ಎಂದು ಮಹಾದೇವನು ತಾಳೆಯ ಹೂವಿನ ಸಂಗಡ ಹೇಳುವ ಮಾತನ್ನು ಕೇಳಿ ಬ್ರಹ್ಮನು ನಾಚಿಕೆಯಿಂದ ಕೂಡಿದವನಾಗಿ ವಿಷ್ಣುವಿಗೆ ನಮಸ್ಕಾರವನ್ನು ಮಾಡಿದನು. ||೪೬||

ಆ ದಿವಸ ಮೊದಲುಮಾಡಿಕೊಂಡು ಕುಸುಮಗಳ ಪೈಕಿ ತಾಳೆಯ ಹೂವು ಶಿವನ ಪೂಜೆಗೆ ಅರ್ಹವಾಗಿರುವಿಕೆಯಿಂದ ದೂರಮಾಡಲ್ಪಟ್ಟಿತು. ಎಲೈ ರಾಜನೇ, ಕೇಳು. ಹೀಗೆ ಆ ಮಾಯೆಯು ಜ್ಞಾನಿಗಳಾದವರಿಗೂ ಮೋಹವನ್ನುಂಟುಮಾಡು ವಳು ! ಅಂತಹ ಮಾಯೆಯ ಶಕ್ತಿಯು ಇತರ ಪ್ರಾಣಿಗಳಿಗೆ ಮೋಹವನ್ನುಂಟು ಮಾಡುವ ವಿಷಯದಲ್ಲಿ ಏನನ್ನು ಹೇಳಲಿ ? ||೪೭||

ಲಕ್ಷ್ಮೀದೇವಿಗೆ ಅಧಿಪತಿಯಾಗಿರುವ ಶ್ರೀಮಹಾವಿಷ್ಣುವು ಯಾವಾಗಲೂ ದೇವತೆಗಳ ಕಾರ್ಯವನ್ನು ನೆರವೇರಿಸುವುದಕ್ಕಾಗಿ ಪಾಪದ ಭಯವನ್ನೂ ಬಿಟ್ಟು, ರಾಕ್ಷಸರು ಬೇಗಬೇಗನೆ ಮೋಸಹೋಗುವಂತೆ ಮಾಡುವನು. ||೪೮||

ಅವತಾರಕರೋ ದೇವೋ ನಾನಾಯೋನಿಷು ಮಾಧವಃ ॥೪೯॥

ತ್ಯಕ್ತ್ವಾಽನಂದಸುಖಂ ದೈತ್ಯಯುದ್ಧಂ ಚೈವಾಕರೋದ್ವಿಭುಃ ।
ನೂನಂ ಮಾಯಾಬಲಂ ಚೈತನ್ಮಾಧವೇಽಪಿ ಜಗದ್ಗುರೌ ॥೫೦॥

ಸರ್ವಜ್ಞೇ ದೇವಕಾರ್ಯಾಂಶೇ ಕಾ ವಾರ್ತಾಽನ್ಯಸ್ಯ ಭೂಪತೇ ।
ಜ್ಞಾನಿನಾಮಪಿ ಚೇತಾಂಸಿ ಪರಮಾ ಪ್ರಕೃತಿಃ ಕಿಲ ॥೫೧॥

ಬಲಾದಾಕೃಷ್ಯ ಮೋಹಾಯ ಪ್ರಯಚ್ಛತಿ ಮಹೀಪತೇ ।
ಯಯಾ ವ್ಯಾಪ್ತಮಿದಂ ಸರ್ವಂ ಭಗವತ್ಯಾ ಚರಾಚರಂ ॥೫೨॥
ಮೋಹದಾ ಜ್ಞಾನದಾ ಸೈವ ಬಂಧಮೋಕ್ಷಪ್ರದಾ ಸದಾ ।

---

ವಿಷ್ಣುವು ತಾನು ದೇವತೆಯಾಗಿದ್ದಾಗ್ಯೂ ತನ್ನ ಪ್ರಾರಬ್ಧಕರ್ಮವಿಶೇಷದಿಂದ ಅನೇಕ ಜನ್ಮಗಳಲ್ಲಿ ಅವತಾರಗಳನ್ನು ಮಾಡಿ, ತನ್ನ ನಿತ್ಯವಾದ ಆನಂದಸುಖವನ್ನೂ ಬಿಟ್ಟು, ರಾಕ್ಷಸರ ಸಂಗಡ ಯುದ್ಧವನ್ನು ಮಾಡಿದನು. ಜಗತ್ತಿಗೆಲ್ಲಕ್ಕೂ ಗುರುವಾಗಿಯೂ ಲಕ್ಷ್ಮೀದೇವಿಗೆ ಪತಿಯಾಗಿಯೂ ಇರುವ ವಿಷ್ಣುವಿನ ವಿಷಯದಲ್ಲಿಯೂ ಮಾಯೆಯ ಪ್ರಭಾವವು ಅವನ ಪ್ರಾರಬ್ಧಕರ್ಮಶೇಷದ ಫಲವಾಗಿ ನಿಜವಾಗಿಯೂ ಇಷ್ಟರಮಟ್ಟಿಗೆ ಪ್ರಬಲವಾಗಿರುವುದು ! ॥೪೯-೫೦॥

ಎಲೈ ರಾಜನೇ, ಎಲ್ಲವನ್ನೂ ತಿಳಿದಿರುವವನಾಗಿಯೂ, ದೇವಕಾರ್ಯಕ್ಕಾಗಿ ಸಿದ್ಧನಾಗಿರುವ ಮಹಾವಿಷ್ಣುವಿನ ವಿಷಯದಲ್ಲಿಯೂ ಮಾಯೆಯ ಮೋಹಕತ್ವವು ಇಷ್ಟರಮಟ್ಟಿಗೆ ಪ್ರಬಲವಾಗಿರುವಾಗ ಇತರರ ವಿಷಯದಲ್ಲಿ ಹೇಳುವ ಮಾತು ಯಾವದಿರುತ್ತದೆ? ಉತ್ಕೃಷ್ಟಳಾದ ಮೂಲಪ್ರಕೃತಿಯಾಗಿರುವ ಆ ದೇವಿಯು ಜ್ಞಾನಿಗಳಾಗಿರುವವರ ಮನಸ್ಸನ್ನೂ ಕೂಡ ಬಲಾತ್ಕಾರದಿಂದ ಎಳೆದು, ಅಜ್ಞಾನವು ಅದನ್ನು ಆವರಿಸುವಂತೆ ಮಾಡುವಳು. ॥೫೧॥

ಷಡ್ಗುಣೈಶ್ವರ್ಯಸಂಪನ್ನಳಾದ ಈ ದೇವಿಯಿಂದ ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ವ್ಯಾಪಿಸಲ್ಪಟ್ಟಿರುವುದು. ಈ ದೇವಿಯು ಯಾವಾಗಲೂ ಅವಿದ್ಯಾ ಕಾಮುಕರ್ಮಗಳುಳ್ಳವರಿಗೆ ಮೋಹವನ್ನುಂಟುಮಾಡುವವಳು. ಮತ್ತು ನಿಷ್ಕಾಮುಕರ್ಮಿಗಳಿಗೆ ಚಿತ್ತಶುದ್ಧಿಯ ಮೂಲಕ ಜ್ಞಾನವನ್ನೂ ಕೊಡುವವಳು. ಆಧುದರಿಂದ ಪ್ರಾಣಿಗಳಿಗೆ ಅವರವರ ಯೋಗ್ಯತೆ ಶಕ್ತಿ ಅಧಿಕಾರಗಳಿಗೆ ಅನುಗುಣವಾಗಿ ಬಂಧವನ್ನೂ ಮೋಕ್ಷವನ್ನೂ ಉಂಟುಮಾಡುವವಳಾಗಿರುವಳು.

|| ರಾಜೋವಾಚ ||

**ಭಗವನ್ಬ್ರೂಹಿ ಮೇ ತಸ್ಯಾಃ ಸ್ವರೂಪಂ ಬಲಮುತ್ತಮಂ ||೫೩||**

**ಉತ್ಪತ್ತಿಕಾರಣಂ ವಾऽಪಿ ಸ್ಥಾನಂ ಪರಮಕಂ ಚ ಯತ್ ।**

|| ಋಷಿರುವಾಚ ||

**ನ ಚೋತ್ಪತ್ತಿರನಾದಿತ್ವಾನ್ನೃಪ ತಸ್ಯಾಃ ಕದಾಚನ ||೫೪||**

**ನಿತ್ಯೈವ ಸಾ ಪರಾ ದೇವೀ ಕಾರಣಾನಾಂ ಚ ಕಾರಣಂ ।**

**ವರ್ತತೇ ಸರ್ವಭೂತೇಷು ಶಕ್ತಿಃ ಸರ್ವಾತ್ಮನಾ ನೃಪ ||೫೫||**

---

ಆತ್ಮವಸ್ತು ಒಂದೇ ನಿರ್ವಿಕಾರವಾಗಿ ನಿತ್ಯವಾಗಿರುವ ತತ್ವವಾಗಿದೆ. ಆತ್ಮವ್ಯತಿರಿಕ್ತವಾದ ಇತರ ಎಲ್ಲ ಪದಾರ್ಥಗಳೂ ಜ್ಞಾನಕ್ಕೆ ವಿಷಯವಾಗಿಯೂ, ಮಾಯಾಮಯವೂ ಆಗಿರುವ ಕಾರಣ ಬಂಧವನ್ನೂ ಮೋಕ್ಷವನ್ನೂ ಆ ದೇವಿಯೇ ತನ್ನ ಭಕ್ತರಿಗೆ ಅವರ ಯೋಗ್ಯತೆಗೆ ತಕ್ಕಂತೆ ಉಂಟುಮಾಡುವವಳಾಗಿರುತ್ತಾಳೆ. ||೫೨||

ರಾಜನು ಕೇಳಿದನು—ಓ ಷಡ್ಗುಣೈಶ್ವರ್ಯಸಂಪನ್ನನಾದ ಋಷಿಯೇ, ಹೀಗೆ ಎಲ್ಲ ಪ್ರಾಣಿಗಳಿಗೂ ಬಂಧವನ್ನೂ ಮೋಕ್ಷವನ್ನೂ ಉಂಟುಮಾಡುವ ಆ ಪರಾಶಕ್ತಿಯ ರೂಪವು ಯಾವುದು? ಆ ದೇವಿಯ ಶ್ರೇಷ್ಠವಾದ ಬಲವು ಎಷ್ಟರ ಮಟ್ಟಿನದು? ಆ ದೇವಿಯ ಉತ್ಪತ್ತಿಗೆ ಕಾರಣವು ಯಾವುದು? ಆ ದೇವಿಯು ಇರುವ ಉತ್ತಮವಾದ ಪ್ರದೇಶವು ಯಾವುದು? ಇವೆಲ್ಲವನ್ನೂ ನನಗೆ ತಿಳಿಯ ಹೇಳು. ||೫೩||

ಸುಮೇಧಾಋಷಿಯು ಹೇಳಿದನು—ಎಲೈ ರಾಜನೇ, ಈ ದೇವಿಯು ಯಾವಾಗಲೂ ಇರುವ ಕಾರಣದಿಂದ ಆದಿಯೇ ಇಲ್ಲದಿರುವುದರಿಂದ ನಿತ್ಯಳಾದ ಈ ದೇವಿಗೆ ಹುಟ್ಟುವಿಕೆಯು ಯಾವಾಗಲೂ ಇಲ್ಲವು. ಎಲೈ ರಾಜನೇ, ಇವಳು ಉತ್ಪತ್ತಿ ಇಲ್ಲದವಳಾದುದರಿಂದ ನಿತ್ಯಳಾದರೂ ಮೋಕ್ಷದವರೆಗೂ ಇರುವವಳು. ಪ್ರಾಣಿಗಳಿಗೆ ಈ ಪ್ರಪಂಚದಲ್ಲಿ ಉತ್ಪತ್ತಿಯುಂಟಾಗಲು ಕಾರಣ ಪದಾರ್ಥವು ಯಾವ ಯಾವುದು ಇರುವುದೋ ಅದೆಲ್ಲಕ್ಕೂ ಇವಳೇ ಕಾರಣವಾಗಿರುವವಳು. ಎಲ್ಲಕ್ಕಿಂತಲೂ ಹೆಚ್ಚಾದ ಬಲವುಳ್ಳವಳು. ಆದುದರಿಂದಲೇ ಸಮಸ್ತವಾದ ಪ್ರಪಂಚವೂ ಸೃಷ್ಟಿಯಾಗಲು ಈ ದೇವಿಯು ಕಾರಣವಾಗಿರುತ್ತಾಳೆ. ||೫೪||

ಓ ದೊರೆಯೇ, ಎಲ್ಲ ಪ್ರಾಣಿಗಳಲ್ಲೂ ಕಂಡುಬರುವ ಸರ್ವವಿಧವಾದ ಸಾಮರ್ಥ್ಯವೂ ಶಕ್ತಿರೂಪಳಾದ ಈ ದೇವಿಯ ಅಂಶವಾಗಿರುವ ಕಾರಣ ಈ ದೇವಿಯು ಸರ್ವ

ಶವವಚ್ಛಕ್ತಿಹೀನಸ್ತು ಪ್ರಾಣೀ ಭವತಿ ಸರ್ವಥಾ ।
ಚಿಚ್ಛಕ್ತಿಃ ಸರ್ವಭೂತೇಷು ರೂಪಂ ತಸ್ಯಾಸ್ತದೇವ ಹಿ ॥೫೬॥

ಆವಿರ್ಭಾವತಿರೋಭಾವೌ ದೇವಾನಾಂ ಕಾರ್ಯಸಿದ್ಧಯೇ ।
ಯದಾ ಸ್ತುವಂತಿ ತಾಂ ದೇವಾ ಮನುಜಾಶ್ಚ ವಿಶಾಂಪತೇ ॥೫೭॥

---

ಪ್ರಾಣಿಗಳಲ್ಲಿಯೂ ಶಕ್ತಿರೂಪಳಾಗಿ ಇರುವವಳು. ಇದರಿಂದ ರಾಜನು ಕೇಳಿರುವ ಮೂರು ಪ್ರಶ್ನೆಗಳಲ್ಲಿ ಮೂರನೆಯ ಪ್ರಶ್ನೆಗೆ ಮಾತ್ರ ಉತ್ತರವನ್ನು ಹೇಳಿದಂತಾಯಿತು. ॥೫೫॥

ಶಕ್ತಿ ಇಲ್ಲದ ಪ್ರಾಣಿಯು ಸರ್ವಪ್ರಕಾರದಿಂದಲೂ ಶವದಂತಿರುವುದು. ದೇವಿಯ ರೂಪವು, ಎಲ್ಲ ಪ್ರಾಣಿಗಳಲ್ಲಿಯೂ ವ್ಯಾಪಿಸಿಕೊಂಡಿರುವ ಜ್ಞಾನರೂಪಿಯಾದ ಬ್ರಹ್ಮನ ಚಿದ್ರೂಪದ ಸಂಬಂಧಿಯಾದ ಈ ಶಕ್ತಿಯು, ಬ್ರಹ್ಮನಿಗಿಂತಲೂ ಬೇರೆಯಾಗಿಲ್ಲದಿರುವ ಕಾರಣ ಈ ಚಿಚ್ಛಕ್ತಿಯ ಸ್ವರೂಪವು ಬ್ರಹ್ಮನ ಸ್ವರೂಪಕ್ಕಿಂತಲೂ ಬೇರೆಯಾಗಿರತಕ್ಕದ್ದಲ್ಲವು. ಲೋಕದಲ್ಲಿ ಅಗ್ನಿಯ ಸುಡುವ ಶಕ್ತಿಯ ಸ್ವರೂಪವು ಅಗ್ನಿಗಿಂತಲೂ ಬೇರೆಯಾಗಿಲ್ಲದಿರುವಹಾಗೆ, ಈ ದೇವಿಯ ಸ್ವರೂಪವನ್ನು ಉಪಾಸನೆ ಮಾಡುವವರು ಮಾಯಾವಿಶಿಷ್ಟವಾದ ಬ್ರಹ್ಮಸ್ವರೂಪವನ್ನು ಈ ದೇವಿಯ ಸ್ವರೂಪವೆಂದು ತಿಳಿದು ಇದನ್ನು ಉಪಾಸನೆ ಮಾಡಬೇಕಾದುದು ಯುಕ್ತವೆಂದು ನಿರೂಪಿಸಲ್ಪಟ್ಟಿರುತ್ತದೆ. ಈ ವಿಷಯವು ಸಪ್ತಶತಿಯ ಅಂಗಷಟ್ಕವ್ಯಾಖ್ಯಾನದಲ್ಲಿಯೂ, ಉಪೋದ್ಘಾತದಲ್ಲಿಯೂ ಸಹ ವಿವರಿಸಲ್ಪಟ್ಟಿರುವುದೆಂದು ವ್ಯಾಖ್ಯಾನದಲ್ಲಿ ನಿರೂಪಿಸಲ್ಪಟ್ಟಿರುವುದು. ॥೫೬॥

ಐಹಿಕ ಮತ್ತು ಆಮುಷ್ಮಿಕಗಳಾದ ಅಭ್ಯುದಯಗಳನ್ನು ಪರಾಶಕ್ತಿಸ್ವರೂಪಳಾದ ಈ ಮಹಾಮಾಯೆಯ ಅಥವಾ ಅವಳ ಅಂಶರೂ, ಅಂಶಾಂಶರೂ ಆಗಿರುವ ಇತರ ದೇವತೆಗಳ ಉಪಾಸನೆಯಿಂದ ಭಕ್ತರು ಪಡೆಯುತ್ತಿರುವಂತೆ, ಈ ಮಾಯೆಯ ಉಪಾಸನೆಯಿಂದ ಮೋಕ್ಷವನ್ನೂ, ಸಾಧನಚತುಷ್ಟಯವನ್ನೂ ಸಂಪಾದಿಸಿಕೊಂಡಿರುವ ಭಕ್ತರು ಪಡೆಯುತ್ತಾರೆ. ಈ ಉಪಾಸನೆಯಲ್ಲಿ ಮಾಯಾವಿಶಿಷ್ಟಬ್ರಹ್ಮವೇ ಉಪಾಸ್ಯತತ್ತ್ವವಾಗಿರುತ್ತದೆ. ಮಾಯಾವಿಶಿಷ್ಟ ಪರಬ್ರಹ್ಮತತ್ತ್ವವೇ ಈ ಭಗವತೀ ದೇವಿಯ ಸ್ವರೂಪವಾಗಿರುತ್ತದೆಂಬುದು, ಈ ಪುರಾಣದ ಮುಖ್ಯ ತಾತ್ಪರ್ಯವಾಗಿದೆ ಎಂಬುದನ್ನು ಮರೆಯಬಾರದು.

ಈ ದೇವಿಯು ಉತ್ಪತ್ತಿ ವಿನಾಶ ಇತ್ಯಾದಿ ಧರ್ಮರಹಿತಳಾಗಿರುವಳೆಂದರೆ, ಪುರಾಣಗಳಲ್ಲಿ ವರ್ಣಿಸಿರುವಂತೆ ಕಂಡುಬರುವ ದೇವಿಯ ಉತ್ಪತ್ತಿಯೇ ಮೊದಲಾದ

**ಪ್ರಾದುರ್ಭವತಿ ಭೂತಾನಾಂ ದುಃಖನಾಶಾಯ ಚಾಂಬಿಕಾ ।**
**ನಾನಾರೂಪಧರಾ ದೇವೀ ನಾನಾಶಕ್ತಿಸಮನ್ವಿತಾ ॥೫೮॥**

**ಆವಿರ್ಭವತಿ ಕಾರ್ಯಾರ್ಥಂ ಸ್ವೇಚ್ಛಯಾ ಪರಮೇಶ್ವರೀ ।**
**ದೈವಾಧೀನಾ ನ ಸಾ ದೇವೀ ಯಥಾ ಸರ್ವೇ ಸುರಾ ನೃಪ ॥೫೯॥**

**ನ ಕಾಲವಶಗಾ ನಿತ್ಯಂ ಪುರುಷಾರ್ಥಪ್ರವರ್ತಿನೀ ।**
**ಅಕರ್ತಾ ಪುರುಷೋ ದ್ರಷ್ಟಾ ದೃಶ್ಯಂ ಸರ್ವಮಿದಂ ಜಗತ್ ॥೬೦॥**

---

ಕಾರ್ಯಗಳು ವಿರುದ್ಧವಾಗಿರುವುವೆಂದಲ್ಲವು. ದೇವತೆಗಳ ಮತ್ತು ಧರ್ಮದರಕ್ಷಣೆಯ ಕಾರ್ಯವನ್ನು ನೆರವೇರಿಸುವುದಕ್ಕಾಗಿ ಈ ದೇವಿಯು ಪ್ರಪಂಚದಲ್ಲಿ ತನ್ನ ಮಹಿಮೆಯನ್ನು ಬೆಳಗುತ್ತಾ, ಇತರ ದೇವತೆಗಳ ಅಥವಾ ಅವತಾರಗಳ ಯಾವುದಾದರೊಂದು ಆಕಾರದಿಂದ ಪ್ರಕಟವಾಗುವಳು. ಆ ಕಾರ್ಯವನ್ನು ನಿರ್ವಹಿಸಿದ ಮೇಲೆ ತಾನು ಆ ರೂಪವನ್ನು ಇತರರಿಗೆ ಕಾಣಿಸದಂತೆ ಮರೆಮಾಡಿ, ತನ್ನ ಯಾವಾಗಲೂ ಇರುವ ನಿತ್ಯಸ್ವರೂಪದಿಂದ ಪ್ರಕಾಶಿಸುತ್ತಿರುವಳು. ಆದುದರಿಂದ ಈ ದೇವಿಗೆ ಉತ್ಪತ್ತಿ ಮೊದಲಾದವುಗಳು ಔಪಚಾರಿಕವೇ ಹೊರತು ನಿಜವಾಗಿರತಕ್ಕುವಲ್ಲವು. ಎಲೈ ರಾಜನೇ ಕೇಳು, ಮನುಷ್ಯನಾಗಲಿ, ದೇವತೆಗಳಾಗಲಿ ಯಾವಾಗ ಅನನ್ಯಭಕ್ತಿಯಿಂದ ತಮ್ಮ ಇಷ್ಟಪ್ರಾಪ್ತಿಪರಿಹಾರಗಳಿಗಾಗಿ ಈ ದೇವಿಯನ್ನು ಸ್ತೋತ್ರಮಾಡುವರೋ ಆಗ ದೇವಿಯು ಅವರ ಪ್ರಾರ್ಥನೆಗಳನ್ನು ಸಲ್ಲಿಸುವುದಕ್ಕಾಗಿ ತನ್ನ ಮಹಿಮೆಯಿಂದ ಆ ಭಕ್ತರಿಗೆ ಉಪಾಸ್ಯವಾದ ಆ ಆ ರೂಪಗಳನ್ನೇ ಧರಿಸಿ ಪ್ರತ್ಯಕ್ಷಳಾಗಿಯೂ ತೋರುವಳು. ಹೀಗೆ ಆ ಕಾರ್ಯವನ್ನು ಈಡೇರಿಸಲು ನಾನಾವಿಧವಾದ ಆಕಾರವನ್ನು ಹೊಂದುತ್ತಾ ಅನೇಕವಿಧವಾದ ಶಕ್ತಿಯಿಂದ ಕೂಡಿರುವ ಈ ದೇವಿಯು ದೇವತೆಗಳ, ಧರ್ಮದ ಮತ್ತು ಭಕ್ತರ ರಕ್ಷಣೆಯ ಕಾರ್ಯವನ್ನು ಯಾವಾಗಲೂ ನಿರ್ವಹಿಸುತ್ತಿರುವಳು. ||೫೮||

ಎಲೈ ರಾಜನೇ, ಈ ದೇವಿಯು ತನ್ನ ಇಚ್ಛೆಯಿಂದ ದೇವತೆಗಳ ಕಾರ್ಯಕ್ಕಾಗಿಯೇ ಲೋಕದಲ್ಲಿ ಜನ್ಮವನ್ನು ಹೊಂದಿದಂತೆ ಇತರರಿಗೆ ಕಾಣಿಸಿಕೊಳ್ಳುವಳು. ಅಷ್ಟೇ ಹೊರತು ಇತರರಾದ ದೇವತೆಗಳಂತೆ ದೈವಕ್ಕೆ ಅಥವಾ ಕರ್ಮಕ್ಕೆ ಅಧೀನಳಾಗಿ ಹುಟ್ಟುಸಾವುಗಳನ್ನು ಈ ದೇವಿಯೂ ಪಡೆಯುತ್ತಾ ಇರುವವಳಲ್ಲವು ! ||೫೯||

ಆದುದರಿಂದ ಈ ದೇವಿಯು ಕಾಲಕ್ಕೆ ಅಧೀನಳಲ್ಲವು. ಮತ್ತು ಕಾಲವೂ ಈ ದೇವಿಯಿಂದಲೇ ಸೃಷ್ಟಿಮಾಡಲ್ಪಟ್ಟದ್ದಾಗಿರುವುದು. ಈ ದೇವಿಯು ಎಲ್ಲ ಪ್ರಾಣಿಗಳಿಗೆ

ದೃಶ್ಯಸ್ಯ ಜನನೀ ಸೈವ ದೇವೀ ಸದಸದಾತ್ಮಿಕಾ ।
ಪುರುಷಂ ರಂಜಯತ್ಯೇಕಾ ಕೃತ್ವಾ ಬ್ರಹ್ಮಾಂಡನಾಟಕಂ ॥೬೧॥

ರಂಜಿತೇ ಪುರುಷೇ ಸರ್ವಂ ಸಂಹರತ್ಯತಿರಂಹಸಾ ।
ತಯಾ ನಿಮಿತ್ತಭೂತಾಸ್ತೇ ಬ್ರಹ್ಮವಿಷ್ಣುಮಹೇಶ್ವರಾಃ ॥೬೨॥
ಕಲ್ಪಿತಾಃ ಸ್ವಸ್ವಕಾರ್ಯೇಷು ಪ್ರೇರಿತಾ ಲೀಲಯಾ ತ್ವಮೀ ।

---

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧಗಳಾದ ಪುರುಷಾರ್ಥಗಳು ದೊರೆಯುವಂತೆ ಮಾಡತಕ್ಕವಳು. ಯಾವಾಗಲೂ ಬ್ರಹ್ಮಸ್ವರೂಪನಾದ ಪುರುಷನು ಕರ್ತೃತ್ವ ಮುಂತಾದ ಧರ್ಮಗಳಿಲ್ಲದಿರುವವನು. ಸಾಂಖ್ಯರು ಹೇಳುವ ಕ್ರಮದಿಂದ ಆತ್ಮನು ಕರ್ತೃತ್ವವಿಲ್ಲದ ಕೇವಲ ದ್ರಷ್ಟೃ (ನೋಡತಕ್ಕವನು, ಸಾಕ್ಷಿಭೂತನು) ವಾಗಿರುವನು. ದ್ರಷ್ಟೃಸ್ವರೂಪದಿಂದಿರುವ ಆತ್ಮನಿಗೆ ಈ ಜಗತ್ತೆಲ್ಲವೂ ದೃಶ್ಯವಾಗಿರುವುದು. ದೃಶ್ಯವಾಗಿರುವ ಈ ಪ್ರಪಂಚದ ವ್ಯವಹಾರವನ್ನು ಪ್ರಾಣಿಗಳ ಕರ್ಮಾನುಸಾರವಾಗಿ ದೇವಿಯು ಸಾಗಿಸುತ್ತಾ ಸ್ವತಂತ್ರಳಾಗಿರುವಳು ! ॥೬೦॥

ಈ ದೇವಿಯು, ಪ್ರಕೃತಿ ವಿಕೃತಿರೂಪಗಳಾಗಿರುವ ಸ್ವರೂಪದಿಂದ, ಸತ್ ಎಂದರೆ ಕಾರಣ ಮತ್ತು ಅಸತ್ ಎಂದರೆ ಕಾರ್ಯ, ಈ ರೂಪದಲ್ಲಿ ತೋರುತ್ತಿರುವವಳಾಗಿ ಪುರುಷನಿಗೆ ತನ್ನ ದೃಶ್ಯರೂಪದಿಂದ ಭೋಗವನ್ನುಂಟುಮಾಡುವಳು. ನಾಟಕದಲ್ಲಿ ಆಯಾಯ ವೇಷಭಾಷಾದಿಗಳಿಂದ ನಟರು ದ್ರಷ್ಟೃಗಳ (ಪ್ರೇಕ್ಷಕರ) ಮನಸ್ಸನ್ನು ಆನಂದಗೊಳಿಸುವಂತೆ, ಈ ಪ್ರಪಂಚದಲ್ಲಿರುವ ನಿತ್ಯಾನಿತ್ಯರೂಪವಾದ ಪದಾರ್ಥಗಳನ್ನು ನಿರ್ಮಿಸಿ, ದ್ರಷ್ಟೃರೂಪದಿಂದ ಇರುವ ಆತ್ಮನಿಗೆ ತಾನು ದೃಶ್ಯಪದಾರ್ಥಗಳನ್ನು ತೋರಿಸಿ, ಆನಂದವನ್ನುಂಟುಮಾಡುವುದರ ಉದ್ದೇಶದಿಂದ ಬ್ರಹ್ಮಾಂಡದ ನಿರ್ಮಾಣ, ಸ್ಥಿತಿ, ಸಂಹಾರರೂಪವಾದ ನಾಟಕವನ್ನು ಆಡುತ್ತಿರುವಳು. ದ್ರಷ್ಟೃರೂಪದಿಂದಿರುವ ಆತ್ಮನಿಗೆ ಈ ದೇವಿಯು ತನ್ನ ಸಾಮರ್ಥ್ಯದಿಂದ ನಿರ್ಮಿಸಲ್ಪಟ್ಟ ಸದಸದ್ರೂಪವಾದ ಪದಾರ್ಥಗಳ ದರ್ಶನಾದಿಭೋಗಗಳಿಂದ ಆನಂದ ಉಂಟಾದ ಅನಂತರದಲ್ಲಿ ಅವುಗಳೆಲ್ಲವನ್ನೂ ನಾಶಮಾಡಿ ಉಪಸಂಹರಿಸುತ್ತಿರುವಳು ! ॥೬೧॥

ಮಾಯಾವಿಶಿಷ್ಟಬ್ರಹ್ಮಸ್ವರೂಪಳಾಗಿ ಇರುವ ಈ ದೇವಿಯು ತನ್ನ ಮಹಿಮೆಯನ್ನು ತೋರಿಸಿ ಪರಮ ಪುರುಷನನ್ನು ಆನಂದಪಡಿಸುವ ಈ ನಾಟಕದಲ್ಲಿ ಈ ದೇವಿಯಿಂದ ಪ್ರೇರಿತರಾದ ಈ ಬ್ರಹ್ಮ ವಿಷ್ಣು ಮಹೇಶ್ವರರು ತಮ್ಮ ತಮ್ಮ ಕಾರ್ಯ

ಸ್ವಾಂಶಂ ತೇಷು ಸಮಾರೋಪ್ಯ ಕೃತಾಸ್ತೇ ಬಲವತ್ತರಾಃ ॥೬೩॥

ದತ್ತಾಶ್ಚ ಶಕ್ತಯಸ್ತೇಭ್ಯೋ ಗೀರ್ಲಕ್ಷ್ಮೀರ್ಗಿರಿಜಾ ತಥಾ ।
ತೇ ತಾಂ ಧ್ಯಾಯಂತಿ ದೇವೇಶಾಃ ಪೂಜಯಂತಿ ಪರಾಂ ಮುದಾ ॥೬೪॥

ಜ್ಞಾತ್ವಾ ಸರ್ವೇಶ್ವರೀಂ ಶಕ್ತಿಂ ಸೃಷ್ಟಿಸ್ಥಿತಿವಿನಾಶಿನೀಂ ।
ಏತತ್ತೇ ಸರ್ವಮಾಖ್ಯಾತಂ ದೇವೀಮಾಹಾತ್ಮ್ಯಮುತ್ತಮಂ ॥೬೫॥
ಮಮ ಬುದ್ಧ್ಯನುಸಾರೇಣ ನಾಂತಂ ಜಾನಾಮಿ ಭೂಪತೇ ।

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ತ್ರಯಸ್ತ್ರಿಂಶೋಽಧ್ಯಾಯಃ

---

ಗಳನ್ನು ನೆರವೇರಿಸಲು ನಿಮಿತ್ತರಾಗಿರುವಂತೆ ಈ ದೇವಿಯು ಅವರವರಿಗೆ ತನ್ನ ಶಕ್ತಿಯ ಅಂಶಗಳ ಅನುಗ್ರಹವನ್ನೂ ಅನಾಯಾಸದಿಂದ ಮಾಡಿರುವಳು ! ||೬೨||

ಈ ಲೋಕದಲ್ಲಿ ಆಯಾಯ ಅಧಿಕಾರಿಗಳು ತಮ್ಮ ತಮ್ಮ ಕೆಲಸಗಳನ್ನು ದೊರೆಯ ಅಪ್ಪಣೆಯಂತೆ ನಡೆಯಿಸುತ್ತಿರುವ ಹಾಗೆ, ಈ ಬ್ರಹ್ಮವಿಷ್ಣುಮಹೇಶ್ವರರು ಈ ದೇವಿಯ ಆಜ್ಞೆಯನ್ನು ಅನುಸರಿಸಿರುವರು. ಈ ದೇವಿಯು ತನ್ನ ಪರಾಶಕ್ತಿಯ ಅಂಶವನ್ನು ಇವರಲ್ಲಿ ಇರಿಸಿರುವುದರ ಕಾರಣದಿಂದ ಅವರು ಬಲಿಷ್ಠರಾಗಿ ಕೆಲಸ ಮಾಡುವರು. ಆದುದರಿಂದ ಲೋಕದಲ್ಲಿ ಹೇಳುವ " ತ್ರಿಮೂರ್ತಿಗಳು ಈ ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಿರುವರು." ಎಂಬ ಪ್ರವಾದವು ಅಜ್ಞಾನಮೂಲಕವಾಗಿರುವುದು. ಏಕೆಂದರೆ ಈ ದೇವಿಯೇ ಈ ತ್ರಿಮೂರ್ತಿಗಳಿಗೆ ತನ್ನ ಅಂಶದಿಂದ ಅವಲಂಬನೆಯನ್ನು ಕೊಟ್ಟಿರುವುದಲ್ಲದೆ, ತನ್ನ ಶಕ್ತಿಯ ಅಂಶರೂಪರಾದ ಸರಸ್ವತೀ, ಲಕ್ಷ್ಮೀ, ಗಿರಿಜಾ, ಎಂಬ ಹೆಸರಿನಿಂದ ದೇವಿಯರನ್ನು ನಿರ್ಮಿಸಿ ಇವರ ಸಹಾಯಕ್ಕಾಗಿ ಅನುಗ್ರಹಿಸಿರುವಳು. ಇದರಿಂದಲೇ ಈ ದೇವತೆಗಳು ಈ ದೇವಿಯ ಮಹಿಮೆಯನ್ನು ತಿಳಿದವರಾಗಿ, ಪರಾಶಕ್ತಿಯೆಂತಲೂ, ಸೃಷ್ಟಿಸ್ಥಿತಿವಿನಾಶಗಳನ್ನು ಮಾಡುವ ಎಲ್ಲಕ್ಕೂ ಅಧಿಪತಿಯೆಂತಲೂ ಸಹ ಮನಗಂಡು, ಸಂತೋಷದಿಂದ ಈ ದೇವಿಯನ್ನು ಯಾವಾಗಲೂ ಧ್ಯಾನಮಾಡುತ್ತಾ ಪೂಜಿಸುವರು. ||೬೩-೬೪||

ಎಲೈ ರಾಜನೇ, ಉತ್ತಮವಾದ ದೇವಿಯ ಮಹಿಮೆಯೆಲ್ಲವೂ ನಿನಗೋಸ್ಕರವಾಗಿ ನನ್ನ ಬುದ್ಧಿಗೆ ತಿಳಿದಮಟ್ಟಿಗೆ ತಿಳಿಸಲ್ಪಟ್ಟಿತು. ಆದರೆ ಆ ಮಹಿಮೆಯು

ಇಷ್ಟೇ ಇರುವುದೆಂದು ಅದರ ಕೊನೆಯನ್ನು ನಾನೂ ತಿಳಿದಿಲ್ಲವು! ದೇವಿಯ ಅಪರಿಚ್ಛಿನ್ನವಾದ ಅಖಂಡವಾದ ಪೂರ್ಣಸ್ವರೂಪವನ್ನು ಯಾರೂ ಪರಿಮಿತವಾದ ತಮ್ಮ ಮನಸ್ಸಿನಿಂದ ತಿಳಿಯಲಾರರು. ಮತ್ತು ಅದನ್ನು ಮಾತುಗಳಿಂದ ವಿವರಿಸುವುದೂ ಅಸಾಧ್ಯವು ಎಂದು ತಾತ್ಪರ್ಯವು. ||೬೫||

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

### || ಚತುಸ್ತ್ರಿಂಶೋಽಧ್ಯಾಯಃ ||

### ಮೂವತ್ತುನಾಲ್ಕನೆಯ ಅಧ್ಯಾಯವು

|| ರಾಜೋವಾಚ ||

**ಭಗವನ್ಬ್ರೂಹಿ ಮೇ ಸಮ್ಯಕ್ತಸ್ಯಾ ಆರಾಧನೇ ವಿಧಿಂ ।**
**ಪೂಜಾವಿಧಿಂ ಚ ಮಂತ್ರಾಂಶ್ಚ ತಥಾ ಹೋಮವಿಧಿಂ ವದ ॥೧॥**

|| ಋಷಿರುವಾಚ ||

**ಶೃಣು ರಾಜನ್ಪ್ರವಕ್ಷ್ಯಾಮಿ ತಸ್ಯಾಃ ಪೂಜಾವಿಧಿಂ ಶುಭಂ ।**
**ಕಾಮದಂ ಮೋಕ್ಷದಂ ನೃಣಾಂ ಜ್ಞಾನದಂ ದುಃಖನಾಶನಂ ॥೨॥**

---

ರಾಜನು ಹೇಳಿದನು—ಓ ಷಡ್ಗುಣೈಶ್ವರ್ಯಸಂಪನ್ನನಾದ ಋಷಿಯೇ, ನೀನು ಹೇಳಿದಂತೆ ಸರ್ವೋತ್ತಮಳಾಗಿ ಇರುವ ದೇವಿಯನ್ನು ಆರಾಧಿಸುವ ರೀತಿ ನೀತಿಗಳನ್ನೂ, ಧ್ಯಾನಮಾಡುವುದರ ಕ್ರಮವನ್ನೂ, ಪೂಜೆಗೆ ಉಪಯುಕ್ತವಾದ ಮಂತ್ರಗಳನ್ನೂ ಮತ್ತು ಹೋಮದ ಕ್ರಮವನ್ನೂ ಸಹ ನನಗೋಸ್ಕರವಾಗಿ ಚನ್ನಾಗಿ ತಿಳಿಸು. ||೧||

ಋಷಿಯು ಹೇಳಿದನು—ಎಲೈ ರಾಜನೇ, ಕೇಳು. ಆ ದೇವಿಯನ್ನು ಪೂಜೆಮಾಡುವುದರ ಕ್ರಮವನ್ನು ಹೇಳುವೆನು. ಆ ಪೂಜಾಕ್ರಮವು ಮಂಗಳಕರವಾದುದು. ಭಕ್ತರ ಕೋರಿಕೆಯಂತೆ ಅವರವರ ಇಷ್ಟಾರ್ಥವನ್ನು ಕೊಡತಕ್ಕದ್ದಾಗಿರುವುದು. ಮತ್ತು ಅದು ಮನುಷ್ಯರಿಗೆಲ್ಲರಿಗೂ ಅವರವರ ಅಧಿಕಾರ, ಯೋಗ್ಯತೆ, ಶಕ್ತಿಗಳಿಗೆ ತಕ್ಕಂತೆ ಕಡೆಗೆ ಮೋಕ್ಷವನ್ನೂ ಕೊಡುವುದು ! ||೨||

ಆದೌ ಸ್ನಾನವಿಧಿಂ ಕೃತ್ವಾ ಶುಚಿಃ ಶುಕ್ಲಾಂಬರೋ ನರಃ ।
ಆಚಮ್ಯ ಪ್ರಯತಃ ಕೃತ್ವಾ ಶುಭಮಾಯತನಂ ನಿಜಂ ॥೩॥

ತತೋಽವಲಿಪ್ತಭೂಮ್ಯಾಂ ತು ಸಂಸ್ಥಾಪ್ಯಾಸನಮುತ್ತಮಂ ।
ತತ್ರೋಪವಿಶ್ಯ ವಿಧಿವತ್ತ್ರಿರಾಚಮ್ಯ ಮುದಾನ್ವಿತಃ ॥೪॥

ಪೂಜಾದ್ರವ್ಯಂ ಸುಸಂಸ್ಥಾಪ್ಯ ಯಥಾಶಕ್ತ್ಯನುಸಾರತಃ ।
ಪ್ರಾಣಾಯಾಮಂ ತತಃ ಕೃತ್ವಾ ಭೂತಶುದ್ಧಿಂ ವಿಧಾಯ ಚ ॥೫॥

ಕುರ್ಯಾತ್ಪ್ರಾಣಪ್ರತಿಷ್ಠಾಂ ತು ಸಂಭಾರಂ ಪ್ರೋಕ್ಷ್ಯ ಮಂತ್ರತಃ ।
ಕಾಲಜ್ಞಾನಂ ತತಃ ಕೃತ್ವಾ ನ್ಯಾಸಂ ಕುರ್ಯಾದ್ಯಥಾವಿಧಿ ॥೬॥

---

ದೇವಿಯ ಪೂಜೆಯನ್ನು ಮಾಡುವ ಮನುಷ್ಯನು ಮೊದಲು ವೈದಿಕವಾದ ಮತ್ತು ತಾಂತ್ರಿಕವಾದ ಸ್ನಾನವನ್ನು ಮಾಡಿ, ಪರಿಶುದ್ಧನಾಗಿ, ಶುದ್ಧವಾದ ವಸ್ತ್ರವನ್ನು ಧರಿಸಿದವನಾಗಿ, ವೈದಿಕ ಮತ್ತು ತಾಂತ್ರಿಕಸಂಧ್ಯಾವಂದನೆಯನ್ನು ಮಾಡಿಕೊಂಡು ಪ್ರಯತ್ನಪೂರ್ವಕವಾಗಿ ತನ್ನ ಮನೆಯನ್ನು ಮಂಗಳಕರವಾಗಿರುವಂತೆ ಮಾಡಬೇಕು. ॥೩॥

ಅನಂತರದಲ್ಲಿ ಗೋಮಯದ ಲೇಪದಿಂದ ಪರಿಶುದ್ಧಿಯನ್ನು ಮಾಡಿರುವ ಭೂಮಿಯಲ್ಲಿ ತಾನು ಉತ್ತಮವಾದ ಆಸನವನ್ನು ಹಾಕಿಕೊಂಡು ಕೂತುಕೊಳ್ಳಬೇಕು. ಆಮೇಲೆ ಶಾಸ್ತ್ರಕ್ಕನುಸಾರವಾಗಿ ಮೂರು ಸಾರಿ ಆಚಮನವನ್ನು ಮಾಡಿ ಸಂತೋಷದಿಂದ ಕೂಡಿದವನಾಗಿ ತನ್ನ ಶಕ್ತಿಗೆ ಅನುಸಾರವಾಗಿ ತಾನು ಸಂಪಾದಿಸಿಕೊಂಡಿರುವ ಪೂಜಾಸಾಮಗ್ರಿಗಳನ್ನು ಕ್ರಮವಾಗಿ ಇರಿಸಬೇಕು. ಅನಂತರದಲ್ಲಿ ಸ್ಥೂಲವಾಗಿರುವ ಪಂಚಮಹಾಭೂತಗಳು ಯಾವ ಕ್ರಮದಿಂದ ಎಂದರೆ ಪ್ರಕೃತಿ, ಮಹತ್ತತ್ವ, ಅಹಂಕಾರ, ಆಕಾಶ, ವಾಯು, ತೇಜಸ್, ಜಲ, ಪೃಥಿವೀ, ಓಷಧಿ, ಅನ್ನ, ಮತ್ತು ಪುರುಷ ಎಂಬ ಕ್ರಮದಿಂದ ಹುಟ್ಟಿರುವುವೋ ಆ ಕ್ರಮಕ್ಕನುಸಾರವಾಗಿ ಎಂದರೆ ಉತ್ತರೋತ್ತರ ಕಾರ್ಯಗಳನ್ನು ಪೂರ್ವಪೂರ್ವಕಾರಣಗಳಲ್ಲಿಯೂ, ಕಡೆಗೆ ಮಾಯೆಯನ್ನು ಆತ್ಮನಲ್ಲಿಯೂ ಪ್ರವಿಲಾಪನೆಯನ್ನು ಮಾಡಬೇಕೆಂಬುದಾಗಿರುವ ಮಂತ್ರಶಾಸ್ತ್ರಕ್ರಮವನ್ನು ಅನುಸರಿಸಿ ಶರೀರೋತ್ಪತ್ತಿಪರ್ಯಂತವಾಗಿಯೂ ಪ್ರಾಣಾಯಾಮವನ್ನು ಮಾಡಿಕೊಂಡು ಭೂತಶುದ್ಧಿಯನ್ನೂ ಮಾಡಿಕೊಳ್ಳಬೇಕು. ॥೪-೫॥

ಭೂತಶುದ್ಧಿಯನ್ನು ಮಾಡಿಕೊಂಡ ಅನಂತರದಲ್ಲಿ ಮಾತೃಕಾನ್ಯಾಸದವರೆಗೂ ಹೇಳಿರುವ ಕರ್ಮಗಳನ್ನು ಮಾಡಿಕೊಳ್ಳಬೇಕು. ತರುವಾಯ ಅಸ್ತ್ರಮಂತ್ರದಿಂದ

**ಶುಭೇ ತಾಮ್ರಮಯೇ ಪಾತ್ರೇ ಚಂದನೇನ ಸಿತೇನ ಚ ।**
**ಷಟ್ಕೋಣಂ ವಿಲಿಖೇದ್ಯಂತ್ರಂ ಚಾಷ್ಟಕೋಣಂ ತತೋ ಬಹಿಃ ॥೭॥**

**ನವಾಕ್ಷರಸ್ಯ ಮಂತ್ರಸ್ಯ ಬೀಜಾನಿ ವಿಲಿಖೇತ್ತತಃ ।**
**ಕೃತ್ವಾ ಯಂತ್ರಪ್ರತಿಷ್ಠಾಂ ಚ ವೇದೋಕ್ತಾಂ ಸಂವಿಧಾಯ ಚ ॥೮॥**

---

ಪೂಜಾದ್ರವ್ಯವನ್ನು ಪ್ರೋಕ್ಷಿಸಿಕೊಂಡು, ಪೂಜಾರ್ಥವಾಗಿ ಸಂಕಲ್ಪವನ್ನು ಮಾಡಿ, ತನ್ನ ಶರೀರದಲ್ಲಿ ಮಾತೃಕಾನ್ಯಾಸವೇ ಮೊದಲಾಗಿ ತಾನು ಜಪಿಸಬೇಕಾಗಿರುವ ಮಂತ್ರನ್ಯಾಸವನ್ನು ಮಾಡಿಕೊಂಡು ತನ್ನ ದೇಹಧರ್ಮಾದಿಗಳಿಂದ ಶಾಸ್ತ್ರೋಕ್ತ ರೀತಿಯಲ್ಲಿ ಪೀಠವನ್ನೂ ಕಲ್ಪಿಸಿಕೊಂಡು ಅಂತರಪೂಜೆಯನ್ನು ಮಾಡಿದಮೇಲೆ ಬಾಹ್ಯಪೂಜೆಯನ್ನು ಮಾಡಲು ಆರಂಭಿಸಬೇಕು. ||೬||

ಬಾಹ್ಯಪೂಜೆಯನ್ನು ಮಾಡುವುದಕ್ಕೆ ಯಂತ್ರವನ್ನು ಮಂಗಲಕರವಾದ ತಾಮ್ರದ ಪಾತ್ರೆಯಲ್ಲಿ ರಕ್ತಚಂದನದಿಂದಲಾಗಲಿ, ಶ್ವೇತಚಂದನದಿಂದಲಾಗಲಿ, ಅಷ್ಟಗಂಧದಿಂದಲಾಗಲಿ ಬರೆಯಬೇಕು. ಆ ಯಂತ್ರವು ಮೊದಲು ಆರು ಕೋಣ ಗಳುಳ್ಳದ್ದಾಗಿಯೂ, ಅದರ ಹೊರಭಾಗದಲ್ಲಿ ಎಂಟು ಕೋಣಗಳುಳ್ಳದ್ದಾಗಿಯೂ, ಎಂಟು ಕೋಣಗಳ ಹೊರಭಾಗದಲ್ಲಿ ಅಷ್ಟಪತ್ರವೂ ಮತ್ತು ಭೂಪುರವೂ ಇರುವಂತೆ ಯೂ ಯಂತ್ರವನ್ನು ಬರೆಯಬೇಕು. ||೭||

ಯಂತ್ರದಲ್ಲಿ ಅಷ್ಟಪತ್ರಗಳಲ್ಲಿ ಎಂಟು ಅಕ್ಷರಗಳನ್ನು ಬರೆದು ಒಂಬತ್ತನೆಯ ಅಕ್ಷರವನ್ನು ಮಧ್ಯದಲ್ಲಿರುವ ಕರ್ಣಿಕಾಸ್ಥಾನದಲ್ಲಿ ದೇವಿಯ ಮುಂಭಾಗದಲ್ಲಿ ಬರೆಯ ಬೇಕು. ಪ್ರಾಣಪ್ರತಿಷ್ಠೆಯನ್ನು ಆಯಾಯ ಮಂತ್ರದಿಂದ ಮಾಡಬೇಕು. ವೇದೋಕ್ತ ಮಂತ್ರಗಳಿಂದ. ಶಾಸ್ತ್ರಾನುಸಾರವಾಗಿ ಯಂತ್ರದಲ್ಲಿ ಪ್ರತಿಷ್ಠೆಯನ್ನು ಮಾಡಬೇಕು. ಅನಂತರದಲ್ಲಿ ಆ ಯಂತ್ರದಲ್ಲಿ ಆಧಾರಶಕ್ತಿಯನ್ನು ಮೊದಲು ಮಾಡಿಕೊಂಡು ಪೀಠ ಮಂತ್ರದ ಕೊನೆಯವರೆಗೂ ಪೂಜಿಸಿದನಂತರ ದೇವಿಯನ್ನು ಆವಾಹನೆ ಮಾಡಿ ಆ ದೇವಿಯನ್ನು ಮೂಲಮಂತ್ರದಿಂದ ಆಸನಾದಿ ಷೋಡಶೋಪಚಾರಗಳಿಂದ ಪೂಜಿಸಿದ ಮೇಲೆ ಷಟ್ಕೋಣಗಳಲ್ಲಿ ಮಂತ್ರದ ಷಡಂಗಗಳನ್ನು ಪೂಜಿಸಬೇಕು. ಈ ಕ್ರಮ ವಾದ ಪೂಜಾವಿಧಿಯು ಶಾರದಾತಿಲಕವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿರುತ್ತದೆ. ಆಗ್ನೇಯ-ನೈಋತ್ಯ-ವಾಯವ್ಯ-ಈಶಾನ್ಯವೆಂಬ ವಿದಿಕ್ಕುಗಳಲ್ಲಿ ಅಂಗದೇವತಾಪೂಜೆ ಯನ್ನೂ ಒಂಬತ್ತು ಅಕ್ಷರಗಳಿಂದ ಭೂಪುರದಲ್ಲಿ ಇಂದ್ರಾದಿ ಲೋಕಪಾಲಕರನ್ನು

**ಅರ್ಚಾಂ ವಾ ಧಾತವೀಂ ಕುರ್ಯಾತ್ಪೂಜಾಮಂತ್ರೈಃ ಶಿವೋದಿತೈಃ ।**
**ಪೂಜನಂ ಪೃಥಿವೀಪಾಲ ಭಗವತ್ಯಾಃ ಪ್ರಯತ್ನತಃ ॥೯॥**

**ಕೃತ್ವಾ ವಾ ವಿಧಿವತ್ಪೂಜಾಮಾಗಮೋಕ್ತಾಂ ಸಮಾಹಿತಃ ।**
**ಜಪೇನ್ನವಾಕ್ಷರಂ ಮಂತ್ರಂ ಸತತಂ ಧ್ಯಾನಪೂರ್ವಕಂ ॥೧೦॥**

**ಹೋಮಂ ದಶಾಂಶತಃ ಕುರ್ಯಾದ್ದಶಾಂಶೇನ ಚ ತರ್ಪಣಂ ।**
**ಭೋಜನಂ ಬ್ರಾಹ್ಮಣಾನಾಂ ಚ ತದ್ದಶಾಂಶೇನ ಕಾರಯೇತ್ ॥೧೧॥**

---

ವಜ್ರಾದ್ಯಾಯುಧ ದೇವತೆಗಳನ್ನೂ ಪೂಜಿಸಬೇಕೆಂದು ಯಂತ್ರಪೂಜಾಕ್ರಮವಿರುವುದು. ॥೮॥

ಎಲೈ ರಾಜನೇ ಕೇಳು— ಯಂತ್ರವನ್ನು ಪ್ರಾಣಪ್ರತಿಷ್ಠಾದಿಗಳಿಂದ ಸಿದ್ಧ ಮಾಡದೇ ಇದ್ದರೆ, ಸುವರ್ಣವೇ ಮೊದಲಾದ ಲೋಹಗಳಿಂದ ದೇವಿಯ ಮೂರ್ತಿಯನ್ನು ಮಾಡಿಸಿ ಯಾಮಲಾದಿ ತಂತ್ರಶಾಸ್ತ್ರ ಗ್ರಂಥಗಳಲ್ಲಿ ಶಿವನು ಉಪದೇಶಿಸಿ ಹೇಳಿರುವ ಪೂಜಾಕ್ರಮದಿಂದ ಪೂಜಿಸಬೇಕು. ಪ್ರಪಂಚಸಾರವಿವರಣದಲ್ಲಿ ಪೂಜಾಮಂತ್ರಗಳು ಹೇಳಲ್ಪಟ್ಟಿರುತ್ತವೆ. ಅಥವಾ ಮೂಲಮಂತ್ರದಿಂದಲಾದರೂ ದೇವಿಯ ಪೂಜೆಯನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು. ॥೯॥

ವೈದಿಕಮಂತ್ರಗಳಿಂದಲಾಗಲಿ, ಶಾಸ್ತ್ರಾನುಸಾರವಾಗಿ ಪ್ರಯತ್ನದಿಂದ ಪೂಜೆಯನ್ನು ಮಾಡಿದ ಮೇಲೆ ಋಷ್ಯಾದಿನ್ಯಾಸಪೂರ್ವಕವಾಗಿ ನವಾಕ್ಷರಮಂತ್ರದಿಂದ ದೇವಿಯನ್ನು ಧ್ಯಾನಮಾಡುತ್ತಾ ನವಾಕ್ಷರಮಂತ್ರವನ್ನು ಜಪಮಾಡಬೇಕು. ॥೧೦॥

ಜಪವು, ನಿತ್ಯನೈಮಿತ್ತಿಕವೆಂದು ಎರಡು ವಿಧವಾಗಿರುವುದು. ನಿತ್ಯವಾದ ಜಪದ ಕ್ರಮದಲ್ಲಿ ಹೋಮವು ತಂತ್ರಾಂತರದಲ್ಲಿ ಹೇಳಿರುವಂತೆ ನಿತ್ಯವಾಗಿ ಅನುಸರಿಸಲ್ಪಡತಕ್ಕದ್ದು. ನೈಮಿತ್ತಿಕವಾದ ಪುರಶ್ಚರಣದಲ್ಲಿ ಜಪದ ಹತ್ತನೆಯ ಒಂದು ಭಾಗದಂತೆ ಹೋಮವನ್ನು ಮಾಡಬೇಕು. ಹೋಮದ್ರವ್ಯವು ಆಯಾಯ ಕಲ್ಪದಲ್ಲಿ ಹೇಳಲ್ಪಟ್ಟಿರುವುದು. ಹೋಮದ ಹತ್ತನೆಯ ಒಂದು ಭಾಗದಂತೆ ತರ್ಪಣವನ್ನೂ ಅದರ ಹತ್ತನೆಯ ಒಂದು ಭಾಗದಂತೆ ಬ್ರಾಹ್ಮಣ ಭೋಜನವನ್ನೂ ಮಾಡಿಸಬೇಕು. ॥೧೧॥

ಚರಿತತ್ರಯಪಾಠಂ ಚ ನಿತ್ಯಂ ಕುರ್ಯಾದ್ವಿಸರ್ಜಯೇತ್ ।
ನವರಾತ್ರವ್ರತಂ ಚೈವ ವಿಧೇಯಂ ವಿಧಿಪೂರ್ವಕಂ ॥೧೨॥

ಆಶ್ವಿನೇ ಚ ತಥಾ ಚೈತ್ರೇ ಶುಕ್ಲೇ ಪಕ್ಷೇ ನರಾಧಿಪ ।
ನವರಾತ್ರೋಪವಾಸೋ ವೈ ಕರ್ತವ್ಯಃ ಶುಭಮಿಚ್ಛತಾ ॥೧೩॥

ಹೋಮಃ ಸುವಿಪುಲಃ ಕಾರ್ಯೋ ಜಪ್ಯಮಂತ್ರೈಃ ಸುಪಾಯಸೈಃ ।
ಶರ್ಕರಾಘೃತಮಿಶ್ರೈಶ್ಚ ಮಧುಯುಕ್ತೈಃ ಸುಸಂಸ್ಕೃತೈಃ ॥೧೪॥

ಛಾಗಮಾಂಸೇನ ವಾ ಕಾರ್ಯೋ ಬಿಲ್ವಪತ್ರೈಸ್ತಥಾ ಶುಭೈಃ ।
ಹಯಾರಿಕುಸುಮೈ ರಕ್ತೈಸ್ತಿಲೈರ್ವಾ ಶರ್ಕರಾಯುತೈಃ ॥೧೫॥

---

ಜಪವನ್ನು ಮುಗಿಸಿದ ಬಳಿಕ ಪ್ರತಿನಿತ್ಯವೂ ದೇವಿಯ ಮೂರು ಚರಿತ್ರೆಗಳನ್ನು ಕ್ರಮವಾಗಿ ಪಾರಾಯಣಮಾಡಬೇಕು. ಈ ಚರಿತ್ರೆಯು ದೇವೀಮಾಹಾತ್ಮ್ಯದಲ್ಲಿಯೂ, ವಾಮನಪುರಾಣದಲ್ಲಿಯೂ ಹೇಳಲ್ಪಟ್ಟಿರುವುದು. ಆದರೆ ಮಾರ್ಕಂಡೇಯ ಪುರಾಣದಲ್ಲಿ ಹೇಳಿರುವ ಕ್ರಮವು ಸಂಕ್ಷೇಪವಾಗಿರುವ ಕಾರಣ ಪಾರಾಯಣಕ್ಕಾಗಿ ಅದನ್ನೇ ಅನುಸರಿಸಬೇಕು. ಪಾರಾಯಣವನ್ನು ಮಾಡಿದ ನಂತರ ದೇವಿಯನ್ನು ವಿಸರ್ಜನೆಮಾಡಬೇಕು. ಹೀಗೆ ಪ್ರತಿನಿತ್ಯವೂ ದೇವಿಯ ಆರಾಧನೆಯನ್ನು ಮಾಡುವುದಲ್ಲದೆ ಪ್ರತಿವರ್ಷದಲ್ಲಿಯೂ ಶರನ್ನವರಾತ್ರೆಯಲ್ಲಿ ಕ್ರಮವಾಗಿ ದೇವಿಯ ಸೇವೆಯನ್ನು ನಡೆಸಬೇಕು. ॥೧೨॥

ಎಲೈ ರಾಜನೇ, ಆಶ್ವಯುಜಮಾಸದಲ್ಲಿಯಾಗಲಿ, ಚೈತ್ರಮಾಸದಲ್ಲಿಯಾಗಲಿ, ಶುಕ್ಲಪಕ್ಷದಲ್ಲಿ ಒಳ್ಳೆಯದನ್ನು ಅಪೇಕ್ಷಿಸುವ ಮಾನವನು ಒಂಬತ್ತು ರಾತ್ರೆಗಳಲ್ಲಿಯೂ ಉಪವಾಸವನ್ನು ಮಾಡುತ್ತಾ ದೇವಿಯ ಮಂತ್ರಪುರಶ್ಚರಣ, ಯಂತ್ರ ದೇವತಾಪೂಜಾ, ಚರಿತತ್ರಯಪಾರಾಯಣ ಇವುಗಳನ್ನು ಕ್ರಮವಾಗಿ ತಪ್ಪದೆ ನಡೆಸಬೇಕು. ತಾನು ಜಪಮಾಡುವ ಮಂತ್ರಗಳಿಂದಲೇ ಪಾಯಸ, ಸಕ್ಕರೆ, ಜೇನು, ಮತ್ತು ತುಪ್ಪ ಇವುಗಳಿಂದ ಶಾಸ್ತ್ರೋಕ್ತಕ್ರಮದಿಂದ ಹೋಮವನ್ನು ಮಾಡಬೇಕು. ॥೧೩-೧೪॥

ಕಾಳಿಕಾಪುರಾಣದಲ್ಲಿ ಹೇಳಿರುವ ಕ್ರಮವು ಬ್ರಾಹ್ಮಣನಿಗೆ ಅನುಸರಿಸಲು ಯೋಗ್ಯವಲ್ಲದ್ದರಿಂದ ಕ್ಷತ್ರಿಯನಾದವನು ತಾನು ಮಾಡುವ ದೇವಿಯ ಮಂತ್ರಜಪಾ

ಅಷ್ಟಮ್ಯಾಂ ಚ ಚತುರ್ದಶ್ಯಾಂ ನವಮ್ಯಾಂ ಚ ವಿಶೇಷತಃ ।
ಕರ್ತವ್ಯಂ ಪೂಜನಂ ದೇವ್ಯಾ ಬ್ರಾಹ್ಮಣಾನಾಂ ಚ ಭೋಜನಂ ॥೧೬॥

ನಿರ್ಧನೋ ಧನಮಾಪ್ನೋತಿ ರೋಗೀ ರೋಗಾತ್ಪ್ರಮುಚ್ಯತೇ ।
ಅಪುತ್ರೋ ಲಭತೇ ಪುತ್ರಾಞ್ಛುಭಾಂಶ್ಚ ವಶವರ್ತಿನಃ ॥೧೭॥

ರಾಜ್ಯಭ್ರಷ್ಟೋ ನೃಪೋ ರಾಜ್ಯಂ ಪ್ರಾಪ್ನೋತಿ ಸಾರ್ವಭೌಮಿಕಂ ।
ಶತ್ರುಭಿಃ ಪೀಡಿತೋ ಹಂತಿ ರಿಪೂನ್ಮಾಯಾಪ್ರಸಾದತಃ ॥೧೮॥

ವಿದ್ಯಾರ್ಥೀ ಪೂಜನಂ ಯಸ್ತು ಕರೋತಿ ನಿಯತೇಂದ್ರಿಯಃ ।
ಅನವದ್ಯಾಂ ಶುಭಾಂ ವಿದ್ಯಾಂ ವಿಂದತೇ ನಾತ್ರ ಸಂಶಯಃ ॥೧೯॥

---

ದಿಗಳನ್ನು ನಡೆಯಿಸಿದ ಮೇಲೆ, ಮಾಂಸಭೋಜಿಯಾಗಿದ್ದರೆ ಆಡಿನ ಮಾಂಸದಿಂದ ಲಾಗಲಿ, ಬಿಲ್ವಪತ್ರೆ, ಕೆಂಪು ಹೂವು, ಎಳ್ಳು, ಸಕ್ಕರೆ ಇವುಗಳಿಂದಲಾಗಲಿ ಹೋಮ ವನ್ನು ಮಾಡಬೇಕು. ॥೧೫॥

ನವರಾತ್ರಿಗೆ ಸಂಬಂಧಿಸಿದ ಅಷ್ಟಮಿ ನವಮಿ ಮತ್ತು ಚತುರ್ದಶೀ ಈ ದಿವಸಗಳಲ್ಲಿ ದೇವಿಗೆ ನಿತ್ಯಕ್ಕಿಂತಲೂ ಹೆಚ್ಚಾಗಿ ಪೂಜೆಯನ್ನು ಮಾಡಿ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು. ॥೧೬॥

ಈ ರೀತಿಯಾಗಿ ದೇವಿಯ ಸೇವೆಯನ್ನು ಕ್ರಮವಾಗಿ ನಿಯಮದಿಂದ ನಡೆ ಸುತ್ತಾ ಬಂದರೆ ದರಿದ್ರನಾದವನು ಧನವನ್ನು ಹೊಂದುವನು. ರೋಗಿಯಾದವನು ರೋಗದಿಂದ ಬಿಡುಗಡೆಯನ್ನು ಹೊಂದುವನು. ಮಕ್ಕಳಿಲ್ಲದವನು ತಾನು ಹೇಳಿದಂತೆ ಕೇಳುವವರಾದ ಒಳ್ಳೆಯ ಮಕ್ಕಳನ್ನು ಪಡೆಯುವನು. ॥೧೭॥

ರಾಜ್ಯವನ್ನು ಕಳೆದುಕೊಂಡಿರುವ ರಾಜನು ದೇವಿಯ ಸೇವೆಯನ್ನು ಮಾಡು ವುದರಿಂದ ರಾಜ್ಯವನ್ನೂ, ಚಕ್ರವರ್ತಿತ್ವವನ್ನೂ ಹೊಂದುವನು. ಶತ್ರುಗಳಿಂದ ತೊಂದರೆಯನ್ನು ಅನುಭವಿಸುವವನು ದೇವಿಯ ಅನುಗ್ರಹದಿಂದ ತನ್ನ ಶತ್ರುಗಳನ್ನು ನಾಶಮಾಡುವನು. ॥೧೮॥

ವಿದ್ಯಾರ್ಥಿಯಾದವನು ಯಾವನಾದರೂ ತಾನು ನಿಯಮದಿಂದ ಕೂಡಿದವ ನಾಗಿ ದೇವಿಯ ಆರಾಧನೆಯನ್ನು ಮಾಡಿದಲ್ಲಿ ಒಳ್ಳೆಯದಾದ ಮತ್ತು ನಿರ್ದುಷ್ಟ ವಾದ ವಿದ್ಯೆಯನ್ನು ಹೊಂದುವನು. ಈ ವಿಷಯದಲ್ಲಿ ಸಂಶಯಪಡಬೇಕಾದು ದಿಲ್ಲವು. ॥೧೯॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಭಕ್ತಿಸಂಯುತಃ ।
ಪೂಜಯೇಜ್ಜಗತಾಂ ಧಾತ್ರೀಂ ಸ ಸರ್ವಸುಖಭಾಗ್ಭವೇತ್ ॥೨೦॥

ನವರಾತ್ರವ್ರತಂ ಕುರ್ಯಾನ್ನರನಾರೀಗಣಶ್ಚ ಯಃ ।
ವಾಂಛಿತಂ ಫಲಮಾಪ್ನೋತಿ ಸರ್ವದಾ ಭಕ್ತಿತತ್ಪರಃ ॥೨೧॥

ಆಶ್ವಿನೇ ಶುಕ್ಲಪಕ್ಷೇ ತು ನವರಾತ್ರವ್ರತಂ ಶುಭಂ ।
ಕರೋತಿ ಭಾವಸಂಯುಕ್ತಃ ಸರ್ವಾನ್ಕಾಮಾನವಾಪ್ನುಯಾತ್ ॥೨೧॥

ವಿಧಿವನ್ಮಂಡಲಂ ಕೃತ್ವಾ ಪೂಜಾಸ್ಥಾನಂ ಪ್ರಕಲ್ಪಯೇತ್ ।
ಕಲಶಂ ಸ್ಥಾಪಯೇತ್ತತ್ರ ವೇದಮಂತ್ರವಿಧಾನತಃ ॥೨೩॥

---

ಬ್ರಾಹ್ಮಣನೂ, ಕ್ಷತ್ರಿಯನೂ, ವೈಶ್ಯನೂ, ಶೂದ್ರನೂ ಯಾರೇ ಆಗಲಿ ಭಕ್ತಿಯಿಂದ ಜಗನ್ಮಾತೆಯನ್ನು ಪೂಜಿಸಿದರೆ, ಅವನು ಸಕಲ ವಿಧವಾದ ಸೌಖ್ಯಗಳನ್ನೂ ಹೊಂದುವನು. ॥೨೦॥

ಹೆಂಗುಸಾಗಲಿ, ಗಂಡಸಾಗಲಿ ಮನುಷ್ಯರ ಗುಂಪಿಗೆ ಸೇರಿದವರೆಲ್ಲರೂ ನವರಾತ್ರವ್ರತವನ್ನು ಭಕ್ತಿಯುಳ್ಳವರಾಗಿ ನಿಯಮದಿಂದ ನಡೆಯಿಸಬೇಕು. ಭಕ್ತಿಯಿಂದ ಹೀಗೆ ಆರಾಧಿಸಿದರೆ ಅವರು ಯಾವಾಗಲೂ ತಾವು ಅಪೇಕ್ಷೆ ಮಾಡಿದಂತೆ ಫಲವನ್ನು ಹೊಂದುವರು. ॥೨೧॥

ಆಶ್ವಯುಜಮಾಸದ ಶುಕ್ಲಪಕ್ಷದಲ್ಲಿ ಮಂಗಳಕರವಾದ ನವರಾತ್ರವ್ರತವನ್ನು ದೇವಿಯ ಪ್ರೀತಿಸಂಪಾದನೆಗಾಗಿ, ದೇವಿಯ ವಿಷಯದಲ್ಲಿ ಸರಿಯಾದ ಅಭಿಪ್ರಾಯದಿಂದ ಆಚರಿಸುವವನು ಎಲ್ಲ ವಿಧವಾದ ಇಷ್ಟಾರ್ಥಗಳನ್ನೂ ಹೊಂದುವನು. ॥೨೨॥

ನವರಾತ್ರವ್ರತವನ್ನು ಮಾಡಬೇಕೆಂದು ಹೇಳಿದಂತೆ ಆ ವ್ರತವನ್ನು ಆಚರಿಸುವ ಕ್ರಮವನ್ನೂ ಋಷಿಯು ಉಪದೇಶ ಮಾಡುವನು. ಪರಿಶುದ್ಧವಾದ ಮಣ್ಣಿನಿಂದ ಚತುರಶ್ರವಾದ ಮಂಡಲವನ್ನು ಮಾಡಿ, ಅಲ್ಲಿ ಪೂಜೆಯನ್ನು ನಡೆಸುವ ಸ್ಥಳವನ್ನು ಗೊತ್ತುಮಾಡಬೇಕು. ಆ ಪ್ರದೇಶದಲ್ಲಿ ವೇದಮಂತ್ರಗಳ ವಿಧಿಗೆ ಅನುಸಾರವಾಗಿ ಕಲಶವನ್ನು ಸ್ಥಾಪಿಸಬೇಕು. ॥೨೩॥

ಯಂತ್ರಂ ಸುರುಚಿರಂ ಕೃತ್ವಾ ಸ್ಥಾಪಯೇತ್ಕಲಶೋಪರಿ ।
ವಾಸಯಿತ್ವಾ ಯವಾಂಶ್ಚಾರೂನ್ಪಾರ್ಶ್ವತಃ ಪರಿವರ್ತಿತಾನ್ ॥೨೪॥

ಕೃತ್ವೋಪರಿ ವಿತಾನಂ ಚ ಪುಷ್ಪಮಾಲಾಸಮಾವೃತಂ ।
ಧೂಪದೀಪಸುಸಂಯುಕ್ತಂ ಕರ್ತವ್ಯಂ ಚಂಡಿಕಾಗೃಹಂ ॥೨೫॥

ತ್ರಿಕಾಲಂ ತತ್ರ ಕರ್ತವ್ಯಾ ಪೂಜಾ ಶಕ್ತ್ಯನುಸಾರತಃ ।
ವಿತ್ತಶಾಠ್ಯಂ ನ ಕರ್ತವ್ಯಂ ಚಂಡಿಕಾಯಾಶ್ಚ ಪೂಜನೇ ॥೨೬॥

ಧೂಪೈರ್ದೀಪೈಃ ಸುನೈವೇದ್ಯೈಃ ಫಲಪುಷ್ಪೈರನೇಕಶಃ ।
ಗೀತವಾದ್ಯೈಃ ಸ್ತೋತ್ರಪಾಠೈರ್ವೇದಪಾರಾಯಣೈಸ್ತಥಾ ॥೨೭॥

ಉತ್ಸವಸ್ತತ್ರ ಕರ್ತವ್ಯೋ ನಾನಾವಾದಿತ್ರಸಂಯುತೈಃ ।
ಕನ್ಯಕಾನಾಂ ಪೂಜನಂ ಚ ವಿಧೇಯಂ ವಿಧಿಪೂರ್ವಕಂ ॥೨೮॥

---

ಈ ಪ್ರದೇಶದಲ್ಲಿ ಹಿಂದೆ ಹೇಳಿದಂತೆ ಸಿದ್ಧಮಾಡಿದ ಯಂತ್ರವನ್ನು ಕಲಶದಮೇಲೆ ಇರಿಸಿ, ಕಲಶದ ಸುತ್ತಲೂ ಚನ್ನಾಗಿರುವ ಗೋಧಿಯನ್ನು ಸುರಿಯಬೇಕು. ॥೨೪॥

ಕಲಶದ ಮೇಲುಗಡೆಯಲ್ಲಿ ಚಪ್ಪರವನ್ನು ಹಾಕಿ ಹೂವಿನ ಹಾರವೇ ಮೊದಲಾದವುಗಳಿಂದ ಮೇಲುಕಟ್ಟನ್ನು ಮಾಡಬೇಕು. ಧೂಪ, ದೀಪ ಇವುಗಳಿಂದ ಕೂಡಿರುವಂತೆ ಚಂಡಿಕಾದೇವಿಯ ಪೂಜಾಗೃಹವನ್ನು ನಿರ್ಮಿಸಬೇಕು. ॥೨೫॥

ತನ್ನ ಸಾಮರ್ಥ್ಯಕ್ಕೆ ಮೀರದಂತೆ ಆ ಪೂಜಾಗೃಹದಲ್ಲಿ ಮೂರು ಕಾಲದಲ್ಲಿಯೂ ಚಂಡಿಕಾದೇವಿಯ ಪೂಜೆಯನ್ನು ಮಾಡಬೇಕು. ಚಂಡಿಕಾದೇವಿಯ ಪೂಜೆಯ ವಿಷಯದಲ್ಲಿ ತನ್ನ ಐಶ್ವರ್ಯಕ್ಕೆ ತಕ್ಕಂತೆ ದುಡ್ಡನ್ನು ವೆಚ್ಚಮಾಡಲು ಹಿಂಜರಿಯಬಾರದು. ॥೨೬॥

ಚಂಡಿಕಾದೇವಿಯ ಉತ್ಸವವನ್ನು ಧೂಪ, ದೀಪ, ನೈವೇದ್ಯ, ಹಣ್ಣು, ಹೂವು, ಸಂಗೀತ, ವಾದ್ಯಗಳು, ಸ್ತೋತ್ರಪಾಠಗಳು, ವೇದಪಾಠಗಳು, ವೇದಪಾರಾಯಣ, ಅನೇಕವಿಧವಾದ ವಾದ್ಯಗಳು ಇವುಗಳಿಂದ ವಿಜೃಂಭಣೆಯಾಗಿ ನಡೆಸಬೇಕು. ॥೨೭॥

ಉತ್ತಮವಾದ ಸುಗಂಧದ್ರವ್ಯಗಳು, ಆಭರಣಗಳು, ವಸ್ತ್ರಗಳು, ಅನೇಕವಿಧವಾದ ತಿನ್ನುವ ಪದಾರ್ಥಗಳು, ಸುವಾಸನೆಯಿಂದ ಕೂಡಿರುವ ತೈಲ, ಮನಸ್ಸಿಗೆ

ಚಂದನೈರ್ಭೂಷಣೈರ್ವಸ್ತ್ರೈಃಭಕ್ಷ್ಯೈಶ್ಚ ವಿವಿಧೈಸ್ತಥಾ ।
ಸುಗಂಧತೈಲಮಾಲ್ಯೈಶ್ಚ ಮನಸೋ ರುಚಿಕಾರಕೈಃ ॥೨೯॥

ಏವಂ ಸಂಪೂಜನಂ ಕೃತ್ವಾ ಹೋಮಂ ಮಂತ್ರವಿಧಾನತಃ ।
ಅಷ್ಟಮ್ಯಾಂ ವಾ ನವಮ್ಯಾಂ ವಾ ಕಾರಯೇದ್ವಿಧಿಪೂರ್ವಕಂ ॥೩೦॥

ಬ್ರಾಹ್ಮಣಾನ್ಭೋಜಯೇತ್ಪಶ್ಚಾತ್ಪಾರಣಂ ದಶಮೀದಿನೇ ।
ಕರ್ತವ್ಯಂ ಶಕ್ತಿತೋ ದಾನಂ ದೇಯಂ ಭಕ್ತಿಪರೈರ್ನೃಪೈಃ ॥೩೧॥

ಏವಂ ಯಃ ಕುರುತೇ ಭಕ್ತ್ಯಾ ನವರಾತ್ರವ್ರತಂ ನರಃ ।
ನಾರೀ ವಾ ಸಧವಾ ಭಕ್ತ್ಯಾ ವಿಧವಾ ವಾ ಪತಿವ್ರತಾ ॥೩೨॥

---

ಹರ್ಷವನ್ನುಂಟುಮಾಡುವ ಹೂವಿನ ಮಾಲೆಗಳು ಇವೇ ಮೊದಲಾದವುಗಳಿಂದ ಶಾಸ್ತ್ರಕ್ರಮದಿಂದ ಕುಮಾರೀಪೂಜೆಯನ್ನು ಮಾಡಬೇಕು. ಈ ಕ್ರಮವು ಮೂರನೆಯ ಸ್ಕಂಧದಲ್ಲಿ ಹೇಳಲ್ಪಟ್ಟಿರುತ್ತದೆ. ||೨೮-೨೯||

ಹೀಗೆ ಶಾಸ್ತ್ರಕ್ರಮದಿಂದ ಕನ್ಯಕಾಪೂಜೆಯನ್ನು ಮಾಡಿದನಂತರ ಮಂತ್ರೋಕ್ತಕ್ರಮಕ್ಕನುಸಾರವಾಗಿ ಅಷ್ಟಮಿಯಲ್ಲಾಗಲಿ, ಅಥವಾ ನವಮಿಯ ದಿವಸದಲ್ಲಾಗಲಿ, ಹಿಂದೆ ಹೇಳಿದ ದ್ರವ್ಯಗಳಿಂದ ಹೋಮವನ್ನು ಮಾಡಬೇಕು. ||೩೦||

ಅನಂತರದಲ್ಲಿ ದಶಮಿಯ ದಿವಸದಲ್ಲಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದ ನಂತರ ತಾನು ಪಾರಣೆಯನ್ನು ಮಾಡಬೇಕು. ಭಕ್ತಿಯಿಂದ ವ್ರತವನ್ನು ಆಚರಿಸುವ ಮಹಾರಾಜರು ತಮ್ಮ ತಮ್ಮ ಶಕ್ತಿಗನುಸಾರವಾಗಿ ದಾನಗಳನ್ನು ಮಾಡಬೇಕು. ||೩೧||

ಪತಿವ್ರತೆಯಾದ ಹೆಂಗುಸಾಗಲಿ, ಪತಿಯಿಲ್ಲದಿರುವ ಹೆಂಗುಸಾಗಲಿ, ಮತ್ತಾವ ಸ್ತ್ರೀಯಾಗಲಿ, ಅಥವಾ ಪುರುಷನಾಗಲಿ ಭಕ್ತಿಯಿಂದ ವಿಧಿಪೂರ್ವಕವಾಗಿ ನವರಾತ್ರಿ ವ್ರತವನ್ನು ಆಚರಿಸಿದಲ್ಲಿ, ಅವರು ಈ ಲೋಕದಲ್ಲಿ ಯಥೇಚ್ಛವಾಗಿ ಭೋಗಗಳನ್ನು ಅನುಭವಿಸುವರು. ||೩೨||

ಇಹ ಲೋಕೇ ಸುಖಂ ಭೋಗಾನ್ಪ್ರಾಪ್ನೋತಿ ಮನಸೇಪ್ಸಿತಾನ್ ।
ದೇಹಾಂತೇ ಪರಮಂ ಸ್ಥಾನಂ ಪ್ರಾಪ್ನೋತಿ ವ್ರತತತ್ಪರಃ ॥೩೩॥

ಜನ್ಮಾಂತರೇಽಂಬಿಕಾಭಕ್ತಿರ್ಭವತ್ಯವ್ಯಭಿಚಾರಿಣೀ ।
ಜನ್ಮೋತ್ತಮಕುಲೇ ಪ್ರಾಪ್ಯ ಸದಾಚಾರೋ ಭವೇದ್ಧಿ ಸಃ ॥೩೪॥

ನವರಾತ್ರವ್ರತಂ ಪ್ರೋಕ್ತಂ ವ್ರತಾನಾಮುತ್ತಮಂ ವ್ರತಂ ।
ಆರಾಧನಂ ಶಿವಾಯಾಸ್ತು ಸರ್ವಸೌಖ್ಯಕರಂ ಪರಂ ॥೩೫॥

ಅನೇನ ವಿಧಿನಾ ರಾಜನ್ ಸಮಾರಾಧಯ ಚಂಡಿಕಾಂ ।
ಜಿತ್ವಾ ರಿಪೂನಸ್ಖಲಿತಂ ರಾಜ್ಯಂ ಪ್ರಾಪ್ಸ್ಯಸ್ಯನುತ್ತಮಂ ॥೩೬॥

ಸುಖಂ ಚ ಪರಮಂ ಭೂಪ ದೇಹೇಽಸ್ಮಿನ್ಸ್ವಗೃಹೇ ಪುನಃ ।
ಪುತ್ರದಾರಾನ್ಸಮಾಸಾದ್ಯ ಲಪ್ಸ್ಯಸೇ ನಾತ್ರ ಸಂಶಯಃ ॥೩೭॥

---

ಬಳಿಕ ದೇಹಾವಸಾನದಲ್ಲಿ ಆ ವ್ರತನಿಷ್ಠನು ಉತ್ತಮ ಗತಿಯನ್ನು ಹೊಂದು ವುದಲ್ಲದೆ ಮುಂದಿನ ಜನ್ಮದಲ್ಲಿ ಅವನು ದೇವಿಯಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿ ಉತ್ತಮವಾದ ಕುಲದಲ್ಲಿ ಹುಟ್ಟಿ ಸದಾಚಾರಸಂಪನ್ನನಾಗುವನು. ॥೩೩-೩೪॥

ದೇವಿಯ ಸಂಬಂಧಿಯಾದ, ಎಲ್ಲರಿಗೂ ಸರ್ವವಿಧವಾದ ಸೌಖ್ಯವನ್ನುಂಟು ಮಾಡುವ, ಉತ್ಕೃಷ್ಟವಾದ, ಎಲ್ಲ ವ್ರತಗಳಿಗಿಂತಲೂ ಉತ್ತಮವಾದ ನವರಾತ್ರವ್ರತ ವನ್ನು ಈ ರೀತಿಯಾಗಿ ಹೇಳಿದ್ದಾಯಿತು. ॥೩೫॥

ಎಲೈ ರಾಜನೇ, ನಾನು ಹೇಳಿದ ಕ್ರಮದಿಂದ ಚಂಡಿಕಾದೇವಿಯ ಆರಾಧನೆ ಯನ್ನು ಮಾಡುವವನಾಗು. ಹೀಗೆ ನೀನು ದೇವಿಯ ಆರಾಧನೆಯನ್ನು ಮಾಡಿದಲ್ಲಿ ನಿನ್ನ ಶತ್ರುಗಳನ್ನು ತಪ್ಪದೆ ಜಯಿಸಿ ಉತ್ತಮವಾದ ರಾಜ್ಯವನ್ನು ಹೊಂದುವೆ. ॥೩೬॥

ಎಲೈ ರಾಜನೇ, ನೀನು ನಿನ್ನ ಹೆಂಡಿರುಮಕ್ಕಳನ್ನು ಹೊಂದಿ ನಿನ್ನ ಮನೆ ಯಲ್ಲಿ ಈ ದೇಹದಿಂದಲೇ ಉತ್ತಮವಾದ ಸುಖವನ್ನು ಅನುಭವಿಸುವೆ. ಇದರಲ್ಲಿ ನೀನು ಸ್ವಲ್ಪವೂ ಸಂಶಯಪಡಬೇಡ. ॥೩೭॥

ವೈಶ್ಯೋತ್ತಮ ತ್ವಮೇವಾದ್ಯ ಸಮಾರಾಧಯ ಕಾಮದಾಂ ।
ದೇವೀಂ ವಿಶ್ವೇಶ್ವರೀಂ ಮಾಯಾಂ ಸೃಷ್ಟಿಸಂಹಾರಕಾರಿಣೀಂ ॥೩೮॥

ಸ್ವಜನಾನಾಂ ಚ ಮಾನ್ಯಸ್ತ್ವಂ ಭವಿಷ್ಯಸಿ ಗೃಹೇ ತತಃ ।
ಸುಖಂ ಸಾಂಸಾರಿಕಂ ಪ್ರಾಪ್ಯ ಯಥಾಭಿಲಷಿತಂ ಪುನಃ ॥೩೯॥

ದೇವೀಲೋಕೇ ಶುಭೇ ವಾಸೋ ಭವಿತಾ ತೇ ನ ಸಂಶಯಃ ।
ನಾಽಽರಾಧಿತಾ ಭಗವತೀ ಯೈಸ್ತೇ ನರಕಭಾಗಿನಃ ॥೪೦॥

ಇಹ ಲೋಕೇಽತಿದುಃಖಾರ್ತಾ ನಾನಾರೋಗೈಃ ಪ್ರಪೀಡಿತಾಃ ।
ಭವಂತಿ ಮಾನವಾ ರಾಜನ್ ಶತ್ರುಭಿಶ್ಚ ಪರಾಜಿತಾಃ ॥೪೧॥

---

ಎಲೈ ವೈಶ್ಯೋತ್ತಮನೇ, ನೀನೂ ಸಹ ನಿನ್ನ ಇಷ್ಟಗಳೆಲ್ಲವನ್ನೂ ಕೊಡುವವಳಾದ, ಪ್ರಪಂಚಕ್ಕೆಲ್ಲಕ್ಕೂ ಅಧಿಪತಿಯಾದ, ಸೃಷ್ಟಿಸಂಹಾರಗಳನ್ನು ಮಾಡುವವಳಾದ ಮಾಯಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವ ದೇವಿಯನ್ನು ಆರಾಧನೆಮಾಡು. ॥೩೮॥

ನೀನು ದೇವಿಯ ಆರಾಧನೆಯನ್ನು ಮಾಡಿದಲ್ಲಿ ನಿನ್ನ ಇಷ್ಟಪ್ರಕಾರವಾಗಿ ಪುನಃ ನಿನ್ನ ಮನೆಯನ್ನು ಹೊಂದಿ, ಸಂಸಾರಸುಖವನ್ನು ಅನುಭವಿಸುತ್ತಾ ನಿನ್ನ ಜನಗಳಲ್ಲಿ ಗಣ್ಯನಾಗಿ ಗೌರವಿಸಲ್ಪಡುವೆ. ॥೩೯॥

ನೀನು ಮಂಗಳಕರವಾದ ದೇವಿಯ ಲೋಕದಲ್ಲಿ ವಾಸವನ್ನು ಹೊಂದುತ್ತೀಯೆ. ಈ ವಿಷಯದಲ್ಲಿ ಸಂಶಯ ಪಡಬೇಡ. ಪೂಜ್ಯಳಾದ ದೇವಿಯನ್ನು ಯಾರು ಪೂಜಿಸುವುದಿಲ್ಲವೋ ಅವರು ನರಕವನ್ನು ಹೊಂದುವರು. ॥೪೦॥

ದೇವಿಯ ಪೂಜೆಯನ್ನು ಮಾಡದಿರುವವರು ಈ ಲೋಕದಲ್ಲಿ ಬಹಳ ದುಃಖಕ್ಕೆ ಈಡಾಗಿ, ಸಂಕಟಪಡುವವರಾಗಿ, ಅನೇಕ ವಿಧವಾದ ರೋಗಗಳಿಂದ ಪೀಡಿತರಾಗಿ ಇರುವರು. ಮತ್ತು ಇವರಿಗೆ ಶತ್ರುಗಳಿಂದ ಹೆಚ್ಚಾದ ತೊಂದರೆಯುಂಟಾಗುವುದು. ಇವರು ಪತ್ನೀಪುತ್ರಾದಿಗಳಿಂದ ರಹಿತರಾಗಿಯೂ, ದುರಾಸೆಯುಳ್ಳವರಾಗಿಯೂ, ದಡ್ಡರಾಗಿಯೂ ಇರುವರು. ॥೪೧॥

ನಿಷ್ಕಲತ್ರಾ ಹ್ಯಪುತ್ರಾಶ್ಚ ತೃಷ್ಣಾರ್ತಾಃ ಸ್ತಬ್ಧಬುದ್ಧಯಃ ।
ಬಿಲ್ವೀದಲೈಃ ಕರವೀರೈಃ ಶತಪತ್ರೈಶ್ಚ ಚಂಪಕೈಃ ॥೪೨॥

ಅರ್ಚಿತಾ ಜಗತಾಂ ಧಾತ್ರೀ ಯೈಸ್ತೇಽತೀವವಿಲಾಸಿನಃ ।
ಭವಂತಿ ಕೃತಪುಣ್ಯಾಸ್ತೇ ಶಕ್ತಿಭಕ್ತಿಪರಾಯಣಾಃ ॥೪೩॥

ಧನವಿಭವಸುಖಾಢ್ಯಾ ಮಾನವಾ ಮಾನವಂತಃ
ಸಕಲಗುಣಗಣಾನಾಂ ಭಾಜನಂ ಭಾರತೀಶಾಃ ।

ನಿಗಮಪಠಿತಮಂತ್ರೈಃ ಪೂಜಿತಾ ಯೈರ್ಭವಾನೀ
ನೃಪತಿತಿಲಕಮುಖ್ಯಾಸ್ತೇ ಭವಂತೀಹ ಲೋಕೇ ॥೪೪॥

ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ
ಚತುಸ್ತ್ರಿಂಶೋಽಧ್ಯಾಯಃ

---

ಯಾವ ಜನಗಳು ಬಿಲ್ವಪತ್ರೆ, ಕಣಿಗಲೆ ಹೂವು, ತಾವರೆಯ ಹೂವು, ಸಂಪಗೆಯ ಹೂವು ಇವುಗಳಿಂದ ಜಗನ್ಮಾತೆಯಾದ ದೇವಿಯನ್ನು ಪೂಜಿಸುವರೋ ಅವರು ಶಕ್ತಿದೇವಿಯಲ್ಲಿ ಭಕ್ತಿಯುಳ್ಳವರಾಗಿ, ಪುಣ್ಯವಂತರಾಗಿ ಸುಖದಿಂದ ಬಾಳುವರು. ||೪೨-೪೩||

ಯಾವ ಮನುಷ್ಯರು ವೇದಮಂತ್ರಗಳಿಂದ ದೇವಿಯನ್ನು ಪೂಜಿಸುವರೋ ಅವರು ಧನ, ವಿಭವ, ಸುಖ ಇವುಗಳಿಂದ ಕೂಡಿದವರಾಗಿ, ಮರ್ಯಾದೆಯುಳ್ಳವರಾಗಿ ಸಮಸ್ತಗುಣಗಳ ಸಮೂಹದಿಂದ ತುಂಬಿದವರಾಗಿರುವರು. ಮತ್ತು ಇವರು ಈ ಲೋಕದಲ್ಲಿ ರಾಜರಲ್ಲಿಯೂ ಶ್ರೆಷ್ಠರಾಗಿ ಗೌರವಿಸಲ್ಪಡುವರು. ||೪೪||

ಇಲ್ಲಿಗೆ ದೇವೀಭಾಗವತ ಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪಂಚಮಸ್ಕಂಧೇ

|| ಪಂಚತ್ರಿಂಶೋಽಧ್ಯಾಯಃ ||

### ಮೂವತ್ತೈದನೆಯ ಅಧ್ಯಾಯವು

|| ವ್ಯಾಸ ಉವಾಚ ||

**ಇತಿ ತಸ್ಯ ವಚಃ ಶ್ರುತ್ವಾ ದುಃಖಿತೌ ವೈಶ್ಯಪಾರ್ಥಿವೌ।**
**ಪ್ರಣಿಪತ್ಯ ಮುನಿಂ ಪ್ರೀತ್ಯಾ ಪ್ರಶ್ರಯಾವನತೌ ಭೃಶಂ ||೧||**

**ಹರ್ಷೇಣೋತ್ಫುಲ್ಲನಯನಾವೂಚತುರ್ವಾಕ್ಯಕೋವಿದೌ।**
**ಕೃತಾಂಜಲಿಪುಟೌ ಶಾಂತೌ ಭಕ್ತಿಪ್ರವಣಚೇತಸೌ ||೨||**

**ಭಗವನ್ಪಾವಿತಾವದ್ಯ ಶಾಂತೌ ದೀನೌ ಶುಚಾನ್ವಿತೌ।**
**ತವ ಸೂಕ್ತಸರಸ್ವತ್ಯಾ ಗಂಗಯೇವ ಭಗೀರಥಃ ||೩||**

---

ವ್ಯಾಸಋಷಿಯು ಹೇಳಿದನು— ಆ ಸುಮೇಧಾಋಷಿಯು ಹೀಗೆ ಹೇಳಿದ ದೇವಿಯ ಆರಾಧನಾಕ್ರಮವನ್ನು ದುಃಖಿತರಾಗಿದ್ದ ಸಮಾಧಿ ಎಂಬ ವೈಶ್ಯನೂ ಸುರಥನೆಂಬ ರಾಜನೂ ಸಹ, ಕೇಳಿದವರಾಗಿ, ಆ ಋಷಿಗೆ ಬಹಳ ವಿನಯದಿಂದಲೂ, ಪ್ರೀತಿಯಿಂದಲೂ ಸಹ ನಮಸ್ಕರಿಸಿದರು. ಚನ್ನಾಗಿ ಮಾತನಾಡುವುದರಲ್ಲಿ ಬುದ್ಧಿವಂತರಾದ ಅವರಿಬ್ಬರೂ ಭಕ್ತಿಗೆ ಅಧೀನವಾದ ಮನಸ್ಸುಳ್ಳವರಾಗಿ, ಸಂತೋಷದಿಂದ ಅರಳಿದ ಕಣ್ಣುಗಳುಳ್ಳವರಾಗಿ, ಬೊಗಸೆಯನ್ನು ಕಟ್ಟಿಕೊಂಡು, ಉಪಶಾಂತರಾಗಿ ಸುಮೇಧಾಋಷಿಯಿಂದ ದೇವಿಯ ಮಂತ್ರದ ಉಪದೇಶವನ್ನು ತಾವು ತೆಗೆದುಕೊಳ್ಳುವುದಕ್ಕಾಗಿ ಪ್ರಾರ್ಥಿಸಲು ಹೀಗೆ ಮಾತನಾಡಿದರು. ||೨||

ಓ ಪೂಜ್ಯನಾದ ಋಷಿಯೇ, ಈಗ ದುಃಖದ ಸಂಕಟದಿಂದ ವ್ಯಸನವುಳ್ಳವರಾಗಿದ್ದ ನಾವಿಬ್ಬರೂ, ಭಗೀರಥರಾಜನು ಗಂಗೆಯಿಂದ ಪವಿತ್ರನಾದಂತೆ, ನಿನ್ನ ಪಾವನವಾದ ಮಾತಿನಿಂದ ಪರಿಶುದ್ಧರಾಗಿ ಮಾಡಲ್ಪಟ್ಟಿರುತ್ತೇವೆ. ||೩||

ಸಾಧವಃ ಸಂಭವಂತೀಹ ಪರೋಪಕೃತಿತತ್ಪರಾಃ ।
ಅಕೃತ್ರಿಮಗುಣಾ ರಾಮಾಃ ಸುಖದಾಃ ಸರ್ವದೇಹಿನಾಂ ॥೪॥

ಪೂರ್ವಪುಣ್ಯ ಪ್ರಸಂಗೇನ ಪ್ರಾಪ್ತೋಽಯಮಾಶ್ರಮಃ ಶುಭಃ ।
ತವಾಽಽವಾಭ್ಯಾಂ ಮಹಾಭಾಗ ಮಹಾದುಃಖವಿನಾಶಕಃ ॥೫॥

ಭವಂತಿ ಮಾನವಾ ಭೂಮೌ ಬಹವಃ ಸ್ವಾರ್ಥತತ್ಪರಾಃ ।
ಪರಾರ್ಥಸಾಧನೇ ದಕ್ಷಾಃ ಕೇಚಿತ್ತ್ವಾದೃಶಾಃ ॥೬॥

ದುಃಖಿತೋಽಹಂ ಮುನಿಶ್ರೇಷ್ಠ ವೈಶ್ಯೋಽಯಂ ಜಾತಿದುಃಖಿತಃ ।
ಉಭೌ ಸಂಸಾರಸಂತಪ್ತೌ ತವಾಶ್ರಮಪದೇ ಮುದಾ ॥೭॥

ದರ್ಶನಾದೇವ ಹೇ ವಿದ್ವನ್ ಗತಂ ದುಃಖಮಿಹಾವಯೋಃ ।
ದೇಹಜಂ ಮಾನಸಂ ವಾಕ್ಯಶ್ರವಣಾದೇವ ಸಾಂಪ್ರತಂ ॥೮॥

---

ಇತರರಿಗೆ ಉಪಕಾರವನ್ನು ಮಾಡುವುದರಲ್ಲಿ ಆಸಕ್ತರಾಗಿಯೂ, ಕಪಟವಿಲ್ಲದಿರುವ ಒಳ್ಳೆಯ ಗುಣಗಳಿಂದ ಮನೋಹರರಾಗಿಯೂ, ಎಲ್ಲ ಪ್ರಾಣಿಗಳಿಗೂ ಸುಖವನ್ನುಂಟುಮಾಡುವವರಾಗಿಯೂ ಇರುವ ನಿನ್ನಂತಹ ಸತ್ಪುರುಷರು ಈ ಪ್ರಪಂಚದಲ್ಲಿ ಎಲ್ಲಿಯೋ ಒಬ್ಬರು ಇರುವರು, ಎಂಬುದು ಈಗ ಗೊತ್ತಾಯಿತು ! ॥೪॥

ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯದ ಮಹಿಮೆಯಿಂದ ಈ ಆಶ್ರಮದ ಸಹವಾಸವು ನಮ್ಮಿಬ್ಬರಿಗೂ ಸಿಕ್ಕಿತು. ಓ ಪುಣ್ಯವಂತನಾದ ಋಷಿಯೇ, ನಿನ್ನ ಈ ಆಶ್ರಮವು ನಮ್ಮಿಬ್ಬರಿಗೂ ಒದಗಿದ್ದ ಅಪಾರವಾದ ದುಃಖವನ್ನು ನಾಶಪಡಿಸುವುದಾಗಿರುವುದು. ॥೫॥

ಓ ಸುಮೇಧಾಋಷಿಯೇ, ಈ ಭೂಮಿಯಲ್ಲಿ ತಮ್ಮ ತಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳುವುದರಲ್ಲಿ ಆಸಕ್ತರಾಗಿರುವ ಮನುಷ್ಯರು ಬಹಳ ಜನರಿರುವರು. ಇನ್ನೊಬ್ಬರ ಕಾರ್ಯವನ್ನು ಸಾಧಿಸುವುದರಲ್ಲಿ ಸಮರ್ಥರಾದ ನಿನ್ನಂಥವರು ಎಲ್ಲಿಯೋ ಕೆಲವರಿರುವರು. ॥೬॥

ಓ ಋಷಿಶ್ರೇಷ್ಠನೇ, ನಾನು ದುಃಖವುಳ್ಳವನಾಗಿರುತ್ತೇನೆ. ಈ ವೈಶ್ಯನೂ ಬಹಳ ದುಃಖವುಳ್ಳವನು. ನಾವಿಬ್ಬರೂ ಸಂಸಾರದ ದುಃಖದಿಂದ ಸಂಕಟವುಳ್ಳವರಾಗಿ ನಿಮ್ಮ ಆಶ್ರಮದ ಪ್ರದೇಶದಲ್ಲಿ ಬಂದಿದ್ದು ಸಂತೋಷವುಳ್ಳವರಾದೆವು. ಓ

ಧನ್ಯಾವಾವಾಂ ಕೃತಕೃತ್ಯೌ ಜಾತೌ ಸೂಕ್ತಿಸುಧಾರಸಾತ್ ।
ಪಾವಿತೌ ಭವತಾ ಬ್ರಹ್ಮನ್ ಕೃಪಯಾ ಕರುಣಾರ್ಣವ ॥೯॥

ಗೃಹಾಣಾಸ್ಮತ್ಕರೌ ಸಾಧೋ ನಯ ಪಾರಂ ಭವಾರ್ಣವೇ ।
ಮಗ್ನೌ ಶ್ರಾಂತಾವಿತಿ ಜ್ಞಾತ್ವಾ ಮಂತ್ರದಾನೇನ ಸಾಂಪ್ರತಂ ॥೧೦॥

ತಪಃ ಕೃತ್ವಾಽತಿವಿಪುಲಂ ಸಮಾರಾಧ್ಯ ಸುಖಪ್ರದಾಂ ।
ಸಂಪ್ರಾಪ್ಯ ದರ್ಶನಂ ಭೂಯೋ ಯಾಸ್ಯಾವೋ ನಿಜಮಂದಿರಂ ॥೧೧॥

ವದನಾತ್ತವ ಸಂಪಾಪ್ರ ದೇವೀಮಂತ್ರ ನವಾಕ್ಷರಂ ।
ಸ್ಮರಣಂ ಚ ಕರಿಷ್ಯಾವೋ ನಿರಾಹಾರೌ ಧೃತವ್ರತೌ ॥೧೨॥

---

ಓ ಜ್ಞಾನಿಯಾದ ಋಷಿಯೇ, ನಿನ್ನ ದರ್ಶನಮಾತ್ರದಿಂದಲೇ ನಮ್ಮಿಬ್ಬರ ದುಃಖವೂ ಇಲ್ಲಿ ಶಾಂತವಾಯಿತು. ಈಗ ನಿನ್ನ ಮಾತನ್ನು ಕೇಳಿದ ಮೇಲೆ ನಮ್ಮ ಶರೀರ ಸಂಬಂಧವಾದ ಮತ್ತು ಮಾನಸಿಕವಾದ ದುಃಖವೂ ಸಹ ನಾಶವನ್ನು ಹೊಂದಿತು. ||೭-೮||

ಓ ಕರುಣಾಸಮುದ್ರನೇ, ಬ್ರಹ್ಮಋಷಿಯೇ, ನಾವಿಬ್ಬರೂ, ನೀನು ದಯ ಮಾಡಿ ಹೇಳಿರುವ ಮಾತನ್ನು ಕೇಳಿ ಪುಣ್ಯವಂತರೂ ಸಹ ಆದೆವು. ನಿನ್ನ ದಯ ದಿಂದ ಪರಿಶುದ್ಧರಾಗಿ ಮಾಡಲ್ಪಟ್ಟೆವು. ||೯||

ಓ ಸತ್ಪುರುಷನೇ, ನಾವಿಬ್ಬರೂ ಆಯಾಸಪಟ್ಟಿರುವರೆಂದೂ, ಸಂಸಾರಸಮುದ್ರ ದಲ್ಲಿ ಮುಳುಗಿ ಬಳಲಿದವರೆಂದೂ ತಿಳಿದು ಕೈಹಿಡಿದು ನಮ್ಮನ್ನು ದಾಟಿಸಿ ದಡವನ್ನು ಹತ್ತಿಸುವುದಕ್ಕಾಗಿ ಮಂತ್ರವನ್ನು ಉಪದೇಶ ಮಾಡಿ ಕೊಡುವುದರಿಂದ ಈಗ ನಮ್ಮನ್ನೂ ಕಾಪಾಡು. ||೧೦||

ಬಹಳ ಹೆಚ್ಚಾಗಿ ತಪಸ್ಸನ್ನು ಮಾಡಿ, ಸುಖವನ್ನು ಕೊಡುವವಳಾದ ದೇವಿ ಯನ್ನು ಆರಾಧಿಸಿ, ದೇವಿಯ ದರ್ಶನವನ್ನು ಮಾಡಿದ ಬಳಿಕ ನಮ್ಮ ನಮ್ಮ ಮನೆ ಗಳಿಗೆ ಪುನಃ ಹೋಗುವೆವು. ||೧೧||

ನಿನ್ನ ಮುಖದಿಂದ ನವಾಕ್ಷರದಿಂದ ಕೂಡಿರುವ ದೇವಿಯ ಮಂತ್ರದ ಉಪ ದೇಶವನ್ನು ಹೊಂದಿ ವ್ರತವನ್ನು ಹಿಡಿದು, ಯಾವ ಆಹಾರವೂ ಇಲ್ಲದವರಾಗಿ ಮಂತ್ರಪುರಶ್ಚರಣೆಯನ್ನು ಮಾಡುವೆವು. ||೧೨||

|| ವ್ಯಾಸ ಉವಾಚ ||

**ಇತಿ ಸಂಚೋದಿತಸ್ತಾಭ್ಯಾಂ ಸುಮೇಧಾ ಮುನಿಸತ್ತಮಃ ।**
**ದದೌ ಮಂತ್ರಂ ಶುಭಂ ತಾಭ್ಯಾಂ ಧ್ಯಾನಬೀಜಪುರಸ್ಸರಂ ॥೧೩॥**

**ತೌ ಚ ಪ್ರಾಪ್ಯ ಮುನೇರ್ಮಂತ್ರಂ ಸಂಮಂತ್ರ್ಯ ಗುರುದೇವತೌ ।**
**ಜಗ್ಮತುರ್ವೈಶ್ಯರಾಜಾನೌ ನದೀತೀರಮನುತ್ತಮಂ ॥೧೪॥**

**ಏಕಾಂತೇ ವಿಜನೇ ಸ್ಥಾನೇ ಕೃತ್ವಾಽಽಸನಪರಿಗ್ರಹಂ ।**
**ಉಪವಿಷ್ಟೌ ಸ್ಥಿರಪ್ರಜ್ಞೌ ತಾವತೀವ ಕೃಶೋದರೌ ॥೧೫॥**

**ಮಂತ್ರಜಾಪ್ಯರತೌ ಶಾಂತೌ ಚರಿತ್ರತ್ರಯಪಾಠಕೌ ।**
**ನಿನ್ಯತುರ್ಮಾಸಮೇಕಂ ತು ತತ್ರ ಧ್ಯಾನಪರಾಯಣೌ ॥೧೬॥**

---

ವ್ಯಾಸಋಷಿಯು ಹೇಳಿದನು—ಆ ಸುಮೇಧಾ ಎಂಬ ಋಷಿಶ್ರೇಷ್ಠನು ಹೀಗೆ ಅವರಿಬ್ಬರಿಂದ ಪ್ರಾರ್ಥಿಸಿ ಪ್ರೇರಿಸಲ್ಪಟ್ಟವನಾಗಿ ಮಂಗಳಕರವಾದ ನವಾಕ್ಷರ ಮಂತ್ರವನ್ನು ಅವರಿಬ್ಬರಿಗೂ ಧ್ಯಾನ, ಕ್ರಮ, ಬೀಜಮಂತ್ರ ಇವುಗಳ ಜತೆಯಲ್ಲಿ ಉಪದೇಶ ಮಾಡಿದನು. ||೧೩||

ಅವರಿಬ್ಬರೂ ಋಷಿಯಿಂದ ಮಂತ್ರವನ್ನು ಹೊಂದಿದವರಾಗಿ, ಮಂತ್ರದ ಋಷಿ, ದೇವತಾ, ಛಂದಸ್ಸು, ಬೀಜ, ಶಕ್ತಿ ಇವೆಲ್ಲವನ್ನೂ ತಿಳಿದುಕೊಂಡು ಗುರುವಾದ ಸುಮೇಧಾಋಷಿಯನ್ನೂ ದೇವತೆಯನ್ನೂ ಸಹ ನಮಸ್ಕರಿಸಿ ಶ್ರೇಷ್ಠವಾದ ನದೀತೀರಕ್ಕೆ ಜಪವನ್ನು ಮಾಡಲು ಹೊರಟು ಹೋದರು. ||೧೪||

ಜನಸಂಚಾರವಿಲ್ಲದಿರುವ ರಹಸ್ಯವಾದ ಪ್ರದೇಶದಲ್ಲಿ, ಬಹಳಮಟ್ಟಿಗೆ ಕೃಶವಾದ ಹೊಟ್ಟೆಯುಳ್ಳವರಾದ, ಸ್ಥಿರವಾದ ಮನಸ್ಸುಳ್ಳವರಾದ ಅವರಿಬ್ಬರೂ ಆಸನವನ್ನು ಹಾಕಿಕೊಂಡು ಕೂತುಕೊಂಡರು. ||೧೫||

ಆ ಪ್ರದೇಶದಲ್ಲಿ ಅವರಿಬ್ಬರೂ ಧ್ಯಾನಮಾಡುವುದರಲ್ಲಿ ಆಸಕ್ತರಾಗಿ, ಉಪಶಾಂತರಾಗಿ, ಮಂತ್ರಜಪವನ್ನು ಮಾಡುವುದರಲ್ಲಿ ಆಸಕ್ತರಾಗಿ, ದೇವಿಯ ಚರಿತ್ರತ್ರಯವನ್ನು ಪಾರಾಯಣಮಾಡುತ್ತಾ ಒಂದು ತಿಂಗಳು ಕಾಲವನ್ನು ಹೀಗೆ ಅನುಷ್ಠಾನದಲ್ಲಿ ಕಳೆದರು. ||೧೬||

ತಯೋರ್ಮಾಸವ್ರತೇನೈವ ಜಾತಾ ಪ್ರೀತಿರನುತ್ತಮಾ ।
ಪಾದಾಂಬುಜೇ ಭವಾನ್ಯಾಸ್ತು ಸ್ಥಿರಾ ಬುದ್ಧಿಸ್ತಥಾಪ್ಯಲಂ ॥೧೭॥

ಕದಾಚಿತ್ಪಾದಯೋರ್ಗತ್ವಾ ಮುನೇಸ್ತಸ್ಯ ಮಹಾತ್ಮನಃ ।
ಕೃತಪ್ರಣಾಮಾವಾಗತ್ಯ ತಸ್ಥತುಶ್ಚ ಕುಶಾಸನೇ ॥೧೮॥

ನಾನ್ಯಕಾರ್ಯಪರೌ ಕ್ವಾಪಿ ಬಭೂವತುಃ ಕದಾಚನ ।
ದೇವೀಧ್ಯಾನಪರೌ ನಿತ್ಯಂ ಜಪಮಂತ್ರರತೌ ಸದಾ ॥೧೯॥

ಏವಂ ಜಾತೇ ತದಾ ಪೂರ್ಣೇ ತತ್ರ ಸಂವತ್ಸರೇ ನೃಪ ।
ಬಭೂವತುಃ ಫಲಾಹಾರಂ ತ್ಯಕ್ತ್ವಾ ಪರ್ಣಾಶನೌ ನೃಪ ॥೨೦॥

---

ಅವರಿಬ್ಬರಿಗೂ ಒಂದು ತಿಂಗಳು ಕಾಲ ವ್ರತವನ್ನು ಆಚರಿಸಿದ್ದರಿಂದ ಮಾತ್ರವೇ ದೇವಿಯ ಪಾದಕಮಲಗಳಲ್ಲಿ ಉತ್ತಮವಾದ ಭಕ್ತಿಯುಂಟಾಯಿತು. ಆ ಭಕ್ತಿಯು ಹುಟ್ಟಿದ್ದು ಮಾತ್ರವಲ್ಲದೆ ಬಹಳಮಟ್ಟಿಗೆ ಸ್ಥಿರವಾಯಿತು. ||೧೭||

ಹೀಗೆ ಇರುವಾಗ ಪ್ರತಿದಿನವೂ ಒಂದು ಕಾಲದಲ್ಲಿ ಮಹಾತ್ಮನಾದ ಸುಮೇಧಾ ಋಷಿಯ ಪಾದಗಳಿಗೆ ಅವರಿಬ್ಬರೂ ನಮಸ್ಕಾರ ಮಾಡಿ ಬಂದು ದರ್ಭಾಸನಗಳಲ್ಲಿ ಕೂತುಕೊಂಡು ಧ್ಯಾನಮಾಡುತ್ತಿದ್ದರು. ಪ್ರತಿದಿವಸವೂ ಗುರುವಿನ ದರ್ಶನವನ್ನು ಹಗಲಿನಲ್ಲಿ ಮಾಡಬೇಕೆಂದು ನಿಯಮವಿರುವುದರಿಂದ ಅಷ್ಟುಕಾಲ ಹೊರತು ಉಳಿದ ಕಾಲದಲ್ಲಿ ಜಪಧ್ಯಾನವನ್ನು ಮಾಡುತ್ತಿದ್ದರು. ||೧೮||

ಅವರಿಬ್ಬರೂ ಯಾವಾಗಲೂ, ಎಲ್ಲಿಯೂ ಬೇರೆ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಆದರೆ ಸರ್ವಕಾಲದಲ್ಲಿಯೂ ದೇವಿಯ ಸಂಬಂಧವಾದ ಮಂತ್ರವನ್ನು ಜಪಮಾಡುವುದರಲ್ಲಿಯೂ, ದೇವಿಯ ಧ್ಯಾನವನ್ನು ಮಾಡುವುದರಲ್ಲಿಯೂ ಸಹ ಆಸಕ್ತಿಯುಳ್ಳವರಾಗಿದ್ದರು. ||೧೯||

ಎಲೈ ಜನಮೇಜಯರಾಜನೇ, ಕೇಳು—ಆ ಸುಮೇಧಾಋಷಿಯ ಆಶ್ರಮದಲ್ಲಿ ಇವರಿಬ್ಬರೂ ಹೀಗೆ ದೇವಿಯ ಮಂತ್ರದ ಜಪ ಮತ್ತು ಧ್ಯಾನಗಳಲ್ಲಿ ಆಸಕ್ತರಾಗಿರುವಾಗ ಒಂದು ಸಂವತ್ಸರವು ಪೂರ್ತಿಯಾಗಿ ಕಳೆಯಿತು. ಆಗ ಅವರಿಬ್ಬರೂ ಹಣ್ಣುಗಳನ್ನು ತಿನ್ನುವುದನ್ನೂ ಬಿಟ್ಟು ಎಲೆಗಳನ್ನು ಮಾತ್ರ ತಿನ್ನುತ್ತಾ ಜಪಿಸುತ್ತಿರುವುದಕ್ಕೆ ಪ್ರಾರಂಭಿಸಿದರು. ||೨೦||

ವರ್ಷಮೇಕಂ ತಪಸ್ತತ್ರ ಚಕ್ರತುರ್ವೈಶ್ಯಪಾರ್ಥಿವೌ ।
ಶುಷ್ಕಪರ್ಣಾಶನೌ ದಾಂತೌ ಜಪಧ್ಯಾನಪರಾಯಣೌ ॥೨೧॥

ಪೂರ್ಣೇ ವರ್ಷದ್ವಯೇ ಜಾತೇ ಕದಾಚಿದ್ದರ್ಶನಂ ಚ ತೌ ।
ಪ್ರಾಪತುಃ ಸ್ವಪ್ನಮಧ್ಯೇ ತು ಭಗವತ್ಯಾ ಮನೋಹರಂ ॥೨೨॥

ರಕ್ತಾಂಬರಧರಾಂ ದೇವೀಂ ಚಾರುಭೂಷಣಭೂಷಿತಾಂ ।
ಕದಾಚಿನ್ನೃಪತಿಃ ಸ್ವಪ್ನೇಽಪ್ಯಪಶ್ಯಜ್ಜಗದಂಬಿಕಾಂ ॥೨೩॥

ವೀಕ್ಷ್ಯ ಸ್ವಪ್ನೇ ಚ ತೌ ದೇವೀಂ ಪ್ರೀತಿಯುಕ್ತೌ ಬಭೂವತುಃ ।
ಜಲಾಹಾರೈಸ್ತೃತೀಯೇ ತು ಸ್ಥಿತೌ ಸಂವತ್ಸರೇ ತು ತೌ ॥೨೪॥

---

ಆ ಆಶ್ರಮದಲ್ಲಿ ಆ ವೈಶ್ಯನೂ ಮತ್ತು ರಾಜನೂ ಸಹ ಇಂದ್ರಿಯನಿಗ್ರಹವುಳ್ಳವರಾಗಿ ಒಣಗಿರುವ ತರಗೆಲೆಗಳನ್ನು ತಿನ್ನುವವರಾಗಿ ದೇವಿಯ ಮಂತ್ರದ ಜಪ ಮತ್ತು ದೇವಿಯ ಮೂರ್ತಿಯ ಧ್ಯಾನದಲ್ಲಿ ಆಸಕ್ತಿಯುಳ್ಳವರಾಗಿ ಒಂದು ವರ್ಷದ ವರೆಗೆ ತಪಸ್ಸನ್ನು ಮಾಡಿದರು. ॥೨೧॥

ಅವರಿಬ್ಬರೂ ಹೀಗೆ ತಪಸ್ಸನ್ನು ಮಾಡುತ್ತಿರುವಾಗ, ಎರಡು ವರ್ಷಗಳು ಕಳೆದ ತರುವಾಯ ಒಂದು ದಿನ ಸ್ವಪ್ನದಲ್ಲಿ ಷಡ್ಗುಣೈಶ್ವರ್ಯಸಂಪನ್ನಳಾದ ಆ ದೇವಿಯ ದರ್ಶನವನ್ನು ಪಡೆದರು! ॥೨೨॥

ರಾಜನು ಒಂದಾನೊಂದು ದಿನ ತನ್ನ ಸ್ವಪ್ನದಲ್ಲಿ ಕೆಂಪಿನದಾದ ಪಟ್ಟೆಸೀರೆಯನ್ನುಟ್ಟಿರುವ ಸುಂದರವಾದ ಆಭರಣಗಳಿಂದ ಚನ್ನಾಗಿ ಅಲಂಕಾರಮಾಡಿಕೊಂಡಿರುವ ಜಗನ್ಮಾತೆಯನ್ನು ನೋಡಿದನು. ॥೨೩॥

ಅವರಿಬ್ಬರೂ ದೇವಿಯ ದರ್ಶನವನ್ನು ತಮ್ಮ ಸ್ವಪ್ನದಲ್ಲಿ ಪಡೆದವರಾಗಿ ದೇವಿಯ ವಿಷಯದಲ್ಲಿ ಇನ್ನೂ ಹೆಚ್ಚಾದ ಭಕ್ತಿಯುಳ್ಳವರಾದರು. ಅನಂತರದಲ್ಲಿ ಅವರಿಬ್ಬರೂ ಮೂರನೆಯ ವರ್ಷದಲ್ಲಿ ನೀರಿನ ಆಹಾರದಿಂದಲೇ ತಪಸ್ಸನ್ನು ಮಾಡಲು ಪ್ರಾರಂಭಿಸಿದರು. ॥೨೪॥

ಏವಂ ವರ್ಷತ್ರಯಂ ಕೃತ್ವಾ ತತಸ್ತೌ ವೈಶ್ಯಪಾರ್ಥಿವೌ ।
ಚಕ್ರತುಸ್ತೌ ತದಾ ಚಿಂತಾಂ ಚಿತ್ತೇ ದರ್ಶನಲಾಲಸೌ ॥೨೫॥

ಪ್ರತ್ಯಕ್ಷದರ್ಶನಂ ದೇವ್ಯಾ ನ ಪ್ರಾಪ್ತಂ ಶಾಂತಿದಂ ನೃಣಾಂ ।
ದೇಹತ್ಯಾಗಂ ಕರಿಷ್ಯಾವೋ ದುಃಖಿತೌ ಭೃಶಮಾತುರೌ ॥೨೬॥

ಇತಿ ಸಂಚಿಂತ್ಯ ಮನಸಾ ರಾಜಾ ಕುಂಡಂ ಚಕಾರ ಹ ।
ತ್ರಿಕೋಣಂ ಸುಸ್ಥಿರಂ ಸಾಮ್ಯಂ ಹಸ್ತಮಾತ್ರಪ್ರಮಾಣತಃ ॥೨೭॥

ಸಂಸ್ಥಾಪ್ಯ ಪಾವಕಂ ರಾಜಾ ತಥಾ ವೈಶ್ಯೋಽತಿಭಕ್ತಿಮಾನ್ ।
ಜುಹಾವಾಸೌ ನಿಜಂ ಮಾಂಸಂ ಛಿತ್ವಾ ಛಿತ್ವಾ ಪುನಃ ಪುನಃ ॥೨೮॥

---

ಅನಂತರದಲ್ಲಿ ಆ ವೈಶ್ಯನೂ, ರಾಜನೂ ಸಹ ಹೀಗೆಯೇ ಮೂರು ವರ್ಷಗಳ ಕಾಲ ವ್ರತವನ್ನು ಮಾಡಿದ ಮೇಲೆ ದೇವಿಯನ್ನು ಪ್ರತ್ಯಕ್ಷವಾಗಿ ದರ್ಶನಮಾಡ ಬೇಕೆಂದು ತೀವ್ರವಾದ ಅಭಿಲಾಷೆಯನ್ನು ಹೊಂದಿದವರಾಗಿ ಮನಸ್ಸಿನಲ್ಲಿ ಆಗ ಹೀಗೆ ಯೋಚನೆಯನ್ನು ಮಾಡಿದರು. ||೨೫||

ಮನುಷ್ಯರಿಗೆ ಉಪಶಾಂತಿಯ ಸೌಖ್ಯವನ್ನುಂಟುಮಾಡುವ ದೇವಿಯ ದರ್ಶ ನವು ನಮಗೆ ಇದುವರೆಗೂ ದೊರೆಯಲಿಲ್ಲವು. ಆದುದರಿಂದ ನಾವಿಬ್ಬರೂ ದುಃಖ ವುಳ್ಳವರಾಗಿ ಬಹಳಮಟ್ಟಿಗೆ ಕೊರಗುವವರಾಗಿದೇವೆ. ಆದುದರಿಂದ ನಮ್ಮ ಈ ಅನರ್ಹವಾದ ಶರೀರವನ್ನು ಬಿಡುವುದಕ್ಕೆ ಪ್ರಯತ್ನಮಾಡೋಣ. ||೨೬||

ರಾಜನು ಹೀಗೆ ಯೋಚನೆಯನ್ನು ಮಾಡಿ, ಮನಸ್ಸನ್ನು ಸ್ಥಿರಮಾಡಿ ಕೊಂಡು ನೋಡುವುದಕ್ಕೆ ಚನ್ನಾಗಿರುವುದಾಗಿಯೂ, ಒಂದೇ ಹಸ್ತಪ್ರಮಾಣವುಳ್ಳ ದ್ದಾಗಿಯೂ, ಚನ್ನಾಗಿ ಭದ್ರವಾಗಿಯೂ, ತ್ರಿಕೋಣಾಕಾರದಿಂದ ಕೂಡಿರುವುದಾ ಗಿಯೂ ಇರುವ ಒಂದು ಹೋಮಕುಂಡವನ್ನು ಸಿದ್ಧಮಾಡಿದನು. ||೨೭||

ರಾಜನೂ ವೈಶ್ಯನೂ ಬಹಳ ಭಕ್ತಿಯುಳ್ಳವರಾಗಿ ಆ ಹೋಮಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ, ಆ ಅಗ್ನಿಯಲ್ಲಿ ತಮ್ಮ ತಮ್ಮ ದೇಹಗಳ ಮಾಂಸಗಳನ್ನು ಕೊಯಿದು ಬಾರಿಬಾರಿಗೂ ಹೋಮಮಾಡಿದರು. ||೨೮||

ತಥಾ ವೈಶ್ಯೋಽಪಿ ದೀಪ್ತೇಽಗ್ನೌ ಸ್ವಮಾಂಸಂ ಪ್ರಾಕ್ಷಿಪತ್ತದಾ ।
ರುಧಿರೇಣ ಬಲಿಂ ಚಾಸ್ಯೈ ದದತುಸ್ತೌ ಕೃತೋದ್ಯಮೌ ॥೨೯॥

ತದಾ ಭಗವತೀ ದಕ್ಷಾ ಪ್ರತ್ಯಕ್ಷಂ ದರ್ಶನಂ ತಯೋಃ ।
ಪ್ರಾಹ ಪ್ರೀತಿಭರೋದ್ಭ್ರಾಂತೌ ದೃಷ್ಟ್ವಾ ತೌ ದುಃಖಿತೌ ಭೃಶಂ ॥೩೦॥

॥ ಶ್ರೀದೇವ್ಯುವಾಚ ॥

ವರಂ ವರಯ ಭೋ ರಾಜನ್ ಯತ್ತೇ ಮನಸಿ ವಾಂಛಿತಂ ।
ತುಷ್ಟಾಽಹಂ ತಪಸಾ ತೇಽದ್ಯ ಭಕ್ತ್ಯೋಽಸಿ ತ್ವಂ ಮತೋ ಮಮ ॥೩೧॥

ವೈಶ್ಯಂ ಪ್ರಾಹ ತದಾ ದೇವೀ ಪ್ರಸನ್ನಾಽಹಂ ಮಹಾಮತೇ ।
ಕಿಂ ತೇಽಭೀಷ್ಟಂ ದದಾಮ್ಯದ್ಯ ಪ್ರಾರ್ಥಯಾಽಽಶು ಮನೋಗತಂ ॥೩೨॥

---

ಆ ವೈಶ್ಯನೂ ಕೂಡ ಚನ್ನಾಗಿ ಉರಿಯುತ್ತಿರುವ ಅಗ್ನಿಯಲ್ಲಿ, ರಾಜನು ಹೋಮಮಾಡಿದಂತೆ, ತನ್ನ ಮಾಂಸವನ್ನು ಕತ್ತರಿಸಿ ಹೋಮವನ್ನು ಮಾಡಿದನು. ಇವರಿಬ್ಬರೂ ಆ ದೇವಿಗೋಸ್ಕರವಾಗಿ ಪ್ರಯತ್ನಪುರಸ್ಸರವಾಗಿ ರಕ್ತದಿಂದ ಬಲಿಯನ್ನೂ ಕೊಟ್ಟರು. ಕಾಳಿಕಾಪುರಾಣದಲ್ಲಿ ಮಾಂಸಭೋಜಿಯಲ್ಲದ ಬ್ರಾಹ್ಮಣನು ಹೊರತು ಉಳಿದ ವರ್ಣದವರಿಗೆ ಮಾತ್ರ ಹೀಗೆ ಬಲಿಯನ್ನು ಕೊಡುವುದೂ, ಅವರವರ ಶರೀರ ದಿಂದ ಮಾಂಸವನ್ನು ಕುಯಿದು ಅಥವಾ ಇತರ ಮಾಂಸದಿಂದ ಹೋಮಮಾಡು ವುದೂ ಸಹ ನಿಯತವೆಂದು ಹೇಳಿರುವುದು. ॥೨೯॥

ಆಗ ಪೂಜ್ಯಳಾದ ದೇವಿಯು ಆ ವೈಶ್ಯನಿಗೂ ರಾಜನಿಗೂ ಸಹ ಪ್ರತ್ಯಕ್ಷವಾಗಿ ದರ್ಶನವನ್ನು ಅನುಗ್ರಹಿಸಿ ಕೊಟ್ಟಳು. ಮತ್ತು ಅತಿಭಕ್ತಿಯಿಂದ ಭ್ರಾಂತರಾಗಿರುವ, ಬಹಳ ಕಷ್ಟಕ್ಕೆ ಸಿಕ್ಕಿರುವ ಅವರಿಬ್ಬರಿಗೂ ಸಹ ಹೀಗೆ ಕೆಲವು ಮಾತುಗಳನ್ನು ಹೇಳಿದಳು. ॥೩೦॥

ಶ್ರೀದೇವಿಯು ಹೇಳಿದಳು—ಎಲೈ ರಾಜನೇ, ಈಗ ನೀನು ನನಗೆ ಭಕ್ತನಾಗಿ ರುತ್ತೀಯೆ. ಎಂದು ನಾನು ಎಣಿಸಿರುವೆನು. ನಿನ್ನ ತಪಸ್ಸಿನಿಂದ ಸಂತೋಷವನ್ನು ಹೊಂದಿರುವೆನು. ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯು ಯಾವುದು ಇರುವುದೋ ಅದಕ್ಕನುಗುಣವಾಗಿ ವರವನ್ನು ಕೇಳು. ॥೩೧॥

ಆಗ ದೇವಿಯು ರಾಜನ ಸಂಗಡ ಹೀಗೆ ಹೇಳಿದ ಬಳಿಕ ವೈಶ್ಯನನ್ನೂ ಕುರಿತು, ಮಹಾಬುದ್ಧಿಶಾಲಿಯಾದ ವೈಶ್ಯನೇ, ನಾನು ನಿನ್ನ ವಿಷಯದಲ್ಲಿ ಸಂತೋಷ

॥ ವ್ಯಾಸ ಉವಾಚ ॥

**ತಚ್ಛ್ರುತ್ವಾ ವಚನಂ ರಾಜಾ ತಾಮುವಾಚ ಮುದಾನ್ವಿತಃ ।**
**ದೇಹಿ ಮೇಽದ್ಯ ನಿಜಂ ರಾಜ್ಯಂ ಹತಶತ್ರುಬಲಂ ಬಲಾತ್ ॥೩೩॥**

**ತಮುವಾಚ ತದಾ ದೇವೀ ಗಚ್ಛ ರಾಜನ್ನಿಜಂ ಗೃಹಂ ।**
**ಶತ್ರವಃ ಕ್ಷೀಣಸತ್ತ್ವಾಸ್ತೇ ಗಮಿಷ್ಯಂತಿ ಪರಾಜಿತಾಃ ॥೩೪॥**

**ಮಂತ್ರಿಣಸ್ತೇ ಸಮಾಗಮ್ಯ ತೇ ಪತಿಷ್ಯಂತಿ ಪಾದಯೋಃ ।**
**ಕುರು ರಾಜ್ಯಂ ಮಹಾಭಾಗ ನಗರೇ ಸ್ವಂ ಯಥಾಸುಖಂ ॥೩೫॥**

**ಕೃತ್ವಾ ರಾಜ್ಯಂ ಸುವಿಪುಲಂ ವರ್ಷಾಣಾಮಯುತಂ ನೃಪ ।**
**ದೇಹಾಂತೇ ಜನ್ಮ ಸಂಪ್ರಾಪ್ಯ ಸೂರ್ಯಾಚ್ಚ ಭವಿತಾ ಮನುಃ ॥೩೬॥**

---

ವುಳ್ಳವಳಾಗಿರುವೆನು. ನಿನ್ನ ಮನಸ್ಸಿನಲ್ಲಿರುವ ಇಚ್ಛೆಯೇನು? ಅದನ್ನು ನೀನು ನನ್ನ ಸಂಗಡ ಬೇಗನೆ ಹೇಳು. ಅದನ್ನು ಕೂಡಲೆ ನಾನು ಈಡೇರಿಸಿಕೊಡುವೆನು. ಎಂದು ಹೇಳಿದಳು. ॥೩೨॥

ವ್ಯಾಸಋಷಿಯು ಹೇಳಿದನು - ರಾಜನು ದೇವಿಯ ಆ ಮಾತನ್ನು ಕೇಳಿ ಸಂತೋಷವುಳ್ಳವನಾಗಿ ಆ ದೇವಿಯನ್ನು ಕುರಿತು—ನನ್ನ ಸೇನೆಯೆಲ್ಲವೂ ನಾಶ ಪಡಿಸಲ್ಪಟ್ಟು ನನ್ನ ರಾಜ್ಯವು ಶತ್ರುಗಳಿಂದ ಆಕ್ರಮಿಸಲ್ಪಟ್ಟಿರುತ್ತದೆಯಾದುದರಿಂದ ಈಗ ಅದನ್ನು ನನಗೆ ಕೊಡಿಸಬೇಕು. ಎಂದು ಕೇಳಿದನು. ॥೩೩॥

ಆಗ ದೇವಿಯು—ಎಲೈ ರಾಜನೇ, ನೀನು ನಿನ್ನ ಮನೆಗೆ ಹೋಗು. ನಿನ್ನ ಶತ್ರುಗಳು ಎಲ್ಲರೂ ಶಕ್ತಿಯಿಲ್ಲದವರಾಗಿ ಸೋತುಹೋದವರಾಗಿ ಹೊರಟುಹೋಗುವರು. ರಾಜ್ಯವು ನಿನ್ನ ಅಧೀನಕ್ಕೆ ಬರುವುದು. ಅಲ್ಲದೆ ॥೩೪॥

ನಿನ್ನ ಮಂತ್ರಿಗಳು ನಿನ್ನ ಹತ್ತಿರಕ್ಕೆ ಬಂದು ಶರಣಾಗತರಾಗಿ ನಿನ್ನ ಕಾಲುಗಳಲ್ಲಿ ಬೀಳುವರು. ಎಲೈ ಅದೃಷ್ಟಶಾಲಿಯೇ, ನಿನ್ನ ಆ ಪಟ್ಟಣದಲ್ಲಿ ರಾಜ್ಯವನ್ನು ಸುಖವಾಗಿರುವ ಹಾಗೆ ಆಳುತ್ತಿರು. ಎಲೈ ರಾಜನೇ, ಹತ್ತುಸಾವಿರ ವರ್ಷಗಳವರೆಗೂ ವಿಸ್ತಾರವಾಗಿ ಇರುವ ಆ ರಾಜ್ಯವನ್ನು ನೀನು ಆಳಿದ ಅನಂತರದಲ್ಲಿ ಈ ಶರೀರವು ಹೋದಮೇಲೆ, ನೀನು ಸೂರ್ಯನಿಂದ ಜನ್ಮವನ್ನು ಪುನಃ ಹೊಂದಿ ಮುಂದೆ ಈ ಲೋಕಕ್ಕೆ ಮನುವೆಂಬ ಅಧಿಕಾರಿಯಾಗುವೆ. ಆಗ ನಿನಗೆ ಸೂರ್ಯಸಾವರ್ಣಿಮನುವೆಂದು ಹೆಸರು ಬರುವುದು ಎಂದು ದೇವಿಯು ಔದಾರ್ಯದಿಂದ ಅವನ ಆ ತೀವ್ರ ತಪಸ್ಸಿಗೆ ಅನುಗುಣವಾಗಿ ವರವನ್ನು ಕೊಟ್ಟಳು. ॥೩೫-೩೬॥

|| ವ್ಯಾಸ ಉವಾಚ ||

**ವೈಶ್ಯಸ್ತ್ವಾಮುಪ್ಯವಾಚೇದಂ ಕೃತಾಂಜಲಿಪುಟಃ ಶುಚಿಃ ।**
**ನ ಮೇ ಗೃಹೇಣ ಕಾರ್ಯಂ ವೈ ನ ಪುತ್ರೇಣ ಧನೇನ ವಾ ॥೩೭॥**

**ಸರ್ವಂ ಬಂಧಕರಂ ಮಾತಃ ಸ್ವಪ್ನವನ್ನಶ್ವರಂ ಸ್ಫುಟಂ ।**
**ಜ್ಞಾನಂ ಮೇ ದೇಹಿ ವಿಶದಂ ಮೋಕ್ಷದಂ ಬಂಧನಾಶನಂ ॥೩೮॥**

**ಅಸಾರೇಽಸ್ಮಿಂಶ್ಚ ಸಂಸಾರೇ ಮೂಢಾ ಮಜ್ಜಂತಿ ಪಾಮರಾಃ ।**
**ಪಂಡಿತಾಃ ಸಂತರಂತೀಹ ತಸ್ಮಾನ್ನೇಚ್ಛಂತಿ ಸಂಸೃತಿಂ ॥೩೯॥**

|| ವ್ಯಾಸ ಉವಾಚ ||

**ತದಾಕರ್ಣ್ಯ ಮಹಾಮಾಯಾ ವೈಶ್ಯಂ ಪ್ರಾಹ ಪುರಃಸ್ಥಿತಂ ।**
**ವೈಶ್ಯವರ್ಯ ತವ ಜ್ಞಾನಂ ಭವಿಷ್ಯತಿ ನ ಸಂಶಯಃ ॥೪೦॥**

---

ವ್ಯಾಸಋಷಿಯು ಹೇಳಿದನು—ವೈಶ್ಯನು ಪರಿಶುದ್ಧನಾಗಿ ಬೊಗಸೆಯನ್ನು ಕಟ್ಟಿಕೊಂಡು ದೇವಿಯನ್ನು ಕುರಿತು ಪ್ರಾರ್ಥಿಸಿ ಹೇಳಿದನು. ನನಗೆ ಮನೆಯಿಂದ ಲಾಗಲಿ, ಮಕ್ಕಳಿಂದಲಾಗಲಿ, ದುಡ್ಡಿನಿಂದಲಾಗಲಿ, ಮಾಡಬೇಕಾದ ಕೆಲಸವೂ ಆಗಬೇಕಾದ ಭೋಗದ ಆಶೆಯೂ ಯಾವುದೂ ಇಲ್ಲವು. ಓ ತಾಯಿಯೇ, ಇವೆ ಲ್ಲವೂ ನನಗೆ ಬಂಧಕಗಳಾಗಿವೆ! ಮತ್ತು ಸ್ವಪ್ನದಲ್ಲಿ ಕಾಣುವ ಪದಾರ್ಥಗಳಂತೆ ಇವೆಲ್ಲವೂ ಬೇಗನೆ ನಾಶಹೊಂದುವುವು. ಎಂಬುದು ನನಗೆ ಸ್ಪಷ್ಟವಾಗಿ ಗೊತ್ತಾಗಿದೆ. ಆದುದರಿಂದ ಮಮಕಾರ ಅಹಂಕಾರರೂಪವಾದ ಈ ಬಂಧನದ ಕಾರಣವನ್ನು ನಾಶಗೊಳಿಸಿ ಯಾವಾಗಲೂ ನನ್ನನ್ನು ರಾಗ, ದ್ವೇಷ ಮುಂತಾದುವಿಲ್ಲದ ನಿರ್ಮಲ ನನ್ನಾಗಿ ಮಾಡಿ ಮೋಕ್ಷವನ್ನು ಉಂಟುಮಾಡುವ ಪರಬ್ರಹ್ಮಸ್ವರೂಪವಾದ ಆತ್ಮ ಜ್ಞಾನವನ್ನು ನನಗೆ ಉಪದೇಶಮಾಡು. ||೩೭-೩೮||

ಸತ್ಯಸುಖದ ಸಾರವಿಲ್ಲದಿರುವ ಈ ಸಂಸಾರದಲ್ಲಿ ದಡ್ಡರಾದವರು ಮತ್ತು ಪಾಪಿಗಳು ಸಹ ಮುಳುಗುವರು. ಪಂಡಿತರಾದವರು ಈ ಸಂಸಾರವನ್ನು ತಮ್ಮ ಜ್ಞಾನದ ಬಲದಿಂದ ದಾಟುವರು. ಆದುದರಿಂದ ನಾನೂ ಈ ಸಂಸಾರವನ್ನು ದಾಟಲು ಅಪೇಕ್ಷಿಸುತ್ತಿರುವುದರಿಂದ ಈ ಸಂಸಾರವನ್ನು ಪುನಃ ಹೊಂದಲು ಆಶೆಪಡುವುದಿಲ್ಲವು. ಎಂದು ವೈಶ್ಯನು ದೇವಿಯ ಸಂಗಡ ವಿಜ್ಞಾಪಿಸಿಕೊಂಡನು. ||೩೯||

ವಾಸ್ಯಋಷಿಯು ಹೇಳಿದನು—ವೈಶ್ಯನು ಹೇಳಿದ ಆ ಮಾತನ್ನು ಕೇಳಿ ಮಹಾಮಾಯೆ ಎಂದು ಪ್ರಸಿದ್ಧಿಯನ್ನು ಹೊಂದಿರುವ ದೇವಿಯು ತನ್ನ ಎದುರಿಗೆ

ಇತಿ ದತ್ವಾ ವರಂ ತಾಭ್ಯಾಂ ತತ್ರೈವಾಂತರಧೀಯತ ।
ಅದರ್ಶನಂ ಗತಾಯಾಂ ತು ರಾಜಾ ತಂ ಮುನಿಸತ್ತಮಂ ॥೪೧॥

ಪ್ರಣಮ್ಯ ಹಯಮಾರುಹ್ಯ ಗಮನಾಯ ಮನೋ ದಧೇ ।
ತದೈವ ತಸ್ಯ ಸಚಿವಾಸ್ತತ್ರಾಽಽಗತ್ಯ ನೃಪಂ ಪ್ರಜಾಃ ॥೪೨॥

ಪ್ರಣೇಮುರ್ವಿನಯೋಪೇತಾಸ್ತಮೂಚುಃ ಪ್ರಾಂಜಲಿಸ್ಥಿತಾಃ ।
ರಾಜಂಸ್ತೇ ಶತ್ರವಃ ಸರ್ವೇ ಪಾಪಾಶ್ಚ ನಿಹತಾ ರಣೇ ॥೪೩॥

ರಾಜ್ಯಂ ನಿಷ್ಕಂಟಕಂ ಭೂಪ ಕುರುಷ್ವ ಪುರಮಾಸ್ಥಿತಃ ।
ತಚ್ಛ್ರುತ್ವಾ ವಚನಂ ರಾಜಾ ನತ್ವಾ ತಂ ಮುನಿಸತ್ತಮಂ ॥೪೪॥

---

ನಿಂತಿರುವ ವೈಶ್ಯನನ್ನು ನೋಡಿ—ಎಲೈ ವೈಶ್ಯಶ್ರೇಷ್ಠನೇ, ನಿನಗೆ ನಿನ್ನ ಇಷ್ಟಾನುಸಾರವಾಗಿ ಉತ್ತಮವಾದ ಬ್ರಹ್ಮಾತ್ಮೈಕ್ಯಜ್ಞಾನವುಂಟಾಗುವುದು. ಇದರಲ್ಲಿ ಸಂಶಯಪಡಬೇಡ. ಎಂದು ವರವನ್ನು ಕೊಟ್ಟಳು. ॥೪೦॥

ದೇವಿಯು ಅವರಿಬ್ಬರಿಗೂ ಹೀಗೆ ವರವನ್ನು ಕೊಟ್ಟು ಆ ಸ್ಥಳದಲ್ಲಿಯೇ ಆ ಕ್ಷಣದಲ್ಲಿಯೇ ಕಣ್ಣಿಗೆ ಕಾಣಿಸದಂತೆ ಮರೆಯಾದಳು. ದೇವಿಯು ಅಂತರ್ಧಾನವನ್ನು ಹೊಂದಿದ ನಂತರ ರಾಜನು ಆ ಮುನಿಶ್ರೇಷ್ಠನಿಗೆ ನಮಸ್ಕಾರಮಾಡಿ ಅನುಜ್ಞೆ ಆಶೀರ್ವಾದಗಳನ್ನು ಪಡೆದು ಕುದುರೆಯನ್ನು ಹತ್ತಿಕೊಂಡು ತನ್ನ ಪಟ್ಟಣಕ್ಕೆ ಹಿಂತಿರುಗಿ ಹೋಗಲು ನಿಶ್ಚಯಮಾಡಿದನು. ॥೪೧॥

ಆ ವೇಳೆಗೆ ಸರಿಯಾಗಿ ಆ ರಾಜನ ಮಂತ್ರಿಗಳೂ ಮತ್ತು ಪ್ರಜೆಗಳೂ ಸಹ ರಾಜನ ಹತ್ತಿರಕ್ಕೆ ಬಂದು ವಿನಯದಿಂದ ಕೂಡಿದವರಾಗಿ ಅವನಿಗೆ ನಮಸ್ಕಾರಮಾಡಿ ಅವನ ಎದುರಿಗೆ ಬೊಗಸೆಯನ್ನು ಕಟ್ಟಿಕೊಂಡು—ಓ ರಾಜನೇ, ನಿನ್ನ ಶತ್ರುಗಳೆಲ್ಲರೂ ಅವರವರ ಕೆಟ್ಟಕೆಲಸಗಳಿಂದ ಯುದ್ಧದಲ್ಲಿ ಹತರಾದರು. ರಾಜ್ಯವು ಯಾವ ವಿಧವಾದ ತೊಂದರೆಯನ್ನು ಕೊಡುವವರು ಯಾರೂ ಇಲ್ಲದ್ದಾಗಿರುವುದು. ನೀನು ಪಟ್ಟಣಕ್ಕೆ ಬಂದು ರಾಜ್ಯವನ್ನು ಹಿಂದಿನಂತೆ ರಕ್ಷಿಸಬೇಕೆಂದು ಪ್ರಾರ್ಥಿಸಿ ಹೇಳಿದರು. ॥೪೨-೪೩॥

ರಾಜನು, ತನ್ನ ಮಂತ್ರಿಗಳೂ ಪ್ರಜೆಗಳೂ ಹೇಳಿದ ಆ ಮಾತನ್ನು ಕೇಳಿದವನಾಗಿ ಆ ಸುಮೇಧಾಋಷಿಗೆ ನಮಸ್ಕಾರವನ್ನು ಮಾಡಿ, ಅಪ್ಪಣೆಯನ್ನು ಪಡೆದು, ತನ್ನ ಮಂತ್ರಿಗಳಿಂದ ಸುತ್ತುವರಿಯಲ್ಪಟ್ಟವನಾಗಿ ಆ ಆಶ್ರಮದಿಂದ ಹೊರಟನು.

ಆಪೃಚ್ಛ್ಯ ನಿರ್ಯಯೌ ತತ್ರ ಮಂತ್ರಿಭಿಃ ಪರಿವಾರಿತಃ ।
ಸಂಪ್ರಾಪ್ಯ ಚ ನಿಜಂ ರಾಜ್ಯಂ ದಾರಾನ್ಸ್ವಜನಬಾಂಧವಾನ್ ॥೪೫॥

ಬುಭುಜೇ ಪೃಥಿವೀಂ ಸರ್ವಾಂ ತತಃ ಸಾಗರಮೇಖಲಾಂ ।
ವೈಶ್ಯೋಽಪಿ ಜ್ಞಾನಮಾಸಾದ್ಯ ಮುಕ್ತಸಂಗಃ ಸಮಂತತಃ ॥೪೬॥

ಕಾಲಾತಿವಾಹನಂ ತತ್ರ ಮುಕ್ತಬಂಧಶ್ಚಕಾರ ಹ ।
ತೀರ್ಥೇಷು ವಿಚರನ್ಗಾಯನ್ ಭಗವತ್ಯಾ ಗುಣಾನಥ ॥೪೭॥

ಏತತ್ತೇ ಕಥಿತಂ ದೇವ್ಯಾಶ್ಚರಿತಂ ಪರಮಾದ್ಭುತಂ ।
ಆರಾಧನಫಲಪ್ರಾಪ್ತಿರ್ಯಥಾವದ್ಭೂಪವೈಶ್ಯಯೋಃ ॥೪೮॥

---

ಅನಂತರದಲ್ಲಿ ತನ್ನ ರಾಜ್ಯಕ್ಕೆ ಬಂದು ತನ್ನ ಜನಗಳು, ತನ್ನ ಹೆಂಡಿತಿ, ಮಕ್ಕಳು, ತನ್ನ ನಂಟರಿಷ್ಟರು ಇವರೆಲ್ಲರಿಂದಲೂ ಕೂಡಿದವನಾದನು. ಆಮೇಲೆ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಸಮಸ್ತವಾದ ಭೂಮಿಯೆಲ್ಲವನ್ನೂ ಆಳುತ್ತಾ ಅನುಭವಿಸುತ್ತಿದ್ದನು. ॥೪೪-೪೫॥

ಆ ವೈಶ್ಯನಾದರೋ ದೇವಿಯ ವರದಂತೆ ಜ್ಞಾನವನ್ನು ಹೊಂದಿದವನಾಗಿ ಎಲ್ಲ ವಿಧದಿಂದಲೂ ಈ ಸಂಸಾರದಲ್ಲಿ ಅಭಿಮಾನದ ಸಹವಾಸವನ್ನು ಬಿಟ್ಟವನಾಗಿ, ಯಾವ ವಿಧವಾದ ಬಂಧವೂ ಇಲ್ಲದವನಾಗಿ, ಆ ಆಶ್ರಮದಲ್ಲಿಯೂ, ತೀರ್ಥಗಳಲ್ಲಿಯೂ ಸಹ ಪೂಜ್ಯಳಾದ ದೇವಿಯ ಗುಣಗಳನ್ನು ಗಾನಮಾಡುವವನಾಗಿ, ಜೀವನ್ಮುಕ್ತನಾಗಿರುತ್ತಾ ತನ್ನ ಆಯುಸ್ಸಿನ ಕಾಲವನ್ನು ಕಳೆಯುತ್ತಿದ್ದನು. ॥೪೬-೪೭॥

ಎಲೈ ಜನಮೇಜಯರಾಜನೇ ಕೇಳು. ದೇವಿಯ ಅತ್ಯಾಶ್ಚರ್ಯಕರವಾದ ಈ ಪ್ರಕಾರವಾಗಿರುವ ಚರಿತ್ರೆಯು ನಿನಗೆ ಹೇಳಲ್ಪಟ್ಟಿತು. ರಾಜನು ಮತ್ತೂ ವೈಶ್ಯನು ಇವರಿಬ್ಬರೂ ದೇವಿಯನ್ನು ಪ್ರಥಮ, ಮಧ್ಯಮ, ಉತ್ತಮವೆಂಬ ಚರಿತ್ರತ್ರಯದ ಪಠನಪೂರ್ವಕವಾಗಿ ಆರಾಧನೆಮಾಡಿ ಫಲವನ್ನು ಹೊಂದಿದ ಚರಿತ್ರೆಯು ಸ್ವಲ್ಪವೂ ಬಿಡದಂತೆ ಹೇಳಲ್ಪಟ್ಟಿತು. ರಾಕ್ಷಸರ ಸಂಹಾರದ ಕಥೆಯೂ ಮತ್ತು ದೇವಿಯು ಅವರ ನಿಗ್ರಹಕ್ಕಾಗಿ ಅವತರಿಸಿದ ಕ್ರಮವೂ ಸಹ ವಿಸ್ತಾರವಾಗಿ ಹೇಳಲ್ಪಟ್ಟಿರುತ್ತದೆ. ॥೪೮॥

ದೈತ್ಯಾನಾಂ ಹನನಂ ಪ್ರೋಕ್ತಂ ಪ್ರಾದುರ್ಭಾವಸ್ತಥಾ ಶುಭಃ ।
ಏವಂ ಪ್ರಭಾವಾ ಸಾ ದೇವೀ ಭಕ್ತಾನಾಮಭಯಪ್ರದಾ ॥೪೯॥

ಯಃ ಶೃಣೋತಿ ನರೋ ನಿತ್ಯಮೇತದಾಖ್ಯಾನಮುತ್ತಮಂ ।
ಸ ಪ್ರಾಪ್ನೋತಿ ನರಃ ಸತ್ಯಂ ಸಂಸಾರಸುಖಮದ್ಭುತಂ ॥೫೦॥

ಜ್ಞಾನದಂ ಮೋಕ್ಷದಂ ಚೈವ ಕೀರ್ತಿದಂ ಸುಖದಂ ತಥಾ ।
ಪಾವನಂ ಶ್ರವಣಾನ್ನೂನ ಮೇತದಾಖ್ಯಾನಮದ್ಭುತಂ ॥೫೧॥

ಅಖಿಲಾರ್ಥಪ್ರದಂ ನೃಣಾಂ ಸರ್ವಧರ್ಮಸಮಾವೃತಂ ।
ಧರ್ಮಾರ್ಥಕಾಮಮೋಕ್ಷಾಣಾಂ ಕಾರಣಂ ಪರಮಂ ಮತಂ ॥೫೨॥

---

ಪ್ರಸಿದ್ಧಳಾದ ಆ ದೇವಿಯು ಈಪರಿಯಾಗಿ ವಿವರಿಸಿ ಸೂಚಿಸಿರುವಂತೆ ಮಹಾ ಮಹಿಮೆಯುಳ್ಳವಳು. ಭಕ್ತರಿಗೆ ಯಾವಾಗಲೂ ಅಭಯವನ್ನು ಕೊಡುವವಳು. ಯಾವ ಮನುಷ್ಯನು ಶ್ರೇಷ್ಠವಾದ ಈ ದೇವಿಯ ಆಶ್ಚರ್ಯಕರವಾಗಿರುವ ಉಪಾಖ್ಯಾನವನ್ನು ನಿತ್ಯವೂ ಕೇಳುವನೋ ಅವನು ನಿಜವಾಗಿಯೂ ಈ ಸಂಸಾರ ದಲ್ಲಿಯೂ ಸುಖಗಳನ್ನು ಅನುಭವಿಸುವನು. ॥೪೯-೫೦॥

ದೇವಿಯ ಈ ಚರಿತ್ರೆಯನ್ನು ಹೇಳಿದವರಿಗೆ ಮತ್ತು ಕೇಳಿದವರಿಗೆ ಇದು ಖಂಡಿತವಾಗಿಯೂ ಪರತತ್ವದ ಜ್ಞಾನವನ್ನು ಉಂಟುಮಾಡುವುದು. ಕಡೆಗೆ ಮೋಕ್ಷ ವನ್ನೂ ಕೊಡುವುದು. ಕೀರ್ತಿಯನ್ನುಂಟುಮಾಡುವುದು. ನಿತ್ಯಸುಖವನ್ನುಂಟು ಮಾಡುವುದು. ಹೀಗೆ ಇದು ಆಶ್ಚರ್ಯಕರವಾಗಿರುವುದು. ಮತ್ತು ಸಕಲ ವಿಧವಾದ ಪಾಪಗಳನ್ನೂ ನಾಶಮಾಡುವುದು. ॥೫೧॥

ದೇವಿಯ ಚರಿತ್ರೆಯನ್ನು ವ್ಯಾಖ್ಯಾನ ಮಾಡಿದವರಿಗೆ ಮತ್ತು ಅದರಲ್ಲಿ ಹೇಳಿ ರುವಂತೆ ಆಚರಿಸುವ ಎಲ್ಲ ಜನರಿಗೂ ಇದು ಸಮಸ್ತವಾದ ಇಷ್ಟಾರ್ಥಗಳನ್ನು ಕೊಡು ವುದು. ಅದು ಎಲ್ಲ ವಿಧವಾದ ಧರ್ಮಗಳ ನಿರೂಪಣೆಗಳಿಂದಲೂ ಕೂಡಿರುವುದು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳಿಗೂ ಕಾರಣವಾಗಿಯೂ ಮತ್ತು ಉತ್ತಮವಾಗಿಯೂ ಇರುವುದು. ಎಂದು ದೊಡ್ಡವರಿಂದ ತಿಳಿಯಲ್ಪಟ್ಟಿರುವುದು. ॥೫೨॥

|| ಸೂತ ಉವಾಚ ||

**ಜನಮೇಜಯೇನ ರಾಜ್ಞಾಽಸೌ ಪೃಷ್ಟಃ ಸತ್ಯವತೀಸುತಃ ।**
**ಉವಾಚ ಸಂಹಿತಾಂ ದಿವ್ಯಾಂ ವ್ಯಾಸಃ ಸರ್ವಾರ್ಥತತ್ತ್ವವಿತ್ ॥೫೩॥**

**ಚರಿತಂ ಚಂಡಿಕಾಯಾಸ್ತು ಶುಂಭದೈತ್ಯವಧಾಶ್ರಿತಂ ।**
**ಕಥಯಾಮಾಸ ಭಗವಾನ್ ಕೃಷ್ಣಃ ಕಾರುಣಿಕೋ ಮುನಿಃ ॥೫೪॥**

**ಇತಿ ವಃ ಕಥಿತಃ ಸಾರಃ ಪುರಾಣಾನಾಂ ಮುನೀಶ್ವರಾಃ ।**

---

ಸೂತಪುರಾಣಿಕನು ಹೇಳಿದನು—ಜನಮೇಜಯರಾಜನಿಂದ ಪ್ರಶ್ನೆ ಮಾಡಲ್ಪಟ್ಟವನಾಗಿ, ಸಕಲ ವಿಷಯುಗಳನ್ನೂ, ಅವುಗಳ ನಿಜಸ್ಥಿತಿಯನ್ನೂ, ಪಾರಮಾರ್ಥಿಕವಾದ ತತ್ವಸ್ವರೂಪವನ್ನೂ ತಿಳಿದಿರುವವನಾದ ಸತ್ಯವತೀಪುತ್ರನಾದ ವ್ಯಾಸಋಷಿಯು ಶ್ರೇಷ್ಠವಾದ ಈ ದೇವಿಯ ಚರಿತ್ರರೂಪವಾದ ವೇದ ಸಂಹಿತೆಯಂತೆ ಧರ್ಮವನ್ನು ತಿಳಿಯಹೇಳುವ ಪವಿತ್ರಗ್ರಂಥದ ಏಕದೇಶವಾದ ಈ ಪಂಚಮಸ್ಕಂಧವನ್ನು ಹೇಳಿದನು. ||೫೩||

ಪೂಜ್ಯನಾದ, ದಯಾಳುವಾದ ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾದ ವ್ಯಾಸಮಹರ್ಷಿಯು ಶುಂಭನೆಂಬ ರಾಕ್ಷಸನ ವಧೆಯನ್ನು ವಿವರಿಸಿ ಹೇಳುವ ಚಂಡಿಕಾದೇವಿಯ ಈ ಚರಿತ್ರೆಯನ್ನು ಹೇಳಿದನು. ||೫೪||

ಎಲೈ ಶ್ರೇಷ್ಠರಾದ ಋಷಿಗಳೇ ಕೇಳಿರಿ—ಈಪರಿಯಿಂದ ಸಕಲ ಪುರಾಣಗಳ ಶ್ರೇಷ್ಠವಾದ ಸಾರಾಂಶವೂ ನಿಮಗೆ ಹೇಳಲ್ಪಟ್ಟಿತು. ಎಂದು ಸೂತಪುರಾಣಿಕನು ನೈಮಿಶಾರಣ್ಯದಲ್ಲಿರುವ ಋಷಿಗಳಿಗೆ ವಿವರಿಸಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪಂಚಮಸ್ಕಂಧೇ**
**ಪಂಚತ್ರಿಂಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವಿಭಾಗವತಮಹಾಪುರಾಣದ ಐದನೆಯ ಸ್ಕಂಧದಲ್ಲಿ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

## || ಐದನೆಯ ಸ್ಕಂಧವೂ ಸಮಾಪ್ತವಾದುದು ||



ಕರ್ಣಾಟಕಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾದೇವಯಜ್ವತನಯಃ ಚಂದ್ರಶೇಖರಃ ।
ಜನಾನಾ ಮುಪಕಾರಾಯ ರಚಯಾಮಾಸ ಸಾದರಂ ॥

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮಯಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥
ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।
ಪ್ರಾಣಿಕರ್ಮವಶಾದ್ಬ್ರಹ್ಮಣೀಚ್ಛಾಜ್ಞಾನಕ್ರಿಯಾತ್ಮಿಕಾ ॥

ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ
ಸುತಾನ್ ದುಹಿತೄ ತತ್ಸುತಾನ್ ಸುಕೃತಯುಶ್ಚ ಕಾಶ್ಚಿತ್ಕೃತಾಃ ।
ಅಲಂಮತಿರಿಹಾಸ್ತು ಮೇ ಮಮ ಕದಾಽಂತಮಾಶಾ ವ್ರಜೇತ್
ಪ್ರಬೋಧಸುಖಮರ್ಥಯೇ ಪರವಿರಕ್ತಿಮುಕ್ತೀ ಮುದಾ ॥



PRINTER—T. S. Raghavachar, Manager,
Sree Panchacharya Electric Press,
Sayaji Rao Road, Mysore.

PUBLISHER—Y. Chandrasekharasastri, M.A.,
Asthana Vidwan, Palace, Mysore,